# ಬಳ್ಳಾರಿ ಜಿಲ್ಲೆಯ ಲಂಬಾಣಿಗರ ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು
ರಾಘವೇಂದ್ರನಾಯ್ಕ ಎಸ್. ಡಿ.

ಮಾರ್ಗದರ್ಶಕರು
ಡಾ. ವಿರೂಪಾಕ್ಷಿ ಪೂಜಾರಹಳ್ಳಿ
ಸಹ ಪ್ರಾಧ್ಯಾಪಕರು, ಚರಿತ್ರೆ ವಿಭಾಗ




ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬
೨೦೧೪

# ಬಳ್ಳಾರಿ ಜಿಲ್ಲೆಯ ಲಂಬಾಣಿಗರ ಚಾರಿತ್ರಿಕ ಅಧ್ಯಯನ

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು
**ರಾಘವೇಂದ್ರನಾಯ್ಕ.ಎಸ್.ಡಿ**

ಮಾರ್ಗದರ್ಶಕರು
**ಡಾ. ವಿರೂಪಾಕ್ಷಿ ಪೂಜಾರಹಳ್ಳಿ**
ಸಹ ಪ್ರಾಧ್ಯಾಪಕರು, ಚರಿತ್ರೆ ವಿಭಾಗ



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ - ೫೮೩ ೨೭೬

# ಸಂಶೋಧಕರ ಪ್ರಮಾಣ ಪತ್ರ

''ಬಳ್ಳಾರಿ ಜಿಲ್ಲೆಯ ಲಂಬಾಣಿಗರ ಚಾರಿತ್ರಿಕ ಅಧ್ಯಯನ'' ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಡಾ. ವಿರೂಪಾಕ್ಷಿ ಪೂಜಾರಹಳ್ಳಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ರಾಘವೇಂದ್ರನಾಯ್ಕ ಎಸ್.ಡಿ.
ಸಂಶೋಧಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ: 24|6|2014
ಸ್ಥಳ : ವಿದ್ಯಾರಣ್ಯ

# ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ರಾಘವೇಂದ್ರನಾಯ್ಕ ಎಸ್.ಡಿ. ಇವರು ''ಬಳ್ಳಾರಿ ಜಿಲ್ಲೆಯ ಲಂಬಾಣಿಗರ ಚಾರಿತ್ರಿಕ ಅಧ್ಯಯನ'' ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನ ನಿಕಾಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಪ್ರಸ್ತುತ ಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ವಿರೂಪಾಕ್ಷಿ ಪೂಜಾರಹಳ್ಳಿ<br>
ಮಾರ್ಗದರ್ಶಕರು ಮತ್ತು<br>
ಸಹಪ್ರಾಧ್ಯಾಪಕರು<br>
ಚರಿತ್ರೆ ವಿಭಾಗ<br>
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ: 24-8-18<br>
ಸ್ಥಳ : ವಿದ್ಯಾರಣ್ಯ

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ.ಹಿ.ಚಿ. ಬೋರಲಿಂಗಯ್ಯ ಅವರಿಗೆ ಹಾಗೂ ಕುಲಸಚಿವರಾದ ಡಾ. ವಿಜಯ್ ಪೂಣಚ್ಚ ತಂಬಂಡ ಅವರಿಗೆ ಮತ್ತು ಅಧ್ಯಯನಾಂಗದ ನಿರ್ದೇಶಕರಾದ ಡಾ.ಅಶೋಕ ಕುಮಾರ ರಂಜೇರೆ ಮತ್ತು ಪಿಎಚ್.ಡಿ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ವಿಶ್ರಾಂತ ಕುಲಪತಿಗಳಾದ ಡಾ.ಎ.ಮುರಿಗೆಪ್ಪ ಅವರಿಗೆ ನನ್ನ ಕೃತಜ್ಞತೆಗಳು.

ನನ್ನ ಪಿಎಚ್.ಡಿ ಅಧ್ಯಯನಕ್ಕೆ ಪ್ರತಿ ಹಂತದಲ್ಲೂ ಸೂಕ್ತ ಸಲಹೆಗಳನ್ನು ನೀಡಿ ಆತ್ಮೀಯವಾಗಿ ಮಾರ್ಗದರ್ಶನ ಮಾಡಿದ ಮಾರ್ಗದರ್ಶಕರಾದ ಡಾ. ವಿರೂಪಾಕ್ಷಿ ಪೂಜಾರಹಳ್ಳಿ ಅವರಿಗೆ ಎಂದಿಗೂ ಕೃತಜ್ಞನಾಗಿದ್ದೇನೆ.

ಅಧ್ಯಯನಕ್ಕೆ ಸಹಕರಿಸಿದ ಚರಿತ್ರೆ ವಿಭಾಗದ ಮುಖ್ಯಸ್ಥರಾದ ಡಾ.ಸಿ.ಆರ್.ಗೋವಿಂದರಾಜು, ಪ್ರೊ.ಲಕ್ಷ್ಮಣ್ ತೆಲಗಾವಿ, ಡಾ. ಚಿನ್ನಸ್ವಾಮಿ ಸೋಸಲೆ, ಡಾ. ಮೋಹನ್‌ಕೃಷ್ಣ ರೈ, ವಿಭಾಗದ ಡೀನ್‌ರಾದ ಡಾ. ಕೆ.ಎಂ.ಮೇತ್ರಿ ಮೊದಲಾದವರಿಗೆ ಆಭಾರಿಯಾಗಿದ್ದೇನೆ.

ಅಧ್ಯಯನಕ್ಕೆ ಸಹಕರಿಸಿ ವಿಜಯಕುಮಾರ, ನಾರಾಯಣ್‌ನಾಯ್ಕ, ಡಾ. ಶ್ರೀಧರ ಪಿಸ್ಸೆ ಗ್ರಂಥಾಲಯದ ಗ್ರಂಥಪಾಲಕರು ಹಾಗೂ ಸಿಬ್ಬಂದಿ ವರ್ಗದವರಿಗೆ.

ಅಧ್ಯಯನಕ್ಕೆ ಪ್ರಾರಂಭದಿಂದಲೂ ಸೂಕ್ತ ಸಲಹೆ, ಸೂಚನೆ, ಸಹಕಾರ ನೀಡಿದ ಡಾ.ಎ.ಎಸ್. ಪ್ರಭಾಕರ್, ಡಾ. ಚಲುವರಾಜು, ಡಾ.ಪಿ.ಕೆ.ಖಂಡೋಬ, ಡಾ. ಹೆಬ್ಬಾಲೆ ಕೆ. ನಾಗೇಶ್, ಡಾ. ಎಸ್.ವೈ.ಸೋಮಶೇಖರ್, ಡಾ. ಸಣ್ಣರಾಮ, ಡಾ.ಡಿ.ಬಿ. ನಾಯ್ಕ, ಡಾ. ಹರಿಲಾಲ್ ಪವಾರ್, ಡಾ. ಶಿರಗಾನಹಳ್ಳಿ ಶಾಂತನಾಯ್ಕ, ಡಾ. ಕಂಪ್ಲಿ ಶಿವಕುಮಾರ್ ಇವರಿಗೆ ನನ್ನ ಕೃತಜ್ಞತೆಗಳು.

ಅಧ್ಯಯನದ ಪ್ರತಿಹಂತದಲ್ಲೂ ಸಲಹೆ, ಸಹಕಾರ ನೀಡಿದ ಸ್ನೇಹಿತರಾದ ಕೆ.ಬಿ. ರಾಜಕುಮಾರ, ಶ್ರೀನಿವಾಸ ಕೆ.ಡಿ., ಮೀಟ್ಯಾನಾಯ್ಕ, ಪರಶುನಾಯ್ಕ, ಎಲ್.ಎಚ್. ಭೋಜ್ಯನಾಯ್ಕ, ಕೆ.ಎಸ್. ಸತೀಶ್‌ನಾಯ್ಕ, ಶಂಕರನಾಯ್ಕ ವಿ.ಆರ್., ಶಾಮಸುಂದರ, ಯಶವಂತ ಮೊದಲಾದವರು ಹಾಗೂ ಕ್ಷೇತ್ರ ಕಾರ್ಯದಲ್ಲಿ ನೆರವಾದ ಲಂಬಾಣಿ ಸಮುದಾಯದ ಹಾಗೂ ಇತರೆ ಸಮುದಾಯದ ಸಮಸ್ತ ಹಿರಿಯರಿಗೆ, ವಿದ್ವಾಂಸರಿಗೆ ಕೃತಜ್ಞನಾಗಿರುವೆ.

ಸದಾ ನನ್ನ ಶ್ರೇಯಸ್ಸು ಬಯಸುವ ಪೂಜ್ಯ ತಂದೆ ಡಕಣನಾಯ್ಕ ಎಸ್., ತಾಯಿ ಗಂಗಾಬಾಯಿ ಆರ್., ಸಹೋದರ ರಮೇಶ್ ಎಸ್.ಡಿ., ರಾಜೇಂದ್ರ ಎಸ್.ಡಿ., ಹಾಗೂ ಸಹೋದರಿಯರಾದ ಎಸ್.ಡಿ. ಪದ್ಮ, ರೂಪ, ಶಶಿರೇಖ, ಅತ್ತಿಗೆ ಮೈತ್ರಿ ರಮೇಶನಾಯ್ಕ ಇವರಿಗೆ

ಕರಡು ತಿದ್ದುವಲ್ಲಿ ಸಹಕರಿಸಿದ ಡಾ. ಎಸ್. ಮೋಹನ್, ಡಾ. ಜೆ. ಕುಮಾರ್ ಹಾಗೂ ಅಕ್ಷರ ಸಂಯೋಜಿಸಿದ ಶ್ರೀ ಗುರು ಮೌನೇಶ್ವರ ಗ್ರಾಫಿಕ್ಸ್‌ನ ಶ್ರೀ ನಾಗರಾಜ ಬಡಿಗೇರ, ಅವರಿಗೆ ಮತ್ತು ಸುಂದರವಾಗಿ ಬೈಂಡಿಗ್ ಮಾಡಿಕೊಟ್ಟ ಮಹಾಂತೇಶ್ ಬುಕ್ ಬೈಂಡರ್ಸ್, ಧಾರವಾಡ ಅವರಿಗೆ ನನ್ನ ತುಂಬು ಹೃದಯದ ಕೃತಜ್ಞತೆಗಳು .

ರಾಘುವೇಂದ್ರನಾಯ್ಕ ಎಸ್.ಡಿ.

## ಪರಿವಿಡಿ

# ಬಳ್ಳಾರಿ ಜಿಲ್ಲೆಯ ಲಂಬಾಣಿಗರ ಚಾರಿತ್ರಿಕ ಅಧ್ಯಯನ

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

ಒಂದು ನಾಡಿನ ಚರಿತ್ರೆಯೆಂದರೆ, ಆ ನಾಡನ್ನಾಳಿದ ರಾಜರ ಚರಿತ್ರೆ ಎಂಬ ಭಾವನೆ ಸಾಮಾನ್ಯವಾಗಿ ರೂಢಿಯಲ್ಲಿದೆ. ಚರಿತ್ರೆಯನ್ನು ರೂಪಿಸುವ ಗ್ರಂಥಗಳು ಪ್ರಧಾನವಾಗಿ ರಾಜಕೀಯವನ್ನೇ ಹೊಂದಿರುತ್ತವೆ. ಅದರ ಜೊತೆಯಲ್ಲಿ ಆ ನಾಡಿನ ಕಲೆ, ಧರ್ಮ, ಸಾಹಿತ್ಯ ಮೊದಲಾದವುಗಳನ್ನು ಕೊನೆಯಲ್ಲಿ ನಿರೂಪಿಸಲಾಗಿರುತ್ತದೆ. ಆದರೆ ಒಂದು ನಾಡು ಎಂದರೆ ಅದನ್ನು ರಾಜತ್ವವಲ್ಲ, ಅಲ್ಲಿ ವಾಸಿಸುವ ಜನ. ಆ ಜನರ ಬದುಕಿನ ರೀತಿ, ಅನುಸರಿಸಿದ ಧರ್ಮ, ನಿರ್ಮಿಸಿದ ಕಲೆ, ಅವರ ಜೀವನ ಸಮಸ್ಯೆಗಳು ಹಾಗೂ ಅವರ ಜೀವನ ಮೌಲ್ಯಗಳು ಇತಿಹಾಸದ ಭಾಗವಾಗಿರುತ್ತವೆ. ಹೀಗಾಗಿ ಒಂದು ನಾಡಿನ ಚರಿತ್ರೆ ರಚಿಸಲು ರಾಜವಂಶಗಳು ಅಸ್ಥಿಪಂಜರವಾದರೆ, ನಾಡಿನ ಜನತೆ ರಕ್ತಮಾಂಸಗಳಾಗಿ ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ರಾಜಕೀಯ ಮತ್ತು ಸಾಂಸ್ಕೃತಿಕ ಅಧ್ಯಯನಗಳೆರಡೂ ಪರಸ್ಪರ ಪೂರಕ ಮತ್ತು ಪೋಷಕ ಎನ್ನಬಹುದು.

ಇತಿಹಾಸದ ಅರ್ಥವ್ಯಾಪ್ತಿಯು ಇಂದು ರಾಜಮಹಾರಾಜರ ರಾಜಕೀಯ ಅಧ್ಯಯನದಿಂದ ಜನಸಾಮಾನ್ಯರ ಬದುಕಿನ ಅಧ್ಯಯನವಾಗಿ ರೂಪಾಂತರಗೊಳ್ಳತೊಡಗಿದೆ. ಇದರಿಂದಾಗಿ ಅರಸರ ಚರಿತ್ರೆ ಗೌಣವಾಗಿ ಶ್ರೀ ಸಾಮಾನ್ಯರ ಜೀವನದ ಚರಿತ್ರೆಗೆ ಮಹತ್ವ ಪ್ರಾಪ್ತವಾಗಿದೆ. ಜನರ ಜೀವನದ ಆಚಾರಗಳು, ಧರ್ಮ, ಸಮಾಜ, ಕಲೆ, ಸಂಸ್ಕೃತಿಗಳು ತಮ್ಮದೇ ಆದ ವೈಶಿಷ್ಟ್ಯತೆಯನ್ನು ಹೊಂದಿರುವುದು ಕಂಡುಬರುತ್ತದೆ. ಆರ್ಯ ಪೂರ್ವಕಾಲದಲ್ಲಿ ಸ್ಥಳ ಜನ್ಯ ಬುಡಕಟ್ಟುಗಳು ತಮ್ಮದೇ ಆದ ಸಂಸ್ಕೃತಿ ಹಾಗೂ ಆಚರಣೆಗಳನ್ನು ಹೊಂದಿದ್ದವು. ಭಾರತಕ್ಕೆ ಆರ್ಯರ ಆಗಮನವಾದ ಮೇಲೆ ಇಲ್ಲಿಯ ಸಂಸ್ಕೃತಿಯ ಚಿತ್ರಣವೇ ಬದಲಾಯಿತು. ಮೂಲ ಸಂಸ್ಕೃತಿಗಳನ್ನು ಕ್ಷುದ್ರ, ಕ್ಷುಲ್ಲಕ ಆಚರಣೆಗಳೆಂದು, ವೈದಿಕ ಸಂಸ್ಕೃತಿಯೇ ನಿಜವಾದ ಸಂಸ್ಕೃತಿ ಎಂದು ಆರ್ಯರು ಸಾರಿದರು. ಇದರಿಂದಾಗಿ ಕೆಳವರ್ಗದ ಸಂಸ್ಕೃತಿಗಳು ನಿರಂತರವಾಗಿ ಅನೇಕ ಸುಧಾರಣೆಗಳ ಹಾಗೂ ನಗರೀಕರಣದ ದಾಳಿಗೊಳಗಾಗುತ್ತ ಬಂದವೆಂದು ತಿಳಿಯುತ್ತದೆ.

ಬಹುದೇವತಾ ಆರಾಧನೆ, ಕ್ಷುದ್ರ ದೇವತೋಪಾಸನೆ, ಮೌಢ್ಯಭರಿತ ಆಚರಣೆಗಳ ಖಂಡನೆಯ ರೂಪದಲ್ಲಿ ಮೂಲ ಸಂಸ್ಕೃತಿಗಳನ್ನು ನಾಶಪಡಿಸುವ ಅನೇಕ ಪ್ರಯತ್ನಗಳು ನಡೆದವು. ಆದರೂ ಮೂಲ ಸಂಸ್ಕೃತಿಗಳನ್ನು ಅನುಸರಿಸುತ್ತಿದ್ದ ಅನೇಕ ಸಮುದಾಯಗಳು ತಮ್ಮದೇ ಆದ ಧಾರ್ಮಿಕ, ಸಾಮಾಜಿಕ ವಿಧಿ ವಿಧಾನಗಳು, ಆಚರಣೆಗಳನ್ನು ಕೈಬಿಡದೆ ತಮ್ಮ ದಿನನಿತ್ಯದ ಜೀವನದಲ್ಲಿ ಅಳವಡಿಸಿಕೊಂಡರಲ್ಲದೆ, ಉಳಿಸಿಕೊಂಡು

ಬಂದಿರುವುದು ಕಂಡುಬರುತ್ತದೆ. ಇಂತಹ ಅಸಂಖ್ಯಾತ ಮೂಲ ಸಂಸ್ಕೃತಿಗಳಲ್ಲಿ ಲಂಬಾಣಿ ಸಂಸ್ಕೃತಿಯೂ ಒಂದಾಗಿದೆ ಎಂದು ಪ್ರಸ್ತುತ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

ಪ್ರಾಚೀನ ಭಾರತದ ಮೂಲನಿವಾಸಿಗಳ ಪೈಕಿ ಲಂಬಾಣಿ ಸಮುದಾಯವು ಭವ್ಯವಾದ ಪರಂಪರೆಯನ್ನು ಹೊಂದಿದೆ. ಪಶುಪಾಲನೆ ವೃತ್ತಿ ಆರಂಭಗೊಂಡ ನಂತರವೇ ಲಂಬಾಣಿ ಇತಿಹಾಸ ಪ್ರಾರಂಭವಾಗುತ್ತದೆ. ಮೂಲತಃ ಆರ್ಯ ಜನಾಂಗದ ಗುಣಲಕ್ಷಣಗಳನ್ನು ಹೊಂದಿದ್ದ ಲಂಬಾಣಿಗರು ಪಶುಪಾಲನೆ ಮತ್ತು ಲವಣ (ಉಪ್ಪು) ವ್ಯಾಪಾರವನ್ನು ಪ್ರಮುಖ ವೃತ್ತಿಯನ್ನಾಗಿಸಿಕೊಂಡಿದ್ದರು. ದನಗಳ ಮೇಲೆ ಸರಕು ಹಾಕಿಕೊಂಡು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವ್ಯಾಪಾರ ಮಾಡುತ್ತಾ ವಲಸೆ ಹೋಗುತ್ತಿದ್ದರು. ಕಾಡು-ಮೇಡುಗಳಲ್ಲಿ, ಬೆಟ್ಟ-ಗುಡ್ಡಗಳಲ್ಲಿ ವಾಸಿಸುತ್ತಿದ್ದ ಲಂಬಾಣಿಗರು ತಮ್ಮ ಹಾಗೂ ಪ್ರಾಣಿಗಳ ರಕ್ಷಣೆಗಾಗಿ ಅನೇಕ ಆಯುಧಗಳನ್ನು ಹೊಂದಿರುತ್ತಿದ್ದರು. ಇವರು ದೃಢಕಾಯರು, ಅಜಾನುಬಾಹುಗಳು, ಧೈರ್ಯಶಾಲಿಗಳು, ಕಷ್ಟಸಹಿಷ್ಣುಗಳು ಆಗಿ ತಮ್ಮ ಸಂಸ್ಕೃತಿಯನ್ನು ನಿರೂಪಿಸಿರುವ ಮಹತ್ವದ ಸಮುದಾಯವಾಗಿದೆ.

ಲಂಬಾಣಿಗರು ಭಾರತದಾದ್ಯಂತ ನೆಲೆಸಿದ್ದರೆಂಬುದಕ್ಕೆ ಇಂದಿಗೂ ಎಲ್ಲೆಡೆ ಕಂಡುಬರುವ ತಾಂಡ, ಹಟ್ಟಿಗಳೆಂಬ ಹೆಸರಿನ ಊರುಗಳು ಸಾಕ್ಷಿಯಾಗಿವೆ. ಪಶುಪಾಲನೆ, ಖಾದ್ಯ ಪದಾರ್ಥಗಳ ವ್ಯಾಪಾರ ಮಾಡುತ್ತ ಅಲೆಮಾರಿಗಳಾಗಿದ್ದ ಲಂಬಾಣಿಗರು ಪ್ರದೇಶದಿಂದ ಪ್ರದೇಶಕ್ಕೆ ಸಂಚಾರ ಕೈಗೊಂಡು ನೆಲೆಸಿದ ಪ್ರದೇಶಗಳಲ್ಲೆಲ್ಲ ತಾಂಡ, ಹಟ್ಟಿಗಳನ್ನು ನಿರ್ಮಿಸತೊಡಗಿದರು. ''ಪ್ರಾಚೀನ ಕಾಲದಲ್ಲಿ ಎಲ್ಲೆಡೆ ಹಟ್ಟಿಗಳೇ ಇದ್ದವು. ಪಟ್ಟಿ, ಹಟ್ಟಿ, ತಾಂಡ, ವಾಟಿ, ವಾಡ, ವಾಡಿ ಮೊದಲಾದ ಹೆಸರಿನ ಊರುಗಳಿಲ್ಲದ ಭಾಗವು ದಕ್ಷಿಣ ಪ್ರದೇಶದಲ್ಲಿ ಎಲ್ಲಿಯಾದರೂ ದೊರೆಯಬಹುದೇ ಎಂಬುದು ಸಂದೇಹ'' ಎಂದು ಶಂಬಾ ಜೋಶಿಯವರ ಅಭಿಪ್ರಾಯಪಟ್ಟಿದ್ದಾರೆ.

ಭಾರತದ ಎಲ್ಲಾ ಭಾಗಗಳಲ್ಲಿ ಸಾಮಾನ್ಯವಾಗಿ ಇವರನ್ನು 'ಗೋರಬಂಜಾರ' ಎಂದು ಕರೆಯುತ್ತಾರೆ. ಲಂಬಾಣಿಗಳು ವಿವಿಧ ಉದ್ಯೋಗಗಳಲ್ಲಿ ತೊಡಗಿದ್ದರಿಂದ ಹಾಗೂ ಸ್ಥಾನಿಕ ಭಾಷೆಯ ಪ್ರಭಾವದಿಂದ ಇವರನ್ನು ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಕರ್ನಾಟಕದಲ್ಲಿ ಬಂಜಾರಾ, ಲಂಬಾಣಿ ಎಂದು, ಒರಿಸ್ಸಾದಲ್ಲಿ ಲಮಾಣಿ, ಬಂಜಾರಿ ಎಂದೂ, ಬಿಹಾರದಲ್ಲಿ ಬಂಜಾರ್ ಎಂದು, ತಮಿಳುನಾಡಿನಲ್ಲಿ ಸುಗಾಲಿ, ಲಂಬಾಡಿಗಳೆಂದು, ಆಂಧ್ರ ಪ್ರದೇಶದಲ್ಲಿ ಸುಕಾಲಿ, ಸುಗಾಲಿ, ಗುಜರಾತ್‌ನಲ್ಲಿ 'ಬಣಜಾರ' ಲವಣಿಯಾ ಎಂದು ಕರೆಯುತ್ತಾರೆ. ಇಲ್ಲಿ ಗಮನಿಸಬೇಕಾದ ಮುಖ್ಯ ಸಂಗತಿ ಎಂದರೆ ಲಂಬಾಣಿಗರು ಬೇರೆ ಬೇರೆ ರಾಜ್ಯಗಳಲ್ಲಿ ನೆಲೆಸಿದರೂ ಅವರ ವೇಷಭೂಷಣ, ಭಾಷೆ, ಸಂಸ್ಕೃತಿ ಪದ್ಧತಿಗಳು ಒಂದೇ ರೂಪದಲ್ಲಿ ಕಂಡುಬರುವುದರಿಂದ ವಿವಿಧ ರಾಜ್ಯಗಳಲ್ಲಿ ವಾಸಿಸುವ ಬಂಜಾರ ಜನರು ಒಂದೇ ಮೂಲದವರಾಗಿದ್ದರೆಂದು ತಿಳಿದುಬರುತ್ತದೆ. ಇದು ಲಂಬಾಣಿಗರ ವಿಶಾಲವಾದ ವ್ಯಾಪ್ತಿಯ ಬಗ್ಗೆ ತಿಳಿಸುತ್ತದೆ. ಆದರೆ ಲಂಬಾಣಿಗರು ಸಿಂಧು ಪ್ರಾಂತ್ಯದ ರಾಜಸ್ಥಾನದ ಮೂಲನಿವಾಸಿಗಳೆಂಬ ಅಭಿಪ್ರಾಯವಿದೆ. ಇದರಿಂದಾಗಿ ಉತ್ತರದ ಗಂಗಾ-ಶೋಣ ಭದ್ರ ನದಿಯಿಂದ ದಕ್ಷಿಣ ಭಾರತದ ನೀಲಗಿರಿಯವರೆಗೂ ವ್ಯಾಪಿಸಿಕೊಂಡಿದ್ದರೆಂದು ತಿಳಿದುಬರುತ್ತದೆ.

ಲಂಬಾಣಿಗರು ಸಾಮಾಜಿಕ, ಧಾರ್ಮಿಕ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತಮ್ಮದೇ ಆದ ವೈಶಿಷ್ಟ್ಯಪೂರ್ಣವಾದ ಸಂಪ್ರದಾಯ, ಆಚರಣೆಗಳು, ವಿಧಿ-ನಿಷೇಧ, ನಂಬಿಕೆಗಳನ್ನು ಹೊಂದಿದ್ದಾರೆ. ಪ್ರಾಚೀನ ಕಾಲದಿಂದಲೂ ಪರಂಪರೆಯನ್ನು ಉಳಿಸಿ-ಬೆಳೆಸಿಕೊಂಡು ಬಂದಿದ್ದಾರೆ.

ಧಾರ್ಮಿಕವಾಗಿ ವಿಶಿಷ್ಟವಾದ ಪರಂಪರೆಯನ್ನು ಹೊಂದಿದ ಲಂಬಾಣಿಗರು ಸೇವಾಭಾಯ ಭೀಮನಾಯ್ಕ, ಮೀಟುಭುಕ್ಯಾ, ಹಾತಿರಾಂ ಭಾವ, ಸತೀಸತ್ತಿ, ಸಾತೀಭವಾನಿ, ಗಾಳೆಮ್ಮ, ದುರ್ಗಮ್ಮ, ಮೊದಲಾದ ದೇವರುಗಳನ್ನು ಆರಾಧಿಸುವುದೇ ಇದಕ್ಕೆ ಕಾರಣವಾಗಿದೆ. ಇಂದಿಗೂ ಲಂಬಾಣಿಗರಲ್ಲಿ ವೈಷ್ಣವ ಧರ್ಮದ ಅನುಯಾಯಿಗಳನ್ನು ಸಹ ಕಾಣಬಹುದಾಗಿದೆ. ಧಾರ್ಮಿಕವಾಗಿ ಅನೇಕ ರೀತಿಯ ವಿಶಿಷ್ಟ ಆಚರಣೆ ಸಂಪ್ರದಾಯಗಳನ್ನು ಮತ್ತು ಹರಕೆ, ನಂಬಿಕೆಳನ್ನು ಅನುಸರಿಸುತ್ತಾ ಬಂದಿದ್ದಾರೆ. ಲಂಬಾಣಿಗರು ಅನೇಕ ಗುರುಮಠಗಳನ್ನು ಹೊಂದಿರುವುದು ಅವರ ಧಾರ್ಮಿಕ ವೈಶಿಷ್ಟ್ಯತೆಗೆ ಸಾಕ್ಷಿಯಾಗಿದೆ.

ಲಂಬಾಣಿಗರ ಕಲೆ ಎಂದೇ ಪ್ರಸಿದ್ಧವಾದ ಲಂಬಾಣಿ ಹಾಡು, ಲಂಬಾಣಿ ಕುಣಿತ ವಿಶೇಷವಾದ ಸ್ಥಾನ ಪಡೆದಿವೆ. ಇವರು ಪ್ರಾಚೀನ ಕಾಲದಿಂದಲೂ ತಮ್ಮ ಜನಪದ ಕಲೆಗೆ ಪ್ರಾಮುಖ್ಯತೆ ನೀಡಿದ್ದಾರೆ. ಲಂಬಾಣಿ ಹಾಡು, ಲಂಬಾಣಿ ಕುಣಿತ (ನೃತ್ಯ) ಮೂಲಕ ಕನ್ನಡ ಸಂಸ್ಕೃತಿಗೆ ವಿಶೇಷ ಕೊಡುಗೆ ನೀಡಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಲಂಬಾಣಿಗರ ಸಂಸ್ಕೃತಿ, ವ್ಯಾಪಾರ, ಬೇಟೆಗಾರ, ಪಶುಪಾಲಕ, ಕೃಷಿಕ ಸಂಸ್ಕೃತಿಯಾಗಿದೆ ಎಂದು ತಿಳಿಯುತ್ತದೆ. ಹೀಗಾಗಿ ಇಂಥ ವಿಶಿಷ್ಟ ಪರಂಪರೆ, ಸಂಸ್ಕೃತಿಯುಳ್ಳ ಲಂಬಾಣಿಗರ ಬಗ್ಗೆ ಒಂದು ಚಾರಿತ್ರಿಕ ಅಧ್ಯಯನ ಕೈಗೊಳ್ಳುವುದು ಅವಶ್ಯಕ ಎಂದೆನಿಸುತ್ತದೆ.

**ಈವರೆಗೆ ನಡೆದಿರುವ ಅಧ್ಯಯನದ ಸಮೀಕ್ಷೆ**

ಭವ್ಯವಾದ ಪರಂಪರೆಯನ್ನು ಹೊಂದಿರುವ ಲಂಬಾಣಿ ಸಮುದಾಯದ ಬಗ್ಗೆ ಆಮೂಲಾಗ್ರವಾದ ಅಧ್ಯಯನ ನಡೆದಿಲ್ಲ. ಸುಮಾರು ೨೦ನೇ ಶತಮಾನದ ಆರಂಭದಲ್ಲಿ ಬ್ರಿಟಿಷರ ಆಡಳಿತಾತ್ಮಕ ಕಾರಣಗಳಿಂದಾಗಿ ಭಾರತದ ವಿಭಿನ್ನ ಜನಪದ ಸಮುದಾಯುಗಳನ್ನು ಕುರಿತಂತೆ ಜನಾಂಗಿಕ ಸಮೀಕ್ಷೆ ನಡೆಸಲಾಯಿತು. ಆಗ ಗ್ರಿಯರ್‌ಸನ್, ಪಾಸೆಟ್, ಥರಸ್ಟನ್, ಹಯವದನರಾವ್, ಅನಂತಕೃಷ್ಣ ಅಯ್ಯರ್ ಮೊದಲಾದವರು ಬುಡಕಟ್ಟುಗಳ ಬಗ್ಗೆ ಅಧ್ಯಯನ ನಡೆಸಿದರು. ಲಂಬಾಣಿಗರನ್ನು ಕುರಿತಂತೆ ಜಾಗತಿಕ ನೆಲೆಯಲ್ಲಿ ಅಧ್ಯಯನ ಮಾಡಿದವರೆಂದರೆ ಜಾರ್ಜ್ ಮ್ಯಾಕ್‌ಡೋವೆಲ್ ತಮ್ಮ ಕೃತಿ 'ಜಿಪ್ಸೀಸ್ ವಂಡರರ್ಸ್ ಆಫ್ ದಿ ವರ್ಲ್ಡ್'ದಲ್ಲಿ ಯುರೋಪು ಮತ್ತು ಅಮೇರಿಕಾದ ಜಿಪ್ಸಿಗಳು ಭಾರತದ ಜಿಪ್ಸಿಗಳ ವಂಶಜರೆಂದು ಹೇಳಲಾಗಿದ್ದು, ಯುರೋಪಿನ ಜಿಪ್ಸಿಗಳ ಭಾಷೆಯಾದ ರೋಮಾನಿ ಹೆಚ್ಚಾಗಿ ಸಂಸ್ಕೃತ ಪದಗಳನ್ನು ಒಳಗೊಂಡಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಜಿ.ಎಸ್. ಮೋಹನ್ ಇವರು ೧೯೮೩ ಜುಲೈ ೨೮ನೇ ಸುಧಾ ವಾರಪತ್ರಿಕೆಯಲ್ಲಿ 'ಕಣಿವೆಗೆ ಇಳಿದ ಕೋಗಿಲೆಗಳು ಲಂಬಾಣಿಗಳು ಎಂಬ ಲೇಖನದಲ್ಲಿ ಕ್ರಿ.ಪೂ. ೩೨೬ರಲ್ಲಿ ಅಲೆಕ್ಸಾಂಡರ್ ಭಾರತಕ್ಕೆ ದಂಡೆಯಾತ್ರೆ ಮಾಡಿದಾಗ ಲಂಬಾಣಿಗಳ ಒಂಟೆಗಳನ್ನು ಬಳಸಿಕೊಂಡನೆಂದು ಹೇಳಿದ್ದಾರೆ. ಒಟ್ಟಿನಲ್ಲಿ ಜಿಪ್ಸಿಗಳ ಅಧ್ಯಯನದ ಸಂದರ್ಭದಲ್ಲಿ ಇದು ಅಪರೂಪದ ಕೃತಿಯಾಗಿ ಗೋಚರಿಸುತ್ತದೆ.

ಚಮನ್‌ಲಾಲ್‌ರವರು ತಮ್ಮ ಕೃತಿ 'ಜಿಪ್ಸಿ ಫರಗಟನ್ ಚಿಲ್ಡ್ರನ್ ಆಫ್ ಇಂಡಿಯಾ', ೧೯೬೨ರಲ್ಲಿ ಜಿಪ್ಸಿಗಳ ತವರು ಭಾರತ ಎಂಬುದನ್ನು ಸ್ಪಷ್ಟಪಡಿಸಿ ಅವರಿಗೆ ಆ ಹೆಸರು ಬರಲು ಕಾರಣವನ್ನು ತಿಳಿಸಿ ಉಪಕರಿಸಿದ್ದಾರೆ. ಹಾಗೆಯೇ ಜಿಪ್ಸಿಗಳ ಮೂಲಸ್ಥಾನ ಹಂಗೇರಿ, ಬಲ್ಗೇರಿಯಾ, ರಷ್ಯಾ ಬ್ರಿಟನ್, ಸ್ವೀಡನ್. ಈ

ದೇಶಗಳಲ್ಲಿ ನೆಲೆಸಿರುವ ಜಿಪ್ಸಿಗಳ ಅಧ್ಯಯನ ಮಾಡುವುದರೊಂದಿಗೆ ಯುರೋಪಿನಲ್ಲಿ ಭಾರತೀಯ ಬುಡಕಟ್ಟುಗಳ ಸ್ಥಾನಮಾನಗಳೇನು ಎಂಬುದನ್ನು ನಿರೂಪಿಸುತ್ತಾರೆ. ಇದರೊಂದಿಗೆ ಆಧುನಿಕ ಪ್ರಪಂಚದಲ್ಲಿ ಜಿಪ್ಸಿಗಳ ಪಾತ್ರ, ಅವರ ನಂಬಿಕೆ, ನೀತಿ, ಮದುವೆ ಸಂಪ್ರದಾಯ ಗೀತೆ, ಒಗಟು ಮುಂತಾದವುಗಳ ಬಗೆಗಿನ ಸಮೃದ್ಧ ಮಾಹಿತಿಯನ್ನು ಒದಗಿಸಿದ್ದು, ಶಾಸ್ತ್ರೀಯವಾಗಿ ವಿಶ್ಲೇಷಿಸಿದ್ದಾರೆ. ಈ ಕೃತಿ ಜಿಪ್ಸಿಗಳ ಅಧ್ಯಯನಕಾರರಿಗೆ ಹಾಗೂ ಸಂಶೋಧಕರಿಗೆ ಮೌಲೀಕವಾದಂಥ ಗ್ರಂಥವಾಗಿದೆ. ವೆರಿಯರ್ ಎಲ್ವಿನ್ ಅವರು ತಮ್ಮ 'ಗಿರಿಜನ ಪ್ರಪಂಚ' ಎಂಬ ಗ್ರಂಥದಲ್ಲಿ ಲಂಬಾಣಿಗರನ್ನು ಭಾರತ ಜಿಪ್ಸಿಗಳೆಂದು ಕರೆದಿರುವುದು ಗಮನಾರ್ಹ ಅಂಶ.

೧೯೭೧ರಲ್ಲಿ ಮೊದಲನೆಯ ರೋಮಾ ಬಂಜಾರ ಸಮ್ಮೇಳನ ಲಂಡನ್‌ನಲ್ಲಿ ನಡೆಯಿತು. ಎರಡನೆಯದು ಜಿನಿವಾದಲ್ಲಿ ನಡೆಯಿತು. ಅದರಲ್ಲಿ ಭಾರತದ ಪ್ರತಿನಿಧಿಯಾಗಿ ಭಾಗವಹಿಸಿದ್ದವರು ಶ್ರೀ ರಣಜಿತ್ ನಾಯಕ ಎಂಬ ಲಂಬಾಣಿ ಮುಖಂಡರು. ಮೂರನೆಯ ರೋಮಾ ಬಂಜಾರ ಸಮ್ಮೇಳನ ೧೯೮೧ರಲ್ಲಿ ಜರ್ಮನಿಯಲ್ಲಿ ನಡೆಯಿತು. ಶ್ರೀರಾಮಸಿಂಗ್ ಭಾನಾವತ್ ಅವರೂ ಸೇರಿದಂತೆ ೨೫ ಜನ ಭಾರತೀಯ ಲಂಬಾಣಿ ಪ್ರತಿನಿಧಿಗಳು ಆ ಸಮ್ಮೇಳನದಲ್ಲಿ ಪಾಲ್ಗೊಂಡರು. ನಂತರ ಆ ತಂಡ ೧೧ ದೇಶಗಳನ್ನು ಸುತ್ತಾಡಿ ಲಂಬಾಣಿಗಳ ಬಗೆಗೆ ಸಾಕಷ್ಟು ಮಾಹಿತಿಯನ್ನು ಸಂಗ್ರಹಿಸಿಕೊಂಡು ಬಂದಿತು. ಇದೇ ರೀತಿ ಅಂತರಾಷ್ಟ್ರೀಯ ರೋಮಾ ಸಾಂಸ್ಕೃತಿಕ ಹಬ್ಬವು ಪಂಜಾಬ್ ರಾಜ್ಯದ ಚಂಡೀಗಢದಲ್ಲಿ ೧೯೭೬ ಮಾರ್ಚ್ ೨೭ ರಿಂದ ೩೧ರವರೆಗೆ ಪಂಜಾಬ್ ಸರ್ಕಾರದ ಆಶ್ರಯದಲ್ಲಿ ನಡೆಯಿತು.

ಬಿ.ಟಿ. ಲಲಿತಾ ನಾಯಕ್‌ರ 'ದೇಶ-ವಿದೇಶಗಳಲ್ಲಿ ಲಂಬಾಣಿಗರು' ಎಂಬ ಲೇಖನ ಬಹಳ ಮಹತ್ವದ್ದಾಗಿದೆ. ಲಂಬಾಣಿಗರು ವಿಶ್ವದ ಎಷ್ಟು ದೇಶಗಳಲ್ಲಿ 'ಜಿಪ್ಸಿ' ಎಂಬ ಹೆಸರಿನಿಂದ ನೆಲೆಸಿದ್ದಾರೆಂಬ ಮಾಹಿತಿ ನಿರೂಪಿತವಾಗಿರುವುದಲ್ಲದೆ ಜಿಪ್ಸಿಗಳ ಬಗೆಗೆ ಯಾರ್‍ಯಾರು ಅಧ್ಯಯನ ಮಾಡಿರುವರೆಂಬುದರ ಸಮೀಕ್ಷೆ ಕೂಡ ಇದೆ. ಜೊತೆಗೆ ಲಂಬಾಣಿಗರು ಭಾರತದಿಂದ ಪರದೇಶಗಳಿಗೆ ವಲಸೆ ಹೋಗಲು ಕಾರಣ ಇತ್ಯಾದಿ ಅಂಶಗಳನ್ನು ಮೊದಲ ಬಾರಿಗೆ ಸಮರ್ಥವಾಗಿ ಪ್ರತಿಪಾದಿಸಿದ್ದಾರೆ.

ರೋಮಾ ಬಂಜಾರ 'ಭ್ರಾತೃ ಮತ್ತು ಸಾಂಸ್ಕೃತಿಕ ಅಧ್ಯಯನ ಕೇಂದ್ರ'ವು ಭಾರತದಲ್ಲಿ ಪ್ರಾರಂಭವಾಗಿದ್ದು, ಭಾರತ ಮತ್ತು ಯುರೋಪ್ ಜಿಪ್ಸಿಗಳ ನಡುವಣ ಸೇತುವೆಯಾಗಿ ನಿಂತಿದೆ. ಲಂಬಾಣಿಗರನ್ನು ಕುರಿತ ಜಾಗತಿಕ ಅಧ್ಯಯನದ ಸಂಕ್ಷಿಪ್ತ ವೀಕ್ಷಣೆಯ ಸಂದರ್ಭವನ್ನು ಗಮನಿಸಿದರೆ, ಪ್ರಪಂಚದ ಬಹುತೇಕ ದೇಶಗಳಲ್ಲಿ ಬುಡಕಟ್ಟು ಸಮುದಾಯಗಳ ಅಧ್ಯಯನ ನಡೆದಿದ್ದರೂ ಲಂಬಾಣಿ ಬುಡಕಟ್ಟು ಸಮುದಾಯಕ್ಕೆ ಸಂಬಂಧಿಸಿದಂತೆ ಹೆಸರಿಸುವಂತಹ ಅಧ್ಯಯನ ನಡೆದಿಲ್ಲವೆಂದೇ ಹೇಳಬೇಕಾಗುತ್ತದೆ. ಒಂದು ವೇಳೆ ಅಧ್ಯಯನ ನಡೆದಿದ್ದರೂ ಬೆರಳೆಣಿಕೆಯಷ್ಟೇ ಲೇಖನಗಳು ಬುಡಕಟ್ಟು ಸಮುದಾಯದ ಒಂದೊಂದು ಮಗ್ಗುಲನ್ನು ಮಾತ್ರ ಪರಿಚಯಿಸುವ ಹಂತದಲ್ಲಿಯೇ ಉಳಿದುಬಿಟ್ಟಿವೆ.

ನಮ್ಮ ದೇಶೀ ನೆಲೆಯಲ್ಲಿ ಜನಾಂಗಿಕ ಸಂಶೋಧನೆಗಳು ವ್ಯವಸ್ಥಿತವಾಗಿ ನಡೆದಿರುವುದಿಲ್ಲ. ಅಲ್ಲೊಂದು, ಇಲ್ಲೊಂದು ಬಿಡಿ ಲೇಖನಗಳು, ಕೃತಿಗಳು, ಜನಗಣತಿಯ ವರದಿಗಳಲ್ಲಿ ದಾಖಲಾಗಿರುವ ಕೆಲವು ಅಂಶಗಳು ಜನಾಂಗಿಕ ಬಗೆಗೆ ಮಾಹಿತಿ ಮಾಡಿಕೊಡುತ್ತವೆ. ಭಾರತದಲ್ಲಿ ಲಂಬಾಣಿಗರಿಗೆ ಸಂಬಂಧಿಸಿದಂತೆ ಇದುವರೆಗೆ

ಅಧ್ಯಯನಗಳು ಅಷ್ಟಾಗಿ ನಡೆದಿರುವುದಿಲ್ಲ. ಕೆಲವು ಕೃತಿ ಲೇಖನಗಳಲ್ಲಿ ಸ್ವಲ್ಪ ಮಟ್ಟಿನ ವಿಚಾರಗಳು ಪ್ರಸ್ತಾಪವಾಗಿರುವುದು ಅಧ್ಯಯನಯೋಗ್ಯವಾಗಿವೆ.

ಮನಶಾಸ್ತ್ರಜ್ಞರಾದ ಎಡ್ಗರ್‌ಥರಸ್ಟನ್ ಮತ್ತು ಕೆ.ರಂಗಾಚಾರಿಯವರು ಬರೆದಿರುವ 'ಕ್ಯಾಸ್ಟ್ ಅಂಡ್ ಟ್ರೈಬ್ಸ್ ಆಫ್ ಸದರನ್ ಇಂಡಿಯಾ' ಎಂಬ ನಾಲ್ಕನೇ ಸಂಪುಟದಲ್ಲಿ ಈ ಜನಾಂಗದ ಬಗೆಗೆ ಉತ್ತಮ ಮಾಹಿತಿಯನ್ನು ನೀಡಿದ್ದಾರೆ. ಆದರೂ ಈ ಕೃತಿಯಲ್ಲಿ ವಾಸ್ತವಿಕತೆಗಳಿಗಿಂತ ಕಟ್ಟುಕಥೆಗಳೇ ಹೆಚ್ಚಾಗಿರುವುದನ್ನು ಕಾಣಬಹುದು.

ಜಿ.ಎ. ಗ್ರಿಯರ್‌ಸನ್‌ರು ತಮ್ಮ ಕೃತಿ 'ಲಿಗ್ವಿಸ್ಟಿವ್ ಸರ್ವೇ ಆಫ್ ಇಂಡಿಯಾ', ವ್ಯಾಲ್ಯೂಂ-೯, ಪಾರ್ಟ್ ೩, ೧೯೦೭ರಲ್ಲಿ ಲಂಬಾಣಿಗರ ಭಾಷೆಯನ್ನು ವಿಶದವಾಗಿ ನಿರೂಪಿಸಿ ಹಾಡುಗಳನ್ನು ಆಂಗ್ಲಭಾಷೆಗೆ ತರ್ಜುಮೆ ಮಾಡಿರುವುದು ಉಚ್ಚಾರಣೆಗೆ ಹತ್ತಿರವಾಗಿದೆ. ಭಾಷಿಕ ಅಂಶಗಳಿಗೆ ಇವರು ವಿಶೇಷ ಮಹತ್ವ ನೀಡಿ ನಾಸಿಕ್, ಬೆಳಗಾವಿ, ಕಂಕೇರ್, ಸಹರಾಂಪುರ, ಕೇರಿ, ಝಾನ್ಸಿ, ಪಂಜಾಬ್, ಲಾಹೋರ್, ಗುಜರಾತ್ ಇತ್ಯಾದಿ ಜಿಲ್ಲೆಗಳಲ್ಲಿನ ಲಂಬಾಣಿ ಜನರ ಭಾಷೆಯ ಕೆಲವು ತುಣುಕುಗಳನ್ನು ಆಂಗ್ಲ ಭಾಷೆಯಲ್ಲಿ ತರ್ಜುಮೆ ಮಾಡಿ, ಬಿರಾರ್‌ನ ಲಂಬಾಣಿ, ಪಂಜಾಬಿ ಲಂಬಾಣಿ ಭಾಷೆಯಲ್ಲಿನ ವ್ಯತ್ಯಾಸಗಳನ್ನು ಗುರುತಿಸುತ್ತ ಅವುಗಳಿಗೆ ಅರ್ಥವನ್ನು ಆಂಗ್ಲಭಾಷೆಯಲ್ಲಿ ಕೊಟ್ಟಿದ್ದಾರೆ. ಈ ಕಾರಣಕ್ಕಾಗಿ ಈ ಕೃತಿ ಲಂಬಾಣಿ ಭಾಷೆಯನ್ನು ಅಧ್ಯಯನ ಮಾಡುವ ಅಧ್ಯಯನಕಾರರಿಗೆ ಒಂದು ಮೌಲಿಕವಾದ ಕೊಡುಗೆಯಾಗಿದೆ. ಇದಕ್ಕೆ ಪೂರಕವಾಗಿ ಹೆಚ್.ವಿ. ನಂಜುಂಡಸ್ವಾಮಿ ಮತ್ತು ಎಲ್.ಕೆ. ಅನಂತಕೃಷ್ಣ ಅಯ್ಯರ್‌ರು ತಮ್ಮ ಕೃತಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟಸ್ ವ್ಯಾಲ್ಯೂಂ-೨ರಲ್ಲಿ ಲಂಬಾಣಿಗಳ ಮೂಲ, ಸಾಮಾಜಿಕ, ಸಾಂಸ್ಕೃತಿಕ ವಿಚಾರಗಳ ಬಗ್ಗೆಯೂ ಉತ್ತಮ ಮಾಹಿತಿಗಳನ್ನು ನೀಡಿದ್ದಾರೆ.

ಮೋಹನ್ ನಾಯಕ್‌ರ ತಮ್ಮ ಕೃತಿ 'ಗೋರಮಾಟಿ ಸಂಸ್ಕೃತಿ'ಯ ಆಟಿಸಂಕೇತ್‌ರಲ್ಲಿ ಲಂಬಾಣಿಗರು ಆಚರಿಸುವ ಹಬ್ಬಗಳಾದ ದಸರಾ, ದೀಪಾವಳಿ, ಹೋಳಿ ಹಬ್ಬದ ವಿವರಗಳೊಂದಿಗೆ ಹಾಡುಗಳಿವೆ. ಕಥೆ ಗಾಯನ ವೃತ್ತಿಗೆ ಸಂಬಂಧಿಸಿದ ಮಾಹಿತಿ ಹಾಗೂ ಲಂಬಾಣಿಗರ ಮದುವೆಯ ಕೆಲವು ಹಾಡುಗಳನ್ನು ಮೂಲ ಮರಾಠಿ ಭಾಷೆಯಲ್ಲಿ ದಾಖಲಿಸಿದ್ದು, ಜಾನಪದೀಯ ನೆಲೆಯಲ್ಲಿ ಅಧ್ಯಯನ ಮಾಡಿದ್ದಾರೆ.

ಪುಷ್ಪಲತಾ ರಾಂಪುರೆಯವರು ೧೯೭೫ರಲ್ಲಿ ''ಬಂಜಾರ ಲೋಗ್ ಗೀತೋಕಿ ಸಮೂಹ'' ಎಂಬ ಹಿಂದಿ ಭಾಷೆಯ ಸಂಶೋಧನಾ ಮಹಾಪ್ರಬಂಧವನ್ನು ರಚಿಸಿದ್ದಾರೆ. ಈ ಪ್ರಬಂಧದಲ್ಲಿ ಲಂಬಾಣಿಗರ ಅಲಿಖಿತ ಮೌಖಿಕ ಗೀತೆಗಳನ್ನು ಸಂಗ್ರಹಿಸಿ, ವ್ಯಾಖ್ಯಾನಿಸಿ ವಿಶ್ಲೇಷಣೆಗೆ ಒಳಪಡಿಸಿ, ಲಂಬಾಣಿ ಬದುಕಿನ ಚಿತ್ರಣವನ್ನು ಹಿಡಿದಿಡಲು ಪ್ರಯತ್ನಿಸಿರುವುದು ಸ್ತುತ್ಯಾರ್ಹ ಪ್ರಯತ್ನವಾಗಿದೆ. ಈ ಮಹಾಪ್ರಬಂಧ ಲಂಬಾಣಿ ಜನಪದ ಗೀತೆಗಳಿಗೆ ಸಂಬಂಧಿಸಿದಂತೆ ಮೊದಲ ಅತ್ಯುತ್ತಮ ಅಧ್ಯಯನ ಎಂದು ಹೇಳಬೇಕು.

೧೮೭೧ರಲ್ಲಿ ಅಬ್ಬೆಡೊಬೀಸ್‌ರು 'ಹಿಂದೂ ಮ್ಯಾನರ್ಸ್ ಕಸ್ಟಮ್ಸ್ ಅಂಡ್ ಸೆರಮನೀಸ್' ಎಂಬ ಗ್ರಂಥದಲ್ಲಿ ಲಂಬಾಣಿ ಜನಾಂಗವನ್ನು ಕುರಿತು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಈ ಲೇಖನವು ಐತಿಹ್ಯ ಮತ್ತು ಕಥೆಗಳನ್ನು ಆಧರಿಸಿ ಬರೆದಂತೆ ಕಂಡುಬರುತ್ತದೆ. ೧೮೯೭ರಲ್ಲಿ ರಚನೆಯಾದ 'ಲ್ಯಾಂಡ್‌ಮಾರ್ಕ್ಸ್ ಆಫ್ ಇಂಡಿಯನ್

ಅಂತ್ರೋಪಾಲಜಿ; ವೈಲ್ಡ್ ಟ್ರೈಬ್ಸ್ ಆಫ್ ಇಂಡಿಯಾ' ಎಂಬ ಗ್ರಂಥದಲ್ಲಿ ಈ ಜನಾಂಗದ ಭಾಷೆಯ ಬಗೆಗೆ ಅಧ್ಯಯನ ನಡೆಸಿರುವುದನ್ನು ಕಾಣಬಹುದು.

ಆರ್.ವಿ. ರಸಲ್ ಮತ್ತು ಹೀರಾಲಾಲ್‌ನವರು 'ದಿ. ಟ್ರೈಬ್ಸ್ ಅಂಡ್ ಕ್ಯಾಸ್ಟ್ ಆಫ್ ದಿ ಸೆಂಟ್ರಲ್ ಪ್ರಾವಿನ್ಸಸ್ ಆಫ್ ಇಂಡಿಯಾ' (೧೯೧೬) ಸಂಪುಟ-೩ನೇ ಕೃತಿಯಲ್ಲಿ ಲಂಬಾಣಿಗರು ಹಬ್ಬಗಳನ್ನು ಆಚರಿಸುತ್ತಿದ್ದ ರೀತಿ, ಅವರ ಪ್ರಮುಖ ವೇಷಭೂಷಣ, ಸಂಪ್ರದಾಯ ಆಚರಣೆಗಳ ಮೇಲೆ ಬೆಳಕು ಚೆಲ್ಲುವಂತೆ ಸುಮಾರು ೩೦ ಪುಟದಷ್ಟು ದೀರ್ಘವಾದ ಲೇಖನವನ್ನೇ ಬರೆದಿದ್ದಾರೆ. ಲಂಬಾಣಿ ಸಂಸ್ಕೃತಿಯ ಬಗ್ಗೆ ಅಧ್ಯಯನ ಮಾಡುವವರಿಗೆ ಈ ಲೇಖನ ಪ್ರಾಥಮಿಕ ಮಾಹಿತಿಯನ್ನು ಒದಗಿಸಬಲ್ಲದು. ಆರ್.ಇ. ಎಂಥೋಮನ್‌ರವರ ದಿ.ಟ್ರೈಬ್ಸ್ ಅಂಡ್ ಕ್ಯಾಸ್ಟ್ ಆಫ್ ಬಾಂಬೆ (೧೯೨೨)ಯಲ್ಲಿ ಲಂಬಾಣಿ ಹೆಸರಿನ ಉತ್ಪತ್ತಿ, ಮೂಲ, ಬಾಹ್ಯಚಹರೆ, ವೇಷಭೂಷಣ ಸಂಪ್ರದಾಯಾಚರಣೆ, ಆಹಾರ ಪಾನೀಯ ಇವೇ ಮುಂತಾದ ವಿಷಯವನ್ನೊಳಗೊಂಡಂತಹ ಪರಿಚಯಾತ್ಮಕವಾದ ಮಾಹಿತಿಯೊಂದಿಗೆ ಲಂಬಾಣಿಗರ ದೈವಗಳ ಬಗ್ಗೆ ಮಾಹಿತಿಗಳನ್ನು ನೀಡಿದ್ದಾರೆ.

೧೯೪೨ರಲ್ಲಿ ಡಬ್ಲ್ಯೂ. ಕ್ರುಕ್ ಎಂಬ ವಿದ್ವಾಂಸರು 'ಲ್ಯಾಂಡ್‌ಮಾರ್ಕ್ಸ್ ಇನ್ ಇಂಡಿಯಾ ಅಂಥ್ರೋಪಾಲಜಿ, ದಿ. ಟ್ರೈಬ್ಸ್ ಅಂಡ್ ಕ್ಯಾಸ್ಟ್ಸ್ ಆಫ್ ದಿ ನಾರ್ಥ ವೆಸ್ಟರ್ನ್ ಇಂಡಿಯಾ ಸಂಪುಟ ೧೬(೧)' ಎಂಬ ಕೃತಿಯಲ್ಲಿ ಅವರು ಲಂಬಾಣಿ ಜನಾಂಗಗಳ ಬಗೆಗೆ ಕೆಲವು ಅಮೂಲ್ಯ ಮಾಹಿತಿಗಳನ್ನು ಕೊಡುತ್ತಾರೆ. ದಂಡಿಯ ದಶಕುಮಾರ ಚರಿತೆಯಲ್ಲಿ ಬಂಜಾರ ತಾಂಡದಲ್ಲಿ ನಡೆಯುತ್ತಿದ್ದ ಕೋಳಿ ಕಾಳಗದ ಮಾಹಿತಿಯನ್ನು ಒದಗಿಸಿದ್ದಾರೆ. ಮತ್ತು ಕ್ರಿ.ಶ. ೧೧ ಮತ್ತು ೧೬ನೇ ಶತಮಾನದ ವೇಳೆಗೆ ಈ ಜನಾಂಗವನ್ನು ಚರಿತ್ರೆಯಲ್ಲಿ ಗುರುತಿಸಲು ಅನುಕೂಲವಾಗುವ ಹಲವಾರು ಮಾಹಿತಿಗಳನ್ನು ಕೊಡುತ್ತಾರೆ. ಕ್ರಿ.ಶ.೧೬೩೦ರಲ್ಲಿ ಶಹಜಹಾನನ ವಜೀರನಾದ ಅಸೆಫ್ ಜ್ಯಾ ಎಂಬುವವರು ಭಂಗೀ-ಜಂಗೀ ನಾಯಕರುಗಳಿಗೆ ಬರವಣಿಗೆಯಲ್ಲಿ ಕೊಟ್ಟ ತಾಮ್ರ ಶಾಸನವನ್ನು ದಾಖಲಿಸಿದ್ದಾರೆ. ಈ ಕಾರಣಗಳಿಂದ ಇದು ಬಹುಮುಖ್ಯವಾಗಿ ಅಧ್ಯಯನ ಮಾಡಬೇಕಾದ ಲೇಖನವಾಗಿದೆ. ಉಳಿದಂತೆ ಆಂಗ್ಲ ಭಾಷೆಯ ಇತರೆ ಲೇಖನಗಳಲ್ಲಿ ಕಂಡುಬರುವ ಮಿತಿಗಳು ಇಲ್ಲಿಯೂ ಕಂಡುಬರುತ್ತವೆ.

ಜೇಮ್ಸ್ ಹೇಸ್ಟಿಂಗ್ಸ್ ಅವರ ಎಂ.ಸಿ. ಕೊಲೋಪಡಿಯಾ ಆಫ್ ರಿಜಿನಲ್ ಅಂಡ್ ಎಥಿಕ್ಸ್ (೧೯೦೯) ಗ್ರಂಥದ ಸಂಪುಟ-೨ರಲ್ಲಿ ಲಂಬಾಣಿಗರು ಹೈದರಾಬಾದ್ ಪ್ರಾಂತ್ಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುತ್ತಿರುವ ಬಗ್ಗೆ ಮತ್ತು ಮಾರಿಯಾಯಿ, ಸೇವಾಭಾಯ, ತುಳಜಾದೇವಿ, ಮೀರುಭುಕ್ಯಾ ದೇವರುಗಳ ಬಗೆಗೆ ಮಾಹಿತಿ ಇದ್ದು, ದೇವರು ದೈವಕ್ಕೆ ಸಂಬಂಧಿಸಿದಂತಹ ಕುತೂಹಲಕರ ವಿಷಯದ ವಿವೇಚನೆ ಇಲ್ಲಿದೆ.

ಸಚ್ಖಂಡ್ ಶ್ರೀ ಹಜೂರ್ ಹಬ್ಬಲ್ (ನಾಂದೇಡ) ಅವರ ಬಂಜಾರ ಸಮಾಜೇರ್ ಮಾಳ್ಯ ಇತಿಹಾಸ್ ಎಂಬ ಮರಾಠಿ ಭಾಷೆಯ ಈ ಕೃತಿಯಲ್ಲಿ ಬಂಜಾರ ಸಮಾಜವು ಸಿಖ್ ಧರ್ಮದ ಜೊತೆಗೆ ಹೇಗೆ ಸಂಬಂಧ ಹೆಣೆದುಕೊಂಡಿದೆ ಎಂಬ ವಿಷಯ ಕುರಿತು ಚರ್ಚಿಸುತ್ತದೆ. ಜೊತೆಗೆ ಲಖಿಶಹಾ ಬಣಜಾರ, ಲೋಕಮಸಂದ್, ಕಾಳು ಬಣಜಾರ, ಲಭಾಣ ಎಂಬ ಬಂಜಾರ ವೀರರ ವರ್ಣನೆಯನ್ನು ಸಾಧಾರಣವಾಗಿ ವಿವರಿಸುವ ಯತ್ನ ಈ ಅಧ್ಯಯನದಲ್ಲಿದೆ.

ಎಸ್. ಯಾಸೀನ್ ಸಾಹೇಬ್ ಮತ್ತು ಪಿ. ಸರ್ವೇಶ್ವರ ನಾಯಕ್ ಅವರ 'ಇನ್‌ಬ್ರಿಡಿಂಗ್ ಅಂಡ್ ಮರ್‌ಟಿಲ್ ಡಿಸ್ಟೈನ್ಸ್ ಅಮಂಗ್ ದಿ ಬಂಜಾರ ಟ್ರೈಬ್ಸ್ ಆಫ್ ಆಂಧ್ರ ಪ್ರದೇಶ' (೧೯೮೩) ಕೃತಿ ಪ್ರಮುಖವಾದುದು. ಲೇಖಕರ ಆಂಧ್ರ ಪ್ರದೇಶದ ಲಂಬಾಣಿ ಬುಡಕಟ್ಟಿನ ಮೂಲದ ಲೇಖನ ಗಮನ ಸೆಳೆಯುತ್ತದೆ. ಇದಕ್ಕೆ ಪೂರಕವಾಗಿ ಸಯ್ಯದ್ ಸಿರಾಜ್ ಉಲ್ ಹಸನ್ ಅವರು 'ದಿ ಕ್ಯಾಸ್ಟ್ ಅಂಡ್ ಟ್ರೈಬ್ಸ್ ಆಫ್ ಹೆಚ್ ಇ.ಹೆಚ್,' ೧೯೮೯ ಎಂಬ ಪುಸ್ತಿಕೆಯಲ್ಲಿ ಲಂಬಾಣಿಗರ ಮೂಲ ಹಾಗೂ ಅವರ ಸಂಪ್ರದಾಯಾಚರಣೆ ಕಟ್ಟಿಕೊಟ್ಟಿದ್ದಾರೆ. ಪತ್ರಕರ್ತ ಪಿ.ಸಾಯಿನಾಥ ಅವರು 'ಇಮೋಸಿಯನ್ಸ್ ಟೂ ಮಿಶಡಂಮ್.' ದಿ ಹಿಂದೂ ೧೯ನೇ ಅಕ್ಟೋಬರ್ ೨೦೦೦ ಲಂಬಾಣಿ ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲುವ ಇನ್ನೊಂದು ಪರಿಚಯಾತ್ಮಕ ಲೇಖನ ಬರೆದಿದ್ದಾರೆ.

ಶ್ರೀಮೋತಿರಾಜ ರಾಠೋಡ್‌ರವರ 'ಬಂಜಾರ ಸಂಸ್ಕೃತಿ' (೧೯೭೬) ಕೃತಿ ತಾಂಡ ಸಂಸ್ಕೃತಿ ಬಗೆಗೆ ಮಹತ್ವ ಪೂರ್ಣವಾದುದ್ದು, ಲಂಬಾಣಿ ಸಂಸ್ಕೃತಿಯನ್ನು ಕುರಿತದ್ದಾಗಿದೆ. ಬಳಿರಾಮ ಹಿರಾಮಣ್ ಅವರು 'ಮಹಾರಾಷ್ಟ್ರ ಗೋರೆ ಬಂಜಾರೆ ಲೋಕಾಂಚ ಇತಿಹಾಸ' ೧೯೬೬ ರ ಈ ಕೃತಿಯಲ್ಲಿ ಲಂಬಾಣಿಗರ ಸಂಸ್ಕಾರ ವಿಶೇಷದ ಮೇಲೆ ಒತ್ತನ್ನು ನೀಡಿದ್ದಾರೆ. ಕೆಲವು ಕಡೆ ಗಮನಾರ್ಹವಾದ ತೌಲನಿಕ ದೃಷ್ಟಿಗೆ ಒಳಗಾಗಿರುವ ಅಧ್ಯಯನ ಇದಾಗಿದೆ.

ನರಸಿಂಹ ಅಯ್ಯರ್ ವಿ.ಎನ್. 'ಭಾರತದ ಜನಗಣತಿ' ಸಂಪುಟ-೨೫, ಮೈಸೂರು ಪಾರ್ಟ್-೧ (೧೮೯೧)ರಲ್ಲಿ ಲಂಬಾಣಿಗರನ್ನು ಸುಕಾಲಿ ಅಥವಾ ಬಂಜಾರ ಎಂದು ಕರೆದಿರುವುದಲ್ಲದೆ, ಬಂಜಾರಗಳು ಜಿಪ್ಸಿಗಳಂತಿರುವುದರ ಬಗೆಗೆ ಸ್ಥಳೀಯವಾಗಿ ಇವರಿಗಿರುವ ಬೇರೆ ಬೇರೆ ಹೆಸರು ಬೇರೆ ಬೇರೆ ಪ್ರಾಂತ್ಯಗಳಲ್ಲಿ ಇವರು ಹರಡಿಕೊಂಡ ಬಗೆಯನ್ನು ವಿವರಿಸಲಾಗಿದೆ. ಇವರ ಬಾಹ್ಯ ಚಹರೆಯ ಬಗೆಗೆ ಮೌಲಿಕವಾದ ಮಾಹಿತಿ ನೀಡುವ ಈ ವರದಿ ಪ್ರಮುಖವಾಗಿದೆ.

ಡಬ್ಲ್ಯೂ ಫ್ರಾನ್ಸಿಸ್‌ರ 'ಭಾರತದ ಜನಗಣತಿ' ವ್ಯಾಲ್ಯೂಂ-೧೫, ಮದ್ರಾಸ್ ಪಾರ್ಟ್-೧ (೧೯೦೧)ರಲ್ಲಿ ವ್ಯಾಪಾರಿಗಳಾಗಿದ್ದ ಲಂಬಾಣಿಗರು ತಾಂಡಗಳನ್ನು ಕಟ್ಟಿಕೊಂಡು ಜೀವಿಸುತ್ತಿದ್ದರು ಎಂಬ ಮಾಹಿತಿ ಇದೆ. ಬಳ್ಳಾರಿ ಜಿಲ್ಲೆಯ ಗೆಜೆಟಿಯರ್‌ನಲ್ಲಿ ಬಂಜಾರಗಳನ್ನು ಕುರಿತಂತೆ ವರದಿ ರೂಪದ ಸಂಕ್ಷಿಪ್ತ ಮಾಹಿತಿ ಲಭ್ಯವಾಗುತ್ತದೆ.

ಮುಂಬೈ ರಾಜ್ಯ ಗೆಜೆಟಿಯರ್‌ನಲ್ಲಿ ಲಂಬಾಣಿ ಸಮುದಾಯದ ಬಗೆಗೆ ಸಂಕ್ಷಿಪ್ತ ಮಾಹಿತಿ ಇದ್ದು, ಅವರು ಉಪ್ಪಿನ ವ್ಯಾಪಾರ ಮಾಡುತ್ತಿದ್ದರೆಂದು ಹೇಳಲಾಗಿದೆ. ಮೂಲತಃ ಲಂಬಾಣಿಗಳು 'ಲವಣ' ವ್ಯಾಪಾರವನ್ನು ಮಾಡುತ್ತಿದ್ದರು. 'ಲವಣ' ಶಬ್ದದಿಂದ 'ಲವಣ' ಲಮಾಣಿ ಆಗಿ ಹೆಸರು ರೂಪಾಂತರ ಹೊಂದಿದೆ ಎಂಬ ವಕ್ತೃಗಳ ಹೇಳಿಕೆಯನ್ನು ತಳ್ಳಿಹಾಕುವಂತಿಲ್ಲ. ಶೇರಿಂಗ್ ಅವರ 'ಹಿಂದೂ ಟ್ರೈಬ್ಸ್ ಆಂಡ್ ಕ್ಯಾಸ್ಟ್', (೧೯೭೪) ಸಂಪುಟ-೩ರಲ್ಲಿ ಲಂಬಾಣಿಗರು 'ತಾಂಡ' ಕಟ್ಟಿಕೊಂಡ ಬಗೆ ಹಾಗೂ ಹಿನ್ನೆಲೆಗೆ ಸಂಬಂಧಿಸಿದಂತೆ ಗೋದಿ ಮತ್ತು ಮೆಕ್ಕೆ ಜೋಳ ಅವರ ಆಹಾರ ಧಾನ್ಯವಾಗಿತ್ತು. ಲಂಬಾಣಿಗರ ಬಾಹ್ಯ ಚಹರೆ ಜಿಪ್ಸಿ ಬುಡಕಟ್ಟಿನ ಬಾಹ್ಯ ಚಹರೆಗೆ ಹೋಲುವಂತಿದೆ ಎಂಬಂಶವನ್ನು ಪ್ರಸ್ತಾಪ ಮಾಡಿದ್ದಾರೆ. ಆದರೆ ಲಂಬಾಣಿ ಜನರು ಜಿಪ್ಸಿಗಳಿಗಿಂತ ಸ್ವಲ್ಪ ಭಿನ್ನರಾಗಿ ಗೋಚರಿಸುತ್ತಾರೆ.

ಸಯ್ಯದ್ ಖಾಜಾ ಮೆಹಬೂಬ್ ಹುಸೇನ್ ಅವರ 'ದಿ ರೋಲ್ ಯುಲಿಫಿಟ್ ಆಫ್ ಟ್ರೈಬ್ಸ್ ಅಂಡ್ ಬ್ಯಾಕ್‌ವರ್ಡ್ ಕ್ಲಾಸಸ್ ಇನ್ ಹೈದರಾಬಾದ್' (ಡಕ್ಕನ್) ಕೃತಿಯಲ್ಲಿ ಹೈದರಾಬಾದ್‌ನಲ್ಲಿ ಇರುವ ಗೊಂಡರು, ಪರ್ದಾನಾಸ್, ಕೂಯರು, ಬಿಲ್ಲರು ಮುಂತಾದ ಬುಡಕಟ್ಟುಗಳ ಬಗೆಗೆ ಮಾಹಿತಿ ಮಾಡಿಕೊಡುವಾಗ ಲಂಬಾಣಿಗಳ ಬಗೆಗೆ ಸಂಕ್ಷಿಪ್ತವಾದ ಮಾಹಿತಿಯನ್ನು ನೀಡಿದ್ದಾರೆ. ಈ ಲೇಖನ ನೇರವಾಗಿ ಲಂಬಾಣಿಗರಿಗೆ ಸಂಬಂಧಿಸುತ್ತದೆಂದು ಹೇಳುವುದು ಕಷ್ಟ. ಪವಿತ್ರ ಗುಪ್ತರವರು ತಮ್ಮ ಲೇಖನದಲ್ಲಿ ಲಂಬಾಣಿ ಸಮುದಾಯದ ಸಂಸ್ಕೃತಿ ಬಗ್ಗೆ ಬೆಳಕು ಚೆಲ್ಲುತ್ತಾರೆ.

ಆರ್. ಪ್ರಕಾಶರಾವ್‌ನವರು ದಿ. ಈಸ್ಟರ್ನ್ ಆಂಥ್ರೋಪಾಲಜಿಸ್ಟ್ ಸಂಪುಟ-೮ (೧೯೫೪) ಎಂಬ ಕೃತಿಯಲ್ಲಿ ತಾಂಡದ ನ್ಯಾಯ ಪಂಚಾಯತ್ ವ್ಯವಸ್ಥೆ ಇನ್ನಿತರ ವಿಷಯ ಪ್ರಸ್ತಾಪಿಸಲಾಗಿದೆ. ಹಿರಾಮಣ್ ಪಾಟೀಲ್ ಮಾಂಡವಿನವರ 'ಗೋರೆ ಬಂಜಾರ ಲೋಕಾಂಚ ಇತಿಹಾಸ' ಎಂಬ ಮರಾಠಿ ಕೃತಿಯಲ್ಲಿ ಲಂಬಾಣಿ ಥಾಡಿ ಭಾಟ್ ಮಥೂರ್ಯ ಗೋರ್ ರಜಪೂತ್ ಇವರ ಒಳಸಂಬಂಧ ಉಪಪಂಗಡ, ಅಂದಿನ ಸಾಮಾಜಿಕ ಸ್ಥಿತಿಗತಿ ಪ್ರತೀತ ಲಂಬಾಣಿಗರ ಸಂಸ್ಕೃತಿ ಕುರಿತ ಮಾಹಿತಿಗಳನ್ನು ನೀಡಿದ್ದಾರೆ.

ನಮ್ಮ ನಾಡಿನ ನೆಲೆಯಲ್ಲಿ ನಡೆದ ಜನಾಂಗಿಕ ಸಂಶೋಧನೆಗಳು ಇತ್ತೀಚಿನವು ಎನ್ನಬಹುದು. ಕರ್ನಾಟಕದಲ್ಲಿ ಲಂಬಾಣಿಗರಿಗೆ ಸಂಬಂಧಿಸಿದಂತೆ ವಿಪುಲ ಸಾಹಿತ್ಯ ಸಾಮಗ್ರಿ ದೊರೆತರೂ ವ್ಯವಸ್ಥಿತ ಅಧ್ಯಯನದ ಕೊರತೆ ಎದ್ದು ಕಾಣುತ್ತದೆ. ಡಾ. ಎಂ. ಚಿದಾನಂದಮೂರ್ತಿಯವರು 'ಸಂಶೋಧನ ತರಂಗ' (೧೯೭೦) ಕೃತಿಯಲ್ಲಿ 'ಲಂಬಾಣಿ ಜನ ಮತ್ತು ಅವರ ಭಾಷೆ' ಎಂಬ ಲೇಖನವನ್ನು ಬರೆದಿದ್ದು, ಅದರಲ್ಲಿ ಹಬ್ಬ ಹರಿದಿನಗಳು, ಧಾರ್ಮಿಕತೆ, ಗಾದೆ ಮತ್ತು ಸೇವಾಭಾಯ, ಹುನಾಸತ್ತಿಯವರ ಬಗ್ಗೆ ತಿಳಿಸಿದ್ದಾರೆ. ಎಸ್. ಬಸವರಾಜ್ ಅವರ 'ಲಂಬಾಣಿಗರು ಮತ್ತು ಬಗ್ಗರು'. (೧೯೭೭) ಕೃತಿ ಪ್ರಮುಖವಾದುದು. ಲೇಖಕರು ಲಂಬಾಣಿಗರು ಮತ್ತು ಬಗ್ಗರೆಂಬ ಎರಡೂ ಬುಡಕಟ್ಟುಗಳ ಜಾನಪದ ಅಧ್ಯಯನವನ್ನು ಪ್ರತ್ಯೇಕವಾಗಿ ಕೈಗೊಂಡಿದ್ದಾರೆ. ಲಂಬಾಣಿಗರ ಜೀವನ ವಿಧಾನ, ಸಾಮಾಜಿಕ ವ್ಯವಸ್ಥೆ, ಆಚರಣೆಗಳ ಕುರಿತು ಬೆಳಕು ಚೆಲ್ಲಿದ್ದಾರೆ.

ಶ್ರೀ ಅಮರಸಿಂಗ್ ರಾಠೋಡ್‌ರವರ 'ಲಂಬಾಣಿ ಭಾಷೆ ಅದರ ವ್ಯಾಕರಣ ಹಾಗೂ ರಾಜಸ್ಥಾನಿ ಮತ್ತು ಹಿಂದಿಯೊಡನೆ ಅದರ ಸಂಬಂಧ,' (೧೯೭೧) ಸಂಶೋಧನಾ ಪ್ರಬಂಧದಲ್ಲಿ ಲಿಪಿ ಇಲ್ಲದ ಭಾಷೆಯಾದ ಲಂಬಾಣಿ ಭಾಷೆಗೆ ಮೌಖಿಕ ಸಾಹಿತ್ಯವೇ ಲಿಪಿಕ ಭಾಷೆಯಷ್ಟು ಸತ್ವಪೂರ್ಣವಾದುದಾಗಿದೆ ಎಂದು ವಿವರಿಸಿದ್ದಾರೆ. ಈ ಭಾಷೆಯ ವ್ಯಾಕರಣವನ್ನು ಅರ್ಥವತ್ತಾಗಿ ನಿರೂಪಿಸಿ ಆ ಭಾಷೆಯು ರಾಜಸ್ಥಾನಿಯೊಂದಿಗೆ ಯಾವ ರೀತಿಯ ಆಂತರಿಕ ಸಂಬಂಧವಿದೆ ಎಂಬುದರ ಬಗ್ಗೆ ತಿಳಿಸಿದ್ದಾರೆ. ಡಿ.ಬಿ.ನಾಯಕ್‌ರವರು 'ಲಂಬಾಣಿ ಸಂಸ್ಕೃತಿ' (೧೯೯೪) ಕೃತಿಯಲ್ಲಿ ಲಂಬಾಣಿಗರ ಗೋರ್‌ಬೋಲಿ ಭಾಷೆ ಇಂಡೋ ಆರ್ಯನ್ ಭಾಷೆಗೆ ಸೇರಿದ್ದು ಎನ್ನುತ್ತಾರೆ. ಲಂಬಾಣಿಗರ ಹಾಡು, ಕಥೆ, ಗಾದೆ, ಒಗಟುಗಳನ್ನು ಸಂಕ್ಷಿಪ್ತವಾಗಿ ಇವರು ವಿಶ್ಲೇಷಣೆಗೆ ಒಳಪಡಿಸಿರುವ ರೀತಿ ಗಮನಾರ್ಹವಾಗಿದೆ.

ಶ್ರೀ ಪಿ.ಎಚ್. ಬಾರಿಕೇರಿಯವರ "ಬಿಜಾಪುರ ಜಿಲ್ಲೆಯ ಲಂಬಾಣಿ ಆಡುಭಾಷೆಯ ವರ್ಣಾನಾತ್ಮಕ ವಿಶ್ಲೇಷಣೆ" (೧೯೮೩) ಮಹಾ ಪ್ರಬಂಧವು ಭಾಷಾಶಾಸ್ತ್ರದ ವಿಷಯವನ್ನು ಒಳಗೊಂಡಿರುವುದರಿಂದ ಭಾಷಾ

ಅಧ್ಯಯನಕಾರರಿಗೆ ಹೆಚ್ಚು ಉಪಯುಕ್ತ ಪ್ರಬಂಧವಾಗಿದೆ. ಪಿ.ಕೆ. ಖಂಡೋಬಾರವರು ''ಕರ್ನಾಟಕ ಲಂಬಾಣಿಗಳು ಒಂದು ಸಾಂಸ್ಕೃತಿಕ ಅಧ್ಯಯನ'' ಎಂಬ ಸಂಶೋಧನಾ ಮಹಾಪ್ರಬಂಧದಲ್ಲಿ ಕರ್ನಾಟಕ ಲಂಬಾಣಿಗಳ ಸಂಸ್ಕೃತಿಯ ಆಚಾರ, ವಿಚಾರ, ನಂಬಿಕೆಗಳು, ನೃತ್ಯ ಕಲೆ ಇತ್ಯಾದಿ ಅಂಶಗಳನ್ನು ಅರಿಯಲು ಸಹಾಯ ಮಾಡಿದ್ದಾರೆ. ಲೂಯಿಸ್ ರೈಸ್‌ನವರು 'ಮೈಸೂರು ಜನಗಣತಿ ವರದಿ' (೧೮೮೧)ಯಲ್ಲಿ ಹಿಂದಿಯ ಉಪಭಾಷೆಯಂತಿರುವ ಲಂಬಾಣಿ ಭಾಷೆಯನ್ನು ಮಾತನಾಡುವ ಲಂಬಾಣಿ ಜನ ಕರ್ನಾಟಕದ ಕಡೂರು-ಶಿವಮೊಗ್ಗ ಜಿಲ್ಲೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುತ್ತಿದ್ದರೆಂಬುದರ ಬಗ್ಗೆ ವಿವರಿಸಿದ್ದಾರೆ.

ವೀರಣ್ಣ ದಂಡೆಯವರ 'ಜಾನಪದ' (೧೯೯೩) ಎಂಬ ಕೃತಿಯಲ್ಲಿ ಡಿ.ಬಿ. ನಾಯಕ್ ಅವರು ಲಂಬಾಣಿ ಢಾಡಿ: ವೃತ್ತಿಗಾಯಕ ಎಂಬ ಲೇಖನದಲ್ಲಿ ಢಾಡಿ ಎಂದರೆ ಯಾರು, ಅವರ ವೃತ್ತಿ ಹಾಡುವಿಕೆ. ಯಾವ ರೀತಿ ಕಾವ್ಯ ಹಾಡುತ್ತಾರೆ ಎಂಬುದರ ಬಗ್ಗೆ ವಿವರಿಸಿದ್ದಾರೆ. ಎಚ್.ವಿ.ನಾಗೇಶರವರ ಬರಹ ಬಾಗಿನ ಹಂಪನಾ ಪಟ್ಟಾಭಿ (೧೯೯೬) ಗ್ರಂಥದಲ್ಲಿ ಹರಿಲಾಲ ಪವಾರ್ ಅವರು ''ಢಾಡಿ-ಒಂದು ಸಂಚಾರಿ ಗಾಯಕ ಜನಾಂಗ'' ಎಂಬ ಲೇಖನದಲ್ಲಿ ಢಾಡಿಗಳನ್ನು 'ಸಂಚಾರಿ ನಿಘಂಟು'ಗಳೆಂದು ಕರೆದಿದ್ದಾರೆ.

ಗೋ.ರು. ಚೆನ್ನಬಸಪ್ಪನವರ 'ಕರ್ನಾಟಕ ಜನಪದ ಕಲೆಗಳು' (೧೯೭೭) ಎಂಬ ಗ್ರಂಥದ ಲಂಬಾಣಿ ಕುಣಿತ ಲೇಖನ ಇವರ ನೃತ್ಯದ ಬಗ್ಗೆ ಹೆಚ್ಚಿನ ಮಾಹಿತಿಯನ್ನು ನೀಡುತ್ತದೆ. ಡಾ. ಹಿ.ಚಿ. ಬೋರಲಿಂಗಯ್ಯನವರು 'ಗಿರಿಜನರ ನಾಡಿಗೆ ಪಯಣ' (೧೯೯೧) ಕೃತಿಯಲ್ಲಿ ಲಂಬಾಣಿ ಕಲೆ, ನೃತ್ಯ, ಸಂಗೀತಗಳ ಬಗ್ಗೆ ಸ್ಥೂಲ ಚಿತ್ರಣ ನೀಡಿದ್ದಾರೆ.

ಡಾ. ಹರಿಲಾಲ್ ಪವಾರ್ ಮತ್ತು ಡಾ. ಪಂಡಿತ ಕೆ. ರಾಠೋಡ್ ಅವರು 'ಲಂಬಾಣಿಗರಲ್ಲಿ ಹೋಳಿಹಬ್ಬ' (೧೯೯೭) ಕೃತಿಯಲ್ಲಿ ಲಂಬಾಣಿಗರ ಹೋಳಿಹಬ್ಬ, ಗೀತೆಗಳನ್ನು ಪರಿಚಯಿಸಿದ್ದಾರೆ. ಪವಾರ್ ಜಗನ್ನಾಥರವರ 'ಗೋರೂರ್ ಗೀದ್' (೧೯೭೯) ಕೃತಿಯಲ್ಲಿ ಲಂಬಾಣಿ ಜನಪದ ಗೀತೆ, ಜನಪದ ಸಾಹಿತ್ಯ ಇತ್ಯಾದಿ ವಿಷಯ ಪ್ರಸ್ತಾಪಿಸಲಾಗಿದೆ. ಬೆನಕನಹಳ್ಳಿ ಜಿ. ನಾಯಕ ಅವರು 'ಲಂಬಾಣಿಗರ ಜನಪದ ಗೀತೆಗಳು' (೧೯೮೧) ಕೃತಿಯಲ್ಲಿ ಲಂಬಾಣಿಗರ ಹಾಸ್ಯ, ವಿಶ್ವಾಸ, ನೀತಿ, ಬಂಧುತ್ವ ಪದ್ಧತಿ ಇತ್ಯಾದಿಗಳನ್ನು ವಿವರಿಸಿದ್ದಾರೆ.

ಡಾ. ಎಚ್.ಡಿ. ಲಮಾಣಿ ಅವರ 'ಕರ್ನಾಟಕ ಲಮಾಣಿ ಲೋಕ್ ಗೀತೋಂಕಾ ಸಾಹಿತ್ಯಕ ಅಧ್ಯಯನ್' (ಅಪ್ರಕಟಿತ ಹಿಂದಿ ಮಹಾಪ್ರಬಂಧ), (೧೯೭೬) ಮಹಾಪ್ರಬಂಧದಲ್ಲಿ ಲಂಬಾಣಿ ಜನಪದ ಗೀತ ಸಾಹಿತ್ಯದ ಬಗ್ಗೆ ಅಧ್ಯಯನ ಮಾಡಿದ್ದಾರೆ. ಡಿ.ಬಿ. ನಾಯಕ್‌ರವರು 'ಲಂಬಾಣಿ ಜನಪದ ಸಾಹಿತ್ಯ' ಕೃತಿಯಲ್ಲಿ ಆ ಸಮುದಾಯದ ಸಾಮಾಜಿಕ, ಸಾಂಸ್ಕೃತಿಕ ಸ್ಥಿತಿಗತಿ, ಕರ್ನಾಟಕ ಲಂಬಾಣಿಗರ ಜನಪದ ಸಾಹಿತ್ಯದ ಅಧ್ಯಯನ, ಹಾಡು, ಕಥೆ, ಗಾದೆ, ಸಂಸ್ಕೃತಿ ಇತ್ಯಾದಿ ಸಂಗತಿಗಳನ್ನು ತಿಳಿಸಿದ್ದಾರೆ. ಸಣ್ಣರಾಮ ಅವರ 'ಲಂಬಾಣಿ ಸಂಸ್ಕೃತಿ' (೧೯೯೯) ಕೃತಿಯಲ್ಲಿ ಕತೆ, ಗಾದೆ, ಲಾವಣಿ, ಗೀತೆ, ಒಗಟು, ಒಟ್ಟಾರೆ ಲಂಬಾಣಿಗರ ಜನಪದ ಸಾಹಿತ್ಯವನ್ನು ವಸ್ತುನಿಷ್ಠವಾಗಿ ವಿಶ್ಲೇಷಿಸಲಾಗಿದೆ.

ಬಿ.ಜಿ. ಹಲಬರ್‌ರವರು ''ಉತ್ತರ ಕರ್ನಾಟಕದ ಲಂಬಾಣಿಗಳಲ್ಲಿ ಆರ್ಥಿಕ ಬದಲಾವಣೆಯ ಸಾಮಾಜಿಕ ಪರಿಣಾಮ'' (೧೯೭೫) ಎಂಬ ವಿಷಯದ ಬಗ್ಗೆ ಜಿಲ್ಲೆಯನ್ನು ಅನುಲಕ್ಷಿಸಿ ಸಂಶೋಧನೆಯನ್ನು ನಡೆಸಿರುತ್ತಾರೆ.

ಧಾರವಾಡ ಲಂಬಾಣಿ ಜನಾಂಗದ ಆರ್ಥಿಕ ಸ್ಥಿತಿಗತಿ ಅಧ್ಯಯನ ನಡೆಸುವ ಸಂಶೋಧಕರಿಗೆ ಈ ಗ್ರಂಥವು ಸಹಾಯಕವಾಗಿದ್ದು ಅದರ ಆರ್ಥಿಕ ಬದಲಾವಣೆ ಮೇಲೆ ಆದ ಸಾಮಾಜಿಕ ಪರಿಣಾಮವನ್ನು ವಿಶ್ಲೇಷಿಸಿದ್ದಾರೆ.

ಬಿ.ಟಿ ಲಲಿತಾ ನಾಯಕ್ ಅವರು 'ಹಬ್ಬ ಮತ್ತು ಬಲಿ' (೧೯೮೯) ಎಂಬ ಕಥಾ ಸಂಕಲನದಲ್ಲಿ ಶೋಷಿತ ವರ್ಗದ ಸ್ಥಿತಿಗತಿ, ಲಂಬಾಣಿ ಹೆಣ್ಣಿನ ಶೋಷಣೆ, ಗಂಡಿನ ದಬ್ಬಾಳಿಕೆ, ಬಡತನ, ಮಹಿಳಾಪರ ಚಿಂತನೆಗಳನ್ನು ಕಥೆಯಲ್ಲಿ ಅಳವಡಿಸಿಕೊಂಡಿದ್ದಾರೆ. ಇವರ ಮತ್ತೊಂದು ಕಾದಂಬರಿ 'ನೆಲೆ ಬೆಲೆ'ಯಲ್ಲಿ ಶೋಷಿತ ಲಂಬಾಣಿ ಸಮುದಾಯದ ನಡುವಿನ ತಿಕ್ಕಾಟ, ಲಂಬಾಣಿ ಜನಾಂಗಕ್ಕೆ ಸಂಬಂಧಪಟ್ಟರೂ ಇತರ ಶೋಷಿತ ದಲಿತ ಸಮುದಾಯದ ಸ್ಥಿತಿ ಗತಿ ಗುರುತಿಸಿದ್ದಾರೆ. ಇವರದೇ 'ಗತಿ' (೧೯೮೬) ಎಂಬ ಕಾದಂಬರಿಯಲ್ಲಿ ಲಂಬಾಣಿಗರ ಜೀವನಪದ್ಧತಿ, ಲಂಬಾಣಿ ಜನಾಂಗ, ಲಂಬಾಣಿ ಮಹಿಳೆಯರ ನೋವು, ದುಃಖ, ಹಳ್ಳಿಯ ಮೌಲ್ಯ, ಅವನತಿಯ ದಾರಿ ಮುಂತಾದ ಅಂಶಗಳನ್ನು ಅನಾವರಣ ಮಾಡಿದ್ದಾರೆ. ಬಿ.ಟಿ. ಲಲಿತಾ ನಾಯಕ್ ಅವರ 'ನಂರೂಪ್ಲಿ' (೧೯೮೩) ಕವನ ಸಂಕಲನದಲ್ಲಿ ಲಂಬಾಣಿ ಸ್ತ್ರೀಯರ ಮತ್ತು ಪುರುಷರು ಅನ್ಯಾಯಕ್ಕೆ ಒಳಗಾಗುವ ಪರಿಯನ್ನು, ಪುರುಷ ಮತ್ತು ಮಹಿಳೆ, ಬಡವ ಹಾಗೂ ಶ್ರೀಮಂತರು ನಡುವಿನ ವೈರುದ್ಧ್ಯದ ವಸ್ತುವನ್ನಿಟ್ಟುಕೊಂಡು ಕವನ ರಚಿಸಿದ್ದಾರೆ. ಬಿ.ಟಿ. ಲಲಿತಾ ನಾಯಕ್ ಅವರ ''ಇದೇ ಕೂಗು ಮತ್ತೆ ಮತ್ತೆ'' (೧೯೮೬) ಕವನ ಸಂಕಲನದಲ್ಲಿ ಸ್ತ್ರೀ ಶೋಷಣೆ, ಬಡತನ, ಅಸಮಾನತೆ, ಶೋಷಣೆಯ ವಿರುದ್ಧ ಧ್ವನಿಯಿದೆ.

ಡಾ. ಹರಿಲಾಲ್ ಪವಾರ್ ಅವರು 'ಬೆಂಕಿಯಲ್ಲಿ ಕಮರಿದ ಹೂವು ಹೂನಾಸತಿ' (೨೦೦೩) ತಮ್ಮ ಕೃತಿಯಲ್ಲಿ ಸತಿ ಪದ್ಧತಿಯ ಉಗಮ ವಿಕಾಸ ಹಾಗೂ ಕಾರಣಗಳ ಹಿನ್ನೆಲೆಯೊಂದಿಗೆ ಲಂಬಾಣಿ ಬುಡಕಟ್ಟಿನಲ್ಲಿ ಪ್ರಚಲಿತವಿದ್ದ ಸತಿಪದ್ಧತಿ ಆಚರಣೆಯ ಸ್ವರೂಪ, ಪ್ರೇರಣೆ ಮುಂತಾದ ಅಂಶಗಳನ್ನು ವಿವರಿಸಿದ್ದಾರೆ. ಡಾ. ಡಿ.ಬಿ.ನಾಯಕ್ ಅವರು 'ಬುಡಕಟ್ಟಿನ ಲಂಬಾಣಿ ಗಾದೆಗಳು' (೨೦೦೧) ತಮ್ಮ ಕೃತಿಯಲ್ಲಿ ಗಾದೆಯ ಹುಟ್ಟು, ಬೆಳವಣಿಗೆ, ಲಕ್ಷಣಗಳನ್ನು ವಿವರಿಸಿದ್ದು, ಗಾದೆಗಳಲ್ಲಿ ಲಂಬಾಣಿ ಸಂಸ್ಕೃತಿ ತಿಳಿಸುವಲ್ಲಿ ಉಪಯುಕ್ತವಾದ ಗ್ರಂಥವಾಗಿದೆ. ಡಾ. ಪಿ.ಕೆ. ಖಂಡೋಬಾರವರು 'ಲಂಬಾಣಿ ಗಾದೆಗಳು' (೧೯೮೮) ಗ್ರಂಥದಲ್ಲಿ ಲಂಬಾಣಿ - ಕನ್ನಡ ಅರ್ಥ ಕೋಶವನ್ನು ಕೊಟ್ಟಿರುವುದು ಅರ್ಥವತ್ತಾಗಿದೆ. ಲಿಪಿ ರಹಿತ ಗಾದೆಗಳನ್ನು ಕನ್ನಡ ಲಿಪಿಯಲ್ಲಿ ಒದಗಿಸಿದ್ದಾರೆ. ಸಣ್ಣರಾಮ ಅವರು ಲಂಬಾಣಿ ಗಾದೆಗಳು (೧೯೮೨) ತಮ್ಮ ಕೃತಿಯಲ್ಲಿ ಲಂಬಾಣಿಗರ ಸಂಪ್ರದಾಯ, ಆಚಾರ-ವಿಚಾರ, ನ್ಯಾಯ-ನೀತಿ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದಂತೆ ಗಾದೆಗಳನ್ನು ಅಕಾರಾದಿಯಾಗಿ ಸಂಗ್ರಹಿಸಿ, ಸಂಪಾದಿಸಿ ಅವುಗಳ ಕನ್ನಡ ಅನುವಾದ ಮಾಡಿದ್ದಾರೆ.

ಎಂ. ಕೃಷ್ಣಮೂರ್ತಿಯವರು ಬರೆದಿರುವ 'ಕ್ರೈಮ್ಸ್ ಅಂಡ್ ಕಸ್ಟಂಸ್ ಅಮಾಂಗ್ ದಿ ಲಂಬಾಣಿಸ್ ಇನ್ ಚಿತ್ರದುರ್ಗ', (೨೦೦೦) ಎಂಬ ಸಂಶೋಧನಾ ಪ್ರಬಂಧವು ಲಂಬಾಣಿಗರ ಮೇಲೆ ಜರುಗಿರುವ ಅಪರಾಧ ಮತ್ತು ಸಂಪ್ರದಾಯಗಳನ್ನು ಚಿತ್ರದುರ್ಗ ಜಿಲ್ಲೆಗೆ ಸೀಮಿತವಾಗಿರುವಂತೆ ಅಧ್ಯಯನ ಮಾಡಿರುವುದು ಹೆಚ್ಚು ಉಪಯುಕ್ತವಾಗಿದೆ.

ಎಚ್. ನರೇಂದ್ರನಾಯಕ್ ಅವರು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ 'ಕರ್ನಾಟಕದ ಮ್ಯಾಂಚೆಸ್ಟರ್' (೨೦೦೧) ತಮ್ಮ ಸಂಶೋಧನ ಮಹಾಪ್ರಬಂಧದಲ್ಲಿ ದಾವಣಗೆರೆ ನಗರವನ್ನು ಆಯ್ದುಕೊಂಡು

ಲಂಬಾಣಿಗರು ದಾವಣಗೆರೆ ನಗರದ ಕೊಳಚೆ ಪ್ರದೇಶದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ನೆಲೆಸಿರುವ ಬಗ್ಗೆ ಮತ್ತು ನಗರ ಜೀವನದ ಜೊತೆ ಹೇಗೆ ಹೊಂದಾಣಿಕೆ ಮಾಡಿಕೊಂಡು ಬದಲಾವಣೆಯ ಪ್ರಕ್ರಿಯೆಗೆ ಒಳಗಾಗುತ್ತಿದ್ದಾರೆ ಎಂಬುದರ ಬಗ್ಗೆ ಅಧ್ಯಯನ ಮಾಡಿದ್ದಾರೆ.

ಡಾ. ಪಿ.ಕೆ. ಖಂಡೋಬಾ ಅವರ ಲಂಬಾಣಿ ಸಂಸ್ಕೃತಿ (೧೯೮೮) ಕೃತಿಯಲ್ಲಿ ಒಟ್ಟು ೧೭ ಲೇಖನಗಳಿವೆ. ಲಂಬಾಣಿ, ಮಾರವಾಡಿ, ಗುರ್ಜರ ಮುಂತಾದ ಸಮುದಾಯದೊಂದಿಗೆ ಸಂಬಂಧದ ಕುರಿತು ಮಾಹಿತಿಗಳಿವೆ. 'ಕರ್ನಾಟಕ ಬುಡಕಟ್ಟಿನ ಲಂಬಾಣಿಗಳು' (೨೦೦೦) ಕೃತಿಯಲ್ಲಿ ಲಂಬಾಣಿಗರ ಬದುಕಿನ ರೀತಿ-ನೀತಿ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಸ್ಥಿತಿಗತಿಗಳನ್ನು ವಿವರಿಸಿದ್ದಾರೆ.

ಡಾ. ಪಿ.ಕೆ ಖಂಡೋಬಾ ಅವರ ಲಂಬಾಣಿ ಒಗಟುಗಳು (೧೯೮೮) ಎಂಬ ಗ್ರಂಥದಲ್ಲಿ ಲಂಬಾಣಿ ಜನಾಂಗದ ಒಗಟುಗಳನ್ನು ಸಂಗ್ರಹಿಸಿ ಪ್ರಾಣಿ, ಸಸ್ಯ, ಕೃಷಿ, ದಿನಬಳಕೆಯ ವಸ್ತು ಮತ್ತು ಸಂಸ್ಕೃತಿ ಸಂಪ್ರದಾಯಗಳಿಗೆ ಸಂಬಂಧಿಸಿದಂತೆ ಒಗಟುಗಳನ್ನು ನೀಡಿದ್ದಾರೆ. ಸಣ್ಣರಾಮ ನಾಯ್ಕ ಅವರು 'ಲಂಬಾಣಿ ಒಗಟು ಲೋಕ' (೧೯೯೭) ಕೃತಿಯಲ್ಲಿ ಒಗಟುಗಳನ್ನು ಸಂಗ್ರಹಿಸಿ, ಸಂಪಾದಿಸಿ, ವಿಂಗಡಿಸಿ ಎಲ್ಲ ಒಗಟುಗಳಿಗೂ ಕನ್ನಡಾನುವಾದ ಕೊಟ್ಟಿದ್ದಾರೆ. ಸೋಮಣ್ಣ ಹೊಂಗಳ್ಳಿ ಅವರ 'ಲಂಬಾಣಿ ಜನಪದ ಕಥೆಗಳು' (೧೯೯೪) ಕೃತಿಯಲ್ಲಿ ಒಟ್ಟು ೨೦ ಲಂಬಾಣಿ ಕಥೆಗಳಿದ್ದು, ಈ ಕಥೆಗಳನ್ನು ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕು ಹೊಸಹಳ್ಳಿ ಸಕ್ಕರೆ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದ ಲಂಬಾಣಿ ಜನರಿಂದ ಸಂಗ್ರಹಿಸಲಾಗಿದೆ.

ವೈ. ರೂಪ್ಲಾನಾಯಕ್ ಅವರ 'ರಂಗು ರಂಗಿನ ಬಂಜಾರ (ಲಂಬಾಣಿ) ಜನಾಂಗ (೧೯೯೮) ಎಂಬ ಕೃತಿ ಒಟ್ಟು ೧೨ ಅಧ್ಯಾಯಗಳು ಲಂಬಾಣಿ ಸಮಾಜದ ಬಟ್ಟಾರೆ ಸಂಸ್ಕೃತಿಯನ್ನು ಪರಿಚಯ ಮಾಡಿಕೊಡುತ್ತದೆ. ವಿವರಣಾತ್ಮಕ ಮತ್ತು ವಿಶ್ಲೇಷಣೆಯ ದೃಷ್ಟಿಯಿಂದ ಮೂಡಿಬಂದಿದೆ. ಈ ಕೃತಿ ಹರಿಲಾಲ ಪವಾರ್ ಅವರ ಬಂಜಾರ ಗೋತ್ರಗಳು (೨೦೦೨) ಗ್ರಂಥದಲ್ಲಿ ಲಂಬಾಣಿ ಗೋತ್ರಗಳ ಬಗೆಗೆ ಬರೆಯುತ್ತ ರಜಪೂತ ಮತ್ತು ಬಂಜಾರ ಜನಾಂಗಗಳು ಒಂದೇ ಆಗಿದ್ದು ಐತಿಹಾಸಿಕ ಕಾಲದಲ್ಲಿ ಬೇರ್ಪಟ್ಟು ಕೆಲವು ಭಿನ್ನ ಲಕ್ಷಣಗಳನ್ನು ಹೊಂದಿದ್ದವು ಎಂದು ಉಲ್ಲೇಖಿಸಿದ್ದಾರೆ. ಡಾ. ಎಚ್.ಜೆ. ಲಕ್ಕಪ್ಪಗೌಡ ಅವರ ಜಾನಪದ ಗಂಗೋತ್ರಿ ಸಂಪುಟ-೮ (೧೯೯೭) ರಲ್ಲಿ ಲಂಬಾಣಿಗರ ರಾಜಸ್ಥಾನ ಪರಂಪರೆ ಹಾಗೂ ಕೆಲವು ಸಂಪ್ರದಾಯಗಳ ಪಕ್ಷಿನೋಟವನ್ನು ಕಾಣಬಹುದು.

ಎಸ್.ಬೆಂಕ್ಯಾನಾಯ್ಕ ಅವರು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ 'ಲಂಬಾಣಿ ಸಮುದಾಯದ ಢಾಲ್ಯಾ ಪಂಗಡದ ಅಧ್ಯಯನ' (೨೦೦೪)ದಲ್ಲಿ ಲಂಬಾಣಿ ಸಮುದಾಯದ ಢಾಲ್ಯಾ ಪಂಗಡದವರ ಸಂಸ್ಕೃತಿಯನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಲಂಬಾಣಿಗರು ಹಾಗೂ ಢಾಲ್ಯಾ ಪಂಗಡಗಳಿಗಿರುವ ಆಂತರಿಕ ವ್ಯತ್ಯಾಸಗಳನ್ನು ತೌಲನಿಕವಾಗಿ ಅಧ್ಯಯನವಿದೆ. ಸಣ್ಣರಾಮ ಅವರ ಲಂಬಾಣಿಗಳು ಮತ್ತು ಮತಾಂತರ (೨೬.೧.೨೦೦೦) ಬಹುಜನ ಧ್ವನಿ ವಾರಪತ್ರಿಕೆಯಲ್ಲಿನ ಲೇಖನವು ಲಂಬಾಣಿ ಸಂಸ್ಕೃತಿಯ ಮಹತ್ವವನ್ನು ವಿವರಿಸುತ್ತ, ಲಂಬಾಣಿಗರು ಪರಧರ್ಮಕ್ಕೆ ಮತಾಂತರ ಹೊಂದಿದುದರ ಪರಿಣಾಮಗಳ ಕುರಿತು ವಿಮರ್ಶೆ ಇದೆ.

ಕೆ.ಎಚ್. ಲಮಾಣಿಯವರು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ 'ಲಂಬಾಣಿಗರಲ್ಲಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆ ಒಂದು ಸಾಮಾಜಿಕ ಅಧ್ಯಯನ' (೧೯೯೯)ದಲ್ಲಿ ಲಂಬಾಣಿಗರು ಸಾಮಾಜಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಬದಲಾವಣೆ ಹೊಂದುತ್ತಿರುವ ಪ್ರಕ್ರಿಯೆಯನ್ನು ಅಧ್ಯಯನ ಮಾಡಲಾಗಿದೆ. ಹರಿಲಾಲ ಪವಾರ ಅವರು 'ಲಂಬಾಣಿ ಸಮುದಾಯ ಮತ್ತು ಅವರ ತಾಂಡಗಳು' ಲೇಖನದಲ್ಲಿ ಲಂಬಾಣಿಗರ ಜೀವನ ವಿಧಾನ, ತಾಂಡ ಶಬ್ದದ ಅರ್ಥ, ಅವರು ಅಪಾಯಕಾರಿ ಚಟುವಟಿಕೆಯಲ್ಲಿ ತೊಡಗಿದ್ದುದರ ಪರಿಣಾಮ ೧೮೭೦ರಲ್ಲಿ ಅವರ ಮೇಲೆ ಕ್ರಿಮಿನಲ್ ಟ್ರೈಬ್ಸ್ ಆಕ್ಟ್ ತಂದುದರ ಬಗ್ಗೆ ಹಂ.ಪ.ನಾಗರಾಜಯ್ಯ, ಸಂಪುಟ-೨೧ (೧೯೯೨-೯೩) ಕೃತಿಯಲ್ಲಿ ಲೇಖನವೊಂದನ್ನು ಬರೆದಿದ್ದಾರೆ.

ಎ.ಎಸ್. ನಾರಾಯಣರಾವ್ ಅವರ 'ಪುಡಿಗಾಸಿಗಾಗಿ ಹಸುಗೂಸುಗಳ ಮಾರಾಟ' ಸುಧಾ ವಾರಪತ್ರಿಕೆಯ (೨೮.೦೬.೨೦೦೧) ಲೇಖನದಲ್ಲಿ ಗುಲ್ಬರ್ಗಾ ಜಿಲ್ಲೆ ಚಿಂಚೋಳಿ ತಾಲ್ಲೂಕು ಕೊಂಚಾವರ ಎಂಬ ಲಂಬಾಣಿ ತಾಂಡದಲ್ಲಿ ೫೦೦ ರೂಪಾಯಿಗೆ ಲಂಬಾಣಿಗರ ಹೆಣ್ಣು ಸಂತಾನ (ಹಸುಗೂಸು) ಮಾರಾಟವಾದ ಮಾಹಿತಿಗಳೊಂದಿಗೆ, ಮಾರಾಟವಾದ ಮಕ್ಕಳು ಸೇರುವ ಜಾಗ, ಕೊಂಡುಕೊಳ್ಳುವವರ ಉದ್ದೇಶ, ಅಲ್ಲಿನ ಲಂಬಾಣಿಗರ ಸ್ಥಿತಿಗತಿ ಹಾಗೂ ಮಕ್ಕಳನ್ನು ಮಾರಾಟ ಮಾಡುವಂತಹ ಹೀನ ಕೃತ್ಯ ಕೈಹಾಕಿದುದರ ಹಿಂದಿದ್ದ ಅವರ ದಾರಿದ್ರ್ಯದ ಜೀವನ ಚಿತ್ರಣವನ್ನು ನೀಡಿದ್ದಾರೆ.

ಬಿ.ಎಚ್. ಮಲ್ಲಿಕಾರ್ಜುನ್‌ನಾಯ್ಕ ಅವರು 'ಲಂಬಾಣಿಗರ ಸಾಂಸ್ಕೃತಿಕ ವೀರ ಶ್ರೀ ಸೇವಾಲಾಲ್ ಚರಿತ್ರೆ' (೨೦೦೨) ಎಂಬ ಕೃತಿಯಲ್ಲಿ ಸೇವಾಭಾಯಾ ಜನನದ (೧೫.೦೨.೧೭೩೯) ಜೀವನ, ಸಾಧನೆ, ಅವತಾರಗಳು, ಪವಾಡ ಮುಂತಾದವುಗಳ ಸಂಪೂರ್ಣ ಮಾಹಿತಿ ಸಂಗ್ರಹಿಸಿ ನೀಡಿದ್ದಾರೆ. ರಘುನಾಥರಾವ್ ತಾಪ್ಸ ಅವರ 'ಕಲೆಯಿಂದ ನೆಲೆಯೂರಿದ ಲಂಬಾಣಿ ಮಹಿಳೆಯರು' ಪ್ರಜಾವಾಣಿ (೧೪.೦೭.೨೦೦೧) ಲೇಖನ ಲಂಬಾಣಿ ಮಹಿಳೆಯರಿಗಾಗಿಯೇ ೧೯೮೪ರಲ್ಲಿ ಎಂ.ವೈ. ಘೋರ್ಪಡೆಯವರ ಮುಂದಾಳತ್ವದಲ್ಲಿ ಸಂಡೂರು ಕುಶಲಕಲಾ ಕೇಂದ್ರ ಸ್ಥಾಪನೆ ಆದ ಬಗೆಯನ್ನು ತಿಳಿಸುತ್ತದೆ. ಆಕರ್ಷಕ ಕಸೂತಿ ಕಲೆಯನ್ನು ಪ್ರದರ್ಶಿಸಿ, ತರತರದ ಚೀಲ, ಹೊದಿಕೆ ಇತ್ಯಾದಿ ಕರಕುಶಲ ವಸ್ತುಗಳನ್ನು ತಯಾರಿಸಿ ಅದಕ್ಕೊಂದು ಮಾರುಕಟ್ಟೆಯನ್ನು ಒದಗಿಸಿ ಲಂಬಾಣಿ ಮಹಿಳೆಯರು ಆರ್ಥಿಕವಾಗಿ ಸ್ವಾವಲಂಬಿಯಾಗಲು ಈ ಕೇಂದ್ರ ಸಹಾಯ ಮಾಡುತ್ತಿರುವುದರ ಬಗೆಗೆ ವಿವರವಾಗಿ ಚರ್ಚಿಸಲಾಗಿದೆ.

ಭೀಮಣ್ಣ ಗಜಾಪುರ ಅವರು 'ಸಂಡೂರಲ್ಲಿ ಅರಳಿದ ಲಂಬಾಣಿ ಮಹಿಳೆಯರ ಕಲೆ' ಪ್ರಜಾವಾಣಿ (೩೦.೧೧.೨೦೦೩) ಯಲ್ಲಿ ಬರೆದಿರುವ ಲೇಖನ ಲಂಬಾಣಿ ಮಹಿಳೆಯರು ತಮ್ಮ ಸಾಂಪ್ರದಾಯಿಕ ಕಸೂತಿ ಕಲೆಯಿಂದ ಆರ್ಥಿಕವಾಗಿ ಸಬಲರಾಗುತ್ತಿರುವುದರ ಬಗೆಗೆ ಸಂಪೂರ್ಣ ವಿವರವನ್ನು ಕೊಡುತ್ತದೆ. ಬಳ್ಳಾರಿ ಜಿಲ್ಲೆಯ ಸಂಡೂರು ಪಟ್ಟಣದಲ್ಲಿ ನಡೆಯುವ ಕುಶಲಕಲಾ ಕೇಂದ್ರ ಲಂಬಾಣಿ ಉಡುಗೆಗಳಿಗಾಗಿಯೇ ಸ್ಥಾಪಿತಗೊಂಡಿರುವುದನ್ನು ಹೇಳುತ್ತದೆ. ಪಿ.ಕೆ. ಖಂಡೋಬಾ ಅವರ 'ಜಾನಪದ ಮುನ್ನೋಟ' (೧೯೯೩) ಕೃತಿಯಲ್ಲಿ ಲಂಬಾಣಿ ಜನಪದ ಕಲೆಗಳು ಸಮೂಹ ಮಾಧ್ಯಮವಾಗಿ ಹೇಗೆ ಕೆಲಸ ಮಾಡುತ್ತವೆ ಎಂಬುದನ್ನು ವಿವರಿಸಲಾಗಿದೆ.

ನೀಲಗಿರಿ ತಳವಾರ (ಸಂ) ಅವರ ಜಾನಪದ (೧೯೯೪, ೧೯೯೯,) ಕೃತಿಯಲ್ಲಿ ಕಸೂತಿ, ಹಚ್ಚೆ ಮತ್ತು ರಂಗೋಲಿ ಕಲೆಗಳ ಬಗೆಗೆ ವಿಶ್ಲೇಷಣೆ ಮಾಡಲಾಗಿದೆ. ಇದೇ ಲೇಖಕರ ಲಂಬಾಣಿ ಕಲೆ ಮತ್ತು ಸಂಸ್ಕೃತಿ ಎಂಬ ಲೇಖನದಲ್ಲಿ ಸಂಸ್ಕೃತಿ ಹಾಗೂ ಕಲೆ ಹೇಗೆ ಒಟ್ಟೊಟ್ಟಿಗೆ ಬೆರೆಯುತ್ತ ಹೋಗುತ್ತದೆಂಬುದನ್ನು ವಿಶ್ಲೇಷಿಸಲಾಗಿದೆ.

ವೀರಣ್ಣ ರಾಜೂರ (ಪ್ರ.ಸಂ) 'ಜಾನಪದ ಸಾಹಿತ್ಯ ದರ್ಶನ ಭಾಗ-೨೧' (೧೯೯೮)ರಲ್ಲಿ ಹರಿಲಾಲ ಪವಾರ ಅವರು ಲಂಬಾಣಿಗರ 'ಉಡುಗೆ ತೊಡುಗೆಗಳು' ಎಂಬ ಲೇಖನ ಲಂಬಾಣಿಗರ ವೇಷ-ಭೂಷಣ ವಿಶಿಷ್ಟತೆಯನ್ನು ತಿಳಿಸಿಕೊಡುವಲ್ಲಿ ಸಫಲವಾಗಿದೆ. ಅಲ್ಲದೆ ಲಂಬಾಣಿ ಜನರು ಯಾವ ಯಾವ ದೇಶಗಳಲ್ಲಿ ನೆಲೆಸಿದ್ದಾರೆಂಬುದನ್ನು ತಿಳಿಸುತ್ತಾ, ಜಿಪ್ಸಿಗಳಿಗೂ ಲಂಬಾಣಿಗರಿಗೂ ಇರುವ ಸಂಬಂಧ ಹಾಗೂ ಅವರ ಮೂಲದ ಬಗೆಗೆ ಚರ್ಚಿಸಲಾಗಿದೆ. ಡಿ. ಸತ್ಯನಾರಾಯಣ್ ಅವರ 'ಲಂಬಾಣಿ ಕುಸುರಿಗೆ ಹೊಸ ಮೆರುಗು' ವಿಜಯ ಕರ್ನಾಟಕ (೧೯.೦೪.೨೦೦೧) ಪತ್ರಿಕೆಯಲ್ಲಿನ ಲೇಖನವು ೧೯೯೨ರಲ್ಲಿ ಲಕ್ಷ್ಮೀಬಾಯಿ ಮೆಹರ್ವಾಡೆ ಅವರು ಹರಿಹರ ನಗರ ಗುತ್ತೂರು ಕಾಲೊನಿಯಲ್ಲಿ ಶಕ್ತಿ ಮಹಿಳಾ ಮಂಡಳಿ ಸ್ಥಾಪಿಸಿ, ಗ್ರಾಮೀಣ ಮಹಿಳೆಯರಿಗೆ ಆರ್ಥಿಕ ಸ್ವಾವಲಂಬನೆಯನ್ನು ಕಲ್ಪಿಸಿ ಅವರ ಬದುಕಿನ ನೆರವಾಗುವ ಸ್ವಯಂ ಉದ್ಯೋಗ ಕಲ್ಪಿಸಿಕೊಂಡು ಸ್ವಾಭಿಮಾನಿಯಾಗಿ ಜೀವಿಸಲು ಸಹಾಯಮಾಡುವುದರ ಬಗ್ಗೆ ಮಾಹಿತಿ ನೀಡಿದೆ.

ಡಾ. ಮಲ್ಲಿಕಾ ಘಂಟಿಯವರ ಸಂಪಾದನೆಯ 'ಸಂಸ್ಕೃತಿ ಮಹಿಳಾ ಮಾಲಿಕೆ' (೨೦೦೮) ಸಂಪುಟ-೫ ಕೃತಿಯಲ್ಲಿ ಹರಿಲಾಲ ಪವಾರ ಅವರ 'ಲಂಬಾಣಿ ಸಮುದಾಯ : ಸಂಸ್ಕೃತಿ ಮಹಿಳೆ' ಎಂಬ ಲೇಖನದಲ್ಲಿ ಲಂಬಾಣಿ ಪದದ ನಿಷ್ಪತ್ತಿ, ತಾಂಡಾ ರಚನೆ, ಲಂಬಾಣಿ ಮಹಿಳೆಯ ಜೀವನ ವಿಧಾನ, ನಂಬಿಕೆ ಇತ್ಯಾದಿಗಳ ಬಗೆಗೆ ವಿಪುಲವಾದ ಮಾಹಿತಿ ನೀಡುತ್ತದೆ. ಸುಮಂಗಲಾ ಬಾದರದಿನ್ನೆ 'ಲಾಭಲೆಕ್ಕಾಚಾರದಲ್ಲಿ ಲಂಬಾಣಿ ಮಹಿಳೆ' ಸುಧಾ (೬.೧೧.೨೦೦೧) ಲೇಖನದಲ್ಲಿ ಗುಳೆ ಹೋಗುವುದರಲ್ಲೇ ಜೀವಮಾನ ಕಳೆಯುತ್ತಿದ್ದ ಲಂಬಾಣಿ ಮಹಿಳೆಯರು ಈಗ ಒಂದೆಡೆ ನೆಲೆನಿಂತು ತಮ್ಮ ಪರಂಪರಾಗತ ಕಲೆಯನ್ನು ಉಳಿಸಿಕೊಳ್ಳುವುದರ ಜೊತೆಗೆ ಅದನ್ನು ಆದಾಯದ ಮೂಲವನ್ನಾಗಿ ಪರಿವರ್ತಿಸಿಕೊಂಡು ಹೊಸ ಬದುಕಿನತ್ತ ಹೆಜ್ಜೆ ಹಾಕುತ್ತಿರುವುದರ ಬಗೆಗೆ ವಿವರಿಸಿದ್ದಾರೆ.

ಸಿ.ಆರ್. ಗೋಪಾಲ್ ಅವರು ಉತ್ಕ್ರಾಂತಿಯತ್ತ ಲಂಬಾಣಿಗಳು ೨೦೧೦ ಎಂಬ ಕೃತಿಯಲ್ಲಿ ಲಂಬಾಣಿ ಸಮಾಜದ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಆಗಿರಬಹುದಾದ ರಚನಾತ್ಮಕ ಬದಲಾವಣೆಗಳನ್ನು ಗುರುತಿಸಿ, ಅವುಗಳನ್ನು ಒಂದೆಡೆ ಸಂಗ್ರಹಗೊಳಿಸಿದ್ದಾರೆ. ಇಂದಿನ ಜಾಗತಿಕ ವಿದ್ಯಮಾನಗಳು ಮತ್ತು ಅಭಿವೃದ್ಧಿ ಕಾರ್ಯಕ್ರಮಗಳು ಲಂಬಾಣಿಗಳ ಅನುಕೂಲಕ್ಕೆ ಹೇಗೆ ರೂಪುಗೊಂಡಿವೆಯೆಂಬುದನ್ನು ಚಿತ್ರಿಸಲು ಪ್ರಯತ್ನಿಸಿದ್ದಾರೆ. ಎಂ. ಸೋಮಕ್ಕ ರವರು 'ಲಂಬಾಣಿ ಮಕ್ಕಳ ಕನ್ನಡ ಕಲಿಕೆಯ ಸಮಸ್ಯೆಗಳು' (೨೦೧೦) ಎಂಬ ಸಂಶೋಧನಾ ಪ್ರಬಂಧವು ಲಂಬಾಣಿ ಮಕ್ಕಳು ಶೈಕ್ಷಣಿಕವಾಗಿ ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಯುವಲ್ಲಿ ಹಲವಾರು ಸಮಸ್ಯೆಗಳಿಂದ ಬಳಲುತ್ತಿದ್ದಾರೆ ಎಂಬುದನ್ನು ಈ ಕೃತಿ ವಿವರಿಸುತ್ತದೆ.

ಶಂಕರ ಲಮಾಣಿರವರ 'ಗೋರ ಬಂಜಾರಾ' (೨೦೧೨) ಎಂಬ ಗ್ರಂಥ ಲಂಬಾಣಿ ಸಂಸ್ಕೃತಿಯ ಮೂಲ ಸ್ವರೂಪವನ್ನು ಗುರುತಿಸಲು ಮೌಖಿಕ ಪರಂಪರೆಯನ್ನು ಆಧರಿಸಲಾಗಿದೆ. ಲಂಬಾಣಿಗಳ ೧ ರಿಂದ ೧೬

ಸಂಸ್ಕಾರಗಳಲ್ಲಿ ಸಂಪ್ರದಾಯ ಆಚರಣೆಗಳನ್ನು ಕಥಾನಾತ್ಮಕ ನಿರೂಪಿಸುತ್ತಾರೆ. ಪಂಡಿತ್ ಕೆ. ರಾಠೋಡ್ ಅವರು 'ಗಾದಿವಾಳೊ ಸಂತ ಸೇವಾಲಾಲ' (೨೦೧೩) ಎಂಬ ಕೃತಿಯಲ್ಲಿ ಸೇವಾಲಾಲ್ ಜನನ, ಜೀವನ, ಸಾಧನೆ ಪವಾಡ ಇತ್ಯಾದಿ ಮಾಹಿತಿ ಸಂಗ್ರಹಿಸಿ ನೀಡಿದ್ದಾರೆ.

ಇತ್ತೀಚೆಗೆ ಇನ್ನೂ ಕೆಲವು ಪ್ರಬಂಧಗಳು ರಚಿಸಲ್ಪಡುತ್ತಿರುವುದು ಕಂಡುಬರುತ್ತದೆ. ಆದರೆ ಸಂಪೂರ್ಣವಾಗಿ ಲಂಬಾಣಿಗರ ಚಾರಿತ್ರಿಕ ಅಧ್ಯಯದ ಕುರಿತಾಗಿ ಮಹತ್ವದ ಅಧ್ಯಯನಗಳು ನಡೆಯಬೇಕಾಗಿದೆ.

**ಅಧ್ಯಯನದ ಉದ್ದೇಶ**

ಭಾರತದಲ್ಲಿ ಬುಡಕಟ್ಟು ಸಮುದಾಯಗಳ ಅಧ್ಯಯನ ಹದಿನೆಂಟನೆಯ ಶತಮಾನದಿಂದ ಆರಂಭವಾಗಿ ಈವರೆಗೂ ನಡೆಯುತ್ತಿವೆ. ಈಗೀಗ ನಮ್ಮಲ್ಲಿಯೂ ಬುಡಕಟ್ಟು ಸಮುದಾಯಗಳ ಅಧ್ಯಯನಗಳು ಆರಂಭವಾಗಿದ್ದು, ಅದರ ಮುಖೇನ ಸಾಕಷ್ಟು ಅಧ್ಯಯನಗಳು ನಡೆದಿವೆ. ಕರ್ನಾಟಕದಲ್ಲಿ ಹೆಚ್ಚು ಜನಸಂಖ್ಯೆ ಹೊಂದಿರುವ ಬುಡಕಟ್ಟು ಸಮುದಾಯವಾದ ಲಂಬಾಣಿಗರ ಕುರಿತು ಅನೇಕ ಅಧ್ಯಯನಗಳಾಗಿವೆ. ಭವ್ಯ ಪರಂಪರೆಯನ್ನು ಹೊಂದಿರುವ ಲಂಬಾಣಿ ಸಮುದಾಯದ ಬಗ್ಗೆ ಆಮೂಲಾಗ್ರವಾದ ಅಧ್ಯಯನ ನಡೆದಿಲ್ಲ. ಪ್ರಸ್ತುತ ಅಧ್ಯಯನದಲ್ಲಿ ಗ್ರಾಮ ಮತ್ತು ನಗರ ಸಂಸ್ಕೃತಿಯಿಂದ ದೂರವಾಗಿ ಅಡವಿ ಅಂಚಿನಲ್ಲಿ ತಾಂಡಾ ಕಟ್ಟಿಕೊಂಡು ತನ್ನದೇ ಆದ ಜೀವನಕ್ರಮ, ರೂಢಿ, ಸಂಪ್ರದಾಯ, ಆಚಾರ, ವಿಚಾರ, ಆರ್ಥಿಕ ಸ್ಥಿತಿಗತಿಗಳನ್ನು ಹೊಂದಿರುವ ಲಂಬಾಣಿಗರ ಕುರಿತು ಇಲ್ಲಿ ಅಧ್ಯಯನ ಮಾಡಲಾಗಿದೆ.

ಲಂಬಾಣಿಗರು ವಾಸಿಸುವ ಪ್ರದೇಶವನ್ನು ತಾಂಡಾ ಎಂದು ಕರೆಯುತ್ತಾರೆ. ಬಳ್ಳಾರಿ ಜಿಲ್ಲೆಯು ಬಳ್ಳಾರಿ, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ಸಿರುಗುಪ್ಪ, ಹೊಸಪೇಟೆ, ಹೂವಿನಹಡಗಲಿ, ಸಂಡೂರು ತಾಲ್ಲೂಕುಗಳ ವ್ಯಾಪ್ತಿಯನ್ನು ಒಳಗೊಂಡಿದೆ. ಬಳ್ಳಾರಿ ತನ್ನದೇ ಆದ ಚಾರಿತ್ರಿಕ ಹಿನ್ನಲೆ ಹೊಂದಿದೆ. ಈ ಪ್ರದೇಶದಾದ್ಯಂತ ಲಂಬಾಣಿಗರು ನೆಲೆಸಿರುವುದು ಕಂಡುಬರುತ್ತದೆ. ಲಂಬಾಣಿಗರು ಬೇರೆ ಬೇರೆ ಪ್ರದೇಶಗಳಲ್ಲಿ ನೆಲೆನಿಂತ ಜನಾಂಗಗಳ ಜೊತೆ ನಿರಂತರವಾಗಿ ನಿಕಟ ಸಂಪರ್ಕ ಹೊಂದಿದ್ದಾರೆ. ಆದರೂ ತಮ್ಮದೇ ಆದ ಪ್ರತ್ಯೇಕ ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಳ್ಳುವಾಗ ಎದುರಾಗುತ್ತಿರುವ ಸಮಸ್ಯೆಯನ್ನು ವಿಶ್ಲೇಷಣೆ ಮಾಡಲಾಗುವುದು. ಇವರು ಬೇರೆ ಬೇರೆ ಜಾತಿ ಗುಂಪುಗಳ ವಿವಿಧ ಪ್ರಾದೇಶಿಕ ಸಂಸ್ಕೃತಿಗೆ ತೆರೆದುಕೊಂಡಿದ್ದಾರೆ. ಕೆಲವು ಪ್ರಾದೇಶಿಕ ಸಾಂಸ್ಕೃತಿಕ ಗುಣಲಕ್ಷಣಗಳನ್ನು ರೂಢಿಸಿಕೊಂಡಿದ್ದರೂ ತಮ್ಮದೇ ಆದ ಸಂಸ್ಕೃತಿ ಹಾಗೂ ಭಿನ್ನವಾದ ಅನನ್ಯತೆಯನ್ನು ಬಹುಸಂಸ್ಕೃತಿಯ ಪರಿಸರ ಮಧ್ಯ ವಾಸಿಸುತ್ತಿದ್ದರೂ ಉಳಿಸಿಕೊಂಡಿದ್ದಾರೆ. ಇಂದು ಆಧುನಿಕತೆಯಿಂದ ಲಂಬಾಣಿಗರು ಅನೇಕ ಬದಲಾವಣೆಗೆ ಒಳಪಟ್ಟಿದ್ದಾರೆ. ಅವರ ಸಾಂಪ್ರದಾಯಿಕ ಸಾಂಸ್ಕೃತಿಕ ಅಂಶಗಳು ಗಣನೀಯವಾಗಿ ರೂಪಾಂತರಗೊಂಡಿದೆ. ಇಷ್ಟಾದರೂ ಲಂಬಾಣಿ ಜನರು ತಮ್ಮ ಸಾಂಸ್ಕೃತಿಕ ಅಸ್ಮಿತೆಯನ್ನು ಕಾಪಾಡಿಕೊಂಡು ಉಳಿಸಿಕೊಂಡಿದ್ದಾರೆಯೇ ಎಂಬುದನ್ನು ಅಭ್ಯಸಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

ಇವರ ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಚಾರಿತ್ರಿಕವಾಗಿ ಬೆಳಕಿಗೆ ತರುವ ಉದ್ದೇಶ ಪ್ರಸ್ತುತ ಅಧ್ಯಯನದ್ದು. ಇವರಿಗೆ ಒಂದು ಅಸ್ಮಿತೆಯಿದೆ. ಸಾಂಸ್ಕೃತಿಕ ನಾಯಕರಿದ್ದಾರೆ. ತ್ಯಾಗಿ, ಮಹಾತ್ಮ ಯೋಗಿಗಳಿದ್ದಾರೆ. ಇವರ ಬಗ್ಗೆ ಪುರಾಣಗಳಿವೆ. ಪ್ರತ್ಯೇಕ ಭಾಷೆಯಿದೆ. ಹಲವು ಬೆಡಗುಗಳುಳ್ಳ ಉಪ ಪಂಗಡಗಳಿವೆ.

ಒಂದು ಕಾಲಕ್ಕೆ ಕಾಡಿನಲ್ಲಿದ್ದು ಗೆಡ್ಡೆ-ಗೆಣಸು, ಬೇಟೆಯನ್ನು ನಂಬಿ ಜನಜೀವನ ನಡೆಸುತ್ತಿದ್ದ ಲಂಬಾಣಿಗರು ಇಂದು ಸಂಸ್ಕೃತಿಕರಣ, ನಗರೀಕರಣ, ಜಾಗತೀಕರಣ ಹಾಗೂ ಪಾಶ್ಚಾತ್ಯೀಕರಣಗಳ ಪ್ರಭಾವಕ್ಕೆ ಒಳಗಾಗುತ್ತಿದ್ದಾರೆ. ಹೀಗೆ ಲಂಬಾಣಿಗರ ಬದುಕು ಸ್ಥಿತ್ಯಾಂತರಗಳಿಂದ ವಿವಿಧ ರೀತಿಯಲ್ಲಿ ವಿಸ್ತರಣೆಗೊಂಡಿರುವುದು ಗಮನಾರ್ಹ. ಈಗಲೂ ಲಂಬಾಣಿಗರು ಕಾಡಿನ ಪರಿಸರದಲ್ಲಿ ವಾಸಿಸುತ್ತಿದ್ದು, ಮೊದಲಿನ ಸ್ಥಿತಿಯಲ್ಲಿರುವುದು ಕೆಲವು ಭಾಗಗಳಲ್ಲಿ ಕಾಣಬಹುದು. ಇಂದಿಗೂ ಮುಖ್ಯವಾಹಿನಿಗೆ ಬಾರದೆ ಅತಂತ್ರ ಸ್ಥಿತಿಯನ್ನು ಎದುರಿಸುತ್ತಿದ್ದಾರೆ. ಇತರ ಮೂಲನಿವಾಸಿಗಳೂ ತಮ್ಮ ಸಂಸ್ಕೃತಿಯಲ್ಲಿ ಇಂದು ಪ್ರತ್ಯೇಕತೆಯನ್ನು ಕಾಪಾಡಿಕೊಂಡಿಲ್ಲ. ಏಕೆಂದರೆ ಮಾನವ ದೈಹಿಕ ಮತ್ತು ಬೌದ್ಧಿಕವಾಗಿ ಸಮಾಜವನ್ನು ಸೃಷ್ಟಿಸಿಕೊಂಡಾಗ ವಿಕಸಿಸುತ್ತಾ ಕಾಡು ನಾಡಾಗಿ ಕಾಡಿನ ಸಂಸ್ಕೃತಿ ಬದಲಾಗುವ ಲಕ್ಷಣಗಳು ಕಂಡುಬಂದಿವೆ.

**ಅಧ್ಯಯನದ ಉದ್ದೇಶಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದು.**

೧. ಬಳ್ಳಾರಿ ಜಿಲ್ಲೆಯ ಲಂಬಾಣಿ ಸಮುದಾಯದ ಜೀವನ ಕ್ರಮವನ್ನು ಮತ್ತು ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ವಿವಿಧ ಕಾಲಘಟ್ಟಗಳ ನೆಲೆಯಲ್ಲಿ ಚಾರಿತ್ರಿಕ ಹಿನ್ನೆಲೆ ತಿಳಿಸುವುದು.

೨. ಲಂಬಾಣಿಗರ ಹೆಸರುಗಳು ವಿವಿಧ ಚಾರಿತ್ರಿಕ ಸಂದರ್ಭಗಳ ಹಿನ್ನೆಲೆ, ಲಂಬಾಣಿಗರಿಗೆ ಸಂಬಂಧಿಸಿದ ಪ್ರಮುಖ ಜಾತಿಗಳು, ಲಂಬಾಣಿಗರ ಪೌರಾಣಿಕ ಮತ್ತು ಚಾರಿತ್ರಿಕ ಮೂಲ, ಒಳಪಂಗಡಗಳ ಕುರಿತು ವಿಸ್ತಾರವಾಗಿ ವಿಶ್ಲೇಷಿಸುವುದು.

೩. ಲಂಬಾಣಿ ಸಮುದಾಯದಲ್ಲಿ ಪರ್ಯಾಯ ಪದಗಳ ವಿಶ್ಲೇಷಣೆ ಮತ್ತು ಲಂಬಾಣಿ ಹಟ್ಟಿಗಳು, ಐತಿಹಾಸಿಕ ಪುರುಷರು, ಸ್ವಾತಂತ್ರ್ಯ ಹೋರಾಟಗಾರರು ಮೊದಲಾದ ಸಾಧನೀಯ ವ್ಯಕ್ತಿಗಳನ್ನು ಇಲ್ಲಿ ಚಾರಿತ್ರಿಕವಾಗಿ ಬೆಳಕಿಗೆ ತರಲಾಗುವುದು.

೪. ವೀರರ ಆರಾಧನೆ ಮೊದಲಾದ ಚಾರಿತ್ರಿಕ ಮಹತ್ವವನ್ನು ವಿಶ್ಲೇಷಿಸುವುದು.

೫. ತಾಂಡಾದಲ್ಲಿರುವ ಭಾಷೆ, ಆಹಾರ, ಉಡುಗೆ-ತೊಡುಗೆ, ಸಂಪ್ರದಾಯ ಸಾಂಸ್ಕೃತಿಕ ಆಚರಣೆ, ಧಾರ್ಮಿಕ ಪದ್ಧತಿ ಹಾಗೂ ಕಟ್ಟುಪಾಡುಗಳನ್ನು ತಿಳಿಸುವ ಪ್ರಯತ್ನವಿದೆ.

೬. ವಸಾಹತು ಹಾಗೂ ವಸಾಹತೋತ್ತರ ಕಾಲಘಟ್ಟದಲ್ಲಿ ಲಂಬಾಣಿಗರ ಮತ್ತು ಪ್ರಾತಿನಿಧಿಕ ಸಂಸ್ಥೆಗಳು ೧೯೭೩ರ ನಂತರದ ಸ್ಥಳೀಯ ಪ್ರಾತಿನಿಧಿಕ ಸಂಸ್ಥೆ, ಶಾಸನಸಭೆ ಮತ್ತು ವಿವಿಧ ಬೋರ್ಡ್‌ಗಳಲ್ಲಿ ಲಂಬಾಣಿಗರ ಪ್ರಾತಿನಿಧ್ಯದ ಬಗ್ಗೆ ಚರ್ಚಿಸಲಾಗಿದೆ.

೭. ಬಳ್ಳಾರಿ ಜಿಲ್ಲೆಯ ಜಿಲ್ಲಾ, ತಾಲ್ಲೂಕು, ಗ್ರಾಮ ಪಂಚಾಯಿತಿ ಮಟ್ಟದಲ್ಲಿಯ ಲಂಬಾಣಿಗರ ರಾಜಕೀಯ ಸ್ಥಾನಮಾನದ ಬಗ್ಗೆ ಅಧ್ಯಯನದಲ್ಲಿ ನಿರೂಪಿಸಲಾಗಿದೆ.

೮. ತಾಂಡಾದಲ್ಲಿ ವಾಸಿಸುವ ಜನರ ಮೇಲು ಕೀಳು ಭಾವನೆ, ಅಧಿಕಾರ ಚಲಾವಣೆ, ಪ್ರಭುತ್ವ ಮತ್ತು ಪ್ರಜೆಗಳ ಹಾಗೂ ಲಂಬಾಣಿಗರ ಸಾಂಪ್ರದಾಯಿಕ ವೃತ್ತಿ ಮತ್ತು ಪ್ರವೃತ್ತಿಯ ಜೀವನ ವಿಧಾನವನ್ನು ಅಧ್ಯಯನದಲ್ಲಿ ಪರಿಚಯಿಸಲಾಗಿದೆ.

೯. ಲಂಬಾಣಿಗರ ಕಲೆ ಹಾಗೂ ಜನಪದ ಸಾಹಿತ್ಯ ವಿವಿಧ ಕಾಲಘಟ್ಟದಲ್ಲಿನ ಪರಿವರ್ತನೆಯನ್ನು ಗುರುತಿಸಿ ಹಾಗೆಯೇ ಅವರ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಡುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

೧೦. ಧಾರ್ಮಿಕ ಹಾಗೂ ಸಂಪ್ರದಾಯ ಚಟುವಟಿಕೆಯಲ್ಲಿ ಇವರು ಕಂಡುಕೊಂಡ ಬದಲಾವಣೆಗಳೇನು ಎಂಬುದನ್ನು ಅಧ್ಯಯನದಲ್ಲಿ ತಿಳಿಸಲಾಗಿದೆ.

೧೧. ಲಂಬಾಣಿಗರ ತಾಂಡಾಗಳಲ್ಲಿರುವ ವಾರ್ಷಿಕಾಚರಣೆ ಹಾಗೂ ಉತ್ಸವಗಳನ್ನು ಇಲ್ಲಿ ಚಾರಿತ್ರಿಕ ದೃಷ್ಟಿಕೋನದ ಅಡಿಯಲ್ಲಿ ಪರಿಚಯಿಸಲಾಗಿದೆ.

೧೨. ಲಂಬಾಣಿಗರ ಬುಡಕಟ್ಟಿನ ಸಾಂಸ್ಕೃತಿಕ ಅನನ್ಯತೆಯನ್ನು ವಿಶ್ಲೇಷಿಸಿದೆ.

೧೩. ಲಂಬಾಣಿಗರ ಶಿಕ್ಷಣ ಮತ್ತು ಆರ್ಥಿಕ ಸಂಗತಿಗಳನ್ನು ಗುರುತಿಸಲಾಗಿದೆ.

೧೪. ವಸಾಹತು ಹಾಗೂ ವಸಾಹತೋತ್ತರ ಕಾಲಘಟ್ಟದಲ್ಲಿ ಲಂಬಾಣಿ ಸಮುದಾಯದ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಪರಿಶೀಲಿಸಿ ಹೊಸ ಸಂಗತಿಗಳನ್ನು ಬೆಳಕಿಗೆ ತರುವ ಕುರಿತಾಗಿ ಚರ್ಚಿಸಿದ್ದೇನೆ.

೧೫. ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಅವಧೂತರ ಕುರಿತು ಮಾಹಿತಿಯನ್ನು ವಿಶ್ಲೇಷಣೆ ಮಾಡಲಾಗಿದೆ.

೧೬. ಬ್ರಿಟಿಷರ ಆಳ್ವಿಕೆಯಲ್ಲಿ ಬಳ್ಳಾರಿ ಜಿಲ್ಲೆಯ ಲಂಬಾಣಿಗರ ಸ್ಥಾನದ ಬಗ್ಗೆ ಚರ್ಚಿಸಲಾಗಿದೆ.

ಬಳ್ಳಾರಿ ಜಿಲ್ಲೆಯ ಲಂಬಾಣಿಗರ ತಮ್ಮದೇ ಆದ ವೈಶಿಷ್ಟತೆ ಹೊಂದಿದ್ದಾರೆ. ಈ ಹಿನ್ನೆಲೆಯಲ್ಲಿ ''ಬಳ್ಳಾರಿ ಜಿಲ್ಲೆಯ ಲಂಬಾಣಿಗರ ಚಾರಿತ್ರಿಕ ಅಧ್ಯಯನ'' ಎಂಬ ವಿಷಯವನ್ನು ಪಿಎಚ್.ಡಿ ಪದವಿಯ ಸಂಶೋಧನೆಯನ್ನು ಮಾಡಿದ್ದೇನೆ. ಒಟ್ಟಾರೆ ಈ ಅಧ್ಯಯನದ ಪ್ರಮುಖ ಉದ್ದೇಶ ಬಳ್ಳಾರಿ ಜಿಲ್ಲೆಯ ಲಂಬಾಣಿಗರ ಚಾರಿತ್ರಿಕ ದೃಷ್ಟಿಕೋನದ ಮೂಲಕ ಅವರ ಸಂಸ್ಕೃತಿಯನ್ನು ವಿಶ್ಲೇಷಣೆಗೆ ಒಳಪಡಿಸಿದ್ದೇನೆ.

**ಅಧ್ಯಯನ ವ್ಯಾಪ್ತಿ**

ಪ್ರಸ್ತುತ ಅಧ್ಯಯನಕ್ಕೆ ವಸಹಾತು ಕಾಲದಿಂದ ಇಂದಿನವರೆಗೆ ಕ್ರಿ.ಶ. ೧೮೦೦ರಿಂದ ೨೦೧೩ರವರೆಗೆ ಎಂದು ಕಾಲಾವಧಿಯನ್ನು ಇಟ್ಟುಕೊಳ್ಳಲಾಗಿದೆ. ಭೌಗೋಳಿಕ ವ್ಯಾಪ್ತಿಯಲ್ಲಿ ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲೂಕುಗಳಲ್ಲಿ ಕಂಡುಬರುವ ಲಂಬಾಣಿಗರಿಗೆ ಸೀಮಿತಗೊಳಿಸಲಾಗಿದೆ. ಅಗತ್ಯಕ್ಕನುಗುಣವಾಗಿ ಬಳ್ಳಾರಿ ಜಿಲ್ಲೆಯಾಚೆಯ ಗಡಿಭಾಗಗಳಲ್ಲಿ ನೆಲೆಯೂರಿರುವ ಲಂಬಾಣಿಗರ ಸಮುದಾಯದ ಕೆಲವು ಚಾರಿತ್ರಿಕ, ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ಆರ್ಥಿಕ ಜೀವನ ಅಂಶಗಳನ್ನು ಗ್ರಹಿಸಲಾಗಿದೆ. ಲಂಬಾಣಿಗರ ಸಾಂಸ್ಕೃತಿಕ ಅಧ್ಯಯನದ ಸಂದರ್ಭದಲ್ಲಿ ಕರ್ನಾಟಕದ ಲಂಬಾಣಿಗರಿಗೂ, ನೆರೆಯ ಮಹಾರಾಷ್ಟ್ರ, ಆಂಧ್ರ ಪ್ರದೇಶದ ತೆಲುಗು ಲಂಬಾಣಿಗರೊಂದಿಗೆ ಆಚರಣೆಗಳಲ್ಲಿ ಕೆಲವು ಭಿನ್ನತೆಗಳಿರುವುದು ಸಹಜವೆನಿಸಿದರೂ, ಕರ್ನಾಟಕದ ಲಂಬಾಣಿಗರು ಮಹಾರಾಷ್ಟ್ರ ಹಾಗೂ ಆಂಧ್ರ ಪ್ರದೇಶ ಲಂಬಾಣಿಗರೊಂದಿಗೂ, ವೈವಾಹಿಕ ಸಂಬಂಧವನ್ನು ಹೊಂದಿರುವುದು ವ್ಯಾಪಕವಾಗುತ್ತಿದೆ. ಇವುಗಳ ಆಂತರಿಕ ಭಿನ್ನತೆಯನ್ನು ಗುರುತಿಸಬಹುದಾಗಿದೆ.

ಬಳ್ಳಾರಿ ಜಿಲ್ಲೆಯು ಪ್ರಾಚೀನ ಕಾಲದಿಂದಲೂ ತನ್ನದೆ ಆದ ಚಾರಿತ್ರಿಕ ಹಿನ್ನೆಲೆಯನ್ನು ಹೊಂದಿದೆ. ಪ್ರಾಚೀನಕಾಲದಲ್ಲೂ ಈ ಪ್ರದೇಶದಲ್ಲಿ ಲಂಬಾಣಿಗರು ನೆಲೆಸಿದ್ದರೆಂಬುದಕ್ಕೆ ಅನೇಕ ಆಧಾರಗಳಿವೆ. ಬಳ್ಳಾರಿ ಜಿಲ್ಲೆಯ ಬಳ್ಳಾರಿ, ಸಿರುಗುಪ್ಪ, ಹೊಸಪೇಟೆ, ಸಂಡೂರು, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ಹಾಗೂ ಹೂವಿನಹಡಗಲಿ ತಾಲೂಕುಗಳಲ್ಲಿರುವ ಲಂಬಾಣಿ ಸುಮುದಾಯದವರ ಅಭಿಪ್ರಾಯದಂತೆ ಅವರ ನಂಬಿಕೆಯಂತೆ

ಕುಲಾಚಾರದನ್ವಯ ಕುಲಬಳ್ಳಿ ಬೆಡಗಿನ ಆಧಾರದ ಮೇಲೆ ವಿವಾಹಗಳು ಏರ್ಪಡುತ್ತವೆ. ಅವರವರ ಪ್ರಾದೇಶಿಕ ಆಚರಣೆಗಳಲ್ಲಿ ವ್ಯತ್ಯಾಸವಿರುವುದಾದರೂ ವೃತ್ತಿ, ಕುಲಕಸಬು, ಜೀವನಕ್ರಮ, ಆಚಾರ-ವಿಚಾರ ಕುಲದೇವರು ಸೇವಾಭಾಯಾ, ಭೀಮನಾಯ್ಕ ಮೀಟುಭಕ್ಯಾ ಹಾತಿರಾಂಬಾವಾ, ಸಾತಿಭವಾನಿ, ಸಾತಿಯಾಡಿ ಐತಿಹ್ಯಗಳು, ಪವಾಡಗಳು ಸಾಂಸ್ಕೃತಿಕ ವೀರರು ಎಲ್ಲವೂ ಭಿನ್ನತೆಯಿಲ್ಲದಂತೆ ಕಂಡುಬರುವುದರಿಂದ ಎಲ್ಲಾ ತಾಲೂಕುಗಳ ಲಂಬಾಣಿಗರ ನಡುವೆ ಸಾಮ್ಯತೆ ಕಂಡುಬರುತ್ತದೆ.

ಲಂಬಾಣಿ ಸಮುದಾಯದ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ, ಜನಸಂಖ್ಯೆ, ಲಂಬಾಣಿಗರ ಕಸುಬು, ವೃತ್ತಿ ಕುರಿತ ಅಧ್ಯಯನವನ್ನು ಬಳ್ಳಾರಿ ಜಿಲ್ಲೆಗೆ ಮಾತ್ರ ಸೀಮಿತಗೊಳಿಸಲಾಗಿದೆ. ಇತ್ತೀಚಿನ ದಿನಗಳಲ್ಲಿ ಲಂಬಾಣಿಗರು ಒಂದು ರಾಜ್ಯದಿಂದ ಮತ್ತೊಂದು ರಾಜ್ಯಕ್ಕೆ ಕೂಲಿಗಾಗಿ ವಲಸೆ ಹೋಗುತ್ತಿರುವುದು ಸಾಮಾನ್ಯ. ನನ್ನ ಕ್ಷೇತ್ರಕಾರ್ಯದಿಂದ ತಿಳಿದುಕೊಂಡಿರುತ್ತೇನೆ. ಅವರ ಕುಲಕಸುಬು ವೃತ್ತಿ ಆಧಾರಿತ ಕೃಷಿ, ಕೂಲಿ, ಕಸೂತಿ ಕಲೆ, ಸಣ್ಣ ವ್ಯಾಪಾರ, ಇನ್ನಿತರ ವೃತ್ತಿಗಳ ಮೂಲಕ ಲಂಬಾಣಿಗರು ಜೀವನ ಮಾಡುತ್ತಿದ್ದಾರೆ. ಆದರೂ ಸಹ ಅವರಿಗೆ ತಾತ್ಕಾಲಿಕವಾಗಿ ವಲಸೆ ಹೋಗುವ ಪರಿಪಾಠವಿದೆ. ಬಳ್ಳಾರಿ ಜಿಲ್ಲೆಯ ಕೆಲವು ತಾಂಡಾಗಳಿಂದ ಗೋವಾ, ಮುಂಬಯಿ, ಮೈಸೂರು, ಮಂಡ್ಯ, ಬೆಂಗಳೂರು ಇತ್ಯಾದಿ ನಗರಗಳಿಗೆ ವಲಸೆ ಹೋಗುತ್ತಾರೆ. ಇವರು ಧರಿಸುವ ಉಡುಪುಗಳನ್ನು ಮಾರಾಟ ಮಾಡುತ್ತಾರೆ. ಇವತ್ತಿಗೂ ಹಂಪೆಯಲ್ಲಿ ಇವರ ಸಾಂಪ್ರದಾಯಿಕ ಉಡುಗೆ ತೊಡುಗೆಗಳನ್ನು ಮಾರಾಟ ಮಾಡುವ ಸಂಪ್ರದಾಯವಿದೆ. ಈ ಪರಿಸರದಲ್ಲಿ ಲಂಬಾಣಿಗರ ಜನಸಂಖ್ಯೆ ಅಧಿಕ ಸಂಖ್ಯೆಯಲ್ಲಿದೆ. ಬಳ್ಳಾರಿ ಜಿಲ್ಲೆಯ ಲಂಬಾಣಿಗರ ಸಾಮಾಜಿಕ, ಆರ್ಥಿಕ, ಧಾರ್ಮಿಕ ಸಾಂಸ್ಕೃತಿಕ ಜೀವನ ತನ್ನದೇ ಆದ ವೈಶಿಷ್ಟ್ಯತೆಯನ್ನು ಪಡೆದುಕೊಂಡಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ವಸಾಹತುಕಾಲದಿಂದ ಇಂದಿನವರಗೆ ಎಂಬ ಕಾಲಾವಧಿಯನ್ವಯ ಬಳ್ಳಾರಿ ಜಿಲ್ಲೆಯ ಪ್ರಾದೇಶಿಕ ವ್ಯಾಪ್ತಿಯನ್ನು ಅಧ್ಯಯನಕ್ಕೆ ಇಟ್ಟುಕೊಳ್ಳಲಾಗಿದೆ. ಆದರೂ ವಿಷಯಕ್ಕನುಗುಣವಾಗಿ ವ್ಯಾಪ್ತಿ ಪ್ರದೇಶ ಹಾಗೂ ಕಾಲಮೀರಿ ಲಂಬಾಣಿಗರ ಬಗ್ಗೆ ಅಧ್ಯಯನಮಾಡಿ ವಿಷಯ ಸಂಗ್ರಹಿಸಿ ಪ್ರಬಂಧಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

**ಅಧ್ಯಯನದ ವಿಧಾನ**

ಪ್ರಸ್ತುತ ಅಧ್ಯಯನವನ್ನು ಚಾರಿತ್ರಿಕ ದೃಷ್ಟಿಕೋನದ ಹಿನ್ನೆಲೆಯಲ್ಲಿ ವಿಶ್ಲೇಷಿಸಿ ಚಾರಿತ್ರಿಕತೆಗೆ ಹೆಚ್ಚಿನ ಮಹತ್ವ ನೀಡಲಾಗಿದೆ. ಇದು ಸಮುದಾಯದ ಅಧ್ಯಯನವಾದ್ದರಿಂದ ಅಂತರಶಿಸ್ತೀಯ ಅಧ್ಯಯನ ಕ್ರಮವನ್ನು ಅನುಸರಿಸಲಾಗಿದೆ. ಇದಕ್ಕೆ ಸಂಬಂಧಿಸಿದ ರೀತಿಯಲ್ಲಿ ರಾಜ್ಯಶಾಸ್ತ್ರ, ಇತಿಹಾಸ, ಸಮಾಜಶಾಸ್ತ್ರ, ಅರ್ಥಶಾಸ್ತ್ರ, ಧರ್ಮ, ಜಾನಪದ, ಲಲಿತಕಲೆ ಮೊದಲಾದವುಗಳನ್ನು ಬಳಸಿಕೊಳ್ಳಲಾಗಿದೆ. ಲಂಬಾಣಿಗರಂಥ ಸಮುದಾಯದ ಅಧ್ಯಯನಕ್ಕೆ ಸಂಬಂಧಿಸಿದಂತೆ ಸಮರ್ಪಕ ಆಕರಗಳ ಕೊರತೆಯಿರುವುದು ಕಂಡುಬರುತ್ತದೆ. ಈಗಾಗಲೇ ನಿರೂಪಿತಗೊಂಡಿರುವ ಚರಿತ್ರೆಯಲ್ಲಿ ಲಂಬಾಣಿಗರ ಸ್ಪಷ್ಟ ಚಿತ್ರಣ ದೊರೆಯುವುದು ಕಷ್ಟ. ಲಂಬಾಣಿಗರ ಬಗೆಗಿನ ದಾಖಲೆಗಳು, ಕಾಗದ ಪತ್ರಗಳು, ನಿರ್ಲಕ್ಷ್ಯಕ್ಕೊಳಗಾಗಿ ನಾಶವಾಗಿದೆ. ಇದರಿಂದಾಗಿ ಇಲ್ಲಿಯವರೆಗೆ ಪ್ರಕಟಗೊಂಡ ಶಾಸನಗಳು, ಕೈಫಿಯತ್ತುಗಳು, ಸಂಶೋಧನ ಪ್ರಬಂಧಗಳು, ಪ್ರಮುಖ ಕೃತಿಗಳು, ವಂಶಾವಳಿಗಳನ್ನು ಅಧ್ಯಯನ

ಮಾಡುವುದರ ಮೂಲಕ ಲಂಬಾಣಿಗರಿಗೆ ಸಂಬಂಧಿಸಿದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಶಾಸನ, ವೀರಗಲ್ಲು, ಚಿತ್ರಕಲೆ, ವಾಸ್ತುಶಿಲ್ಪ ಮೊದಲಾದವನ್ನು ಸಂದರ್ಭಾನುಸಾರ ಅಧ್ಯಯನಕ್ಕೆ ಬಳಸಿಕೊಳ್ಳುವುದರ ಮೂಲಕ ಲಂಬಾಣಿಗರ ಚಾರಿತ್ರಿಕ ಜೀವನವನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಈ ಅಧ್ಯಯನದ ಪ್ರಮುಖ ಅಂಗವೆಂದರೆ ಕ್ಷೇತ್ರಕಾರ್ಯ. ಬಳ್ಳಾರಿ ಜಿಲ್ಲೆಯಾದ್ಯಂತ ನೆಲೆಸಿರುವ ಲಂಬಾಣಗರ ಪ್ರಮುಖ ಸ್ಥಳಗಳಿಗೆ ಭೇಟಿ ನೀಡಲಾಗಿದೆ. ಆ ಪ್ರದೇಶದ ಲಂಬಾಣಿಗರಲ್ಲಿ ಹಿರಿಯ ವ್ಯಕ್ತಿಗಳನ್ನು ಸಂದರ್ಶನ ಮಾಡಿ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ, ಸಾಂಸ್ಕೃತಿಕ ಜೀವನದ ಬಗ್ಗೆ ಮಾಹಿತಿ ಸಂಗ್ರಹಿಸಲಾಗಿದೆ. ಅಗತ್ಯ ಛಾಯಾಚಿತ್ರ - ರೇಖಾಚಿತ್ರಗಳನ್ನು ತೆಗೆದುಕೊಳ್ಳಲಾಗಿ, ಕ್ಷೇತ್ರಕಾರ್ಯದಲ್ಲಿ ದೊರೆತ ಕೆಲವು ಮೌಖಿಕ ವಿಷಯಗಳನ್ನು ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ. ಅದರಲ್ಲಿ ಪುರಾಣಗಳು, ಜನಪದಗೀತೆ, ಕೋಲಾಟಪದ, ಸೋಬಾನೆ, ಲಾವಣಿ, ಐತಿಹಾಸಿಕ ಪುರುಷರ ಕತೆಗಳು, ಲಂಬಾಣಿ ಬೆಡಗುಗಳು, ದೇವರುಗಳು ಮತ್ತು ಸ್ಥಳನಾಮ ಮೊದಲಾದವುಗಳನ್ನು ಸಂಗ್ರಹಿಸಿ ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ.

ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ವ್ಯಾಪ್ತಿ ಪ್ರದೇಶದ ಹೊರಗಡೆ ದೊರೆತ ಜನಪದ ಹಾಡು, ಪದ್ಯಗಳು, ಪುರಾಣ ಕತೆಗಳು ಬೆಡಗುಗಳು, ದೇವರುಗಳು ಮತ್ತು ಸ್ಥಳನಾಮಗಳನ್ನು ಸಂಗ್ರಹಿಸಿ ಬಳಸಿಕೊಂಡು ದಾಖಲಿಸಲಾಗಿದೆ. ಪ್ರಕಟಗೊಂಡ ಸಾಹಿತ್ಯ ಕೃತಿಗಳು, ಚಾರಿತ್ರಿಕ ಕೃತಿಗಳು, ಅಪ್ರಕಟಿತ ಮಹಾಪ್ರಬಂಧಗಳು, ಲೇಖನಗಳು ಪತ್ರಿಕೆಗಳನ್ನು ವಿಶೇಷವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಅಧ್ಯನದ ಸ್ವರೂಪ**

ಈ ಅಧ್ಯಯನವು ಬಳ್ಳಾರಿ ಜಿಲ್ಲೆಯ ಲಂಬಾಣಿಗರ ಚಾರಿತ್ರಿಕ ಅಧ್ಯಯನ ಎಂಬ ವಿಷಯದ ಅಡಿಯಲ್ಲಿ ಚಾರಿತ್ರಿಕವಾಗಿ ಅಧ್ಯಯನ ಮಾಡಲಾಗಿದೆ. ಅಧ್ಯಯನದ ಅನುಕೂಲಕ್ಕಾಗಿ ಇದರಲ್ಲಿ ಒಟ್ಟು ಹತ್ತು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದ್ದು ಅವುಗಳ ಸಂಕ್ಷಿಪ್ತ ವಿವರಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಅಳವಡಿಸಿಕೊಂಡ ವಿಧಾನಗಳ ಬಗ್ಗೆ ತಿಳಿಸುತ್ತದೆ.

ಎರಡನೆ ಅಧ್ಯಾಯದಲ್ಲಿ ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆಯನ್ನು ಇತಿಹಾಸ ಪೂರ್ವಕಾಲ, ಇತಿಹಾಸ ಕಾಲ, ಮಧ್ಯಕಾಲ, ವಸಾಹತುಕಾಲ, ಸ್ವಾತಂತ್ರ್ಯ ಹೋರಾಟ, ಹಾಗೂ ಏಕೀಕರಣ ಹೋರಾಟದ ಹಿನ್ನೆಲೆಯನ್ನು ~~ಈ ಎರಡನೇ ಅಧ್ಯಾ~~ಯದಲ್ಲಿ ವಿವರಿಸಲಾಗಿದೆ.

ಮೂರನೇ ಅಧ್ಯಾಯವು ಲಂಬಾಣಿಗರ ಚಾರಿತ್ರಿಕ ಹಿನ್ನೆಲೆ ಎಂಬ ಶೀರ್ಷಿಕೆ ಹೊಂದಿದೆ. ಲಂಬಾಣಿ ಪದ ನಿಷ್ಪತ್ತಿ, ಲಂಬಾಣಿಗರ ಹೆಸರುಗಳು ವಿವಿಧ ಚಾರಿತ್ರಿಕ ಸಂದರ್ಭಗಳ ಹಿನ್ನೆಲೆ, ಲಂಬಾಣಿಗರ ಸಂಬಂಧಿಸಿದ ಪ್ರಮುಖ ಜಾತಿಗಳು, ಲಂಬಾಣಿಗರ ಪೌರಾಣಿಕ ಮತ್ತು ಚಾರಿತ್ರಿಕ ಮೂಲ, ಒಳಪಂಗಡಗಳ ಕುರಿತು ವಿಸ್ತಾರವಾಗಿ ವಿಶ್ಲೇಷಿಸಲಾಗಿದೆ.

ನಾಲ್ಕನೇ ಅಧ್ಯಾಯವು ವಸಾಹತು ಹಾಗೂ ವಸಾಹತೋತ್ತರ ಕಾಲಘಟ್ಟದಲ್ಲಿ ಲಂಬಾಣಿಗರು ಎಂಬ ಶೀರ್ಷಿಕೆಯಡಿಯಲ್ಲಿ ವಸಾಹತು ಕಾಲಘಟ್ಟದಲ್ಲಿ ಪ್ರಾತಿನಿಧಿಕ ಸಂಸ್ಥೆಗಳು ಮತ್ತು ಲಂಬಾಣಿಗರು, ವಸಾಹತೋತ್ತರ

ಕಾಲಘಟ್ಟದಲ್ಲಿ ಪ್ರಾತಿನಿಧಿಕ ಸಂಸ್ಥೆಗಳು ಮತ್ತು ಲಂಬಾಣಿಗರು, ೧೯೭೩ರ ನಂತರ ಸ್ಥಳೀಯ ಪ್ರಾತಿನಿಧಿಕ ಸಂಸ್ಥೆಗಳಲ್ಲಿ ಲಂಬಾಣಿಗರ ಬಗ್ಗೆ ವಿವರಿಸಲಾಗಿದೆ. ಇದರೊಂದಿಗೆ ಶಾಸನ ಸಭೆ ಮತ್ತು ವಿವಿಧ ಬೋರ್ಡ್‌ಗಳಲ್ಲಿ ಲಂಬಾಣಿಗರ ಪ್ರಾತಿನಿಧ್ಯದ ಬಗ್ಗೆಯೂ ಚರ್ಚಿಸಲಾಗಿದೆ. ನಂತರ ಆಧುನಿಕ ಕಾಲದಲ್ಲಿ ಸ್ವಾತಂತ್ರ್ಯ ಹೋರಾಟಗಾರರು ಮತ್ತು ಕರ್ನಾಟಕ ಏಕೀಕರಣ ಚಳವಳಿಗಳಲ್ಲಿ ಲಂಬಾಣಿಗರ ಸ್ಥಾನದ ಬಗ್ಗೆ ವಿವರಿಸಲಾಗಿದೆ. ಬ್ರಿಟೀಷ್‌ರ ಆಳ್ವಿಕೆಯಲ್ಲಿ ಬಳ್ಳಾರಿ ಜಿಲ್ಲೆಯ ಲಂಬಾಣಿಗರ ಸ್ಥಾನಮಾನದ ಬಗ್ಗೆ ಚರ್ಚಿಸಲಾಗಿದೆ ಹಾಗೂ ಜಿಲ್ಲಾ ತಾಲ್ಲೂಕು, ಗ್ರಾಮ, ಪಂಚಾಯತಿ ಮಟ್ಟದಲ್ಲಿನ ಲಂಬಾಣಿಗರ ರಾಜಕೀಯ ಸ್ಥಾನದ ಬಗ್ಗೆ ತಿಳಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಲಂಬಾಣಿಗರ ಸಾಮಾಜಿಕ ಜೀವನವನ್ನು ವಿವರಿಸಲಾಗಿದೆ. ಅದರಲ್ಲಿ ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ ಹಾಗೂ ಸಂಸ್ಕಾರಗಳು, ಸಂಪ್ರದಾಯಗಳು ಎಂಬ ವಿಭಾಗ ಮಾಡಿ ಅಧ್ಯಯನ ಮಾಡಲಾಗಿದೆ. ಜಾತಿ ವ್ಯವಸ್ಥೆ, ಕುಲ-ಗೋತ್ರಗಳು, ಕುಟುಂಬ ಪದ್ಧತಿ, ಆಹಾರ ಮತ್ತು ಪಾನೀಯಗಳು, ಉಡುಗೆ ತೊಡುಗೆ, ವಸತಿ ವ್ಯವಸ್ಥೆ, ನ್ಯಾಯ ಪದ್ಧತಿ, ಜನನ, ನಾಮಕರಣ, ಋತುಮತಿ, ವಿವಾಹ, ವಿಧವಾ ವಿವಾಹ, ಬಹುಪತ್ನಿತ್ವ, ಬಾಲ್ಯವಿವಾಹ, ಮೈದುನ ವಿವಾಹ, ಕೂಡಿಕೆ ಕಾರ್ಯ, ಮರಣ ಮೊದಲಾದವುಗಳ ಬಗ್ಗೆ ಸವಿಸ್ತಾರವಾಗಿ ಚಾರಿತ್ರಿಕ ಅಂಶಗಳೊಂದಿಗೆ ಚರ್ಚಿಸಲಾಗಿದೆ.

ಆರನೆಯ ಅಧ್ಯಾಯವು ಲಂಬಾಣಿಗರ ಧಾರ್ಮಿಕ ಜೀವನ ವಿಧಾನವನ್ನು ಒಳಗೊಂಡಿದೆ. ಈ ಅಧ್ಯಾಯದಲ್ಲಿ ಲಂಬಾಣಿಗರ ದೇವ ದೇವತೆಗಳು, ಧಾರ್ಮಿಕ ಆಚರಣೆಗಳ, ನಂಬಿಕೆಗಳು, ಹರಕೆಗಳು, ಗುರುಮಠಗಳು ಎಂಬ ಉಪ ಶೀರ್ಷಿಕೆಯಡಿ ಧಾರ್ಮಿಕ ಜೀವನ ಬಗ್ಗೆ ಸವಿಸ್ತಾರವಾಗಿ ಚಾರಿತ್ರಿಕ ಅಂಶಗಳ ಮೂಲಕ ವಿವರಿಸಲಾಗಿದೆ.

ಏಳನೆಯ ಅಧ್ಯಾಯವು ಲಂಬಾಣಿಗರ ಆರ್ಥಿಕ ಜೀವನವನ್ನು ಒಳಗೊಂಡಿದೆ. ಆರ್ಥಿಕ ವ್ಯವಸ್ಥೆಯಲ್ಲಿ ವ್ಯಾಪಾರ, ವ್ಯವಸಾಯ, ಕೃಷಿಕಾರ್ಮಿಕರು, ಬೇಟೆ, ಭಟ್ಟಿ ಸಾರಾಯಿ ತಯಾರಿಕೆ ಮೊದಲಾದ ವೃತ್ತಿಗಳ ಬಗ್ಗೆ ಚಾರಿತ್ರಿಕ ಹಿನ್ನೆಲೆಯ ಮೂಲಕ ಚರ್ಚಿಸಲಾಗಿದೆ.

ಎಂಟನೆಯ ಅಧ್ಯಾಯ ಲಂಬಾಣಿ ಸಮುದಾಯದ ಶೈಕ್ಷಣಿಕ ಸ್ಥಿತಿಗತಿಯನ್ನು ಒಳಗೊಂಡಿದೆ. ವಸಾಹತು ಕಾಲಘಟ್ಟದಲ್ಲಿ ಅಸ್ಪೃಶ್ಯರ ಸ್ಥಿತಿ, ವಸಾಹತೋತ್ತರ ಕಾಲಘಟ್ಟದಲ್ಲಿ ಲಂಬಾಣಿ ಸಮುದಾಯದ ಶೈಕ್ಷಣಿಕ ಪ್ರಗತಿ, ಲಂಬಾಣಿಗರ ಶೈಕ್ಷಣಿಕ ಅಭಿವೃದ್ಧಿಯಲ್ಲಿ ವಿದ್ಯಾರ್ಥಿ ನಿಲಯಗಳ ಪಾತ್ರ, ಸಮಾಜ ಕಲ್ಯಾಣ ಇಲಾಖೆಯ ವಿಶೇಷ ಕಾರ್ಯಕ್ರಮಗಳು ಮತ್ತು ಲಂಬಾಣಿಗರು, ವಸಾಹತು ಕಾಲದ ಶಿಕ್ಷಣ ಪದ್ಧತಿಯೊಂದಿಗೆ ಇಂದಿನ ಶೈಕ್ಷಣಿಕ ಸ್ಥಿತಿಗತಿಯನ್ನು ವಿವರಿಸಲಾಗಿದೆ. ಇಂದು ಲಂಬಾಣಿಗರು ಸ್ಥಾಪಿಸಿಕೊಂಡಿರುವ ಶಿಕ್ಷಣ ಸಂಸ್ಥೆಗಳ ಜೊತೆಗೆ ಅವರ ಶೈಕ್ಷಣಿಕ ಸ್ಥಿತಿಯನ್ನು ವಿವರಿಸಲಾಗಿದೆ.

ಒಂಬತ್ತನೆಯ ಅಧ್ಯಾಯ ಲಂಬಾಣಿಗರ ಜನಪದ ಜೀವನಕ್ಕೆ ಸಂಬಂಧಿಸಿದೆ. ಇದರಲ್ಲಿ ಲಂಬಾಣಿಗರ ಜನಪದ ಸಾಹಿತ್ಯ, ಹಾಡು, ಕಥೆ, ಗಾದೆ, ಲಾವಣಿ, ಒಗಟು, ನುಡಿಗಟ್ಟುಗಳು, ಲಂಬಾಣಿ ಜನಪದ ಪ್ರದರ್ಶನ ಕಲೆಗಳು, ಲಂಬಾಣಿ ವೈಜ್ಞಾನಿಕ ಜನಪದ ಹಾಗೂ ಲಂಬಾಣಿ ಜನಪದ ವೈದ್ಯ ಪದ್ಧತಿಯ ಬಗ್ಗೆ ವಿವರಿಸಲಾಗಿದೆ.

ಒಟ್ಟಾರೆ ಈ ಅಧ್ಯಾಯದಲ್ಲಿ ಲಂಬಾಣಿಗರು ನಾಡಿನ ಸಂಸ್ಕೃತಿಗೆ ನೀಡಿದ ಕೊಡುಗೆಗಳ ಬಗ್ಗೆ ಪ್ರಾಮುಖ್ಯತೆ ನೀಡಲಾಗಿದೆ.

ಹತ್ತನೆಯ ಅಧ್ಯಾಯ ಉಪಸಂಹಾರವಾಗಿದ್ದು, ಇದರಲ್ಲಿ ಎಲ್ಲಾ ಅಧ್ಯಾಯಗಳಲ್ಲಿ ಕಂಡುಕೊಂಡ ಅಧ್ಯಯನದ ಫಲಿತಗಳನ್ನು ನೀಡಲಾಗಿದೆ. ಕೊನೆಯ ಭಾಗವಾದ ಅನುಬಂಧದಲ್ಲಿ ವಕ್ತೃಗಳ ಪಟ್ಟಿ, ಪದಸೂಚಿ, ಆಕರ ಗ್ರಂಥಗಳ ಸೂಚಿ ಹಾಗೂ ಛಾಯಾಚಿತ್ರಗಳನ್ನು ನೀಡಲಾಗಿದೆ.

* * *

## ಅಧ್ಯಾಯ ಎರಡು

# ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ

## ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ

ಬಳ್ಳಾರಿ ಜಿಲ್ಲೆಯು ಸುಮಾರು ೨೦೦೦ಕ್ಕೂ ಹೆಚ್ಚು ವರ್ಷಗಳ ಸುದೀರ್ಘ ಚಾರಿತ್ರಿಕ, ಪೌರಾಣಿಕ ಪರಂಪರೆಯನ್ನು ಹೊಂದಿದೆ. ಈ ಪ್ರದೇಶಕ್ಕೆ ಬಳ್ಳಾರಿ ಎಂಬ ಹೆಸರು ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿತ್ತೆಂಬುದಕ್ಕೆ ಆಧಾರಗಳಿವೆ. ಕನ್ನಡ ಮತ್ತು ಸಂಸ್ಕೃತದ ಅನೇಕ ಶಾಸನಗಳು, ಹಾಗೂ ಸಾಹಿತ್ಯಕ ಕೃತಿಗಳೂ ಬಳ್ಳಾರಿಯ ಪ್ರಾಚೀನತೆಗೆ ಪ್ರಮುಖ ಆಧಾರವನ್ನು ನೀಡುತ್ತವೆ. 'ಬಳ್ಳಾರಿ' ಎಂಬ ಹೆಸರು ಕ್ರಿ.ಶ ಹನ್ನೆರಡನೆಯ ಶತಮಾನದಿಂದ ಬಳಕೆಯಲ್ಲಿರುವುದು ಈವರೆಗೆ ದೊರಕಿರುವ ಆಧಾರಗಳಿಂದ ತಿಳಿದುಬರುತ್ತದೆ. ಜೈಬೇರಿನಲ್ಲಿ ದೊರೆತಿರುವ ಕ್ರಿ.ಶ.೧೧೩೧ರ ಶಾಸನ ಮತ್ತು ಕ್ರಿ.ಶ. ೧೧೮೬ರ ಹೊಯ್ಸಳರ ವಿಷ್ಣುವರ್ಧನನ ಆಳ್ವಿಕೆಯ ಅವಧಿಯ ಶಾಸನ ಹಾಗೂ ಅದೇ ಆಸುಪಾಸಿನ ಅವಧಿಯ ಸಿಂಧಿಗೇರಿ, ಕೋಳೂರು, ಕುರುಗೋಡು ಶಾಸನಗಳಲ್ಲಿ ಬಲ್ಲಾರಿ(Bellare) ಎಂದು ಉಲ್ಲೇಖಿಸಲಾಗಿದೆ.[೧] ಹೀಗಾಗಿ ಅಂದಿನ ಪ್ರಮುಖ ನಗರವಾಗಿತ್ತೆಂದು ಹೇಳಬಹುದಾಗಿದೆ.

ಬಳ್ಳಾರಿ ನಗರದ ಪ್ರಮುಖ ದೇವಾಲಯಗಳಾದ ಕೋಟೆಯ ಮಲ್ಲೇಶ್ವರ ದೇವಾಲಯ ಮತ್ತು ಗಾಂಧಿನಗರದ ದುರ್ಗಮ್ಮ ದೇವಾಲಯಗಳ ಹಿನ್ನೆಲೆಯಿಂದ ಬಳ್ಳಾರಿ ಎಂಬ ಹೆಸರು ಬಂದದ್ದು ಎಂದು ಪುರಾಣಗಳು ತಿಳಿಸುತ್ತವೆ. ದಕ್ಷಿಣ ಭಾರತದ ಇತಿಹಾಸದಲ್ಲಿ ಬಳ್ಳಾರಿಯು ಪ್ರತಿ ಕಾಲಘಟ್ಟದಲ್ಲಿ ಒಂದಲ್ಲಾ ಒಂದು ರೀತಿಯಲ್ಲಿ ತನ್ನನ್ನು ಗುರುತಿಸಿಕೊಂಡು ಬಂದಿದೆ. ಒಂದು ವಿಜಯನಗರ ಆಳ್ವಿಕೆಯ ಅವಧಿಯಲ್ಲಿ ಮತ್ತು ಎರಡನೆಯದು ೧೯ನೇ ಶತಮಾನದ ವಸಾಹತು ಸಂದರ್ಭದ ಮಿಷನರಿಗಳ ಅವಧಿಯಲ್ಲಿ. ಒಟ್ಟಾರೆ ಪುರಾಣಗಳ ಕಾಲದಿಂದ ಇಲ್ಲಿಯವರೆಗೆ ಇತಿಹಾಸದಲ್ಲಿ ಬಳ್ಳಾರಿಯು ನಿರ್ವಹಿಸಿದ ಪಾತ್ರವನ್ನು ಕಾಲಾನುಕ್ರಮವಾಗಿ ಈ ಮುಂದಿನಂತೆ ಉಲ್ಲೇಖಿಸಲಾಗಿದೆ.

### ೨.೧. ಇತಿಹಾಸ ಪೂರ್ವಕಾಲ

ಕರ್ನಾಟಕ ರಾಜ್ಯದ ೩೦ ಜಿಲ್ಲೆಗಳಲ್ಲಿ ಬಳ್ಳಾರಿ ಜಿಲ್ಲೆಯೂ ಸಹ ಒಂದಾಗಿದೆ.[೨] ಬಳ್ಳಾರಿ ಜಿಲ್ಲೆಯು ಪೂರ್ವ ಪಶ್ಚಿಮವಾಗಿ ೧೬೧ ಕಿ.ಮೀ ಉದ್ದವನ್ನು, ದಕ್ಷಿಣೋತ್ತರವಾಗಿ ೮೩.೭ ಕಿ.ಮೀ ಅಗಲವನ್ನು ಮತ್ತು ನೈರುತ್ಯವಾಗಿ ೧೮೨ ಕಿ.ಮೀ ಉದ್ದವನ್ನು ಹೊಂದಿದೆ. ಬಳ್ಳಾರಿ ಜಿಲ್ಲೆಯು ಉತ್ತರ ಅಕ್ಷಾಂಶ ೧೪.೩೦-೫೦-೫೦ ಮತ್ತು ಪೂರ್ವರೇಖಾಂಶ ೭೫-೪೦-೭೭.೧೧ ನಡುವೆ ಇದೆ.

ಪ್ರಾಕ್ತನ ಅನ್ವೇಷಣೆಗಳಿಂದ ಬಳ್ಳಾರಿ ಪ್ರದೇಶದ ಇತಿಹಾಸವು ಆದಿ ಹಳೆ ಶಿಲಾಯುಗದ ಮಾನವನಿಂದ ಪ್ರಾರಂಭವಾಗುತ್ತದೆ. ಹಳೆ ಶಿಲಾಯುಗದ ಮಾನವನ ಅನೇಕ ಕುರುಹುಗಳು ದೊರೆತಿರುವುದೇ ಇದಕ್ಕೆ ಸಾಕ್ಷಿ. ಶಿಲಾಯುಗದ ನೆಲೆಗಳನ್ನು ಅವುಗಳ ಅವಶೇಷಗಳು, ಬೆಳವಣಿಗೆ ಮತ್ತು ಕುಶಲತೆಯನ್ನು ಅನುಸರಿಸಿ ಮೂರು ಹಂತಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ,

೧. ಹಳೆಯ ಶಿಲಾಯುಗ

೨. ಸೂಕ್ಷ್ಮ ಶಿಲಾಯುಗ

೩. ನೂತನ ಶಿಲಾಯುಗ

ರಾಬರ್ಟ್ ಬ್ರೂಸ್‌ಫೂಟ್ ಎಂಬ ವಿದ್ವಾಂಸರು ಬಳ್ಳಾರಿ ಪ್ರದೇಶದಲ್ಲಿ ಸರ್ವೇಕ್ಷಣೆ ಮಾಡಿ ಅನೇಕ ಪ್ರಾಗೈತಿಹಾಸಿಕ ನೆಲೆಗಳನ್ನು ಪತ್ತೆಹಚ್ಚಿದ್ದಾರೆ. ಅವರ ಸಹಾಯಕರಾಗಿ ಹಾಗೂ ನಂತರ ಅನೇಕ ಇತಿಹಾಸತಜ್ಞರು, ಸಂಶೋಧಕರು ಕೆಲಸ ಮಾಡಿದ್ದಾರೆ. ಅವರುಗಳೆಂದರೆ ಜಾಯಿಸರ್ ವಿಲ್ಲರ್, ಮುಜುಂದಾರ್, ರಾಜಗುರು, ಸುಬ್ಬರಾವ್, ಝಡ್.ಡಿ. ಅನ್ಸಾರಿ, ನಾಗರಾಜ್‌ರಾವ್ ಪ್ರಮುಖರು. ಇಲ್ಲಿ ನವಶಿಲಾಯುಗದ ನೆಲೆಗಳನ್ನು ವೀಕ್ಷಿಸಿದ ರಾಬರ್ಟ್ ಬ್ರೂಸ್‌ಫೂಟ್ "ಇದೀ ಭಾರತದಲ್ಲಿ ಅತ್ಯಂತ ಪ್ರಮುಖ ನವಶಿಲಾಯುಗದ ನೆಲೆಯಾಗಿದೆ ಮತ್ತು ಇದನ್ನು ಮೀರಿಸುವ ಮತ್ತೊಂದು ನೆಲೆ ಇಲ್ಲ" ಎಂಬುದಾಗಿ ಅಭಿಪ್ರಾಯಪಟ್ಟಿದ್ದಾರೆ.[೩] ಬಳ್ಳಾರಿ ಪ್ರದೇಶದಲ್ಲಿ ಮೂರು ಯುಗದ ಮಾನವನ ನೆಲೆಗಳು ದೊರಕಿವೆ. ಈ ಪ್ರದೇಶದಲ್ಲಿ ಹಳೆಯ ಶಿಲಾಯುಗಕ್ಕೆ ಸಂಬಂಧಪಟ್ಟ ನೆಲೆಗಳಾದ ಬಾದನಹಟ್ಟಿ ಗುಡ್ಡ ಬಳ್ಳಾರಿ, ಬೆಳಗಲ್ಲು, ಕುರೇಕುಪ್ಪ, ಜೋಗ, ದರೋಜಿ, ಮಲ್ಲಾಪುರ, ಹಿರೇಕುರುವತ್ತಿ ಮತ್ತು ಗಾದಿಗನೂರುಗಳಲ್ಲಿ ದೊರೆತಿವೆ.[೪]

ಸೂಕ್ಷ್ಮ ಶಿಲಾಯುಗಕ್ಕೆ ಸಂಬಂಧಪಟ್ಟ ನೆಲೆಗಳಾಗಿ ಬಳ್ಳಾರಿ ಪ್ರದೇಶದ ಇಂಗಳಗಿ, ಕಾಕುಬಾಳು, ಕುರೇಕುಪ್ಪ, ಕೋಡಾಲ, ತೋರಣಗಲ್ಲು, ದರೋಜಿ, ಭೈರನಾಯಕನಹಳ್ಳಿ, ಮಲ್ಲಾಪುರ, ಮೇದರಹಳ್ಳಿ, ಗದ್ದಿಕೇರಾ, ಹಂಪಸಾಗರ, ಅಲ್ಲಿಪುರ, ಮಾಗಳ, ಮೈಲಾರ, ರಾಜವಾಡ, ನಂದಿಬೇವೂರು ಮತ್ತು ಮೂಡಲಗೇರಿ ಸ್ಥಳಗಳಲ್ಲಿ ದೊರೆತಿವೆ.[೫]

ನೂತನ ಅಥವಾ ಬೃಹತ್ ಶಿಲಾಯುಗಕ್ಕೆ ಸಂಬಂಧಪಟ್ಟ ಬಳ್ಳಾರಿ ಪ್ರದೇಶದಲ್ಲಿನ ನೆಲೆಗಳಾದ ಅಪ್ಪಯ್ಯನಹಳ್ಳಿ, ಕುಮುತಿ, ತಿಮ್ಮಲಾಪುರ, ಹಾಲಸಾಗರ, ಹುಲಿಕುಂಟೆ, ಕಪ್ಪಗಲ್ಲು, ಕುರುಗೋಡು, ಸಂಗನಕಲ್ಲು, ನಡಿವಿ, ನಿಟ್ಟೂರು, ಬೈರನಾಯಕನಹಳ್ಳಿ, ರಾಜಾಪುರ, ಹಂಪಸಾಗರ, ಅಲ್ಲಿಪುರ, ಕೊಟ್ನಕಲ್ಲು, ನವಲಿ, ಮಾಗಳ, ಮೈಲಾರ, ರಾಜವಾಡ, ಹುಲಿಗುಡ್ಡ, ಹೂವಿನಹಡಗಲಿ, ಬೆಳಗಲ್ಲು, ಹಲಕುಂದಿ, ಹಂಪಿ, ತೆಲಗಿ, ನೀಲಗುಂದ, ಬಾಗಳಿಗಳಲ್ಲಿ ದೊರಕಿವೆ.[೬]

ಕರ್ನಾಟಕ ಶಿಲಾಯುಗದ ಜನರು ಪ್ರೋಟೋ ಅಸ್ಟ್ರಲಾಯಿಡ್ ಮತ್ತು ಮೆಡಿಟರೇನಿಯನ್ ಎಂಬ ಜನಾಂಗೀಯ ವರ್ಗಕ್ಕೆ ಸೇರಿದವರು. ಆದ್ದರಿಂದ ಕರ್ನಾಟಕದ ಬಳ್ಳಾರಿ ಪ್ರದೇಶದ ಶಿಲಾಯುಗದ ಜನರು ಪ್ರೋಟೋ ಅಸ್ಟ್ರಲಾಯಿಡ್ ಮತ್ತು ಮೆಡಿಟರೇನಿಯನ್ ಜನಾಂಗೀಯ ವರ್ಗಕ್ಕೆ ಸೇರಿದವರಾಗಿದ್ದಾರೆಂದು ಅಭಿಪ್ರಾಯ ಪಡಲಾಗಿದೆ.[೭]

ಅವಿಮಾನವನ ಕಾಲದಲ್ಲಿ ಪ್ರಸಿದ್ಧಿಯನ್ನು ಪಡೆದ ಬಳ್ಳಾರಿ ಜಿಲ್ಲೆಯು ಪುರಾಣ ಕಾಲದಲ್ಲಿಯೂ ಪ್ರಸಿದ್ಧಿಯನ್ನು ಪಡೆದಿತ್ತು. ಇಂದಿನ ಹಂಪೆ ಪ್ರದೇಶವು ಮಹಾಕಾವ್ಯ ರಾಮಾಯಣ ಕಾಲದಲ್ಲಿ ಕಿಷ್ಕಿಂದೆ ಎಂದು ಉಲ್ಲೇಖಿತವಾಗಿರುವ ಕೆಲವು ಭೌಗೋಳಿಕ ಲಕ್ಷಣಗಳನ್ನು ಆಧಾರಿತ ಶ್ರೀರಾಮನು ವನವಾಸ ಸಂದರ್ಭದಲ್ಲಿ ಸೀತೆಯನ್ನು ಹುಡುಕುತ್ತಾ ವಾನರರಾದ ಸುಗ್ರೀವ ಮತ್ತು ಹನುಮನ ಸ್ಥಳವೆಂತಲೂ ಪ್ರಸಿದ್ಧಿಯಾಗಿತ್ತು. ಮಹಾಕಾವ್ಯಗಳಲ್ಲಿ ಹೇಳಿರುವ ಹೇಮಕೂಟ, ಮಾಲ್ಯವಂತ, ಮಾತಂಗ, ಋಷ್ಯಮುಖ ಮತ್ತು ಕಿಷ್ಕಿಂದೆ ಎಂಬ ಐದು ಪರ್ವತಗಳು ಮತ್ತು ಪಂಪಾ ಸರೋವರ, ಶಬರಿ ಆಶ್ರಮ, ಆಂಜನೇಯ ಜನ್ಮಸ್ಥಳಗಳು ಇಂದಿನ ಹಂಪೆಯ ಪ್ರದೇಶದಲ್ಲಿ ಕಾಣಸಿಗುತ್ತವೆ. ಪುರಾಣಕ್ಕೆ ಸಂಬಂಧಪಟ್ಟ ಅನೇಕ ಐತಿಹ್ಯಗಳು ಬಳ್ಳಾರಿಯ ಹಂಪೆ ಪ್ರದೇಶದಲ್ಲಿ ಕಾಣಬಹುದಾಗಿದೆ.

**೨.೨. ಇತಿಹಾಸ ಕಾಲ**

ಇತಿಹಾಸ ಕಾಲ ಆರಂಭದ ಸಂಕೇತವಾಗಿರುವ ನಂದರ ಮತ್ತು ಮೌರ್ಯರ ರಾಜವಂಶಗಳಲ್ಲಿ ದಕ್ಷಿಣ ಭಾರತದಲ್ಲಿ ನಂದರು ನೇರ ಆಳ್ವಿಕೆ ನಡೆಸಿದ್ದರ ಬಗ್ಗೆ ಮಾಹಿತಿ ಇಲ್ಲ. ಬಳ್ಳಾರಿ ಪ್ರದೇಶದಲ್ಲೂ ಇದಕ್ಕೆ ಪೂರಕವಾಗುವ ಪ್ರಾಕ್ತನಾಧಾರಗಳು ಪತ್ತೆಯಾಗಿಲ್ಲ. ಮೌರ್ಯರ ಕುರಿತಂತೆ ಈ ರೀತಿಯ ಅನುಮಾನದ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಬಳ್ಳಾರಿ ಪ್ರದೇಶವನ್ನು ಮೊದಲು ಆಳ್ವಿಕೆ ನಡೆಸಿದ ರಾಜವಂಶಗಳೆಂದರೆ ಮೌರ್ಯರು ಮತ್ತು ಗುಪ್ತರು.[೮] ಇದನ್ನು ಕೋಳೂರಿನ ಕ್ರಿ.ಶ. ೧೧೪೭ರ ಶಾಸನ ತಿಳಿಸುತ್ತದೆ.[೯] ಮೌರ್ಯರ ದೊರೆ ಅಶೋಕನ ಎರಡು ಶಾಸನಗಳು ಬಳ್ಳಾರಿ ಪ್ರದೇಶದಲ್ಲಿ ದೊರಕಿವೆ. ಅವುಗಳೆಂದರೆ ನಿಟ್ಟೂರು ಮತ್ತು ಉದಯಗೊಳ್ಳಂ. ನಂದ ಮತ್ತು ಮೌರ್ಯರಿಗಿಂತ ಮೊದಲು ದಕ್ಷಿಣ ಭಾರತದಲ್ಲಿ ಪಾಂಡ್ಯ ಮತ್ತು ಚೋಳರು ಆಳ್ವಿಕೆ ನಡೆಸಿದ್ದಾರೆ. ಆದರೆ ಬಳ್ಳಾರಿ ಪ್ರದೇಶ ಅವರ ಆಳ್ವಿಕೆಗೆ ಒಳಪಟ್ಟಿದೆಯೇ ಅಥವಾ ಇಲ್ಲವೇ ಎಂಬುದರ ಬಗೆಗೆ ನಮಗೆ ಸ್ಪಷ್ಟವಾದ ಮಾಹಿತಿಗಳು ವಿರಳ.

ಮೌರ್ಯರ ಸಮಕಾಲೀನರಾದ ಶಾತವಾಹನರು ಕ್ರಿ.ಪೂ. ೨೩೦ ರಿಂದ ಕ್ರಿ.ಶ.೨೩೦ರವರೆಗೆ ಆಳ್ವಿಕೆ ನಡೆಸಿದರು. ಬಳ್ಳಾರಿ ಪ್ರದೇಶ ಶಾತವಾಹನರ ಆಡಳಿತದ ಒಂದು ಪ್ರಾಂತ್ಯವಾಗಿತ್ತು. ಶಾಸನಗಳಲ್ಲಿ ಶಾತವಾಹನರನ್ನು ಕುಂತಳ ಸ್ವಾಮಿಗಳೆಂದು ಕರೆಯಲಾಗಿದೆ.[೧೦] ಕರ್ನಾಟಕದ ಮೊದಲ ರಾಜವಂಶವೆಂದು ಖ್ಯಾತಿ ಪಡೆದ ಕದಂಬರು ಬಳ್ಳಾರಿ ಪ್ರದೇಶದಲ್ಲಿ ಆಳ್ವಿಕೆಯನ್ನು ನಡೆಸಿದರು. ಕದಂಬರು ಉಚ್ಚಂಗಿದುರ್ಗವನ್ನು ತಮ್ಮ ರಾಜ್ಯದ ಪೂರ್ವರಾಜಧಾನಿಯನ್ನಾಗಿ ಮಾಡಿಕೊಂಡರು.[೧೧] ಕದಂಬರ ನಂತರ ಆಳ್ವಿಕೆಗೆ ಬಂದವರು ಬಾದಾಮಿ ಚಾಲುಕ್ಯರು. ಬಾದಾಮಿ ಚಾಲುಕ್ಯರಿಗಿಂತ ಮೊದಲು ಬಳ್ಳಾರಿ ಪ್ರದೇಶದಲ್ಲಿ ನೊಳಂಬರು ಆಳ್ವಿಕೆ ನಡೆಸುತ್ತಿದ್ದರು. ಚಾಲುಕ್ಯರು ನೊಳಂಬರನ್ನು ಸೋಲಿಸಿ ಸಾಮಂತರನ್ನಾಗಿ ಮಾಡಿಕೊಂಡರು. ಇದರಿಂದ ಬಳ್ಳಾರಿ ಪ್ರದೇಶವು ಬಾದಾಮಿ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿತು. ಚಾಲುಕ್ಯರನ್ನು ಅಧಿಕಾರದಿಂದ ಮೂಲೆಗೊತ್ತಿ ಸಿಂಹಾಸನಕ್ಕೆ ಬಂದವರು ರಾಷ್ಟ್ರಕೂಟರು. ಬಾದಾಮಿ ಚಾಲುಕ್ಯರ ಸಾಮಂತರಾಗಿದ್ದ ನೊಳಂಬರು ನಂತರ ರಾಷ್ಟ್ರಕೂಟರ ಸಾಮಂತರಾಗಿ ಬಳ್ಳಾರಿ ಪ್ರದೇಶದಲ್ಲಿ ಮುಂದುವರೆದರು. ಇದರಿಂದ ಬಳ್ಳಾರಿ ಪ್ರದೇಶವು ರಾಷ್ಟ್ರಕೂಟರ ಆಳ್ವಿಕೆಗೆ ಒಳಪಟ್ಟಿತು. ಗಂಗರು ರಾಷ್ಟ್ರಕೂಟರ

ಸಾಮಂತರಾಗಿ ಬಳ್ಳಾರಿ ಪ್ರದೇಶ(ನೊಳಂಬರವಾಡಿ)ದಲ್ಲಿ ಆಳ್ವಿಕೆ ನಡೆಸಿದರು. ಕ್ರಿ.ಶ.೯೭೩ರಲ್ಲಿ ಎರಡನೇ ತೈಲಪನು ರಾಷ್ಟ್ರಕೂಟರನ್ನು ಅಧಿಕಾರದಿಂದ ತೆಗೆದುಹಾಕಿ ಕಲ್ಯಾಣ ಚಾಲುಕ್ಯರ ಮನೆತನವನ್ನು ಸ್ಥಾಪಿಸಿದರು. ಗಂಗರ ಸಾಮಂತ ದೊರೆ ಪಾಂಚಾಲದೇವನನ್ನು ಸೋಲಿಸಿದ ಚಾಲುಕ್ಯರು ಬಳ್ಳಾರಿ ಪ್ರದೇಶವನ್ನು ತಮ್ಮ ಆಡಳಿತಕ್ಕೆ ಒಳಪಡಿಸಿಕೊಂಡರು. ಈ ಸಮಯದಲ್ಲಿ ದಕ್ಷಿಣದ ಚೋಳರು ಪ್ರಬಲರಾಗಿ ಬಳ್ಳಾರಿ (ನೊಳಂಬವಾಡಿ) ಪ್ರದೇಶವನ್ನು ಜಯಿಸಲು ಪ್ರಯತ್ನಿಸಿದರು. ಆದ್ದರಿಂದ ಕಲ್ಯಾಣ ಚಾಲುಕ್ಯ ಮತ್ತು ಚೋಳರ ಕಾಲದಲ್ಲಿ ಬಳ್ಳಾರಿ ಪ್ರದೇಶವು ಎರಡು ಅರಸು ಮನೆತನಗಳ ವಿವಾದದ ಕೇಂದ್ರ ಬಿಂದುವಾಗಿತ್ತು.[೨೨] ಚಾಲುಕ್ಯ ಮತ್ತು ಚೋಳರ ನಡುವೆ ನಡೆದ ಯುದ್ಧದಲ್ಲಿ ಕೊನೆಗೆ ಕಲ್ಯಾಣ ಚಾಲುಕ್ಯರೇ ಮೇಲುಗೈ ಸಾಧಿಸಿದರು. ಚಿತ್ರದುರ್ಗ, ತುಮಕೂರು, ಬಳ್ಳಾರಿ, ಅನಂತಪುರ ಜಿಲ್ಲೆ ಮತ್ತು ಕೋಲಾರ ಜಿಲ್ಲೆಯ ಕೆಲವು ಪ್ರದೇಶಗಳನ್ನು ಒಟ್ಟಾರೆಯಾಗಿ 'ನೊಳಂಬವಾಡಿ' ಎಂದು ಕರೆಯಲಾಗುತ್ತಿತ್ತು. ಈ ಪ್ರಾಂತ್ಯವನ್ನು ಉಚ್ಚಂಗಿ ಪಾಂಡ್ಯರು ಕಲ್ಯಾಣ ಚಾಲುಕ್ಯರ ಸಾಮಂತರಾಗಿ ಆಳ್ವಿಕೆ ನಡೆಸಿದರು. ಪಾಂಡ್ಯರಿಗಿಂತ ಮೊದಲು ನೊಳಂಬವಾಡಿಯಲ್ಲಿ ನೊಳಂಬರು ಆಳ್ವಿಕೆ ನಡೆಸುತ್ತಿದ್ದರು.[೨೩]

ಕಲ್ಯಾಣ ಚಾಲುಕ್ಯರ ನಂತರ ಕಳಚೂರಿಗಳು ಅಧಿಕಾರಕ್ಕೆ ಬಂದರು. ಕಳಚೂರಿ ದೊರೆ ಬಿಜ್ಜಳನು ಉಚ್ಚಂಗಿ ಪಾಂಡ್ಯರನ್ನು ಸೋಲಿಸಿ ನೊಳಂಬವಾಡಿ ಪ್ರದೇಶವನ್ನು ತನ್ನ ಆಳ್ವಿಕೆಗೆ ಒಳಪಡಿಸಿಕೊಂಡರು. ರಾಜವೀರಪಾಂಡ್ಯನು ನೊಳಂಬವಾಡಿಯನ್ನು ಕಳಚೂರಿ ಅರಸ ಬಿಜ್ಜಳನ ಸಾಮಂತನಾಗಿ ಆಳುವ ಮೂಲಕ ಪಾಂಡ್ಯರೂ ಬಳ್ಳಾರಿ ಪ್ರದೇಶವನ್ನು ಆಳ್ವಿಕೆ ನಡೆಸಿದ್ದು ಸ್ಪಷ್ಟವಾಗುತ್ತದೆ. ಕುರುಗೋಡಿನ ಶಾಸನವೊಂದರಲ್ಲಿ ನಾಲ್ಕನೆ ಸೋಮೇಶ್ವರನು ಮತ್ತು ನಂತರ ಸಿಂಧವಾಡಿ ರಾಚಮಲ್ಲನು ಕುರುಗೋಡನ್ನು ಆಳ್ವಿಕೆ ನಡೆಸಿದ ಕುರಿತು ಉಲ್ಲೇಖವಿದೆ.

**೨.೩. ಮಧ್ಯಕಾಲ**

ಮಧ್ಯಕಾಲೀನ ಇತಿಹಾಸದಲ್ಲಿ ಕರ್ನಾಟಕದ ಆರಂಭಿಕ ರಾಜವಂಶವಾಗಿ ಕಂಡುಬರುವ ಹೊಯ್ಸಳರು ತಮ್ಮ ಸಾಮ್ರಾಜ್ಯವನ್ನು ಉತ್ತರದಲ್ಲಿ ಬಳ್ಳಾರಿಯವರೆಗೆ ವಿಸ್ತರಿಸಿದ್ದರು. ದ್ವಾರಸಮುದ್ರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಹೊಯ್ಸಳರು ಅಧಿಕಾರಕ್ಕೆ ಬಂದರು. ಇವರು ಕಲ್ಯಾಣ ಚಾಲುಕ್ಯರೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸಿಕೊಂಡಿದ್ದರು.[೨೪] ಬಿಟ್ಟಿದೇವ ಖ್ಯಾತಿಯ ವಿಷ್ಣುವರ್ಧನನು ತುಂಗಭದ್ರಾ ಪ್ರದೇಶದವರೆಗೆ ದಾಳಿ ನಡೆಸಿ ಕಂಪಿಲ, ಬಳ್ಳಾರಿ, ರಾಯಚೂರು ಕೋಟೆಗಳನ್ನು ಸಾಮ್ರಾಜ್ಯದ ಉತ್ತರ ಗಡಿಯಾಗಿಸಿಕೊಂಡಿದ್ದನು. ವೀರಬಲ್ಲಾಳನ ಅವಧಿಯಲ್ಲಿ ಸ್ವತಂತ್ರಗೊಂಡ ಹೊಯ್ಸಳರು ಉಚ್ಚಂಗಿದುರ್ಗವನ್ನು ವಶಪಡಿಸಿಕೊಂಡು ಉತ್ತರ ಪ್ರಾಂತ್ಯದ ಪ್ರಮುಖ ಪಟ್ಟಣವಾಗಿ ಮಾಡಿಕೊಂಡು ರಾಜ್ಯವಾಳಿದ್ದು ಗೊತ್ತಾಗುತ್ತದೆ. ಜಿಲ್ಲೆಯ ಕುರುಗೋಡು ಮತ್ತು ಕಂಪಿಲಿಗಳಲ್ಲಿ ದೊರೆತ ಶಾಸನಗಳಲ್ಲಿ ವೀರಬಲ್ಲಾಳನು ಸ್ವಾಮಿ ಕಾರ್ತಿಕೇಯ ತಪೋವನಕ್ಕೆ ದತ್ತಿಯನ್ನು ಕೊಟ್ಟಿದ್ದರ ಬಗ್ಗೆ ಉಲ್ಲೇಖವಿದೆ. ಹೂವಿನಹಡಗಲಿ, ದಾವಣಗೆರೆಯನ್ನು ಒಳಗೊಂಡ ಕೋಗಳಿ ಪ್ರಾಂತ್ಯವು ಕೆಲ ಅವಧಿಗೆ ಗೆದ್ದಂತಹ ಸೇವುಣರ ರಾಜ್ಯದ ಭಾಗವಾಗಿದ್ದಿತು. ೨ನೇ ಬಲ್ಲಾಳನು ನಂತರ ನೊಳಂಬವಾಡಿಯನ್ನು ವಶಪಡಿಸಿಕೊಂಡನು. ಸೇವುಣರು ಸಹಿತ ಹೊಯ್ಸಳರ ಕೆಲವು ಪ್ರದೇಶಗಳನ್ನು ವಶಪಡಿಸಿಕೊಂಡು ಬಳ್ಳಾರಿ ಪ್ರದೇಶ ಆಳ್ವಿಕೆ ನಡೆಸಿದರು.[೨೫]

ಕ್ರಿ.ಶ. ೧೨೮೦ರ ವೇಳೆಗೆ ಮುಮ್ಮಡಿ ಸಿಂಗೆನಾಯಕನು ದರೋಜಿ, ಬಳ್ಳಾರಿ ಮತ್ತು ಕಂಪಿಲ ಪ್ರದೇಶಗಳನ್ನು ಗೆದ್ದು ಕುಮ್ಮಟದುರ್ಗವನ್ನು ಹಿಡಿದನು. ನಂತರ ಕುಮ್ಮಟದುರ್ಗವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದನು. ಈತನು ನಿರಂತರವಾಗಿ ಹೊಯ್ಸಳ ಮತ್ತು ಸೇವುಣರ ದಾಳಿಗಳನ್ನು ಎದುರಿಸಬೇಕಾಯಿತು. ೧೩ನೇ ಶತಮಾನದ ಕೊನೆಯಲ್ಲಿ ಆರಂಭವಾದ ದೆಹಲಿ ಸುಲ್ತಾನರ ದಾಳಿಯನ್ನು ಎದುರಿಸುವಲ್ಲಿ ವಿಫಲನಾದನು. ಈ ಪ್ರದೇಶವನ್ನು ಸುಲ್ತಾನ ಸೇನಾನಿ ಮಲ್ಲಿಕ್ ಜಾನು ಜಯಿಸಿದನು. ಇಲ್ಲಿ ಜನಪದದಲ್ಲಿ ಸಿಂಗೆನಾಯಕನ ಅನೇಕ ಕಥೆಗಳು ಮತ್ತು ಐತಿಹ್ಯಗಳು ಪ್ರಚಲಿತದಲ್ಲಿವೆ.[೧೬]

ದೆಹಲಿ ಸುಲ್ತಾನರ ದಾಳಿಗೆ ತುತ್ತಾದ ದಕ್ಷಿಣ ಭಾರತ ನಂತರ ಮಲ್ಲಿಕ್ ಕಾಫರನ ದಾಳಿಗೆ ಸಿಕ್ಕಿ ನಲುಗಿತು. ನಂತರ ದಕ್ಷಿಣ ಭಾರತದ ಆಡಳಿತದಲ್ಲಿ ಸ್ಥಿರತೆಯನ್ನು ತರಲು ಶಾಂತಿ ಸ್ಥಾಪಿಸಲು ಕ್ರಿ.ಶ. ೧೩೩೬ರವರೆಗೆ ಕಾಯಬೇಕಾಯಿತು.

ಕ್ರಿ.ಶ. ೧೩೩೬ರ ವೇಳೆಗೆ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಯಿತು. ಬಳ್ಳಾರಿಯ ಪ್ರಾಚೀನ ಧಾರ್ಮಿಕ ಕೇಂದ್ರವಾದ ಚಂಪಾಕ್ಷೇತ್ರ ಅಥವಾ ಪಂಪಾಕ್ಷೇತ್ರ (ಇಂದಿನ ಹಂಪಿ)ಯು ಇವರ ರಾಜಧಾನಿಯಾಗಿದ್ದಿತು. ಸಂಗಮ, ಸಾಳುವ, ತುಳುವ ಮತ್ತು ಅರವೀಡು ರಾಜವಂಶಗಳು ಕ್ರಮವಾಗಿ ವಿಜಯನಗರ ಸಾಮ್ರಾಜ್ಯವನ್ನು ಸುಮಾರು ಎರಡು ಶತಮಾನಕ್ಕೂ ಹೆಚ್ಚು ಅವಧಿಗೆ ಮುನ್ನಡೆಸಿಕೊಂಡು ಬಂದವು. ಇವರೆಲ್ಲರ ಪರಿಶ್ರಮದ ಫಲವಾಗಿ ವಿಜಯನಗರ ಸಾಮ್ರಾಜ್ಯವು ಅತ್ಯಂತ ಹೆಚ್ಚಿನ ಭೂ ಪ್ರದೇಶಗಳನ್ನು ಹೊಂದುವಂತಾಯಿತು.[೧೭]

ಸಂಗಮನ ಮಕ್ಕಳಾದ ಮೊದಲನೆ ಹರಿಹರ-ಬುಕ್ಕರಿಂದ ಸ್ಥಾಪಿತವಾದ ಸಾಮ್ರಾಜ್ಯವು ಸಂಗಮ ವಂಶವಾಗಿ ಗುರುತಿಸಿಕೊಂಡಿತು. ಈ ವಂಶಜರು ವಿಜಯನಗರ ರಾಜ್ಯದಲ್ಲಿ ಐಕ್ಯತೆ ತಂದು ರಾಜ್ಯಬಲವನ್ನು ವೃದ್ಧಿಸಿದರು. ಶ್ರೀ ವಿದ್ಯಾರಣ್ಯರು ಇವರ ಆದ್ಯ ಗುರುವಾಗಿದ್ದರು. ಸುಮಾರು ನೂರಾ ಐವತ್ತು ವರ್ಷಗಳ ನಂತರ ಸಂಗಮ ವಂಶವು ಅಂತ್ಯವಾಗಿ ಸಾಳುವ ನರಸಿಂಹನಿಂದ ಕ್ರಿ.ಶ.೧೪೮೫ರಲ್ಲಿ ಸಾಳುವ ವಂಶವು ಅಧಿಕಾರಕ್ಕೆ ಬಂದಿತು. ದುರ್ಬಲ ಅರಸರ ಕಾರಣ ಬಹುಕಾಲ ಆಳ್ವಿಕೆ ನಡೆಸುವಲ್ಲಿ ಈ ವಂಶವು ವಿಫಲವಾಯಿತು. ಈ ದುರ್ಬಲತೆಯ ಉಪಯೋಗ ಪಡೆದ ತುಳುವ ನರಸನಾಯಕ ಕ್ರಿ.ಶ.೧೪೯೧ರಲ್ಲಿ ತುಳುವ ವಂಶವನ್ನು ವಿಜಯನಗರ ಸಾಮ್ರಾಜ್ಯದಲ್ಲಿ ಅಧಿಕಾರಕ್ಕೆ ತಂದನು. ಈ ವಂಶದ ಮೂರನೇ ಅರಸನಾಗಿ ೧೫೦೯ರಲ್ಲಿ ಪಟ್ಟವೇರಿದ ಶ್ರೀಕೃಷ್ಣದೇವರಾಯನು ಇಡಿಯಾಗಿ ಈ ಸಾಮ್ರಾಜ್ಯದ ಆಳ್ವಿಕೆದಾರರಲ್ಲೇ ಪ್ರಖ್ಯಾತ. ಅನೇಕ ರಾಜಕೀಯ ಸ್ಥಿತ್ಯಂತರಗಳ ಮಧ್ಯೆಯೂ ಕೃಷ್ಣದೇವರಾಯನು ಶಾಂತಿ-ಸೌಹಾರ್ದತೆ ಕಾಯುವಲ್ಲಿ ಸಫಲನಾದನು. ಯುರೋಪಿಯನ್ನರ ಆಗಮನವಾಗಿ ಗೋವಾದಲ್ಲಿ ಪೋರ್ಚುಗೀಸರು ನೆಲೆಯೂರಲು ಸಹಾಯ ಹಸ್ತ ನೀಡಿದನು. ಈ ರಾಜತಾಂತ್ರಿಕ ಸಂಬಂಧವನ್ನು ಸುಧಾರಿಸಲು ಕ್ರೈಸ್ತ ಪಾದ್ರಿಗಳನ್ನು ಕೃಷ್ಣದೇವರಾಯನ ಆಸ್ಥಾನಕ್ಕೆ ರಾಯಭಾರಿಗಳನ್ನಾಗಿ ಕಳುಹಿಸಲಾಯಿತು. ಇವರನ್ನು ಆದರದಿಂದ ಬರಮಾಡಿಕೊಂಡು ಸಾಮ್ರಾಜ್ಯದಲ್ಲಿ ಕ್ರೈಸ್ತರು ನೆಲೆಸಲು ಅನುಮತಿಸಿದನು.[೧೮]

ಕೃಷ್ಣದೇವರಾಯನಿಗೂ ಪೂರ್ವದಲ್ಲಿ ವಿಜಯನಗರ ಆಸ್ಥಾನದಲ್ಲಿ ನಿಮಹ್‌ಪೆಜಿರ್ ಎಂಬ ಕ್ರೈಸ್ತ ಧರ್ಮೀಯನು ದಿವಾನನಾಗಿದ್ದನು ಎಂದು ಅಜಿದ್-ಬೆರೆ ರಜಾಕ್ ಎಂಬ ಪ್ರವಾಸಿಗನಿಂದ ತಿಳಿದುಬರುತ್ತದೆ.

ಸಮಕಾಲೀನ ಪ್ರವಾಸಿಗರಾದ ಬರ್ಬೋಸ್, ಡೋಮಿಂಗೋ ಫಯಸ್‌ರು ನೀಡಿರುವ ಲಿಖಿತ ದಾಖಲೆಗಳಿಂದ ವಿಜಯನಗರ ಸೈನ್ಯದಲ್ಲಿ ಇದ್ದ ಒಂದು ಸಾವಿರ ಸೈನಿಕರು ಕ್ರೈಸ್ತ ಧರ್ಮೀಯರಾಗಿದ್ದರು. ಇವರೆಲ್ಲರ ಧರ್ಮಾಚರಣೆಗೆ ಅನುಕೂಲವಾಗಲೆಂದು ಚರ್ಚ್ ನಿರ್ಮಿಸಿಕೊಳ್ಳಲು ಅನುಮತಿಸಿದನು. ದಕ್ಷಿಣ ಭಾರತವನ್ನೆಲ್ಲಾ ಆಕ್ರಮಿಸಿದ್ದು ಕೃಷ್ಣದೇವರಾಯನ ಅವಧಿಯಲ್ಲಿ. ಹೆಚ್ಚಿನ ಸಂಖ್ಯೆಯ ಕ್ರೈಸ್ತರು ಗೋವಾ ಮೂಲಕ ಕರ್ನಾಟಕದ ನಾನಾ ಕ್ರೈಸ್ತ ಪರ ಭಾಗಗಳಿಗೆ ಹರಡಿದರು. ಕ್ರಿ.ಶ. ೧೫೨೯ರಲ್ಲಿ ಕೃಷ್ಣದೇವರಾಯ ಕಾಲವಾಗಿ ಅಚ್ಯುತರಾಯನ ನಂತರ ಸದಾಶಿವರಾಯನು ಅಧಿಕಾರಕ್ಕೆ ಬಂದರು. ಸದಾಶಿವರಾಯನು ಹೆಸರಿಗೆ ಮಾತ್ರ ಅರಸನಾಗಿದ್ದನು. ರಾಜ್ಯದ ಆಡಳಿತ ಸೂತ್ರವು ಅಳಿಯ ರಾಮರಾಯನ ಕೈಯಲ್ಲಿದ್ದಿತು. ಉತ್ತರ ಕರ್ನಾಟಕ ಮುಸ್ಲಿಂ ಆಳ್ವಿಕೆದಾರರಿಗೆ ಕಂಟಕನಾದ ರಾಮರಾಯನ ಮೇಲೆ ಐದು ರಾಜವಂಶಗಳಿಂದ ಕೂಡಿದ ಮುಸ್ಲಿಂ ಒಕ್ಕೂಟವು ದಾಳಿ ಮಾಡಿತು. ಇವರ ವಿರುದ್ಧ ಏಕಮಾತ್ರನಾಗಿ ಬಂದ ರಾಮರಾಯನ ಸೈನ್ಯವು ರಕ್ಕಸ ಮತ್ತು ತಂಗಡಿ ಗ್ರಾಮಗಳಲ್ಲಿ ಎದುರಾಗಿ ಸತತ ಒಂದು ತಿಂಗಳು ನಡೆದ ಕ್ರಿ.ಶ. ೧೫೬೫ ಘೋರ ಯುದ್ಧದಲ್ಲಿ ರಾಮರಾಯನು ಯುದ್ಧ ಭೂಮಿಯಲ್ಲೇ ಕೊಲೆಯಾದನು. ಇದರೊಂದಿಗೆ ವಿಜಯನಗರ ಸಾಮ್ರಾಜ್ಯದ ತುಳುವ ವಂಶವು ಅಂತ್ಯವಾಗಿ ಹಂಪಿ ಪ್ರಾಂತ್ಯವೆಲ್ಲಾ ಲೂಟಿಗೆ ಒಳಗಾಯಿತು. ಅರವೀಡು ವಂಶವು ಪೆನುಗೊಂಡೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮುಂದುವರೆಸಿತು.

ನಂತರ ಬಳ್ಳಾರಿ ಪ್ರದೇಶದಲ್ಲಿ ಅನೇಕ ಪಾಳೇಗಾರರು ತಲೆ ಎತ್ತಿದರು. ಅವರಲ್ಲಿ ಮುಖ್ಯವಾಗಿ ಬಳ್ಳಾರಿಯ ಭಾಗದ ಹನುಮಪ್ಪ ನಾಯಕ ವಿಜಯನಗರ ಪತನದ ನಂತರ ಸ್ವತಂತ್ರ್ಯ ಪಾಳೇಗಾರನಾದನು. ನಂತರ ಬಿಜಾಪುರದ ಆದಿಲ್‌ಷಾಹನಿಗೆ ಸಾಮಂತನಾದನು. ಕ್ರಿ.ಶ. ೧೬೭೭-೭೮ರ ಹೊತ್ತಿಗೆ ಬಳ್ಳಾರಿ ಕೋಟೆ ಶಿವಾಜಿಯ ವಶವಾಯಿತು. ಕ್ರಿ.ಶ. ೧೬೮೭ರಲ್ಲಿ ಬಳ್ಳಾರಿ ಪ್ರದೇಶ ಔರಂಗಜೇಬನ ಆಳ್ವಿಕೆಗೆ ಒಳಪಟ್ಟಿತು. ಕ್ರಿ.ಶ. ೧೭೬೨ರ ಹೊತ್ತಿಗೆ ಬಳ್ಳಾರಿ ಕೋಟೆ ಹೈದರಾಲಿಯ ವಶವಾಯಿತು. ಬಳ್ಳಾರಿ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ಕೆಲವಾರು ಪಾಳೇಗಾರರಲ್ಲಿ ಮುಖ್ಯರಾದವರು ಹರಪನಹಳ್ಳಿ ಪಾಳೇಗಾರು, ಗುಡೇಕೋಟೆ ಪಾಳೇಗಾರರು ಮತ್ತು ಜರಿಮಲೆ ಪಾಳೇಗಾರರು. ಬಳ್ಳಾರಿ ಪ್ರದೇಶದಲ್ಲಿ ಹರಪನಹಳ್ಳಿ ಪಾಳೇಗಾರರು ಹೆಚ್ಚು ಪ್ರಬಲರಾಗಿದ್ದರು. ದಾದಾನಾಯಕನೆಂಬುವನು ೧೫೬೫ರಲ್ಲಿ ರಾಜ್ಯವನ್ನು ಸ್ಥಾಪಿಸಿದನು. ಹರಪನಹಳ್ಳಿಯನ್ನು ಒಟ್ಟು ೧೫ ಅರಸರು ಆಳ್ವಿಕೆ ನಡೆಸಿದರು. ಇವರಲ್ಲಿ ಪ್ರಥಮ ಸೋಮಶೇಖರ ನಾಯಕ ಪ್ರಸಿದ್ಧ ಅರಸನಾಗಿದ್ದನು. ಕೊನೆಗೆ ಟಿಪ್ಪು ಹರಪನಹಳ್ಳಿ ಪಾಳೇಗಾರರನ್ನು ಸೋಲಿಸಿ ಬಂಧನದಲ್ಲಿಟ್ಟನು.[೯] ಗುಡೇಕೋಟೆ ಪಾಳೇಗಾರರ ಸಂಸ್ಥಾನ ೧೬ನೇ ಶತಮಾನದಲ್ಲಿ ಸ್ಥಾಪನೆಯಾಯಿತು. ಚಿತ್ರದುರ್ಗದ ಅರಸು ಮನೆತನಗಳೊಂದಿಗೆ ಸಂಬಂಧವಿಟ್ಟುಕೊಂಡಿದ್ದರು. ಕ್ರಿ.ಶ. ೧೭೭೭ರಲ್ಲಿ ಹೈದರಾಲಿ ಈ ಪ್ರದೇಶವನ್ನು ಮೈಸೂರು ಅರಸು ಮನೆತನಕ್ಕೆ ಸೇರಿಸಿದನು.[೧೦] ಪೆನ್ನಪ್ಪನೆಂಬುವನು ಜರ್ಮಲಿ ಪಾಳೇಪಟ್ಟನ್ನು ಸ್ಥಾಪಿಸಿದನು. ಜರ್ಮಲಿ ಪಾಳೇಗಾರರು ಹರಪನಹಳ್ಳಿ ಮತ್ತು ಚಿತ್ರದುರ್ಗ ಪಾಳೇಗಾರರ ದಾಳಿಯನ್ನು ಎದುರಿಸಬೇಕಾಯಿತು. ನಂತರ ಮರಾಠರ ಅಧೀನಕ್ಕೆ ಒಳಗಾಯಿತು. ಇನ್ನೊಂದು ಕಡೆಯಲ್ಲಿ ಬಳ್ಳಾರಿಯ ಪ್ರಮುಖ ಪ್ರದೇಶಗಳನ್ನು ಹೈದರಾಲಿ ಮತ್ತು ಟಿಪ್ಪುಸುಲ್ತಾನರು ವಶಪಡಿಸಿಕೊಂಡರು. ನಂತರ ಬಳ್ಳಾರಿ ಪ್ರದೇಶ ಆಂಗ್ಲ

ವಶವಾಗಲಾಗಿ ಬ್ರಿಟೀಷರ ಆಳ್ವಿಕೆಗೆ ಒಳಪಟ್ಟಿತು. ಶಿದ್ದೋಜಿರಾವ್ ಘೋರ್ಪಡೆಯವರಿಂದ ಸ್ಥಾಪನೆಯಾದ ಸಂಡೂರು ಪಾಳೇಗಾರಿಕೆಯು ಕ್ರಿ.ಶ. ೧೮೧೮ರಲ್ಲಿ ಆಂಗ್ಲರೊಂದಿಗೆ ಒಪ್ಪಂದ ಮಾಡಿಕೊಂಡು ಮದ್ರಾಸ್ ಸರ್ಕಾರದ ರಕ್ಷಣೆಯಲ್ಲಿ ೧೯೪೭ರವರೆಗೆ ಘೋರ್ಪಡೆ ವಂಶ ಆಳ್ವಿಕೆ ನಡೆಸಿತು. ಕ್ರಿ.ಶ. ೧೭೯೯ರ ನಾಲ್ಕನೇ ಮೈಸೂರು ಯುದ್ಧದಲ್ಲಿ ಟಿಪ್ಪು ಮರಣ ಹೊಂದಿದ ನಂತರ ಆಂಗ್ಲ ಮೈಸೂರು ರಾಜ್ಯವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿದರು. ಅದರಲ್ಲಿ ಬಳ್ಳಾರಿಯ ಕೆಲವು ಪ್ರದೇಶಗಳನ್ನು ಹೈದರಾಬಾದಿನ ನಿಜಾಮನಿಗೆ ನೀಡಲಾಯಿತು. ಕ್ರಿ.ಶ. ೧೮೦೦ರಲ್ಲಿ ಆಂಗ್ಲರು ಮತ್ತು ನಿಜಾಮನ ನಡುವೆ ಒಪ್ಪಂದವಾಗಿ ಬಳ್ಳಾರಿ ಪ್ರದೇಶವು ಆಂಗ್ಲರ ಕೈ ಸೇರಿತು.[illegible] ಹೀಗೆ ಮಧ್ಯಕಾಲೀನ ಸಂದರ್ಭದಲ್ಲಿ, ಬಳ್ಳಾರಿ ಜಿಲ್ಲೆ ಅನೇಕ ಆಳರಸರ ಆಡಳಿತಕ್ಕೆ ಒಳಪಟ್ಟಿತು.

**೨.೪. ವಸಾಹತುಕಾಲ**

ಕ್ರಿ.ಶ. ೧೭೯೯ ನಂತರ ಬಳ್ಳಾರಿ ಪ್ರದೇಶದಲ್ಲಿ ಮೈಸೂರು ಅರಸರ ಆಳ್ವಿಕೆ ಕೊನೆಗೊಂಡು ಆಂಗ್ಲರ ಆಳ್ವಿಕೆ ಪ್ರಾರಂಭವಾಯಿತು. ೧೭೯೯ರ ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಟಿಪ್ಪು ಸುಲ್ತಾನನು ಹತನಾದನು. ಮೈಸೂರನ್ನು ವಶಪಡಿಸಿಕೊಂಡ ಆಂಗ್ಲ ನೇತೃತ್ವದ ಒಕ್ಕೂಟ ಪಡೆಯು ವಿಜಯದ ನಂತರ ಮೈಸೂರು ರಾಜ್ಯವನ್ನು ನಾಲ್ಕು ಭಾಗಗಳಾಗಿ ಹಂಚಿದರು. ಇದರಲ್ಲಿ ಬಳ್ಳಾರಿ ಭಾಗವನ್ನು ಹೈದರಾಬಾದ್ ನಿಜಾಮನ ಸಾಮ್ರಾಜ್ಯಕ್ಕೆ ಸೇರಿಸಲಾಯಿತು. ಈ ಮೊದಲಿನ ಸಹಾಯಕ ಸೈನ್ಯ ಪದ್ಧತಿಯ ನಿಯಮದ ಪ್ರಕಾರ ಹೈದರಾಬಾದ್ ನಿಜಾಮನು ಆಂಗ್ಲರಿಗೆ ನೀಡಬೇಕಾಗಿದ್ದ ಮೊತ್ತವು ಅಪಾರವಾಗಿ ಬೆಳೆದಿತ್ತು. ಇದನ್ನು ನೀಡಲಾಗದ ನಿಜಾಮನು ತನ್ನ ಸಾಮ್ರಾಜ್ಯದ ದಕ್ಷಿಣ ಪ್ರದೇಶಗಳಾದ ಬಳ್ಳಾರಿ. (ಸಂಡೂರು ಹೊರತು) ಕಡಪ ಮತ್ತು ಕರ್ನೂಲಗಳನ್ನು ಆಂಗ್ಲರಿಗೆ ಒಪ್ಪಿಸಲು (Cede) ನಿರ್ಧರಿಸಿದನು. ಕ್ರಿ.ಶ. ೧೮೦೦ರ ಅಕ್ಟೋಬರ್ ೧೨ರಂದು ಅಧಿಕೃತವಾಗಿ ಈ ಪ್ರದೇಶಗಳನ್ನು ಬ್ರಿಟಿಷರಿಗೆ ಒಪ್ಪಿಸಲಾಯಿತು.[illegible] ಸರ್ ಥಾಮಸ್ ಮನ್ರೋ ಈ ಪ್ರಾಂತ್ಯದ ಮೊದಲ ಕಲೆಕ್ಟರನಾಗಿ ನೇಮಕಗೊಂಡನು.[illegible] ಈತನ ಇಪ್ಪತ್ತು ವರ್ಷಗಳ ಆಳ್ವಿಕೆಯ ಅವಧಿಯಲ್ಲಿ ಬಳ್ಳಾರಿಯಲ್ಲಿದ್ದ ಅನಾನುಕೂಲಗಳ ಬಗ್ಗೆ ಉನ್ನತಾಧಿಕಾರಿಗಳಿಗೆ ಪತ್ರ ಬರೆದು ಬಳ್ಳಾರಿ ಅಭಿವೃದ್ಧಿಗೆ ಯೋಜನೆ ರೂಪಿಸಿದನು. ಕ್ರಿ.ಶ. ೧೮೨೦ರಲ್ಲಿ ಮನ್ರೋ ಅಧಿಕಾರ ಅಂತ್ಯದೊಂದಿಗೆ ಬಳ್ಳಾರಿಯನ್ನು ಕಡಪದಿಂದ ಪ್ರತ್ಯೇಕಿಸಿ ಎರಡು ಹೊಸ ಆಡಳಿತ ಕೇಂದ್ರಗಳನ್ನಾಗಿ ರೂಪಿಸಲಾಯಿತು.[illegible]

ಬಳ್ಳಾರಿಯು ಮದ್ರಾಸ್ ಪ್ರೆಸಿಡೆನ್ಸಿಗೆ ಸೇರಿದ ನಂತರ ಅಭಿವೃದ್ಧಿಯ ಮೂಲಕ ಆಧುನಿಕತೆಯನ್ನು ಕಂಡಿತು. ದಂಡು ಪ್ರದೇಶವಾಗಿ ಸ್ವೀಕೃತವಾದ ಬಳ್ಳಾರಿಯು ಆಂಗ್ಲ ಸೈನಿಕರ ನೆಲೆವೀಡಾಯಿತು. ಇತಿಹಾಸದಲ್ಲಿ ಜೈನ, ಬೌದ್ಧ, ಶೈವ, ವೈಷ್ಣವರ ನೆಲೆಯಾಗಿದ್ದ ಬಳ್ಳಾರಿಯು ಕ್ರೈಸ್ತರ ನೆಲೆಯಾಗಲು ಮೊದಲಿಟ್ಟಿತು. ಬಹುಸಂಖ್ಯೆಯ ಆಂಗ್ಲರು ಮತ್ತು ಇವರ ಸೇವಕರಾಗಿ ಬಂದ ತಮಿಳರು ಕ್ರೈಸ್ತಧರ್ಮೀಯರಾಗಿದ್ದರು. ಇವರುಗಳ ಆಧ್ಯಾತ್ಮಿಕ ಸೇವೆಗಾಗಿ ಈಗಾಗಲೇ, ಮದ್ರಾಸಿನಲ್ಲಿ ನೆಲೆಯೂರಿದ್ದ ವಿದೇಶಿ ಮಿಷನ್‌ಗಳು ತಮ್ಮ ಮಿಷನರಿಗಳನ್ನು ಬಳ್ಳಾರಿಗೆ ಕಳುಹಿಸಿಕೊಟ್ಟರು. ಮಿಷನರಿಗಳ ಆಗಮನದಿಂದ ಸ್ಥಳೀಯರಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ಪ್ರಜ್ಞೆ ಮೂಡಿತು. ವಿಶೇಷವಾಗಿ ಕೆಳವರ್ಗಗಳು ತಮ್ಮ ಮೇಲಾಗಿರುವ ದೌರ್ಜನ್ಯಗಳಿಂದ ಹೊರಬರಲು ಸಹಕಾರಿಯಾಯಿತು.

ವಿವಿಧ ಸೇವೆಗಳ ಮೂಲಕ ಮಿಷನರಿಗಳು ತೋರಿದ ಅಕ್ಕರೆಗೆ ಮರುಳಾದ ಈ ವರ್ಗದ ಜನತೆ ಗುಂಪು ಗುಂಪಾಗಿ ಗ್ರಾಮ ಮಟ್ಟದಲ್ಲಿ ಮತಾಂತರಗೊಂಡರು. ಶಿಕ್ಷಣ, ವೈದ್ಯಕೀಯ ಇನ್ನಿತರ ಸಮಾಜ ಸೇವಾಕೇಂದ್ರಗಳು ತೆರೆದು ಸ್ಥಳೀಯ ಮೆಚ್ಚುಗೆಗೆ ಪಾತ್ರರಾದರು. ಮಿಷನರಿಗಳ ಕಾರ್ಯಚಟುವಟಿಕೆಗಳಿಗೆ ಆಂಗ್ಲ ಅಧಿಕಾರಿಗಳ ಪೂರ್ಣ ಸಹಮತವಿದ್ದಿತು. ಬಳ್ಳಾರಿಯ ಆರಂಭದ ಮಿಷನರಿಗಳು ಮುದ್ರಣ, ಸಾಹಿತ್ಯ ಕಾರ್ಯಗಳಲ್ಲಿ ತೊಡಗಿಸಿಕೊಂಡು ಬಳ್ಳಾರಿಯನ್ನು ವಸಾಹತು ಅವಧಿಯ ಕರ್ನಾಟಕದ ಮಧ್ಯಭಾಗದ ಪ್ರಮುಖ ಕೇಂದ್ರವಾಗಿಸಿದರು. ಆಂಗ್ಲರ ಆಡಳಿತ ವ್ಯವಸ್ಥೆಗೆ ಒಳಪಟ್ಟು ಕಾಲಕಾಲಕ್ಕೆ ಮದ್ರಾಸ್ ಸರ್ಕಾರ ಹೊರಡಿಸುತ್ತಿದ್ದ ಕಾಯ್ದೆಗಳನ್ನು ಕಲೆಕ್ಟರ್ ನೇತೃತ್ವದ ಆಡಳಿತ ವ್ಯವಸ್ಥೆಯು ಜಿಲ್ಲೆಗಳಲ್ಲಿ ಜಾರಿಗೊಳಿಸುತ್ತಿತ್ತು.

ಕಲೆಕ್ಟರ್ ಎಂಬ ಅಧಿಕಾರಿಯು ಸಾಮಾನ್ಯವಾಗಿ ಜಿಲ್ಲಾ ಆಡಳಿತ ಮುಖ್ಯಸ್ಥನಾಗಿರುತ್ತಿದ್ದನು. ಶಿರಸ್ತೆದಾರ್ ಎಂಬುವನು ಜಿಲ್ಲೆಯ ಲೆಕ್ಕ ಪತ್ರ, ದಾಖಲೆಗಳನ್ನು ನಿರ್ವಹಿಸುವುದು ಮತ್ತು ಕಲೆಕ್ಟರ್ ಕಛೇರಿಯ ಮುಖ್ಯಾಧಿಕಾರಿಯಾಗಿದ್ದನು. ಶಿರಸ್ತೆದಾರ್‌ನ ಅಧೀನದಲ್ಲಿ ಡೆಪ್ಯುಟಿ ಶಿರಸ್ತೇದಾರ್ ಎಂಬ ಸ್ಥಾನವು ಇದ್ದಿತು. ಈ ಅಧಿಕಾರಿ ಉಪವಿಭಾಗಗಳ ಉಸ್ತುವಾರಿಕನಾಗಿದ್ದನು. ನಗದು ಸಂಗ್ರಹಕಾರ ಎಂದು ಕರೆಯಲ್ಪಡುತ್ತಿದ್ದ ಅಧಿಕಾರಿಯು ಖಜಾನೆ ಮತ್ತು ಖಜಾನೆ ದಾಖಲೆಗಳ ಪರಿಗ್ರಹಣದ ಮುಖ್ಯಾಧಿಕಾರಿ ಅನ್ಯ ಭಾಷೆಯಲ್ಲಿರುವ ಎಲ್ಲಾ ಮೂಲ ದಾಖಲುಗಳನ್ನು ಆಂಗ್ಲ ಭಾಷೆಗೆ ಭಾಷಾಂತರಿಸಿ, ಸಂಗ್ರಹಿಸಿಡುವ ಆಂಗ್ಲ ರೈಟರ್ ಎಂಬ ಹುದ್ದೆಯು ಜಾರಿಯಲ್ಲಿತ್ತು. ಇನ್ನುಳಿದಂತೆ ಶ್ರಾಫ್ ಎಂಬ ಅಧಿಕಾರಿಯು ಹಣ ಪಡೆಯುವ ಮತ್ತು ಹಿಂದಿರುಗಿಸುವ ಬ್ಯಾಂಕಿನ ರೀತಿ ಕಾರ್ಯವನ್ನು ನಿರ್ವಹಿಸುತ್ತಿದ್ದನು.

ತಾಲ್ಲೂಕಿನ ಮುಖ್ಯ ಕಂದಾಯ ಅಧಿಕಾರಿಯನ್ನು ತಹಶೀಲ್ದಾರ್ ಎನ್ನುತ್ತಿದ್ದರು. ಈತನ ಅಧೀನದಲ್ಲಿ ಡೆಪ್ಯುಟಿ ತಹಶೀಲ್ದಾರ್ ಎಂಬ ಅಧಿಕಾರಿಯು ಇರುತ್ತಿದ್ದನು. ಇವರ ಅಧೀನದ ಆಡಳಿತ ಯಂತ್ರ ಈ ಕೆಳಗಿನಂತಿತ್ತು.

| | |
|---|---|
| ೧. ಶ್ಯಾನುಭಾಗ್ ಅಥವಾ ಕರ್ನನ್ | ಗ್ರಾಮ ಲೆಕ್ಕಿಗ |
| ೨. ನೀರ್ಗಂಟಿ | ನೀರು ಸರಬರಾಜು ಅಧಿಕಾರಿ |
| ೩. ವೆಟ್ಟಿ | ಗ್ರಾಮ ಸೇವಕ ಪ್ಯೂನ್ |
| ೪. ತಳವಾರ | ಗ್ರಾಮ ಪೋಲೀಸ್ ಅಧಿಕಾರಿ |

ಎರಡು ಶತಮಾನಗಳ ಕಾಲ ಭಾರತವನ್ನು ಆಳಿದ ಆಂಗ್ಲರ ಪ್ರಭಾವದಿಂದಾಗಿ ಇಂದಿಗೂ ಭಾರತದಲ್ಲಿ ಇದೇ ಶ್ರೇಣಿರೂಪದ ಆಡಳಿತ ವ್ಯವಸ್ಥೆ ಜಾರಿಯಲ್ಲಿದೆ.

ಅತಿ ಬಿಸಿಲು ಮತ್ತು ಬಹುತೇಕ ಕಪ್ಪುಮಣ್ಣಿನಿಂದ ಕೂಡಿದ ಬಳ್ಳಾರಿ ಜಿಲ್ಲೆಯಲ್ಲಿ ಶೇ.೨೩ರಷ್ಟು ಕೃಷಿಯೋಗ್ಯ ಭೂಮಿಯಲ್ಲಿ ಹತ್ತಿ ಬೆಳೆ ಬೆಳೆಯುವುದು ಸೂಕ್ತವಿದ್ದಿತು. ಅತಿ ಹೆಚ್ಚಾಗಿ ಹತ್ತಿಯನ್ನು ಇನ್ನುಳಿದಂತೆ ಎಣ್ಣೆಕಾಳು, ಕಬ್ಬು, ಧವಸಧಾನ್ಯಗಳನ್ನು ಬೆಳೆಯುತ್ತಿದ್ದರು. ಹತ್ತಿಯು ಮುಖ್ಯ ಬೆಳೆಯಾಗಿದ್ದು, ಮದ್ರಾಸ್ ಮುಂಬಯಿಗಳಿಗೆ ರಫ್ತಾಗುತ್ತಿತ್ತು. ಕಚ್ಚಾವಸ್ತು ದೊರೆಯುವ ಮೂಲ ಪ್ರದೇಶದಲ್ಲಿ ಹತ್ತಿ ಕಾರ್ಖಾನೆ ಸ್ಥಾಪಿಸುವುದು ಸೂಕ್ತವೆಂದು ತಿಳಿದ ಉದ್ಯಮಿಗಳು ಬಳ್ಳಾರಿಯಲ್ಲಿ ಹತ್ತಿ ಹದ ಮಾಡುವ ಕಾರ್ಖಾನೆಗಳನ್ನು ಆರಂಭಿಸಿದರು.

ಇದಕ್ಕೆ ಪ್ರೋತ್ಸಾಹಪಿದ್ದ ಕಾರಣ ಹಲವಾರು ಉದ್ಯಮಿಗಳು ಬಳ್ಳಾರಿಯಲ್ಲಿ ಕಾರ್ಖಾನೆ ತೆರೆಯಲು ಉತ್ಸುಕರಾದರು. ೧೮೮೩ರ ಹೊತ್ತಿಗೆ ಏಳು ಹತ್ತಿ ಹದ ಮಾಡುವ ಕಾರ್ಖಾನೆಗಳು ಕಾರ್ಯನಿರ್ವಹಿಸುತ್ತಿದ್ದು ಸುಮಾರು ೨೦೦ ಮಂದಿ ಕೆಲಸ ಮಾಡುತ್ತಿದ್ದರು. ಮತ್ತು ಇದೇ ವರ್ಷ ಆರಂಭ ಕಂಡ ''ಬಳ್ಳಾರಿ ಸ್ಪಿನ್ನಿಂಗ್ ಅಂಡ್ ವೇವಿಂಗ್ ಮಿಲ್'' ಹತ್ತಿಯಿಂದ ದಾರದ ಎಳೆಯನ್ನು ಉತ್ಪಾದಿಸುವ ಕಾರ್ಖಾನೆಯಾಗಿತ್ತು. ಈ ಕಾರ್ಖಾನೆಯಲ್ಲಿ ಸುಮಾರು ೨೯೦ ಜನ ಕೆಲಸ ಮಾಡುತ್ತಿದ್ದರು.[39] ಬಳ್ಳಾರಿಯ ಅಲ್ಲಿಪುರ ಬಳಿಯ ಈ ಕಾರ್ಖಾನೆಯಿಂದಾಗಿ ಈ ಭಾಗವನ್ನು ಈಗಲೂ ದಾರದ ಮಿಲ್ ಪ್ರದೇಶ ಎಂದು ಜನ ಕರೆಯುತ್ತಾರೆ.

ಯಥೇಚ್ಛ ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರಿನ ಸ್ಥಳವಾಗಿರುವ ಬಳ್ಳಾರಿಯ ಹೊಸಪೇಟೆ ಬಳಿಯಲ್ಲಿರುವ ನಾಮೇಹಟ್ಟಿಯಲ್ಲಿ ಕಬ್ಬಿಣದ ಅದಿರನ್ನು ಕರಗಿಸಿ ಲೋಹ ತಯಾರಿಸುವ ಕಾರ್ಖಾನೆ ಇದ್ದಿತು. ನಂತರ ಸಂಡೂರಿನಲ್ಲಿ ಮಸ್ಸರ್ಸ್ ಸಂಡೂರು ಮ್ಯಾಂಗನೀಸ್ ಅಂಡ್ ಐರನ್ ಓರ್ ಲಿಮಿಟೆಡ್ ಕಂಪನಿಯು ಕಾರ್ಯನಿರ್ವಹಿಸುತ್ತಿತ್ತು.

ವ್ಯಾಪಾರಕ್ಕೆ ಸಂಬಂಧಿಸಿದಂತೆಯೂ ಬಳ್ಳಾರಿಯು ಮದ್ರಾಸ್, ಮೈಸೂರು, ಮಂಗಳೂರು, ಮುಂಬಯಿಗಳ ಮಧ್ಯದ ವಿನಿಮಯ ಮಾರುಕಟ್ಟೆಯಾಗಿದ್ದಿತು. ಬಳ್ಳಾರಿಯು ಉತ್ಪಾದಿಸುತ್ತಿದ್ದ ಜೋರಿ ಎಂಬ ಉತ್ತಮ ದರ್ಜೆಯ ಬಟ್ಟೆಗೆ ಬಹಳ ಬೇಡಿಕೆಯಿತ್ತು. ಅಲ್ಲದೆ ಮೈಸೂರಿನಲ್ಲಿ ತಯಾರಾಗುತ್ತಿದ್ದ ರೇಷ್ಮೆ ಬಟ್ಟೆಗಳಿಗೆ ಬಳ್ಳಾರಿಯು ಉತ್ತಮ ಕೇಂದ್ರವಾಗಿತ್ತು. ಬಳ್ಳಾರಿಯು ಇತರ ಪಟ್ಟಣಗಳೊಂದಿಗೆ ರಸ್ತೆ ಮತ್ತು ರೈಲು ಸಂಪರ್ಕಗಳನ್ನು ಹೊಂದಿತ್ತು.

ಕ್ರಿ.ಶ. ೧೮೩೧ರಲ್ಲಿ ಮೈಸೂರು ಸಂಪರ್ಕಿಸಲು ಹೊಂದಿದ್ದ ಮೂರು ದೊಡ್ಡದಾದ ರಸ್ತೆಗಳಲ್ಲಿ, ಮದ್ರಾಸ್, ಮಂಗಳೂರುಗಳಿಗೆ ಎರಡು ರಸ್ತೆಗಳಾದರೆ, ಉಳಿದ ಮೂರನೇ ರಸ್ತೆಯು ಶಿರಾ ಮಾರ್ಗವಾಗಿ ನೇರ ಬಳ್ಳಾರಿಯನ್ನು ಸಂಪರ್ಕಿಸುತ್ತಿತ್ತು.[40] ಕಮಿಷನರ್‌ಗಳ ಅವಧಿಯಲ್ಲಿ ಈ ರಸ್ತೆಯು ಸುಧಾರಿಸಿತು. ಬಳ್ಳಾರಿ ಮತ್ತು ಮೈಸೂರು ಮಧ್ಯದ ಉತ್ತಮ ವ್ಯಾಪಾರ ಸಂಬಂಧಕ್ಕೆ ಇದು ಅನುಕೂಲ ಕಲ್ಪಿಸಿತು. ಅಲ್ಲದೆ ಮದ್ರಾಸ್, ಮುಂಬಯಿಗಳ ಮಧ್ಯ ರಸ್ತೆಯೂ ಬಳ್ಳಾರಿ ಮೂಲಕ ಹಾದು ಹೋಗುತ್ತಿತ್ತು. ಜಿಲ್ಲೆಯೊಳಗಿನ ರಸ್ತೆಗಳಂತೂ ಅಸ್ತವ್ಯಸ್ತತೆಯಿಂದ ಕೂಡಿದ್ದವು.

ಬಾಂಬೆ ಪ್ರೆಸಿಡೆನ್ಸಿಯಲ್ಲಿ ೧೮೫೩ರಲ್ಲಿ ಭಾರತದಲ್ಲಿ ಪ್ರಥಮ ರೈಲು ಸಂಚರಿಸಿತು. ಕರ್ನಾಟಕದಲ್ಲಿ ಈ ರೀತಿಯ ಕಾರ್ಯಕೈಗೂಡಿದ್ದು ೧೮೫೯ರಲ್ಲಿ. ಇನ್ನುಳಿದಂತೆ ಕರ್ನಾಟಕದಲ್ಲಿ ರೈಲ್ವೆ ಕಾರ್ಯ ಜಾರಿಯಾದದ್ದು ಬಳ್ಳಾರಿಯಲ್ಲಿ. ಗುಂತಕಲ್ ಮೂಲಕ ಮದ್ರಾಸಿಗೆ ಹಾದು ಹೋಗುತ್ತಿದ್ದ ರೈಲು ಹಳಿಗೆ ೧೮೭೧ರಲ್ಲಿ ಬಳ್ಳಾರಿಯವರೆಗೆ ಹಾಕಲಾದ ಹಳಿಯನ್ನು ಜೋಡಿಸಿ, ಬಳ್ಳಾರಿ-ಮದ್ರಾಸ್ ಮಧ್ಯದ ಸುಮಾರು ೪೮೦ ಕಿ.ಮೀ. ಸಂಚಾರಕ್ಕೆ ಅನುವು ಮಾಡಲಾಯಿತು. ಇಷ್ಟೇ ಅಲ್ಲದೆ ರೈಲು ಹಳಿ ನಿರ್ಮಾಣ ಕಾರ್ಯ ಬಳ್ಳಾರಿಯಲ್ಲಿ ಮುಂದುವರೆದು ೧೮೮೪ರಲ್ಲಿ ಬಳ್ಳಾರಿ-ಹೊಸಪೇಟೆ ಮಧ್ಯ ೧೮೮೭ರಲ್ಲಿ ಗುಂಡಾ ರೋಡ್ ಜಂಕ್ಷನ್ - ಸಾಮಹಳ್ಳಿ ಮಧ್ಯ ರೈಲು ಸಂಪರ್ಕ ಏರ್ಪಟ್ಟಿತು. ೧೯೦೫ರಲ್ಲಿ ಸುಮಾರು ೧೨೩ ಕಿ.ಮೀ. ಉದ್ದರೈಲು ಹಳಿ ಹಾಕಿ ಬಳ್ಳಾರಿ-

ರಾಯದುರ್ಗ ಮಧ್ಯೆ (೫೪ ಕಿ.ಮೀ.) ಹೊಸಪೇಟೆ- ಕೊಟ್ಟೂರು ಮಧ್ಯ (೬೯ ಕಿ.ಮೀ.) ರೈಲು ಸಂಚರಿಸಲು ಆರಂಭಿಸಿದರು. ರೈಲು ಹಳಿ ನಿರ್ಮಾಣಕ್ಕೆ ಹಾಸಲಾಗುತ್ತಿದ್ದ ಸ್ಲೀಪರ್‌ಗಳನ್ನು ಹಡಗುಗಳಲ್ಲಿ ತರಿಸುತ್ತಿದ್ದ ಪೈನ್ ಮರದ ದಿಂಬುಗಳಾಗಿದ್ದವು. ಈ ಎಲ್ಲಾ ರೈಲು ಸಂಪರ್ಕಗಳು ಸ್ಥಳೀಯರ ಅನುಕೂಲಕ್ಕಿಂತ ಸ್ಥಳೀಯ ಸಂಪತ್ತಿನ ಸರಬರಾಜಿಗೆ ಅನುಕೂಲವಾಗಿತ್ತು. ಮೊದಲನೇ ಮಹಾಯುದ್ಧದ ನಂತರ ಬಳ್ಳಾರಿಯಲ್ಲಿ ಬ್ರಿಟಿಷ್‌ರ ಸಂಖ್ಯೆ ಕ್ರಮೇಣ ಕಡಿಮೆಯಾಯಿತು. ಅಲ್ಲದೆ ಸ್ವಾತಂತ್ರ್ಯ ಹೋರಾಟದ ಕಾವು ಹೆಚ್ಚಾಗತೊಡಗಿತು.

**೨.೫. ಸ್ವಾತಂತ್ರ್ಯ ಹೋರಾಟ**

ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟವು ೧೮೫೭ರ ಸಿಪಾಯಿ ದಂಗೆ ಅಥವಾ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಅವಧಿಯಲ್ಲಿ ಬ್ರಿಟಿಷರ ವಿರುದ್ಧ ನಡೆದ ಸಶಸ್ತ್ರ ಹೋರಾಟದಲ್ಲಿ ಬಳ್ಳಾರಿಯ ಪಾತ್ರ ವಹಿಸಿತ್ತು. ಹರಪನಹಳ್ಳಿ ಮತ್ತು ಬಳ್ಳಾರಿ ತಾಲ್ಲೂಕುಗಳಲ್ಲಿ ತಹಶೀಲ್ದಾರರಾಗಿ ಕೆಲಸ ಮಾಡಿದ್ದ ಮುಂಡರಗಿ ಭೀಮರಾಯರು ತಹಶೀಲ್ದಾರ ಹುದ್ದೆಗೆ ನಿವೃತ್ತಿ ಘೋಷಿಸಿದರು. ಮುಂಡರಗಿ ಭೀಮರಾಯರು ಕೊಪ್ಪಳದಲ್ಲಿ ಬ್ರಿಟಿಷ್‌ರ ವಿರುದ್ಧ ಹೋರಾಟ ಮಾಡಿ ಮರಣ ಹೊಂದಿದರು. ಮುಂಡರಗಿ ಭೀಮರಾಯರ ಸೇನೆಯಲ್ಲಿ ಬಳ್ಳಾರಿ ಪ್ರದೇಶದ ಯುವಕರು ಸೇರಿದ್ದರು. ಈ ಹೋರಾಟದಲ್ಲಿ ಕೆಲವರು ಮರಣ ಹೊಂದಿದರೆ ಇನ್ನೂ ಕೆಲವರು ಸೆರೆ ಸಿಕ್ಕರು ಎಂದು ಗೆಜೆಟಿಯರ್‌ನಲ್ಲಿ ತಿಳಿಸಿದ್ದನ್ನು ಶೇಷಾದ್ರಿ ಹಾಗೂ ಚಂದ್ರಶೇಖರ ಅವರು ಉಲ್ಲೇಖಿಸಿದ್ದಾರೆ.[೨೫]

ಭಾರತದ ಸ್ವಾತಂತ್ರ್ಯ ಹೋರಾಟವು ರಾಷ್ಟ್ರಮಟ್ಟದಲ್ಲಿ ಹಾಗೂ ಪ್ರಾಂತ್ಯ ಮಟ್ಟದಲ್ಲಿ ಯಾವ ರೀತಿಯಲ್ಲಿ ಸಂಘಟಿತವಾಗಿತ್ತೋ ಅದೇ ರೀತಿಯಲ್ಲಿ ಬಳ್ಳಾರಿ ಪ್ರದೇಶದಲ್ಲಿ ನಡೆಯುತ್ತಾ ಬಂದಿತು. ಏಕೆಂದರೆ ಬಳ್ಳಾರಿ ಪ್ರದೇಶವು ಬ್ರಿಟಿಷ್‌ರ ನೇರ ಆಳ್ವಿಕೆಗೆ ಒಳಪಟ್ಟಿತ್ತು.[೨೬] ಆರಂಭದಲ್ಲಿ ಸ್ವಾತಂತ್ರ್ಯ ಹೋರಾಟವು ಬಳ್ಳಾರಿಯ ಕೆಲವು ಪ್ರದೇಶಗಳಿಗೆ ಮಾತ್ರ ಸೀಮಿತವಾಗಿತ್ತು. ೧೯೩೦ರ ಹೊತ್ತಿಗೆ ಬಳ್ಳಾರಿಯ ಎಲ್ಲ ಪ್ರದೇಶಗಳಿಗೆ ಅದು ವ್ಯಾಪಿಸಿತು. ಕ್ರಿ.ಶ. ೧೮೮೫ರಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಸ್ಥಾಪನೆಯಾಗಿ ಇದರ ಮೊದಲ ಅಧಿವೇಶನ ಮುಂಬೈನಲ್ಲಿ ಡಿಸೆಂಬರ್ ೨೮ ರಿಂದ ೩೦ರವರೆಗೆ ನಡೆಯಿತು. ಪ್ರಥಮ ಅಧಿವೇಶನದಲ್ಲಿ ದೇಶಾದ್ಯಂತ ೭೨ ಜನ ಪ್ರತಿನಿಧಿಗಳು ಭಾಗವಹಿಸಿದ್ದರು. ಕರ್ನಾಟಕ ಪ್ರದೇಶದಿಂದ ಪ್ರಥಮ ಅಧಿವೇಶದಕ್ಕೆ ನಾಲ್ವರು ಪ್ರತಿನಿಧಿಗಳು ಭಾಗವಹಿಸಿದ್ದರು. ಅದರಲ್ಲಿ ಬಳ್ಳಾರಿ ಪ್ರದೇಶದಿಂದ ಮೂವರು ಪ್ರತಿನಿಧಿಗಳು ಭಾಗವಹಿಸಿದ್ದರು. ಆ ಪ್ರತಿನಿಧಿಗಳೆಂದರೆ ಕೊಲಾಚಲಾ ವೆಂಕಟರಾವ್, ಸಭಾಪತಿ ಮೊದಲಿಯಾರ್ ಮತ್ತು ಗುತ್ತಿಕೇಶವ ಪಿಳ್ಳೆರವರು ಪಾಲ್ಗೊಂಡಿದ್ದರು.[೨೭]

ಭಾರತದ ಸ್ವಾತಂತ್ರ್ಯ ಹೋರಾಟವು ಗಾಂಧೀಜಿಯವರಿಗಿಂತ ಮುಂಚಿತವಾಗಿ ಬಾಲಗಂಗಾಧರ ತಿಲಕರ ನಾಯಕತ್ವದಲ್ಲಿ ಮುಂದುವರೆಯುತ್ತಿತ್ತು. ಆ ಸಮಯದಲ್ಲಿ ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟವು ತಿಲಕರ ಸಂಪರ್ಕವನ್ನು ಹೊಂದಿತ್ತು. ೧೯೦೫ರಲ್ಲಿ ಬಾಲಗಂಗಾಧರ ತಿಲಕರು ಬಳ್ಳಾರಿಗೆ ಭೇಟಿ ನೀಡಿದರು.[೨೮] ಅವರು ತಮ್ಮ ಭಾಷಣದಲ್ಲಿ ''ವಿಜಯನಗರ ಅರಸರು, ಶತ್ರುಗಳನ್ನು ಸದೆಬಡಿದು ವಿಶಾಲ ಸಾಮ್ರಾಜ್ಯ ನಿರ್ಮಿಸಿದರು. ಆದ್ದರಿಂದ ಆಂಗ್ಲರನ್ನು ಭಾರತದಿಂದ ಹೊರದೂಡಿ ಸ್ವಾತಂತ್ರ್ಯ ಭಾರತ ನಿರ್ಮಿಸಬೇಕೆಂದು ಹೇಳಿದರು. ತಿಲಕರ ನಂತರ ಗಾಂಧೀಜಿಯವರು ಭಾರತ ಸ್ವಾತಂತ್ರ್ಯ ಹೋರಾಟದ ನೇತೃತ್ವ ವಹಿಸಿದರು. ೧೯೨೦ರಲ್ಲಿ ಗಾಂಧೀಜಿಯವರು

ಅಸಹಕಾರ ಚಳುವಳಿ ಆರಂಭಿಸಿದರು. ``ಅಸಹಕಾರ ಚಳವಳಿ``ಯು ಕೆಲವು ಮೂಲಭೂತ ಅಂಶಗಳನ್ನು ಒಳಗೊಂಡಿತ್ತು.

ಅವುಗಳೆಂದರೆ

೧. ವಿದ್ಯಾರ್ಥಿಗಳು ಶಾಲಾ ಕಾಲೇಜುಗಳನ್ನು ತೊರೆಯುವುದು.

೨. ವಕೀಲರು ತಮ್ಮ ವೃತ್ತಿಯನ್ನು ತ್ಯಜಿಸುವುದು.

೩. ಕೌನ್ಸಿಲ್ ಚುನಾವಣೆಯ ಬಹಿಷ್ಕಾರ.

೪. ಬಿರುದು, ಪ್ರಶಸ್ತಿಗಳನ್ನು ಹಿಂತಿರುಗಿಸುವುದು.[೬೦]

ಗಾಂಧೀಜಿಯುವರ ಅಸಹಕಾರ ಚಳವಳಿಯುನ್ನು ಬಳ್ಳಾರಿ ಪ್ರದೇಶದಲ್ಲಿ ಪ್ರಸಾರ ಮಾಡಲು ಪ್ರಯುತ್ನಿಸಲಾಯಿತು. ಬಳ್ಳಾರಿ ಪ್ರದೇಶದಲ್ಲಿ ಪ್ರಸಾರ ಮಾಡಲು ಕಲ್ಲೂರು ಸುಬ್ಬರಾವ್ ಮತ್ತು ವೆಂಕಟರಮಣಾಚಾರ್ಯರು ಪ್ರಮುಖರು ಪಾಲ್ಗೊಂಡಿದ್ದರು.[೬೧] ಇವರು ಬಳ್ಳಾರಿ ಪ್ರದೇಶದ ನೂರಾರು ಯುವಕರಿಗೆ ತರಬೇತಿ ನೀಡಿ ಸ್ವಾತಂತ್ರ್ಯ ಚಳವಳಿಯಲ್ಲಿ ಕಾರ್ಯಕರ್ತರಾಗುವಂತೆ ಮಾಡಿದರು. ಅಸಹಕಾರ ಚಳವಳಿಯಲ್ಲಿ ದುಡಿದ ಇತರ ಸತ್ಯಾಗ್ರಹಿಗಳೆಂದರೆ ನೇತ್ರಹಳ್ಳಿ ಸಂಜೀವರಾಯರು, ಬಾದನಹಟ್ಟಿ ವೆಂಕೋಬರಾಯರು, ಟೇಕೂರು ನಾರಾಯಣ ಶಾಸ್ತ್ರೀಗಳು, ಲ್ಯಾಂಗ್ಲಿ ಭೀಮಸೇನರಾಯರು ಪ್ರಮುಖರು. ಅಸಹಕಾರ ಚಳವಳಿಯ ಕಾಲದಲ್ಲಿ ಗಾಂಧೀಜಿಯವರು ೧೯೨೧ ಅಕ್ಟೋಬರ್ ೧ ರಂದು, ಬಳ್ಳಾರಿ ಜಿಲ್ಲಾ ಪ್ರದೇಶಕ್ಕೆ ಭೇಟಿ ನೀಡಿದರು ಎಂದು ಗೆಜೆಟಿಯರ್‌ನಲ್ಲಿ ತಿಳಿಸಲಾಗಿದೆ.[೬೨] ನಂತರ ಈ ಸಮಯುದಲ್ಲಿ ಬಳ್ಳಾರಿ ಜಿಲ್ಲಾ ಪ್ರದೇಶದಲ್ಲಿ ಎರಡು ಜಿಲ್ಲಾ ಕಾಂಗ್ರೆಸ್ ಸಮಿತಿಗಳಿದ್ದರಿಂದ ಗಾಂಧೀಜಿಯುವರಿಗೆ ಸರಿಯಾಗಿ ಆತಿಥ್ಯ ದೊರೆಯಲಿಲ್ಲ.

ಅಸಹಕಾರ ಚಳವಳಿ ವಿಫಲವಾದ ನಂತರ ಗಾಂಧೀಜಿಯುವರು ಮೊದಲ ಬಾರಿಗೆ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರಾದರು. ಆ ಅಧಿವೇಶನವು ೧೯೨೪ರಲ್ಲಿ ಬೆಳಗಾವಿಯಲ್ಲಿ ನಡೆಯಿತು. ೧೯೨೪ರ ಬೆಳಗಾವಿ ಕಾಂಗ್ರೆಸ್ ಅಧಿವೇಶನದಲ್ಲಿ ಬಳ್ಳಾರಿ ಪ್ರದೇಶದಿಂದ ನೂರಾರು ಕಾಂಗ್ರೆಸ್ ಕಾರ್ಯಕರ್ತರು ಮತ್ತು ಜನಸಾಮಾನ್ಯರು ಭಾಗವಹಿಸಿದ್ದರು. ಇದು ಬಳ್ಳಾರಿ ಪ್ರದೇಶದಲ್ಲಿ ಸ್ವಾತಂತ್ರ್ಯ ಚಳವಳಿಗಳು ವಿಪುಲವಾಗಿ ಹರಡಲು ಕಾರಣವಾಯಿತು. ೧೯೩೦ರಲ್ಲಿ ಜನಸಾಮಾನ್ಯರನ್ನು ಆಧಾರವಾಗಿಟ್ಟುಕೊಂಡು, 'ಉಪ್ಪಿನ ಸತ್ಯಾಗ್ರಹ' ಅಥವಾ 'ಕಾನೂನು ಭಂಗ ಚಳವಳಿ'ಯನ್ನು ಆರಂಭಿಸಿದರು. ಈ ಚಳವಳಿಯನ್ನು ಕರ್ನಾಟಕ ಪ್ರಾಂತ್ಯದಲ್ಲಿ ಯಾವ ರೀತಿ ಸಂಘಟಿಸಬೇಕು ಎಂದು ೧೯೩೦ರ ಫೆಬ್ರವರಿ ೨೩ರಂದು ಬಳ್ಳಾರಿಯಲ್ಲಿ ಸಭೆ ಕರೆಯಲಾಯಿತು. ನಂತರ ಒಂದು ಮಂಡಳಿಯನ್ನು ರಚಿಸಲಾಯಿತು.[೬೩] ಬಳ್ಳಾರಿ ಜಿಲ್ಲಾ ಪ್ರದೇಶದಲ್ಲಿ ಉಪ್ಪಿನ ಸತ್ಯಾಗ್ರಹಕ್ಕೆ ನಿಧಿ ಸಂಗ್ರಹಿಸಲು ಒಂದು ಸಮಿತಿ ರಚಿಸಲಾಯಿತು. ಈ ಸಮಿತಿಯಲ್ಲಿ ಇಜಾರಿ ವಸುಪಾಲಪ್ಪ, ಟೇಕೂರು ಸುಬ್ರಹ್ಮಣ್ಯಂ, ವಿ.ಎಂ.ಗಿರಿ ಮತ್ತು ಮತ್ತಿಹಳ್ಳಿ ರಾಘವೇಂದ್ರರಾವ್ ಸದಸ್ಯರುಗಳಾಗಿದ್ದರು.[೬೪] ಬಳ್ಳಾರಿ ಪ್ರದೇಶದಲ್ಲಿ ಕಡಲು ತೀರವಿಲ್ಲ, ಆದ್ದರಿಂದ ಈ ಪ್ರದೇಶದಲ್ಲಿ ಉಪ್ಪಿನ ಸತ್ಯಾಗ್ರಹ ನಡೆಯಲಿಲ್ಲ. ಆದರೆ 'ಮದ್ಯಪಾನ ವಿರೋಧಿ ಚಳವಳಿ' ನಡೆಯಿತು. ಇದರ ಮುಖ್ಯ ಗುರಿಗಳೆಂದರೆ ಈಚಲು ಮರ ಕಡಿಯುವುದು, ಹೆಂಡದಂಗಡಿಗಳ ಮುಂದೆ ಪಿಕೇಟಿಂಗ್,

ಹೆಂಡದಂಗಡಿಗಳ ಹರಾಜು ತಡೆಯುವುದು ಮತ್ತು ವಿದೇಶಿ ಬಟ್ಟೆ ಸುಡುವುದು ಪ್ರಮುಖವಾಗಿದ್ದವು. ಈ ಚಳವಳಿಯಲ್ಲಿ ಭಾಗವಹಿಸಿದ ಸತ್ಯಾಗ್ರಹಿಗಳನ್ನು ಬಂಧಿಸಲಾಯಿತು. ಇದರಲ್ಲಿ ಕೆಲವು ಸತ್ಯಾಗ್ರಹಿಗಳು ಶಿಕ್ಷೆಯನ್ನು ಅನುಭವಿಸಿದರು. ಈ ಬಗೆಯ ಅಧ್ಯಯನಗಳು ಬಳ್ಳಾರಿಯ ಆಧುನಿಕ ಚರಿತ್ರೆಗೆ ಸಂಬಂಧಿಸಿರುವಂತೆ ಬಹಳ ವಿರಳವಾಗಿವೆ.

೧೯೩೩ರ ಹೊತ್ತಿಗೆ ಕಾನೂನು ಭಂಗ ಚಳವಳಿಯು ತನ್ನ ಪ್ರಾಮುಖ್ಯತೆ ಕಳೆದುಕೊಳ್ಳುತ್ತಾ ಬಂದಿತು. ಅದಕ್ಕಾಗಿ ಗಾಂಧೀಜಿಯವರು ವಿಧಾಯಕ ರಚನಾತ್ಮಕ ಕಾರ್ಯಕ್ರಮಗಳನ್ನು ಕೈಗೊಂಡರು. ಹರಿಜನ ಸುಧಾರಣಾ ಕಾರ್ಯಕ್ರಮಗಳನ್ನು ಕೈಗೊಳ್ಳಲಾಯಿತು. ''ಹರಿಜನ ನಿಧಿ'' ಸಂಗ್ರಹಕ್ಕಾಗಿ ದೇಶಾದ್ಯಂತ ಪ್ರವಾಸ ಮಾಡಿದರು. ೧೯೩೪ರ ಮಾರ್ಚ್ ೨ ರಿಂದ ೩ರವರೆಗೆ ಬಳ್ಳಾರಿ ಜಿಲ್ಲಾ ಪ್ರದೇಶದಲ್ಲಿ ಎರಡನೆ ಸಲ ಪ್ರವಾಸ ಕೈಗೊಂಡರು.[೬೬] ೧೯೩೯ರ ಹೊತ್ತಿಗೆ ಪ್ರಪಂಚದ ಎರಡನೆ ಮಹಾಯುದ್ಧ ಯುರೋಪಿನಲ್ಲಿ ಆರಂಭವಾಯಿತು. ಆಂಗ್ಲರು ಭಾರತೀಯರ ಅಭಿಪ್ರಾಯ ಕೇಳದೆ 'ಭಾರತವು ಜರ್ಮನಿಯ ವಿರುದ್ಧ ಯುದ್ಧಕ್ಕಿಳಿದಿದೆ' ಎಂದು ಘೋಷಿಸಿದರು. ಆದರೆ ಇದಕ್ಕೆ ಭಾರತೀಯರು ಮತ್ತು ರಾಷ್ಟ್ರೀಯ ಕಾಂಗ್ರೆಸ್ಸು ಸಹಕಾರ ನೀಡಲಿಲ್ಲ; ಇದರಿಂದ ಇಂಗ್ಲೆಂಡಿನ ಮೇಲೆ ಅನ್ಯರಾಷ್ಟ್ರಗಳ ಒತ್ತಡ ಹೆಚ್ಚಾಯಿತು. ಅದಕ್ಕಾಗಿ ಆಂಗ್ಲ ಸರ್ಕಾರವು ಭಾರತೀಯರ ಜೊತೆ ಸಂಧಾನ ನಡೆಸಲು ಲಾರ್ಡ್‌ಕ್ರಿಪ್ಸ್‌ನನ್ನು ಕಳುಹಿಸಿತು. ಆದರೆ ಕ್ರಿಪ್ಸನ ಸಲಹೆ ಮತ್ತು ಆಶ್ವಾಸನೆಗಳನ್ನು ತಿರಸ್ಕರಿಸಲಾಯಿತು. ನಂತರ ೧೯೪೨ರ ಆಗಸ್ಟ್‌ನಲ್ಲಿ ಗಾಂಧೀಜಿಯವರು 'ಭಾರತ ಬಿಟ್ಟು ತೊಲಗಿ' ಚಳವಳಿಯನ್ನು ಆರಂಭಿಸಿದರು. ಬಳ್ಳಾರಿ ಪ್ರದೇಶದಲ್ಲಿ ಭಾರತ ಬಿಟ್ಟು ತೊಲಗಿ ಚಳವಳಿಯನ್ನು ಯಶಸ್ವಿಯಾಗಿ ನಡೆಸಲಾಯಿತು. ಬಳ್ಳಾರಿ ಜಿಲ್ಲಾ ಪ್ರದೇಶದಲ್ಲಿ ಈ ಚಳವಳಿಯು ನಗರಗಳಿಗೆ ಮಾತ್ರ ಸೀಮಿತವಾಗಿರಲಿಲ್ಲ. ಪ್ರತಿಯೊಂದು ಹಳ್ಳಿಗಳು ಈ ಚಳವಳಿಯಲ್ಲಿ ತಮ್ಮದೇ ಆದ ಪಾತ್ರವನ್ನು ನಿರ್ವಹಿಸಿದವು. ಆ ಸಮಯದಲ್ಲಿ ತಾರತಮ್ಯಗಳನ್ನು ಮರೆತು ಜನರು ಭಾಗವಹಿಸಿದರು. ಕುರುಗೋಡಿನಲ್ಲಿ ಪಂಚಾಯಿತಿ ಮುಚ್ಚಿ ಹರತಾಳ ಆಚರಿಸಿದರೆ, ಹೊಸಪೇಟೆಯಲ್ಲಿ ಮುನಿಸಿಪಾಲ್ಟಿ ಕಾಲೇಜಿಗೆ ಬೆಂಕಿ ಹಚ್ಚಲಾಯಿತು. ಇದನ್ನು ಕಂಡ ಆಂಗ್ಲರು ಬಳ್ಳಾರಿ ಜಿಲ್ಲಾ ಪ್ರದೇಶದ ಪ್ರಮುಖ ನಾಯಕರನ್ನು ಬಂಧಿಸಿದರು. ನಾಯಕರು ಬಂಧನಕ್ಕೊಳಗಾದರೂ ಯುವಕರು ತಮ್ಮ ಕಾರ್ಯದಲ್ಲಿ ನಿರತರಾಗಿದ್ದರು. ೧೧.೧೧.೧೯೪೨ರಂದು ಬಳ್ಳಾರಿ ಕೋಟೆಯ ಮೇಲೆ ಕಾಂಗ್ರೆಸ್ ಧ್ವಜವನ್ನು ಹಾರಿಸಿ ಆಂಗ್ಲರಿಗೆ ಅಚ್ಚರಿ ಮೂಡಿಸಿದರು. ನಂತರ ಸತ್ಯಾಗ್ರಹಿಗಳನ್ನು ಬಂಧಿಸಲಾಯಿತು. ೧೯೪೨ರ ಚಳವಳಿಯಲ್ಲಿ ಬಳ್ಳಾರಿ ಜಿಲ್ಲಾ ಪ್ರದೇಶದಲ್ಲಿ ಪ್ರತಿದಿನ ಯಾವುದಾದರೂ ಒಂದು ವಿಧ್ವಂಸಕ ಕೃತ್ಯಗಳು ನಡೆಯುತ್ತಲೇ ಇದ್ದವು. ಇದು ಆಂಗ್ಲ ಸರ್ಕಾರಕ್ಕೆ ಬಿಸಿ ಮುಟ್ಟುವ ರೀತಿಯಲ್ಲಿ ನಡೆದವು. ೧೯೪೨ರ ಚಳವಳಿ ನಡೆದ ಕಾರ್ಯಗಳಲ್ಲಿ ಶಾಲೆಗಳನ್ನು ಬಹಿಷ್ಕರಿಸಲಾಯಿತು. ಅಂಗಡಿ ಮುಂಗಟ್ಟುಗಳನ್ನು ಮುಚ್ಚಿ ಹರತಾಳ ಆಚರಿಸಲಾಯಿತು. ಅಲ್ಲಲ್ಲಿ ಸಾರ್ವಜನಿಕ ಸಭೆಗಳು ನಡೆದವು. ಟೆಲಿಫೋನ್ ಮತ್ತು ಟೆಲಿಗ್ರಾಫ್ ತಂತಿಗಳನ್ನು ಕತ್ತರಿಸಲಾಯಿತು. ಸರ್ಕಾರಿ ವಿರೋಧಿ ಭಿತ್ತಿಪತ್ರ ಹಂಚಲಾಯಿತು. ಹೆಂಡದಂಗಡಿಗಳ ಮುಂದೆ ಪಿಕೆಟಿಂಗ್ ನಡೆಸಲಾಯಿತು. ಮಾರ್ಗ ಮಧ್ಯದ ಸೇತುವೆಗಳನ್ನು ಕಡಿದು ಮುರಿದು ಹಾಕಲಾಯಿತು. ಟಪಾಲು ಪತ್ರಗಳನ್ನು ಅಪಹರಿಸಲಾಯಿತು. ಕೆಲವು

ಅಧಿಕಾರಿಗಳಿಂದ ಒತ್ತಾಯಪೂರ್ವಕವಾಗಿ ರಾಜೀನಾಮೆ ಕೊಡಿಸಲಾಯಿತು. ಇಂತಹ ಅನೇಕ ಕಾರ್ಯಕ್ರಮಗಳನ್ನು ಬಳ್ಳಾರಿ ಪ್ರದೇಶದಲ್ಲಿ ಯಶಸ್ವಿಯಾಗಿ ನಡೆಸಲಾಯಿತು. ಇದರಲ್ಲಿ ಅನೇಕ ಸತ್ಯಾಗ್ರಹಿಗಳು ಶಿಕ್ಷೆಗೊಳಗಾದರು.[೩೭]

೧೯೪೨ರ ಚಳವಳಿಯ ಕಾಲದಲ್ಲಿ ಜಯಪ್ರಕಾಶ್ ನಾರಾಯಣರು ಗುಪ್ತವಾಗಿ ಬಳ್ಳಾರಿ ಪ್ರದೇಶಕ್ಕೆ ಭೇಟಿ ನೀಡಿದ್ದರು.[೩೮] ಆ ಕಾಲದಲ್ಲಿ ಬಳ್ಳಾರಿ ಜಿಲ್ಲಾ ಪ್ರದೇಶದ 'ಹೊಸಪೇಟೆಯ ಬೆಲ್ಲದ ಚನ್ನಪ್ಪ' ಮತ್ತು 'ಬಿಗಟೇರಿ' ಗ್ರಾಮಕ್ಕೆ ಮುದೇನೂರು ಕೊಟ್ರ ಬಸಪ್ಪನವರ ಮನೆಗಳು ಭೂಗತ ಚಳವಳಿಗಾರರ ಆಶ್ರಯ ತಾಣಗಳಾಗಿದ್ದವು.[೩೯] ಬಳ್ಳಾರಿ ಪ್ರದೇಶದ ಸ್ವಾತಂತ್ರ್ಯ ಚಳವಳಿಯು ಪುರುಷರಿಗೆ ಮಾತ್ರ ಸೀಮಿತವಾಗಿರಲಿಲ್ಲ. ಇವರಲ್ಲಿ ಮಹಿಳೆಯರು ಭಾಗವಹಿಸಿದರು. ಅವರುಗಳಲ್ಲಿ ಪ್ರಮುಖರಾದವರೆಂದರೆ ಜಯಲಕ್ಷ್ಮಿ, ಕೋಗಳಿ ರುದ್ರಮ್ಮ, ಲಕ್ಷ್ಮಿದೇವಿ ಮತ್ತು ರತ್ನಕಟ್ಟಿ ಚನ್ನಬಸಮ್ಮ. ಇವರು ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿ ಒಂದಲ್ಲ ಒಂದು ರೀತಿಯಲ್ಲಿ ಶಿಕ್ಷೆ ಅನುಭವಿಸಿದರು.[೪೦] ೧೯೪೫ರ ವೇಳೆಗೆ ಎರಡನೇ ಮಹಾಯುದ್ಧ ಮುಕ್ತಾಯವಾಯಿತು. ೧೯೪೨ರ ಚಳವಳಿಯಲ್ಲಿ ಬಂಧಿಸಲಾಗಿದ್ದ ಚಳವಳಿಗಾರರನ್ನು ಬಿಡುಗಡೆ ಮಾಡಲಾಯಿತು. ಬ್ರಿಟನ್ ಎರಡನೇ ಮಹಾಯುದ್ಧದ ನಂತರ ಜಾಗತಿಕ ಮಟ್ಟದಲ್ಲಿ ತನ್ನ ಘನತೆಯನ್ನು ಉಳಿಸಿಕೊಳ್ಳಲು ಭಾರತದ ಸ್ವಾತಂತ್ರ್ಯದ ಸಮಸ್ಯೆಯನ್ನು ಬಗೆಹರಿಸಬೇಕಾಗಿತ್ತು. ಆ ಸಮಯದಲ್ಲಿ ಅಧಿಕಾರಕ್ಕೆ ಬಂದ ಲೇಬರ್ ಪಕ್ಷದ ಕ್ಲೆಮೆಂಟ್ ಆ್ಯಟ್ಲೀಯವರು ಪ್ರಧಾನಿಯಾದರು. ನಂತರ ಅನೇಕ ಸಮಾಲೋಚನೆ, ಸಂಧಾನ ಸೂತ್ರಗಳು ನಡೆದು, ೧೯೪೭ ಆಗಸ್ಟ್ ೧೫ ಮಧ್ಯರಾತ್ರಿಯಂದು ಭಾರತ ಸ್ವಾತಂತ್ರ್ಯವಾಯಿತು. ಬಳ್ಳಾರಿ ಪ್ರದೇಶವು ಆಂಗ್ಲರ ನೇರ ಆಡಳಿತಕ್ಕೆ ಒಳಪಟ್ಟಿದ್ದರಿಂದ ಅಂದೇ ಸ್ವಾತಂತ್ರ್ಯ ಪಡೆಯಿತು. ಇದಕ್ಕೆ ಸಂಡೂರು ಸಂಸ್ಥಾನ ಮಾತ್ರ ಹೊರತಾಗಿತ್ತು. ಆಗಸ್ಟ್ ೧೫ರಂದು ಬಳ್ಳಾರಿಯ 'ಸಾಂಬಮೂರ್ತಿ ಮೈದಾನ'ದಲ್ಲಿ ಕಾರ್ಯಕ್ರಮ ಏರ್ಪಡಿಸಲಾಯಿತು. ಅಂದು ಟೇಕೂರು ಸುಬ್ರಹ್ಮಣ್ಯರು ಧ್ವಜಾರೋಹಣ ಮಾಡಿದರು.[೪೧]

**೨.೬. ಏಕೀಕರಣ ಹೋರಾಟ**

ಭಾಷಾವಾರು ರಾಜ್ಯ ರಚನೆಗಾಗಿ ಆಂಧ್ರ ಪ್ರದೇಶದಲ್ಲಿ ಹೋರಾಟಗಳು ತೀವ್ರವಾಗಿ, ಕೇಂದ್ರ ಸರಕಾರವು ಆಂಧ್ರ ತೆಲುಗು ರಾಜ್ಯ ರಚನೆಗೆ ೧೯೫೩ರಲ್ಲಿ ಸಮ್ಮತಿಸಿತು. ಮದ್ರಾಸ್ ಆಂಗ್ಲರ ನಿಯಂತ್ರಣದಲ್ಲಿದ್ದ ಮತ್ತು ಬಹುಸಂಖ್ಯೆಯ ಕನ್ನಡ ಹಾಗೂ ತೆಲುಗು ಭಾಷಿಕರಿಂದ ಕೂಡಿದ್ದ ಬಳ್ಳಾರಿಯನ್ನು ಆಂಧ್ರ ಪ್ರದೇಶಕ್ಕೆ ಎಷ್ಟು ಪ್ರಮಾಣದಲ್ಲಿ ಹೇಗೆ ಸೇರಿಸಬಹುದೆಂದು ವಾಂಛೂ ಸಮಿತಿಯನ್ನು ರಚಿಸಲಾಯಿತು. ಆ ಸಮಿತಿಯ ವರದಿಯಂತೆ ಬಳ್ಳಾರಿಯ ಬಹುಭಾಗವು ಆಂಧ್ರ ಪ್ರದೇಶ ರಾಜ್ಯದಿಂದ ಹೊರ ಉಳಿಯಿತು. ನಂತರ ಕರ್ನಾಟಕದಲ್ಲಿಯೂ ಕನ್ನಡ ರಾಜ್ಯ ನಿರ್ಮಾಣವಾಗಬೇಕೆಂದು ಏಕೀಕರಣ ಹೋರಾಟವನ್ನು ತೀವ್ರಗೊಳಿಸಿದರು. ಇದರಲ್ಲಿ ಬಳ್ಳಾರಿ ಹೋರಾಟಗಾರರ ಪಾತ್ರ ಅವಿಸ್ಮರಣೀಯ. ಕೊ. ಚೆನ್ನಬಸಪ್ಪ, ವೈ. ಮಹಾಬಲೇಶ್ವರಶಾಸ್ತ್ರಿಗಳು, ಕಡ್ಡಿಪುಡಿ ವೀರಭದ್ರಪ್ಪ, ಸದಾಶಿವರೆಡ್ಡಿ, ಪಿಂಜಾರ್ ರಂಜಾನ್‌ಸಾಬ್ ಮುಂತಾದ ೩೭ಕ್ಕೂ ಹೆಚ್ಚಿನ ಹೋರಾಟಗಾರರು ಬಳ್ಳಾರಿಗರಾಗಿದ್ದರು. ಸೆಪ್ಟಂಬರ್ ೩೦, ೧೯೫೩ರಲ್ಲಿ ರಂಜಾನ್‌ಸಾಬ್‌ರವರು ಕರ್ನಾಟಕ ಏಕೀಕರಣಕ್ಕಾಗಿ ಹೋರಾಟ ಮಾಡಿ ಮಡಿದ ಮೊದಲ ಹುತಾತ್ಮರು. ಇವರ ಸಾವು ಏಕೀಕರಣದ ಹೋರಾಟಕ್ಕೆ ಹೊಸ ತಿರುವನ್ನು

ನೀಡಿತು. ನವೆಂಬರ್ ೧, ೧೯೫೬ರಂದು ಬಳ್ಳಾರಿ ಜಿಲ್ಲೆಯು ಮೈಸೂರು ರಾಜ್ಯಕ್ಕೆ ಸೇರಿ (ಅಕ್ಟೋಬರ್ ೧) ಕರ್ನಾಟಕ ಏಕೀಕರಣ ಪೂರ್ಣಗೊಂಡಿತು. ಆಗ ಬಳ್ಳಾರಿಯು ಬಳ್ಳಾರಿ, ಸಂಡೂರು, ಹೊಸಪೇಟೆ, ಸಿರುಗುಪ್ಪ, ಹಡಗಲಿ, ಹರಪನಹಳ್ಳಿ, ಮಲ್ಲಾಪುರ (ಹಗರಿಬೊಮ್ಮನಹಳ್ಳಿ, ನಂತರದಲ್ಲಿ) ಕೂಡ್ಲಿಗಿ ಒಟ್ಟು ಎಂಟು ತಾಲೂಕುಗಳಿಂದ ಕೂಡಿತು.[೨೨]

ಏಕೀಕರಣ ಸಂದರ್ಭದ ಬಳ್ಳಾರಿಗೂ, ಸುವರ್ಣ ಕರ್ನಾಟಕ ಬಳ್ಳಾರಿಗೂ ಮಧ್ಯ ಹಲವಾರು ವ್ಯತ್ಯಾಸಗಳಿವೆ. ಇಂದು ಬಳ್ಳಾರಿಯು ೮೪೧೧ ಚ.ಕಿ.ಮೀ ವಿಸ್ತೀರ್ಣವನ್ನು ಹೊಂದಿದ್ದು, ೨೦೧೧ರ ಜನಗಣತಿಯ ಪ್ರಕಾರ ೨೦, ೨೭, ೧೪೦ ಜನಸಂಖ್ಯೆ ಇದ್ದು, ಜನಸಂಖ್ಯೆ ಬೆಳವಣಿಗೆ ಶೇ.೨೨.೧೦ರಷ್ಟು ಹೊಂದಿದೆ.[೨೩] ಕರ್ನಾಟಕದಲ್ಲಿ ಇಂದು ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ, ಹೈದರಾಬಾದ್ ಕರ್ನಾಟಕ, ಮುಂಬೈ ಕರ್ನಾಟಕ ಎಂಬ ಭಾಗಗಳಿದ್ದು, ಬಳ್ಳಾರಿಯನ್ನು ಬೇಕೆಂದಾಗ ಎಲ್ಲಾ ಭಾಗಗಳಿಗೂ ಸೇರಿಸುವ, ಬೇಡವೆಂದಾಗ ಯಾವೊಂದು ಭಾಗಕ್ಕೂ ಸೇರಿಸದೆ ಇರುವ ಸನ್ನಿವೇಶ ಕಂಡುಬರುತ್ತದೆ.

ಬಳ್ಳಾರಿ ಪ್ರದೇಶವು ಸರ್ವಧರ್ಮಗಳ ಸಮನ್ವಯತೆ ಹೊಂದಿತ್ತು. ಅನೇಕ ಧರ್ಮಗಳು ಇಲ್ಲಿ ಆಶ್ರಯಪಡೆದಿದ್ದವು. ಶೈವ, ವೈಷ್ಣವ, ಜೈನ, ಬೌದ್ಧ, ವೀರಶೈವ, ಮುಸ್ಲಿಂ, ಕ್ರೈಸ್ತ ಧರ್ಮಗಳು ನೆಲೆಯೂರಿದ್ದವು. ಪ್ರಾಚೀನ ಕಾಲದಲ್ಲಿ ಶೈವ, ವೈಷ್ಣವ ಧರ್ಮ ಪ್ರಬಲವಾಗಿದ್ದರೆ, ನಂತರದಲ್ಲಿ ಜೈನ, ಬೌದ್ಧ ಧರ್ಮ ಪ್ರಬಲಗೊಂಡವು. ಅಶೋಕನ ಕಾಲದಲ್ಲಿ ಬಳ್ಳಾರಿ ಬೌದ್ಧಧರ್ಮದ ಪ್ರಚಾರ ಕೇಂದ್ರವಾಗಿತ್ತು. ಜೈನ ಧರ್ಮ ಪ್ರಬಲವಾಗಿ ಬೆಳೆದು ಅನೇಕ ಬಸದಿಗಳು, ಚೈತ್ಯಾಲಯಗಳು ನಿರ್ಮಾಣಗೊಂಡವು. ಈ ಸ್ಥಳಕ್ಕೆ ತಪಸ್ಸಿಗೆ ಯಾತ್ರೆಗೆ ಸಲ್ಲೇಖನ ವ್ರತಕ್ಕೆಂದು ಅನೇಕರು ಆಗಮಿಸುತ್ತಿದ್ದರು. ಅನೇಕ ಜಿನಾಲಯಗಳಿದ್ದವೆಂದು ಶಾಸನ ಉಲ್ಲೇಖಿಸುತ್ತದೆ. ಕ್ರಿ.ಶ.೨ನೇ ಶತಮಾನದಿಂದ ೧೫೬೦ರವರೆಗೆ ಈ ಸ್ಥಳ ಜೈನ ಕೇಂದ್ರವಾಗಿತ್ತೆಂದು ತಿಳಿಯುತ್ತದೆ.

ಹಂಪಿಯಲ್ಲಿ ದೊರೆತಿರುವ ಶಾಸನ ಹಾಗೂ ಕೊಪ್ಪಳ ಗವಿಮಠದಲ್ಲಿ ದೊರೆತಿರುವ ಹೋಳಿಯ ಹಂಪಯ್ಯನ ಶಾಸನ ವೀರಶೈವ ಧರ್ಮ ಪ್ರಭಾವ ಬೀರಿತ್ತೆಂದು ತಿಳಿಸುತ್ತದೆ. ವಿಜಯನಗರ ಕಾಲದ ಶಾಸನವು ಈ ಭಾಗದಲ್ಲಿ ವೈಷ್ಣವ ಧರ್ಮ ಪ್ರಬಲವಾಗಿತ್ತೆಂದು ತಿಳಿಸುತ್ತದೆ. ಬಳ್ಳಾರಿಯಾದ್ಯಂತ ಕಂಡುಬರುವ ಶಿವದೇವಾಲಯಗಳು ಶೈವಧರ್ಮದ ಪ್ರಭಾವಕ್ಕೆ ಸಾಕ್ಷಿಯಾಗಿದೆ. ಅದೇ ರೀತಿ ಬಿಜಾಪುರದ ಆದಿಲ್‌ಶಾಹಿಗಳು, ಹೈದರ್‌ಅಲಿ ಟಿಪ್ಪುಸುಲ್ತಾನ, ನಿಜಾಮ ಮೊದಲಾದ ಮುಸ್ಲಿಂ ಆಳ್ವಿಕೆಯಿಂದಾಗಿ ಮುಸ್ಲಿಂ ಸಂಸ್ಕೃತಿಯು ಬೆಳೆದಿದೆ. ಆಂಗ್ಲರ ಆಳ್ವಿಕೆಯಿಂದ ಕ್ರೈಸ್ತಧರ್ಮವು ಆಶ್ರಯ ಪಡೆದಿತ್ತೆಂದು ಹೇಳಬಹುದಾಗಿದೆ. ಹೀಗಾಗಿ ಬಳ್ಳಾರಿ ಎಲ್ಲ ಧರ್ಮಗಳ ಬೀಡಾಗಿತ್ತೆಂದು ಕಂಡುಬರುತ್ತದೆ.

ಬಳ್ಳಾರಿ ಪ್ರದೇಶದಲ್ಲಿ ಶಿಕ್ಷಣ ಕ್ಷೇತ್ರ ತನ್ನದೇ ಆದ ಮಹತ್ವ ಪಡೆದುಕೊಂಡಿತ್ತೆಂದು ತಿಳಿಯುತ್ತದೆ. ಅಗ್ರಹಾರಗಳು, ಮಠಗಳು, ಘಟಕಗಳು, ಅಸಂಖ್ಯಾತವಾಗಿದ್ದವು. ಹಂಪಿಯಲ್ಲಿದ್ದ ವಿಶ್ವವಿದ್ಯಾಲಯದಲ್ಲಿ ದೂರದ ದೇಶ-ವಿದೇಶದಿಂದ ವಿದ್ಯಾರ್ಥಿಗಳು ಬಂದು ವ್ಯಾಸಂಗ ಮಾಡುತ್ತಿದ್ದರೆಂದು ಶಾಸನ ಉಲ್ಲೇಖಿಸುತ್ತದೆ. ಹಂಪಿ ದಕ್ಷಿಣ ಭಾರತದ ಪ್ರಮುಖ ಘಟಕಗಳಲ್ಲಿ ಒಂದಾಗಿತ್ತು. ಕ್ರಿ.ಶ.೧೨೪೭ರಿಂದ ೧೬೪೮ರವರೆಗಿನ ಆರುನೂರು

ವರ್ಷಗಳಲ್ಲಿ ಪ್ರತಿಶತ ೧೨ರಷ್ಟು ಜನರ ಆಡುಭಾಷೆ ಹಾಗೂ ಮಾಧ್ಯಮ ಉರ್ದು, ಸಂಸ್ಕೃತ, ತೆಲುಗು ಆಗಿತ್ತು. ಕನ್ನಡ ಮಾತೃಭಾಷೆಯಾಗಿ ಮಾತ್ರ ಚಾಲನೆಯಲ್ಲಿತ್ತೆಂದು ತಿಳಿಯುತ್ತದೆ.

ಶಿಲ್ಪಕಲೆಯಲ್ಲಿ ಬಳ್ಳಾರಿ ಮಹತ್ವದ ಸ್ಥಾನಪಡೆದಿದೆ. ಜಿನಾಲಯಗಳ ಕೇಂದ್ರ ಸ್ಥಾನವಾಗಿತ್ತು. ಅನೇಕ ರಾಜಮನೆತನದವರ ಅಸಂಖ್ಯಾತ ದೇವಾಲಯಗಳಿವೆ. ದ್ರಾವಿಡ, ವೇಸರ, ನಾಗರಶೈಲಿಯಲ್ಲಿ ನಿರ್ಮಿಸಲ್ಪಟ್ಟಿರುವ ದೇವಾಲಯಗಳು ಎಲ್ಲೆಡೆ ಕಂಡುಬರುತ್ತವೆ. ದೇವಾಲಯ ಚಕ್ರವರ್ತಿ ಎಂದು ಬಣ್ಣಿಸಲ್ಪಟ್ಟಿರುವ ಹಂಪಿ ವಿರೂಪಾಕ್ಷೇಶ್ವರ ದೇವಾಲಯ, ಉದ್ಧಾನವೀರಭದ್ರ ದೇವಾಲಯ, ಕಡಲೆಕಾಳು ಗಣಪತಿ ದೇವಾಲಯ, ಸಾಸಿವೆಕಾಳು ಗಣಪತಿ ದೇವಾಲಯ, ವಿಜಯವಿಠಲ್ ದೇವಾಲಯ, ಶ್ರೀಕೃಷ್ಣ ದೇವಾಲಯ, ಹಜಾರರಾಮ ದೇವಾಲಯ, ಕುರುವತ್ತಿ ಬಸವೇಶ್ವರ ದೇವಾಲಯ, ಮೈಲಾರಲಿಂಗೇಶ್ವರ ದೇವಾಲಯ ಮೊದಲಾದವು ಈ ಭಾಗದ ಪ್ರಸಿದ್ಧ ಧಾರ್ಮಿಕ ಕೇಂದ್ರಗಳಲ್ಲದೆ, ಶಿಲ್ಪಕಲೆಗೆ ಪ್ರಸಿದ್ಧವಾದ ಸ್ಥಳಗಳಾಗಿವೆ.

ಬಳ್ಳಾರಿ ಪ್ರದೇಶವು ಪ್ರಾಚೀನ ಕಾಲದಿಂದಲೂ ತನ್ನದೇ ಆದ ಚಾರಿತ್ರಿಕ, ಧಾರ್ಮಿಕ ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿತ್ತಲ್ಲದೆ, ಶಿಲ್ಪಕಲೆಗೆ ತನ್ನದೇ ಆದ ವಿಶಿಷ್ಟ ಕೊಡುಗೆಗಳನ್ನು ನೀಡಿರುವುದು ಕಂಡುಬರುತ್ತದೆ.

**ಟಿಪ್ಪಣಿಗಳು**

೧. ಬಳ್ಳಾರಿ ಡಿಸ್ಟ್ರಿಕ್ಟ್ ಗೆಜೆಟಿಯರ್, ಮೈಸೂರ್ಸ್ ಸ್ಟೇಟ್, ಮೈಸೂರು ಸರ್ಕಾರ, ಬೆಂಗಳೂರು, ೧೯೭೨, ಪುಟ:೧

೨. ಬಳ್ಳಾರಿ ಎಂಬ ಹೆಸರಿನ ಮುಂದೆ ಒಂದು ದಂತಕತೆ ಇದೆ. ಬಳ್ಳಾರಿ ಸಮೀಪ ಕೋಳೂರಿನಲ್ಲಿ ಬಳ್ಳೇಶ ವಲ್ಲಯ್ಯನೆಂಬ ಶಿವಭಕ್ತ ವ್ಯಾಪಾರಸ್ಥನಿದ್ದನು. ಈತನು ನಿತ್ಯ ಶಿವಪೂಜೆ ನಂತರವೇ ಊಟ ಸೇವಿಸುತ್ತಿದ್ದನು. ಒಮ್ಮೆ ಬಳ್ಳಾರಿಗೆ ಬಂದ ವಲ್ಲೇಶ ಶಿವಲಿಂಗ ಇಲ್ಲದ ಕಾರಣಕ್ಕಾಗಿ ತನ್ನ ವ್ಯಾಪಾರಿ ಬಳ್ಳ(ಸೇರು)ವನ್ನು ಬೋರಲಾಗಿಟ್ಟು ಪೂಜಿಸಿದನು. ಇವನ ಶಿವಭಕ್ತಿಯನ್ನು ಕಂಡ ಶಿವನು ಬಳ್ಳದಲ್ಲಿಯೇ ಪ್ರತ್ಯಕ್ಷನಾಗಿ ದರ್ಶನ ನೀಡಿದನು. ಈ ಶಿವಭಕ್ತನಾದ ಬಳ್ಳೇಶ ವಲ್ಲಯ್ಯನಿಂದಾಗಿ ಬಳ್ಳಾರಿ ಹೆಸರು ಬಂತು ಎಂಬ ದಂತಕತೆ ಪ್ರಚಲಿತದಲ್ಲಿದೆ.

ಬಳ್ಳಾರಿ ಎಂಬ ದೇವತೆಯ ಹೆಸರಿನಿಂದ ಈ ಪ್ರದೇಶಕ್ಕೆ ಬಳ್ಳಾರಿ ಎಂಬ ಹೆಸರು ಬಂದಿರಬಹುದು. ಕೆಲವು ಶಾಸನಗಳಲ್ಲಿ 'ಬನದ ಬಳ್ಳಾರಿ' ಎಂಬ ಉಲ್ಲೇಖ ಕಾಣಬಹುದು. ಬಳ್ಳಾರಿ ದೇವತೆಯ ದೇವಾಲಯಗಳು ಊರುಬಿಟ್ಟು ಅಡವಿಯಲ್ಲಿ ಇರುತ್ತಿದ್ದವು. ಆದ್ದರಿಂದ 'ಬನದ ಬಳ್ಳಾರಿ' ಎಂಬ ಹೆಸರು ರೂಢಿಗೆ ಬಂದು ನಂತರ ಕೇವಲ ಬಳ್ಳಾರಿ ಆಗಿರಬಹುದು. ಪ್ರಸ್ತುತ ಬಳ್ಳಾರಿಯಲ್ಲಿ ಪ್ರಚಲಿತದಲ್ಲಿರುವ 'ಬಳ್ಳಾರಿ' ಮತ್ತು 'ದುರುಗಮ್ಮ' ಎಂಬ ಹೆಸರುಗಳು ಒಂದೇ ದೇವತೆಯ ಹೆಸರುಗಳಾಗಿವೆ. ನಾಲ್ಕು ಕೈಗಳಿರುವ ದೇವತೆಯ ವಿಗ್ರಹದ ಕೆಳಗಡೆ ಕುಳಿತ ಭಂಗಿಯ ಪುರುಷ ವಿಗ್ರಹವಿದೆ. ಬಲ ಮಗ್ಗುಲಲ್ಲಿ ಗೂಗೆಯಿರುವುದರಿಂದ ಗೂಗೆ ಬಳ್ಳಾರಿಯ ಚಿಹ್ನೆಯಾಗಿರಬಹುದು. ಪಾದಪೀಠದಲ್ಲಿ ಮಲಗಿದ ಮನುಷ್ಯನ ಚಿತ್ರ ಬಿಡಿಸಲಾಗಿದೆ. ಒಂದು ಕಡೆ ತೋಳ ಮತ್ತು ನಾಯಿ ಮನುಷ್ಯನನ್ನು ತಿನ್ನಲು ಕಾಯುವಂತೆ ಕೆತ್ತಲಾಗಿದೆ. ಈ ದೇವತೆಗೆ ಬನದವ್ವ ಅಥವಾ ಬನಶಂಕರಿ ಎಂದು ಕರೆಯಲಾಗುತ್ತದೆ.

೩. ಹೊಸಪೇಟೆ ತಾಲ್ಲೂಕು ದರ್ಶನ, ಮಹದೇವ ಸಿ., ಸುಬ್ಬಣ್ಣ ರೈ, ಮಾಧವ ಪೆರಾಜೆ, ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨, ಪುಟ: ೮

೪. ಕರ್ನಾಟಕ ಪುರಾತತ್ತ್ವ ನೆಲೆಗಳು, ಶಿವತಾರಕ ಕೆ.ಬಿ., ಹಂಪಿ ಕನ್ನಡ ವಿಶ್ವವಿದ್ಯಾಲಯ, ೨೦೦೧, ಪುಟ: ೩೫೨-೩೭೯

೫. ಅದೇ, ಪುಟ: ೩೫೨-೩೭೯

೬. ಅದೇ, ಪುಟ: ೩೫೨-೩೭೯

೭. ಹೊಸಪೇಟೆ ದರ್ಶನ ಮಹದೇವ ಸಿ, ಸುಬ್ಬಣ್ಣ ರೈ, ಮಾಧವ ಪೆರಾಜೆ, ಪುಟ. ೯, ೨೦೦೨

೮. ಮೈಸೂರು ಸ್ಟೇಟ್ ಬಳ್ಳಾರಿ ಡಿಸ್ಟ್ರಿಕ್ಟ್ ಗೆಜೆಟಿಯರ್, ಅಭಿಶಂಕರ ಕೆ. (ಸಂ.) ಸರಕಾರಿ ಮುದ್ರಣಾಲಯ, ಬೆಂಗಳೂರು, ೧೯೭೨, ೧.

೯. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ನಾಗಯ್ಯ ಜಿ.ಎಂ., ಲೋಹಿಯ ಪ್ರಕಾಶನ, ಬಳ್ಳಾರಿ, ೨೦೦೨, ಪುಟ: ೨೪

೧೦ ಹೊಸಪೇಟೆ ತಾಲ್ಲೂಕು ದರ್ಶನ, ಮಹದೇವ ಸಿ., ಸುಬ್ಬಣ್ಣ ರೈ., ಮಾಧವ ಪೆರಾಜೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨, ಪುಟ: ೧೩

೧೧. ಅದೇ, ಪುಟ: ೧೪

೧೨ ಅದೇ, ಪುಟ: ೧೯

೧೩ ಅದೇ, ಪುಟ: ೨೦

೧೪. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ನಾಗಯ್ಯ ಜಿ.ಎಂ., ಲೋಹಿಯ ಪ್ರಕಾಶನ, ಬಳ್ಳಾರಿ, ೨೦೦೨, ಪುಟ: ೪೮

೧೫. ಮೈಸೂರು ಸ್ಟೇಟ್ ಬಳ್ಳಾರಿ ಡಿಸ್ಟ್ರಿಕ್ಟ್, ಗೆಜೆಟಿಯರ್, ಅಭಿಶಂಕರ ಕೆ., (ಸಂ.) ಸರಕಾರಿ ಮುದ್ರಣಾಲಯ, ಬೆಂಗಳೂರು, ೧೯೭೨, ಪುಟ: ೫೦-೫೨

೧೬. ಅದೇ, ಪುಟ: ೫೩

೧೭. ರಿಲೀಜಿಯನ್ ಇನ್ ವಿಜಯನಗರ ಎಂಪೈರ್, ಕೊಂಡೂರಿ ಸರೋಜಿನಿ ಸ್ಟರ್ಲಿಂಗ್ ಪಬ್ಲಿಕೇಷನ್ಸ್ ಪ್ರೈ.ಲಿ, ನ್ಯೂಡೆಲ್ಲಿ, ೧೯೯೧, ಪುಟ: ೨೧

೧೮. ಅದೇ, ಪುಟ: ೧೯೨

೧೯. ಹರಪನಹಳ್ಳಿ ಪಾಳೆಯಗಾರರು, ಸದಾಶಿವಪ್ಪ ಕು. ಬಾ., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೯೬

೨೦. ಗುಡೇಕೋಟೆ ಒಂದು ಚಾರಿತ್ರಿಕ ಅಧ್ಯಯನ, ಬಸವರಾಜ ಎಂ. ಎಸ್, ಕನ್ನಡ ವಿಶ್ವವಿದ್ಯಾಲಯಕ್ಕೆ ಅಪ್ರಕಟಿತ, ಸಲ್ಲಿಸಿದ ಎಂ.ಫಿಲ್ ಪ್ರಬಂಧ, ೨೦೦೨, ಪುಟ. ೨೨.

೨೧. ಮೈಸೂರು ಸ್ಟೇಟ್ ಬಳ್ಳಾರಿ ಡಿಸ್ಟ್ರಿಕ್ಟ್, ಗೆಜೆಟಿಯರ್, ಅಭಿಶಂಕರ ಕೆ. (ಸಂ.), ಸರಕಾರಿ ಮುದ್ರಣಾಲಯ, ಬೆಂಗಳೂರು, ೧೯೭೨, ಪುಟ: ೭೭

೨೨. ಪೂರ್ವೋಕ್ತ, ಸಂಪುಟ-೨, ಸಿ.ಡಿ. ಮ್ಯಾಕ್ಲಿನ್, ಪುಟ: ೨೭೭

೨೩. ಮೈಸೂರು ಸ್ಟೇಟ್ ಬಳ್ಳಾರಿ ಡಿಸ್ಟ್ರಿಕ್ಟ್, ಗೆಜೆಟಿಯರ್, ಅಭಿಶಂಕರ ಕೆ. (ಸಂ.), ಸರಕಾರಿ ಮುದ್ರಣಾಲಯ, ಬೆಂಗಳೂರು, ೧೯೭೨, ಪುಟ: ೭೭-೭೮

೨೪. ಪೂರ್ವೋಕ್ತ ಸಂಪುಟ-೨, ಸಿ.ಡಿ ಮ್ಯಾಕ್ಲಿನ್, ಪುಟ: ೫೯

೨೫. ಪೂರ್ವೋಕ್ತ ಸಂಪುಟ-೨, ಸಿ.ಡಿ. ಮ್ಯಾಕ್ಲಿನ್, ಪುಟ: ೫೦೧

೨೬. ಕರ್ನಾಟಕ ಚರಿತ್ರೆ, ಪ್ರೊ. ಷೇಕ್‌ಅಲಿ, ಸಂಪುಟ-೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೭, ಪುಟ: ೨೨೨

೨೭. ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ, ಶೇಷಾದ್ರಿ ಬಿ, ಚಂದ್ರಶೇಖರ್ ಟಿ.ಆರ್. (ಸಂ.) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮, ಪುಟ: ೨೨

೨೮. ಅದೇ, ಪುಟ: ೩೫

೨೯. ಅದೇ, ಪುಟ: ೩೭

೩೦. ಅದೇ, ಪುಟ: ೩೯

೩೧. ಅದೇ, ಪುಟ: ೩೯-೪೦

ಅಧ್ಯಾಯ ಮೂರು

# ಲಂಬಾಣ ಸಮುದಾಯದ ಚಾರಿತ್ರಿಕ ಹಿನ್ನೆಲೆ

೩.೧ ಲಂಬಾಣಿ ಪದ ನಿಷ್ಪತ್ತಿ

೩.೨ ಲಂಬಾಣಿಗರ ಹೆಸರುಗಳು: ವಿವಿಧ ಚಾರಿತ್ರಿಕ ಸಂದರ್ಭಗಳ ಹಿನ್ನೆಲೆ

೩.೩ ಲಂಬಾಣಿಗರಿಗೆ ಸಂಬಂಧಿಸಿದ ಪ್ರಮುಖ ಜಾತಿಗಳು

೩.೪ ಲಂಬಾಣಿಗರ ಮೂಲ

## ಲಂಬಾಣಿ ಸಮುದಾಯದ ಚಾರಿತ್ರಿಕ ಹಿನ್ನೆಲೆ

ಆದಿಕಾಲದ ಮಾನವ ಅಲೆಮಾರಿ ಜೀವನ ನಡೆಸುತ್ತಿದ್ದ. ಬೇಟೆ ಮತ್ತು ಆಹಾರ ಸಂಗ್ರಹಣೆಯನ್ನು ಪ್ರಮುಖ ವೃತ್ತಿಯನ್ನಾಗಿಸಿಕೊಂಡಿದ್ದ ಆದಿಮಾನವನಿಗೆ ಮರ, ಗಿಡ, ಗುಹೆ, ಪೊಟರೆಗಳು ರಕ್ಷಣಾ ಸ್ಥಳಗಳಾಗಿದ್ದವು. ಕಲ್ಲಿನಿಂದ ಮಾಡಿದ ಆಯುಧಗಳನ್ನು ಹಾಗೂ ಬಿದಿರು ಬಳ್ಳಿಗಳಿಂದ ಮಾಡಿದ ಬಿಲ್ಲು ಬಾಣಗಳನ್ನು ಬೇಟೆಗಾಗಿ ಬಳಸತೊಡಗಿದ. ದಿನವಿಡೀ ಪ್ರಾಣಿಗಳ ಹಿಂದೆ ಅಲೆಯುತ್ತ ಬೇಟೆಯಾಡಿ ಅವುಗಳ ಹಸಿ ಮಾಂಸವನ್ನು ಸೇವಿಸುತ್ತಿದ್ದ. ಕಾಲಾನಂತರ ಪ್ರಾಣಿಗಳನ್ನು ಬೇಯಿಸಿ ತಿನ್ನುವುದನ್ನು ಕಲಿತ. ನಂತರ ಬೇಟೆಯಿಂದ ಕವಲೊಡೆದು ಪಶುಪಾಲನೆಯನ್ನು ಕೈಗೊಂಡನು. ಕೆಲವು ಪ್ರಾಣಿಗಳನ್ನು ಸಾಕಲಾರಂಭಿಸಿದನು. ಅವುಗಳಲ್ಲಿ ಹಸು, ಎಮ್ಮೆ, ಆಡು, ಕುರಿ, ಕತ್ತೆ ಮೊದಲಾದವುಗಳು ಅತಿಯಾದ ಪ್ರಯಾಸವಿಲ್ಲದೆ ದೊರೆತವು. ಆದರೆ ಬೇಟೆಗಾರರೆಲ್ಲರೂ ಪಶುಪಾಲಕರಾಗಿರಲಿಲ್ಲ. ಪಶುಪಾಲಕರು ತಮ್ಮ ದನಕರುಗಳ ಜೊತೆಗೆ ಹುಲ್ಲು, ನೀರು ಸಮೃದ್ಧಿಯಾಗಿರುವ ಫಲವತ್ತಾದ ಭೂಮಿಯಲ್ಲಿ, ನದಿ ತೀರಗಳಲ್ಲಿ ಹಾಗೂ ಎತ್ತರವಾದ ಗುಡ್ಡಗಾಡು ಪ್ರದೇಶಗಳಲ್ಲಿ ವಾಸಿಸತೊಡಗಿದರು. ಈ ಪ್ರದೇಶಗಳಲ್ಲಿ ಸೌಲಭ್ಯಗಳ ಕೊರತೆಯುಂಟಾದಾಗ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುತ್ತಿದ್ದರು. ಕಾಲಕ್ರಮೇಣ ಪಶುಪಾಲನೆಯಲ್ಲಿಯೇ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಕೃಷಿಯನ್ನು ಅವಲಂಬಿಸಿದರು. ನಂತರ ಒಂದೆಡೆ ಸ್ಥಿರವಾಗಿ ನೆಲೆಯೂರಿದರು. ಕೃಷಿಯ ಜೊತೆಗೆ ಪಶುಪಾಲನೆಯನ್ನು ಕೈಗೊಂಡ ಮಾನವ ತಾನು ನೆಲೆಸಿದ ಸ್ಥಳದಲ್ಲಿ ಹಟ್ಟಿಗಳನ್ನು ನಿರ್ಮಿಸಿಕೊಂಡನು. ನಂತರ ಹಲವಾರು ಹಟ್ಟಿಗಳು ಸೇರಿ ಊರುಗಳಾದವು. ಇದರಿಂದ ಆಹಾರದ ಸಮಸ್ಯೆಯು ಸಾಕಷ್ಟು ಮಟ್ಟಿಗೆ ಕಡಿಮೆಯಾಯಿತಲ್ಲದೆ, ಜನರಿಗೆ ಬಿಡುವು ದೊರೆಯಲಾರಂಭಿಸಿದ್ದರಿಂದ ಸಂಗೀತ, ಸಾಹಿತ್ಯ, ಕಲೆಗಳು ಸೃಷ್ಟಿಯಾದವು. ಹೀಗೆ ನಾಗರಿಕತೆಯೆಡೆಗೆ ಸಾಗಿದ ಮಾನವ ಸಮುದಾಯದಲ್ಲಿ ಹಲವು ಕಾರಣಗಳಿಂದ ಅನೇಕ ಸಣ್ಣ-ದೊಡ್ಡ ಪಂಗಡಗಳಾದವು. ಕಾಲಾನಂತರ ಪಂಗಡಗಳ ನಡುವೆ ಪರಸ್ಪರ ಸಂಬಂಧ ಕಡಿದು ಹೋಗಿ ತಮ್ಮ ತಮ್ಮ ಜಾತಿಗಳು ಸ್ವತಂತ್ರವೆಂದೇ ಭಾವಿಸಿಕೊಳ್ಳಲಾರಂಭಿಸಿದವು. ಅಲ್ಲದೆ ಅವುಗಳು ತಮ್ಮದೇ ಆದ ಧಾರ್ಮಿಕ, ಸಾಮಾಜಿಕ, ಆಚಾರ ವಿಚಾರಗಳನ್ನು ಹೊಂದಿದ್ದವು. ಅವುಗಳಲ್ಲಿ ಲಂಬಾಣಿ ಸಮುದಾಯವು ಒಂದು.

### ೩.೧. ಲಂಬಾಣಿ ಸಮನಾರ್ಥಕ ಪದಗಳ ನಿಷ್ಪತ್ತಿ

ಭಾರತದಾದ್ಯಂತ ಇವರಿಗೆ ವಿವಿಧ ಹೆಸರುಗಳಿಂದ ಗುರುತಿಸಲು ಬಂಜಾರ ಅಥವಾ ಲಂಬಾಣಿ ಪದದ ಮೇಲೆ ವಿವಿಧ ಪ್ರಾದೇಶಿಕ ಭಾಷೆಗಳ ಪ್ರಭಾವ ಹಾಗೂ ಕಾಲಕ್ಕೆ ತಕ್ಕಂತೆ ಇವರ ವೃತ್ತಿಯಲ್ಲಾದ ಬದಲಾವಣೆಯೇ

ಕಾರಣ ಎಂಬುದಾಗಿ ಹೇಳಬಹುದು. ಮೂಲಬಂದದಲ್ಲಿ ಲವಣ ಹಾಗೂ ಇತರೇ ಖಾದ್ಯ ಪದಾರ್ಥಗಳ ವ್ಯಾಪಾರವನ್ನು ಕೈಗೊಂಡು ಉತ್ತರದಿಂದ ದಕ್ಷಿಣಕ್ಕೆ ಪಸರಿಸಿದ ಇವರು 'ಬಂಜಾರ' ಹಾಗೂ 'ಲಂಬಾಣಿ' ಎಂಬ ಕೆಲವೇ ಕೆಲವು ಹೆಸರುಗಳಿಂದ ಕರೆಯಲ್ಪಟ್ಟರು.[೨] ಭಾರತದಾದ್ಯಂತ ಹರಡಿರುವ ಲಂಬಾಣಿಗಳೆಲ್ಲರೂ ಒಂದೇ ಬುಡಕಟ್ಟು ವರ್ಗಕ್ಕೆ ಸೇರಿದ್ದರೂ, ವಿವಿಧ ರಾಜ್ಯಗಳಲ್ಲಿ ವಿವಿಧ ಹೆಸರುಗಳಿಂದ ಕರೆಯಲ್ಪಡುತ್ತಾರೆ. ಇವರನ್ನು ಸುಮಾರು ೩೦ಕ್ಕೂ ಹೆಚ್ಚು ಪರ್ಯಾಯ ಹೆಸರುಗಳಿಂದ ಗುರುತಿಸಲಾಗಿದೆ. ಅವುಗಳೆಂದರೆ ''ಬಂಜಾರ, ಬಂಜಾರೆ, ಬಂಜಾರಿ, ಬಣಜಾರ, ಲಭನ, ಲಭಾನಿ, ಲಂಬಾಂಡ, ಲಂಬಾಡಿ, ಲಮಾಣಿ, ಲಂಬಾಣಿ, ಲಮಾನ, ಬ್ರಿಜವಾಸಿ, ಗಾವಾಲ ಗಮಳಿಯ, (ಗಾವರಿಯೆ) ಗವಾರಿಯೆ, ಗೌರಿಯ, (ಗವಾರಾ) ಸುಗಾಲಿ, ಲದಣಿಯ, (ಲಾದೇನಿಯಾ) ಬಳದಿಯ ಲೋಭಾವ, (ಲಭಾನ) ಶಿಕಾರಿವಾಲ, ಶಿಂಗಾಡೆ, ಬಂಜಾರಿ, ಶಿರಕಿಬಂದ, ಬಾಣದ ಕಂಗಸಿಯಾ ಕಂಗಿ, ಪಂರಝೂರ, ಚರಣ್ ನಟ್ ಅಲ್ಲದೇ ಇವರು ತಮ್ಮನ್ನು ತಾವು ಗೋರ್‌ಬಾಯಿಗಳೆಂಬುದಾಗಿ ಕರೆಯುತ್ತಾರೆ.[೩]

ಹದಿನಾರನೆಯ ಶತಮಾನದಲ್ಲಿ ಬ್ರಿಟಿಷರ ಆಗಮನದಿಂದ ಸಾರಿಗೆ ವ್ಯವಸ್ಥೆಯಲ್ಲಿ ಮಹತ್ತರ ಬದಲಾವಣೆಯಾಗಿ ರೈಲುಯುಗ ಆರಂಭವಾಯಿತು. ಇದರಿಂದ ಇವರ ಮೂಲವೃತ್ತಿಯಾದ ವ್ಯಾಪಾರ, ಸಾಗಣೆ ಇತ್ಯಾದಿಗಳನ್ನು ಕೈಬಿಟ್ಟು ಇತರ ಉಪ-ಕಸುಬುಗಳಿಗೆ ವರ್ಗಾಯಿಸಲ್ಪಟ್ಟರು. ಹೀಗಾಗಿ ಈ ಜನರು ಕಾಲಾನಂತರದಲ್ಲಿ ''ಆಯಾ ವೃತ್ತಿಗಳನ್ನಾಧರಿಸಿ ವಿವಿಧ ಹೆಸರುಗಳಿಂದ ಸಂಬೋಧಿಸಲ್ಪಟ್ಟರು. ಅಲ್ಲದೆ ಪ್ರಾಂತೀಯ ಭಾಷೆಗಳ ಪ್ರಭಾವದಿಂದ ಪದದ ಉಚ್ಚಾರಣೆಯಲ್ಲಾದ ಬದಲಾವಣೆಯೇ ಇದಕ್ಕೆ ಕಾರಣವಾಯಿತು.[೪]

## ೩.೧. ಲಂಬಾಣಿ ಪದದ ನಿಷ್ಪತ್ತಿ

ಲಂಬಾಣಿ ಪದವು ಶ್ರಮಿಕ ಜಾತಿಗಳಲ್ಲಿ ಒಂದಾದ ಲಂಬಾಣಿಗರಿಗೆ ಬಂದದ್ದಾದರೂ ಹೇಗೆಂಬ ಪ್ರಶ್ನೆಗೆ ಮೊದಲು ಉತ್ತರವನ್ನು ಕಂಡುಕೊಳ್ಳಬೇಕಾದ ಅಗತ್ಯತೆ ಇದೆ. ಈ ಹಿನ್ನೆಲೆಯಲ್ಲಿ 'ಲಂಬಾಣಿ' ಪದಕ್ಕೆ ಸಂಬಂಧಿಸಿದಂತೆ ವಿವಿಧ ಅರ್ಥಕೋಶಗಳು ನೀಡಿರುವ ಅರ್ಥವಿಶ್ಲೇಷಣೆ ಇಲ್ಲಿ ಮಾಡಲಾಗಿದೆ. ಬಂಜಾರರನ್ನು ಕರ್ನಾಟಕದಲ್ಲಿ ಲಂಬಾಣಿಗಳೆಂದು ಹೇಳುತ್ತಾರೆ. ಈ ಪದದ ಉಚ್ಚಾರದ ಬಗ್ಗೆ ವಿದ್ವಾಂಸರು ಹಲವಾರು ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಹೆಚ್.ವಿ. ನಂಜುಂಡಯ್ಯ ಮತ್ತು ಎಲ್.ಕೆ. ಅನಂತಕೃಷ್ಣ ಅಯ್ಯರ್ ಅವರು ಹೇಳುವತೆ, 'The word 'LABHANI' if said by same to the alternative fram of layan, meaning salt, the labhans being salt carriers''[೫] ಲಂಬಾಣಿ ಎಂಬ ಪದವು ಸಂಸ್ಕೃತ ಪದವಾದ 'ಲವಣ' ದಿಂದ ಉದ್ಭವಿಸಿದ್ದು ಎಂಬುದರ ಬಗ್ಗೆ ತಮ್ಮ ಅಸಮ್ಮತವನ್ನು ವ್ಯಕ್ತಪಡಿಸುವ ಖ್ಯಾತ ಸಮಾಜವಿಜ್ಞಾನಿ ಎಡ್ಗರ್ ಥರ್ಸ್ಟನ್‌ರವರು ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸಿದ್ದಾರೆ. The derivation or Labhani or Labani etc, is obseure, it has been suggested that it means solt carrier from the Sanskri, 'Lavama' solt, because the tribe carried solt but this explanation goes against several phonetic rules and does not account of the form of word like Labhani''[೬] ಬಾಂಬೆ ಗೆಜೆಟಿಯರ್ ಪ್ರಕಾರ Lambanies are also know as LAVANAS or LAMBADIES in Karnataka the term Lambani is derived from Lavana, Meaning Solt the tribe bieng the chiet carriers of solt

before the opening of cort road and Railways, It is also said that they are colled Lavans because they were born in the dynosty of "Lava"[೬]

"ಇವರಲ್ಲಿನ ಒಂದು ಪ್ರಮುಖ ಉಪಜಾತಿಯಾದ ಲಂಬಾಣಿ ಎನ್ನುವ ಪದವನ್ನು ಇಡೀ ಬುಡಕಟ್ಟು ಜನಾಂಗಕ್ಕೆ ಅನ್ವಯವಾಗುವಂತೆ ಕರೆಯಲಾಗುತ್ತದೆ. ಲಂಬಾಣಿ ಎನ್ನುವ ಪದವು ಹಲವು ಮಾರ್ಪಾಡುಗಳಿಂದ ಬಂಜಾರಿ, ಬ್ರಿಂಜಾರಿ, ಲಬಾಣ, ಲಬಾನಿ, ಲಬಂಕಿ, ಲಬನ, ಲಮಾಣ, ಲಂಬಾಡಿ ಮತ್ತು ಲಂಬಾಣಿ ಎಂಬುದಾಗಿ ಕರೆಯಲ್ಪಡುತ್ತದೆ".[೭] ಆದರೂ ಇದನ್ನು ಹೊರತುಪಡಿಸಿ ಇರಬಹುದಾದ ಅರ್ಥವನ್ನು ತರ್ಕಬದ್ಧವಾಗಿ ನೀಡದೆ ಇರುವುದರಿಂದ ಬೇರೆ ಪರ್ಯಾಯವಿಲ್ಲದೆ ಮೇಲಿನ ಅಭಿಪ್ರಾಯಕ್ಕೆ ಹೆಚ್ಚು ಮನ್ನಣೆಯನ್ನು ನೀಡಬೇಕಾಗಿದೆ. ಸಮುದ್ರತೀರದಿಂದ ಲವಣವನ್ನು ತಮ್ಮ ರಾಸುಗಳ ಮೇಲೆ ಹೇರಿಕೊಂಡು ಒಳನಾಡು ಪ್ರದೇಶಗಳಲ್ಲಿ ಬಯಲುಸೀಮೆಗಳಲ್ಲಿ, ಘಟ್ಟಪ್ರಾಂತ್ಯಗಳು ಹಾಗೂ ನಾಡಿನಾದ್ಯಂತ ವ್ಯಾಪಾರ ಕೈಗೊಂಡದ್ದರಿಂದ ಆ ವೃತ್ತಿಯನ್ನೇ ಆಧರಿಸಿ ಈ ಜನರಿಗೆ ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರಗಳಲ್ಲಿ ಲವಣಗರು, ಲಂಬಾಣಗರು, ಲಂಬಾಡಿಗರು, ಎಂಬ ಹೆಸರುಗಳಿಂದ ಸಂಭೋದಿಸುತ್ತಾರೆ.[೮]

ಮೂಲಸ್ಥಾನ ಮತ್ತು ಇವರ ಹೆಸರನ್ನು ಕುರಿತು ಒಂದು ಅಂಶವಾಗಿರಬಹುದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ, ಸಂಶೋಧಕರಾದ ಸಣ್ಣರಾಮರವರು ಹೀಗೆ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. "ರಾಜಸ್ಥಾನದಲ್ಲಿ 'ಲವಾನಿ' ಎಂಬ ಹೆಸರಿನ ಪ್ರದೇಶವೊಂದು ಮಾಂಡುವಿನ ಸಮೀಪದಲ್ಲಿತ್ತೆಂಬುದು ಚರಿತ್ರೆಯಿಂದ ತಿಳಿದುಬರುತ್ತದೆ. ಲಂಬಾಣಿಗಳು ರಾಜಸ್ಥಾನದ ಮೂಲದವರೆಂಬುದು ನಿರ್ವಿವಾದ. ರಾಜಸ್ಥಾನದಲ್ಲಿರುವ ಲವಾನಿ, ಲಂಬಾಣಿಗಳ ಮೂಲಸ್ಥಾನವಾಗಿರಬಹುದೇ? ಆದುದರಿಂದ ಅವರಿಗೆ ಲಂಬಾಣಿಗಳೆಂದು ಕರೆದಿರಬಹುದೇ? ಲವಾನಿ, ಲಂಬಾನಿ, ಲಂಬಾಣಿ, ಆಗಿರಬಹುದೇ?"[೯] ಆದರೂ ಸಂಶೋಧಕರು ಕೆಲವಾರು ಸಂಶಯಗಳಿಗೆ ಗುರಿಯಾಗಿದ್ದು ಅವರ ಅಭಿಪ್ರಾಯಗಳು ವೈಜ್ಞಾನಿಕ ಅಲ್ಲವೆಂಬುದರ ಸಂಕೇತವಾಗಿದೆ ಎನ್ನಬಹುದು. ಅವರ ಅರ್ಥ ವಿವರಣೆ ಅವರಿಗೇ ತೃಪ್ತಿದಾಯಕವಲ್ಲ ಎಂಬುದು ಸ್ಪಷ್ಟವಾಗುತ್ತದೆ. ಆದರೂ ಮೇಲಿನ ಅಭಿಪ್ರಾಯಗಳನ್ನು ಗಮನಿಸಿದಾಗ ಲಂಬಾಣಿ ಪದದ ಮೂಲವೂ ಉಪ್ಪು ವ್ಯಾಪಾರ ಮಾಡುತ್ತಿದ್ದರಿಂದ ಇವರ ಒಳಪಂಗಡ 'ಲಂಬಾಣಿ' ಎಂಬ ಉಪಜಾತಿಯ ಹೆಸರಿನಿಂದ ಹಾಗೂ ಲವಾನಿ ಎಂಬ ಪ್ರದೇಶದ ಹೆಸರಿನಿಂದ ಬಂದಿರಬಹುದೆಂದು ಹೇಳಬಹುದು.

ಇತಿಹಾಸದ ಪುಟಗಳನ್ನು ತಿರುವಿ ನೋಡಿದಾಗ ಬೇರೆ ದೇಶದವರಿಗೆ ಆಯಾ ದೇಶದ ಹೆಸರಿನ ಮೇಲೆ ಜನಾಂಗವನ್ನು ಕರೆದುಕೊಳ್ಳುವುದುಂಟು. ಉದಾ: ಭಾರತದವರನ್ನು ಭಾರತೀಯರು, ಚೀನಾದವರನ್ನು ಚೀನಿಯರು, ಜರ್ಮನಿಯರನ್ನು ಜರ್ಮನ್ನರು, ಅಮೇರಿಕದವರನ್ನು ಅಮೇರಿಕನ್ನರು ಹೀಗೆ ಆಯಾ ಹೆಸರುಗಳಿಂದ ಗುರ್ತಿಸಲ್ಪಡುವುದು ವಾಡಿಕೆ ಇದೆ. ಆರ್ಥಿಕ ಮೂಲ ಮತ್ತು ಸಾಮಾಜಿಕ ವೈವಿಧ್ಯತೆಗಳು ಸಮಾಜ ರಚನೆಯ ನೆಲೆಯನ್ನು ವಿಶಿಷ್ಟವಾಗಿ ರೂಪಿಸಿರುವುದನ್ನು ಕಾಣಬಹುದಾಗಿದೆ. ದೈನಂದಿನ ಜೀವನದಲ್ಲಿ ಲವಣದ ಅವಶ್ಯಕತೆ ಬಹಳಷ್ಟಿರುವುದನ್ನು ಕಂಡು ಲವಣ ಅಥವಾ ಉಪ್ಪಿನ ವೃತ್ತಿಯನ್ನು ಮಾಡಿಕೊಂಡರೆಂದು ಗೊತ್ತಾಗುತ್ತದೆ. ಆ ವೃತ್ತಿಯನ್ನು ಆಧರಿಸಿ ಈ ಜನಾಂಗವನ್ನು ಲಂಬಾಣಿಗರು ಎಂಬ ಹೆಸರಿನಿಂದ ಕರೆದಿರಬಹುದು.

### ೩.೨ ಲಂಬಾಣಿಗರ ಹೆಸರುಗಳು ವಿವಿಧ ಚಾರಿತ್ರಿಕ ಸಂದರ್ಭಗಳ ಹಿನ್ನೆಲೆ :-

### ೩.೨.೧. ಬಂಜಾರ

ಲಂಬಾಣಿಗರು ಸಾರ್ವತ್ರಿಕವಾಗಿ ತಮ್ಮನ್ನು ಬಂಜಾರ ಎಂಬ ಹೆಸರಿನಿಂದಲೂ ಗುರುತಿಸಿಕೊಂಡಿದ್ದಾರೆ. ಈ ಪದವು ಉತ್ತರ ಭಾರತದಲ್ಲಿ 'ಬಂಜಾರ' ಪದ ಪ್ರಯೋಗ ಹೆಚ್ಚು ಹೆಚ್ಚಾಗಿ ಬಳಕೆಯಲ್ಲಿರುವುದು ಕಂಡುಬರುತ್ತದೆ. ಬಂಜಾರ ಎಂಬ ಪದದ ನಿಷ್ಪತ್ತಿ ಕುರಿತಂತೆ ವಿವರಣೆಯನ್ನು ನೀಡುತ್ತ ಗ್ರೀಯರ್‌ಸನ್‌ರವರು ಸೈನಿಕರಿಗೆ ಯುದ್ಧಗಳಲ್ಲಿ ಸಾಮಾನು ಸರಂಜಾಮುಗಳನ್ನು ವಿಶೇಷವಾಗಿ ದವಸ ಧಾನ್ಯಗಳನ್ನು ಸರಬರಾಜು ಮಾಡುವ ವ್ಯಾಪಾರ ವರ್ಗ ಎಂದು ಅಭಿಪ್ರಾಯಪಟ್ಟಿದ್ದಾರೆ. ''A tribe whose primery occupation is or rather used to be, to act as carries and suppliers to Crmies in the field, their names is derived from the sonskrit Vanijya or Bonijyakara, A merchent''[೭]

ಬಂಜಾರರು ಎಂದರೆ ಪಲಾಯನಕಾರರು ಎಂಬ ಹೊಸ ಅರ್ಥವನ್ನು ನೀಡುವ ಪ್ರಯತ್ನವನ್ನು ಚರಿತ್ರೆಕಾರರಾದ ಕೆ.ಎಸ್.ಸಿಂಗ್‌ರವರು ಮಾಡುತ್ತಾ ''It may believed that banjaras were forced to be on move constently to escape forceable conversion to islam at the hands of Auranjebs army. the word Banjara meaning to Run away''[೮] ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಇದು ಹೆಚ್ಚು ಅವೈಜ್ಞಾನಿಕ ಮತ್ತು ಅರ್ಥಹೀನವಾದ ಅಭಿಪ್ರಾಯ ಎನಿಸುತ್ತದೆ. ಏಕೆಂದರೆ, ಬಂಜಾರರು ಔರಂಗಜೇಬನ ಸೈನಿಕರ ಬಲಾತ್ಕಾರಯುತವಾದ ಇಸ್ಲಾಂ ಮತಾವಲಂಬನೆಯಿಂದ ತಪ್ಪಿಸಿಕೊಳ್ಳಲು ಸದಾ ಪಲಾಯನ ಮಾಡುತ್ತಿದ್ದರು ಎಂದರೆ, ಬೇರೆ ಯಾವುದೇ ಜನಾಂಗ ಪಲಾಯನ ಮಾಡದೆ ಇದ್ದಾಗ, ಇದೊಂದೇ ಜನಾಂಗ ಏಕೆ ಪಲಾಯನ ಮಾಡುತ್ತಿತ್ತು? ಅಲ್ಲದೇ ಈ ಜನಾಂಗವನ್ನಷ್ಟೇ ಬಲಾತ್ಕಾರಯುತವಾದ ಮತಾವಲಂಬನೆಯ ಸೆಳೆತಕ್ಕೆ ಔರಂಗಜೇಬನು ಏಕೆ ಗುರಿಪಡಿಸಿದ? ಎಂಬುದು ಉತ್ತರಿಸಲಾಗದ ಪ್ರಶ್ನೆಯಾಗಿದೆ. ಇದೆಲ್ಲಕ್ಕಿಂತಲೂ ಮುಖ್ಯವಾದ ವಿಷಯವೆಂದರೆ, ಬಂಜಾರ ಜನಾಂಗದ ಚರಿತ್ರೆ ಮತ್ತು ಪದದ ಬಳಕೆ ಔರಂಗಜೇಬನಿಗಿಂತ ೧ಲನೇ ಶತಮಾನದಷ್ಟು ಕಿರಿಯದಾಗಿಸುವುದು ಸಮಂಜಸವೂ ಅಲ್ಲ, ವೈಜ್ಞಾನಿಕವೂ ಅಲ್ಲ. ಅಲ್ಲದೇ ಬಹಜ್ನ ಎಂಬ ಪಂಜಾಬಿ ಮೂಲದ ಪದವು ಬಂಜಾರ ಪದಕ್ಕೆ ಮೂಲವಾಗಿದೆ. ಔರಂಗಜೇಬನ ಮತಾಂತರದ ಒತ್ತಡಕ್ಕೆ ಸಿಲುಕಿ ಓಡಿಹೋದವರಾದ್ದರಿಂದ ಇವರಿಗೆ ಬಂಜಾರ ಎಂಬುದಾಗಿ ಕರೆಯಲಾಗಿದೆ ಎಂಬ ಮಾತು ಕೇವಲ ಕಲ್ಪನೆಯಾಗಿದೆ. ಕಾರಣ ಸುಲ್ತಾನರ, ಮೊಘಲರ, ನಿಜಾಮರ, ಹೈದರ ಮತ್ತು ಟಿಪ್ಪು ಇವರುಗಳ ಕಾಲದಲ್ಲಿ ಮದ್ದುಗುಂಡು, ಆಹಾರ ಸರಬರಾಜು ಕಾರ್ಯವನ್ನು ನಿರ್ವಹಿಸುತ್ತಿದ್ದುದು ಬಂಜಾರರು ಎಂಬುದಾಗಿ ಇತಿಹಾಸದ ಅಧ್ಯಯನದಿಂದ ತಿಳಿದುಬರುತ್ತದೆ. ಹೀಗಾಗಿ ಔರಂಗಜೇಬನು ಬಂಜಾರರನ್ನು ಮತಾಂತರಿಸುವ ಪ್ರಮೇಯವೇ ಬರುವುದಿಲ್ಲ. ಏಕೆಂದರೆ ಮತಾಂತರಿಸಲು ಪ್ರಯತ್ನಿಸಿದಲ್ಲಿ ಸೈನಿಕರ ಆಹಾರಧಾನ್ಯಗಳ ಸರಬರಾಜಿಗೆ ತೊಂದರೆಯನ್ನು ತಂದುಕೊಳ್ಳಲು ಔರಂಗಜೇಬನಿಗೆ ಇಷ್ಟವಿರಲಿಲ್ಲ ಎಂದು ಹೇಳಬಹುದು.

ಎಡ್ಗರ್ ಥರ್ಸ್‌ಟನ್‌ರವರ ಪ್ರಕಾರ 'The Name Banjara and i'ts congeners is probably derived from the samskrit vanijakarakas a Merelant through the prakrith vinijaarao trader.[೯]

ಲಂಬಾಣಿ ಪದದ ಬಳಕೆಯನ್ನು ಅಂಕಿ-ಅಂಶಗಳ ಹಿನ್ನೆಲೆಯಲ್ಲಿ ಕಾಣಬಯಸುವ ರಂಜಿತ್ ನಾಯಕ್ ಹೀಗೆ ವಿವರಿಸುತ್ತಾರೆ. ಬಣ ಎಂದರೆ ಗುಂಪು. ಈ ಜನ ಗುಂಪುಗಳಲ್ಲಿ ವಾಸಿಸುತ್ತಿದ್ದರಿಂದ ಬಣಜಾರ ಎಂದು ಕರೆದಿರಬೇಕು.[illegible] ಹಾಗೆಯೇ ಇವರ ಅಲೆಮಾರಿ ಸ್ವಭಾವವನ್ನು ಕುರಿತಂತೆ ವಿವರಿಸುವ ಪದವು ಇದಾಗಿರಬಹುದೆಂದೂ ವಿವರಿಸುತ್ತಾ ಹೀಗೆ ಹೇಳಲಾಗಿದೆ. "It may with equal possibility be referred to vanachara (sanskrit meaning a wonderer in the jungle) an aewunt of the nomidic character of the tribe"[illegible]

ವನ+ಚರ=ವನಾಚರ ಅಂದರೆ ಅಡವಿಯಲ್ಲಿ ಸಂಚರಿಸುವವರು. ಸಂಚಾರಿಗಳಾದ ಲಂಬಾಣಿಗರು ವ್ಯಾಪಾರಕ್ಕಾಗಿ ತಮ್ಮ ಜಾನುವಾರುಗಳ ಮೇಲೆ ಸಾಮಾನುಗಳನ್ನು ಹೇರಿಕೊಂಡು ಅಡವಿ ಮುಖಾಂತರ ಒಂದು ಪ್ರದೇಶವಿಂದ ಮತ್ತೊಂದು ಪ್ರದೇಶಕ್ಕೆ ಸಂಚರಿಸುತ್ತಿದ್ದುದರಿಂದ ಇವರು ವನಾಚರ, ವನಜಾರ, ಬನಜಾರ, ಬಂಜಾರ ಎಂದು ಕರೆಯಲ್ಪಟ್ಟರು.[illegible] ವ್ಯಾಪಾರ ಸ್ವರೂಪವನ್ನು ನೀಡುವ ಪ್ರಯತ್ನವಾಗಿ "ತಮ್ಮದು ಬಣಜಾರ ಜಾತಿ ಎಂದು ಹೇಳುತ್ತಾರೆ. ಬಣಜಾರ ಎಂಬುದು ಅವರು ವರ್ತಕರಾಗಿ ಇಲ್ಲಿಗೆ ಬಂದರೆಂಬುದನ್ನು ಸೂಚಿಸುತ್ತದೆ" ಎಂದು ವಿದ್ವಾಂಸರು ಹೇಳಿದ್ದಾರೆ.[illegible]

ಮತ್ತೊಂದು ಅಭಿಪ್ರಾಯದಂತೆ ಡಬ್ಲ್ಯು. ಕ್ರೋಕ್‌ರವರು ಸಂಸ್ಕೃತ ಪದವಾದ ವಾಣಿಜ್ಯ ಅಥವಾ ವಾಣಿಜ್ಯಕಾರ ಎಂಬ ಪದದಿಂದ ಬಣಜಾರ ಎಂಬ ಪದ ಬಂದಿದೆ ಎಂದು ಅಭಿಪ್ರಾಯಪಡುತ್ತಾರೆ. ಏಕೆಂದರೆ ವಾಣಿಕ್ ಎಂಬ ಪದವು ವೇದಗಳ ಕಾಲದಿಂದಲೂ ಬಳಕೆಯಲ್ಲಿದೆ. "In the rigveda Dirhgagaravas is refered to as a vanik who was in the time of dostresslived by trode vanijja[illegible] ವಿದ್ವಾಂಸರ ಅಭಿಪ್ರಾಯದಂತೆ, the theory that the title of the caste may be connectes with the Hindu BAn-Jarna in some such sence as barners or cleaners of the jungle or forest wonderrers is untenable"[illegible] ಎಂಬ ಅಭಿಪ್ರಾಯ ಅರ್ಥಪೂರ್ಣವಾದುದು.

ಮೇಲಿನ ಹೇಳಿಕೆಗಳಿಂದ ಬಂಜಾರ ಪದದ ಉಗಮವು ಮುಖ್ಯವಾಗಿ ಸಂಸ್ಕೃತದ 'ವಣಿಕ್', ಹಿಂದಿಯ ವನಾಚರ, ಪರ್ಷಿಯಾ ಮೂಲದ 'ಬ್ರಂಜಾರ' ಮೂಲಕ ಮತ್ತು 'ಬಹುಜ್ನ' ಈ ನಾಲ್ಕು ಭಾಷೆಯ ಪದಗಳಿಂದ ಉಗಮವಾಗಿದೆ ಎಂಬುದಾಗಿ ತಿಳಿದುಬರುತ್ತದೆ. ಲಂಬಾಣಿ ಜನಾಂಗ ಎತ್ತುಗಳ ಮೇಲೆ ವಿವಿಧ ಬಗೆಯ ದವಸಧಾನ್ಯ ಹಾಗೂ ವಸ್ತುಗಳನ್ನು ಹೇರಿಕೊಂಡು ಬೇರೆ ಬೇರೆ ಸ್ಥಳಗಳಿಗೆ ಹೋಗಿ ವ್ಯಾಪಾರ ಮಾಡುತ್ತಿದರು. ಆದುದರಿಂದ ಪರ್ಷಿಯನ್ನರ ಅರ್ಥದ ಪ್ರಕಾರ ಬಂಜಾರ ಎಂದರೆ ಅಕ್ಕಿ ವ್ಯಾಪಾರಿಗಳು ಎಂದು ವಿವರಿಸಲಾಗಿದೆ. ಆದರೆ ಈ ಪದ ಸೀಮಿತ ಅರ್ಥ ಉಳ್ಳದ್ದಾಗಿದೆ. ಏಕೆಂದರೆ, ಕೇವಲ ಅಕ್ಕಿಯನ್ನಷ್ಟೆ ಇವರು ವ್ಯಾಪಾರ ಮಾಡುವರಾಗಿರಲಿಲ್ಲ. ವಿಭಿನ್ನವಾದ ಪದಾರ್ಥಗಳ ವ್ಯಾಪಾರವನ್ನು ಮಾಡುತ್ತಿದ್ದರು. ಆದುದರಿಂದ ಇವರನ್ನು ಇವರ ವೃತ್ತಿಗೆ ಹೊಂದಾಣಿಕೆಯಾಗುವ 'ವ್ಯಾಪಾರಿಗಳು' ಎಂಬ ಪದವನ್ನು ಬಳಸುವುದು ಸರಿಯಾದ ಕ್ರಮವಾಗಬಹುದು.

ಪರ್ಷಿಯನ್ ಅರ್ಥವನ್ನು ಸಮಂಜಸ ಅಲ್ಲವೆಂದು ಹೇಳಲು ಹೆವೋನ್ಸ್‌ರವರು ಹೀಗೆ ನುಡಿದಿದ್ದಾರೆ. "These provinces show that the popular derivation from the persian biranjar or Rice carriers is untenable[illegible]

ಮೇಲ್ಕಂಡ ಎಲ್ಲಾ ಚರಿತ್ರೆಕಾರರ ಹೇಳಿಕೆಯಿಂದ ತಿಳಿದುಬರುವುದೇನೆಂದರೆ ಬಂಜಾರರು ದೈನಂದಿನ ಬಳಕೆಯ ಖಾದ್ಯ ಪದಾರ್ಥಗಳನ್ನು ದನಕರುಗಳ ಮೇಲೆ ಹೇರಿಕೊಂಡು ವ್ಯಾಪಾರ ಮಾಡುತ್ತಿದ್ದರಿಂದ ವಾಣಿಕ್‌ರೆಂದು ಪ್ರಸಿದ್ಧರಾಗಿರಬೇಕು. ಅದುದರಿಂದ ಕ್ರೂಕ್‌ರವರು ಅಭಿಪ್ರಾಯಪಟ್ಟಿರುವ ವಿಶಾಲ ಅರ್ಥ ಕೊಡುವ ವಾಣಿಜ್ಯಕಾರ ಎಂಬ ಪದವು ಬಣಕಾರ ಮೂಲ ಪದದ ಅರ್ಥ ಕೊಡುತ್ತದೆ.

೩.೨.೨. ಸುಕಾಲಿ

ದಕ್ಷಿಣ ಭಾರತದ ಆಂಧ್ರ ಪ್ರದೇಶ, ಕೇರಳ, ತಮಿಳುನಾಡು, ಕರ್ನಾಟಕ ಗಡಿಭಾಗದ ರಾಜ್ಯಗಳಲ್ಲಿ ಲಂಬಾಣಿಗಳನ್ನು 'ಸುಕಾಲಿ' ಎಂಬ ಹೆಸರಿನಿಂದ ಕರೆಯುತ್ತಾರೆ. ಆದರೆ ಇವರು ತಮ್ಮನ್ನು ಜನ ಸುಕಾಲಿಗಳು ಎಂಬುದಾಗಿ ಸಂಬೋಧಿಸುವುದನ್ನು ತೀವ್ರವಾಗಿ ವಿರೋಧಿಸುತ್ತಾರೆ. 'ಸುಕಾಲಿ' ಎಂದರೆ ದನಕಾಯುವವ ಎಂಬರ್ಥದಲ್ಲಿ ಇವರು ಭಾವಿಸುತ್ತಾರೆ.

ವಿದ್ವಾಂಸರು ಅಭಿಪ್ರಾಯಪಡುವಂತೆ It is also referred to as the mame of the lingayat (Sukali satti) whose trade of fire-wood selling was very prosperous and was taken by the banjaras when they cometo southern India from this they become known as men of sukali settis trade or sukalis[೨೦] ಕಟ್ಟಿಗೆ ವ್ಯಾಪಾರಕ್ಕಾಗಿ ಸುಕಾಲಿ ಶೆಟ್ಟಿ ಎಂಬುವವರು ಬಂಜಾರರನ್ನು ಕರೆತಂದಿದ್ದರಿಂದ ಅವರನ್ನು ಸುಕಾಲಿಗಳೆಂದು ಕರೆಯಲಾಗಿದೆ ಎಂಬ ವಿದ್ವಾಂಸರ ಹೇಳಿಕೆ ಒಂದು ಕಲ್ಪನೆಯಾಗಿದೆ. ಏಕೆಂದರೆ ಪೂರ್ವದಲ್ಲಿ ಇವರು ಖಾದ್ಯ ಪದಾರ್ಥಗಳನ್ನು ಹಾಗೂ ಹೈದರಾಬಾದ್ ನಿಜಾಮನ ಸೈನ್ಯಗಳಿಗೆ ಆಹಾರ ಪದಾರ್ಥಗಳನ್ನು ಸರಬರಾಜು ಮಾಡುತ್ತಾ ವ್ಯಾಪಾರಿಗಳಾಗಿ ಕರ್ನಾಟಕಕ್ಕೆ ಬಂದರೆಂಬುದಕ್ಕೆ ಚರಿತ್ರೆಯಲ್ಲಿ ಸ್ಪಷ್ಟವಾದ ಆಧಾರಗಳನ್ನು ಕಾಣಬಹುದಾಗಿದೆ.

ಎಡ್ಗರ್ ಥರ್ಸ್ಟನ್‌ರವರು ಹೇಳುವಂತೆ,Sugali or sukali, by same sugali is said to be a corruption of supari (Betelnub) because they farmerly traded largely therein[೨೧]

ಸುಕಾಲಿಗರನ್ನು ಲಿಂಗಾಯತ್ ಜನಾಂಗದ ಒಂದು ಮೂಲಭಾಗವೆಂದು ಗುರುತಿಸುತ್ತಾ ಇವರನ್ನು ಕಾಲಶೆಟ್ಟಿಗರು ಎಂದು ಅಭಿಪ್ರಾಯಪಡುವುದುಂಟು. ಸುಕಾಲಿಗಳು ಎಂಬುದು 'ಅಡಿಕೆ' ಎಂಬ ಪದದಿಂದ ಬಂದಿದ್ದು. ಅಡಿಕೆ ವ್ಯಾಪಾರಿಗಳಾದ ಈ ಸುಪಾರಿಗಳು ನಂತರ ತಮ್ಮ ಕಸುಬಿನ ಆಧಾರದ ಮೇಲೆ ಗುರುತಿಸಲ್ಪಟ್ಟರೆಂಬುದಾಗಿದೆ. ಅಡಿಕೆ ವ್ಯಾಪಾರಿಗಳನ್ನು ಸಗಾಲಿ ಅಥವಾ ಸುಕಾಲಿಗಳು ಎಂಬುದಾಗಿ ಗುರುತಿಸುವುದು ಅವರ ಆರ್ಥಿಕ ಧೋರಣೆಯ ಒಂದು ಅಂಶವಾಗಿದೆ. ವ್ಯಾಪಾರವೇ ಮೂಲ ಕಸುಬಾಗಿದ್ದ ಈ ಜನಾಂಗವನ್ನು ಪದಾರ್ಥಗಳ ವ್ಯಾಪಾರದ ಮೇಲೆ ಗುರುತಿಸುವುದು ವಿಶೇಷ. "It is said by same it means arecanut being corrupted from the supari"[೨೨]

ಪಿ.ಕೆ. ಖಂಡೋಬಾ ಅವರು ಹೇಳುವಂತೆ, ತೆಲುಗು ಭಾಷೆಯಲ್ಲಿ ಗೋವುಗಳಿಗೆ ಸುಗಾಲಿ ಎಂದು ಹೆಸರು. ಸುಗಾಲಿ ಎಂದರೆ ದನಕಾಯುವವ ಎಂಬರ್ಥದಲ್ಲಿ ಇವರು ಬೈಗುಳಕ್ಕಾಗಿ ಬಳಸುತ್ತಾರೆ.[೨೩] ಈ ಮೇಲಿನ ಅಭಿಪ್ರಾಯವು ಸತ್ಯಕ್ಕೆ ಸನಿಹವಾದುದಾಗಿದೆ. ಏಕೆಂದರೆ ಲಂಬಾಣಿಗರು ಪೂರ್ವದಲ್ಲಿ ಸೈನ್ಯಗಳಿಗೆ ಆಹಾರ ಪದಾರ್ಥಗಳನ್ನು ಸರಬರಾಜು ಮಾಡಲು ಹೇರಳವಾಗಿ ತಳಿಯ ರಾಸುಗಳನ್ನು ಹೊಂದಿದ್ದರಿಂದ ಅವರನ್ನು ದನಕಾಯುವವರು ಎಂಬರ್ಥದಲ್ಲಿ 'ಸುಕಾಲಿ'ಗಳು ಎಂಬುದಾಗಿ ಕರೆದಿರಬಹುದು.

ಕರ್ನಾಟಕ ಗಡಿಭಾಗಗಳಾದ, ಬಳ್ಳಾರಿ, ರಾಯಚೂರು, ಪಾವಗಡ, ಮಡಕಶಿರ ಪ್ರದೇಶಗಳಲ್ಲಿ ಲಂಬಾಣಿಗರು ಸುಣ್ಣದ ವ್ಯಾಪಾರವನ್ನು ತಮ್ಮ ಮುಖ್ಯ ವೃತ್ತಿಯನ್ನಾಗಿಸಿಕೊಂಡಿರುವುದರಿಂದ ಇವರನ್ನು ಗುರುತಿಸಲು 'ಸುಕಾಲಿ' ಎಂಬ ಪದ ಬಳಸಿರಬಹುದಾಗಿದೆ.

### ೩.೨.೩. ಲಾದೇನಿಯಾ ಮತ್ತು ಬಳದಿಯಾ

ಭಾರತದ ಹಲವು ರಾಜ್ಯಗಳಲ್ಲಿ ಲಂಬಾಣಿಗರು ಲಾದೇನಿಯಾರೆಂದೇ ಗುರುತಿಸಿಕೊಳ್ಳುತ್ತಾರೆ. ಗುಜರಾತ್ ಮತ್ತು ರಾಜಸ್ಥಾನ ರಾಜ್ಯಗಳಲ್ಲಿ ಈ ಹೆಸರಿನಿಂದ ಗುರುತಿಸಿಕೊಳ್ಳುವವರು ಲಂಬಾಣಿಗರು ಮಾತ್ರ. 'ಲಾದೇನಿಯಾ' ಅಥವಾ 'ಲದಣಿಯಾ' ಎಂಬ ಪದ ಹಿಂದಿಯ 'ಲಾದೆ' ಪದದಿಂದ ಬಂದಿದೆ. ಇದು ವೃತ್ತಿಸೂಚಕ ಪದವಾಗಿದೆ.[೨೫] ಈ ಸಮುದಾಯ ಪ್ರಾಚೀನದಲ್ಲಿ ಆಹಾರ ಸಾಮಗ್ರಿ ಮತ್ತು ಭಾರವಾದ ವಸ್ತುಗಳನ್ನು ತಮ್ಮ ದನಕರುಗಳ ಮೇಲೆ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಪೂರೈಕೆ ಮಾಡುತ್ತಿದ್ದುದರಿಂದ ಇವರಿಗೆ 'ಲಾದೇಣಿಯಾ' ಎಂಬ ಹೆಸರು ಬಂದಿರಬೇಕು. ಲದಣಿಯಾ ಎಂಬುದು ಇನ್ನೊಂದು ಅರ್ಥದಲ್ಲಿ ಅಲೆದಾಡುವವನು ಎಂದಿದೆ. ಅಲೆ ಮಾರಿಗಳಾದ ಇವರು ಗುಂಪುಗಳಲ್ಲಿ ದನಗಳ ಮೇಲೆ ತಮ್ಮ ಸರಕುಗಳನ್ನು ಸಾಗಿಸುವವರು ಹೀಗಾಗಿ 'ಲಾದೇಣಿಯಾ' 'ಲದಣಿಯಾ' ಎಂಬ ಹೆಸರುಗಳಿಂದ ಸಂಬೋಧಿಸಿರಬೇಕು.

ಲಂಬಾಣಿ ಭಾಷೆಯಲ್ಲಿ ಎತ್ತುಗಳಿಗೆ 'ಬಳದ' ಎಂದು ಹೆಸರು. 'ಬಳದಿಯಾ' ಪದ ಬಳಕೆ 'ಬಳದ'ನಿಂದ ನಿಷ್ಪತ್ತಿಯಾಗಿದೆ. ಈ ಸಮುದಾಯ ಪ್ರಾಚೀನ ಕಾಲದಲ್ಲಿ ವಾಹನ ಸೌಕರ್ಯವಿಲ್ಲದಿದ್ದಾಗ ಆಹಾರ ಸಾಮಗ್ರಿಗಳನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಗಿಸಲು ಈ 'ಬಳದೆ'ಗಳನ್ನು ಬಳಸುತ್ತಿದ್ದುದರಿಂದಲೇ ಇವರಿಗೆ 'ಬಳದಿಯಾ' ಎಂಬ ಹೆಸರು ಬಂದಿರಬೇಕು. ಈ ಜನಾಂಗದ ಸದಸ್ಯರಲ್ಲಿ ಸಾವಿರಾರು ಎತ್ತುಗಳಿದ್ದವೆಂದು ಉಲ್ಲೇಖಿಸಿದ್ದಾರೆ. ಕುಂಬ್ರಲೇಜಾ ಅವರ ಗ್ರಂಥದಲ್ಲಿ ಉತ್ತರ ಭಾರತದಿಂದ ದಕ್ಷಿಣ ಭಾರತದ ಕಡೆಯುದ್ದ ಮಾಡಲು ಹೊರಟ ತನ್ನ ಸೈನಿಕರನ್ನು ಹಿಂಬಾಲಿಸಲು ೧,೮೦,೦೦೦ ಜಾನುವಾರುಗಳ ಹೆಸರುಳ್ಳ 'ಭಂಗಿ' 'ಜಂಗಿ' ಹೆಸರಿನ ಬಂಜಾರ ನಾಯಕಗೂ ೫೨,೦೦೦ ಜಾನುವಾರು ಹೆಸರುಳ್ಳ ಭಗವಾನ್‌ದಾಸ್ ವಡತ್ಯಾನಿಗೂ ಅಸಫ್‌ಜಾನ್ ಆದೇಶಿಸುತ್ತಾನೆ.[೨೬] ಇನ್ನೊಂದು ಅಸಂಖ್ಯ ಎತ್ತುಗಳನ್ನು ಅಂದರೆ ಲಂಬಾಣಿ ಭಾಷೆಯಲ್ಲಿ 'ಬಳದ'ಗಳನ್ನು ಉಪಯೋಗಿಸಿರುವುದರಿಂದಲೇ ಈ ಸಮುದಾಯದವರನ್ನು ಬಳದಿಯಾ ಎಂದು ಹೇಳಿರಬಹುದು.

### ೩.೨.೪. ಗೋರಮಾಟಿ

'ಗೋರಮಾಟಿ' ಪದವನ್ನು ರಾಷ್ಟ್ರಾದ್ಯಂತ ಲಂಬಾಣಿಗರನ್ನು ಗುರುತಿಸಲು ಬಳಸಲಾಗುತ್ತಿದೆ. ಮುಖ್ಯವಾಗಿ ಲಂಬಾಣಿಗರು ತಮ್ಮ ಕುಲಬಾಂಧವರನ್ನು ಪ್ರತ್ಯೇಕವಾಗಿ ಗುರುತಿಸಿಕೊಳ್ಳುವುದಕ್ಕಾಗಿ ತಮ್ಮನ್ನು ತಾವು 'ಗೋರ್‌ಮಾಟಿ' ಅಥವಾ 'ಗೋರ್‌ಭಾಯಿ' ಹಾಗೂ 'ಗೋರ್‌ದಾಸ್' ಎಂಬುದಾಗಿ ಕರೆದುಕೊಳ್ಳುತ್ತಾರೆ.

ಈ ಪದಗಳು 'ಗೋರ್' ಎಂಬ ಧಾತುವಿನಿಂದ ಉಗಮವಾಗಿದ್ದು, ಇದಕ್ಕೆ 'ಶ್ವೇತವರ್ಣ' ಎಂಬ ಅರ್ಥವಿದೆ. ಲಂಬಾಣಿಗರು ಲಂಬಾಣೇತರನಿಂದ ಪ್ರತ್ಯೇಕಿಸಿಕೊಳ್ಳಲು ತಮ್ಮ ಸಮುದಾಯವನ್ನು ಒಂದು ಪದದಡಿಯಲ್ಲಿ ಗುರುತಿಸಿಕೊಳ್ಳಲು ಇದನ್ನು ಬಳಸಿರಬಹುದು ಅಥವಾ ಕಪ್ಪು ಬಣ್ಣದವರಲ್ಲ ಎಂಬುದನ್ನು ಹೆಮ್ಮೆಯಾಗಿ ಗುರುತಿಸಿಕೊಳ್ಳುವುದೇ ಅವರ ಉದ್ದೇಶವಾಗಿರಬಹುದು.

ಡಾ. ಪಿ.ಕೆ. ಖಂಡೋಬ ಅವರ ಪ್ರಕಾರ 'ಗೋರ್' ಪದವು 'ಗೌರ'ದಿಂದ ಬಂದಿದೆ. ಇದು ಲಂಬಾಣಿಗಳ ಗೌರವವರ್ಣವನ್ನು, ದೇಹ ಸೌಂದರ್ಯವನ್ನು ಸೂಚಿಸುವ ಪದವಾಗಿದೆ. ಪೂರ್ವದಲ್ಲಿ ಲಂಬಾಣಿಗಳು ಗೋಪಾಲಕರಾಗಿದ್ದರಿಂದ 'ಗೌರ್' ಎಂದಾಗಿರಬೇಕು ಅಥವಾ ಗೋಮಾತೆಗಳಿಂದ ಗೋರಮಾಟಿಗಳಾಗಿರಬೇಕು. ಇವರ ಮೂಲ ಪುರುಷ 'ಮೋಲಾ'ದಾದ. ಶ್ರೀ ಕೃಷ್ಣನ ಬಳಿಯಲ್ಲಿ ಆಶ್ರಯದಾತನಾಗಿ, ಗೋಪಾಲಕನಾಗಿದ್ದನೆಂಬ ಐತಿಹ್ಯಗಳಿವೆ.[೨೬] ಈ ಮೇಲಿನ ಅಭಿಪ್ರಾಯ ಸತ್ಯಕ್ಕೆ ಸಮೀಪವಾದುದಾಗಿದೆ ಎಂದು ಹೇಳಬಹುದು.

**೩.೨.೫. ಶಿರಕಿಬಂದ್, ಶಿಕರಿವಾಲಾ**

ಶಿಕಾರಿವಾಲಾ, ಶಿರಕಿಬಂದ್ ಪದದ ಬಳಕೆಯನ್ನು ಲಂಬಾಣಿಗರು ಕೂಡ ಬಳಸುವುದು ಕಂಡುಬರುತ್ತದೆ. ಉತ್ತರ ಪ್ರದೇಶ, ನವದೆಹಲಿ, ರಾಜಸ್ಥಾನ ಹಾಗೂ ಪಂಜಾಬ್‌ಗಳಲ್ಲಿ ಹೆಚ್ಚಾಗಿ ಬಳಸುತ್ತಾರೆ. 'ಶಿಕರಿ' ಎಂದರೆ ಒಂದು ಪ್ರಕಾರದ 'ಹುಲ್ಲು' ಈ ಹುಲ್ಲಿನಿಂದ ಹಗ್ಗ, ಚಾಪೆಯನ್ನು ತಯಾರಿಸುತ್ತಾರೆ.[೨೭] ದೆಹಲಿಯಲ್ಲಿ ಶಿರಕಿ ಮಾರ್ಕೆಟ್ ಈ ಸಮುದಾಯದವರು ವ್ಯಾಪಾರಕ್ಕಾಗಿಯೇ ಮೀಸಲಿರುವ ಸ್ಥಳವಾಗಿದೆ. ಲಂಬಾಣಿಗರು ತಮ್ಮ ಉಪಜೀವನಕ್ಕಾಗಿ ಈ ಉದ್ಯೋಗವನ್ನು ಕೈಗೊಂಡಿದ್ದರಿಂದ ಈ ಪ್ರದೇಶಗಳಲ್ಲಿ ಇವರಿಗೆ ಶಿರಕಿವಾಲಾ, ಶಿರಕಿಬಂದ ಎಂದು ಕರೆದಿರಬಹುದು.

**೩.೨.೬. ನಿಮ್ನವರ್ಗ (ಡಿಪ್ರೆಸ್ಡ್ ಕ್ಲಾಸ್) ಮತ್ತು ಪರಿಶಿಷ್ಟ ಜಾತಿ**

ಶೋಷಿತ ಅಸ್ಪೃಶ್ಯ ಜಾತಿಗಳನ್ನು ನಿಮ್ನವರ್ಗ ಅಥವಾ ಡಿಪ್ರೆಸ್ಡ್ ಕ್ಲಾಸ್ ಎಂದು ಸಹ ಹಿಂದೆ ಗುರುತಿಸಲಾಗುತ್ತಿತ್ತು. ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಸರ್ಕಾರವು ಸಾಮಾಜಿಕವಾಗಿ ಹಿಂದುಳಿದವರನ್ನು ಗುರುತಿಸುವ ಸಲುವಾಗಿ ಜನಗಣತಿಯ ಸಂದರ್ಭದಲ್ಲಿ ಕೆಲವೊಂದು ಅಂಶಗಳನ್ನು ಪರಿಗಣಿಸಿ ಜನಗಣತಿ ಆಯುಕ್ತರಿಗೆ ಸೂಚಿಸಿತು. ಆ ಪ್ರಕಾರ ಆ ಪರಿವ್ಯಾಪ್ತಿಯಲ್ಲಿ ಗುರುತಿಸಿರುವಂತಹ ಜಾತಿ-ಜನಾಂಗಗಳನ್ನು 'ಡಿಪ್ರೆಸ್ಡ್ ಕ್ಲಾಸ್' ಎಂದೆ ಕರೆಯಲಾಯಿತು.[೨೮] ಅಲ್ಲಿಂದ ಆರಂಭಗೊಂಡ ಈ ಪದಗಳು ಸ್ವಾತಂತ್ರ್ಯ ನಂತರದ ಕಾಲದವರೆಗೂ ಬಳಕೆಯಾಗಿರುವುದು ಕಂಡುಬರುತ್ತದೆ. ಇದಲ್ಲದೆ 'ಪರಿಶಿಷ್ಟ ಜಾತಿ' ಪದದ ಬಳಕೆಯೂ ಕಂಡುಬರುತ್ತದೆ. ಈ ಪದವು ಭಾರತಕ್ಕೆ ಬ್ರಿಟಿಷರ ರಾಯಭಾರಿಯಾಗಿ ಬಂದಿದ್ದ ಸೈಮನ್ ಆಯೋಗ ಅಸ್ಪೃಶ್ಯರಿಗೆ 'ಪರಿಶಿಷ್ಟ ಜಾತಿ' ಎಂದು ನಾಮಕರಣ ಮಾಡಿತು.[೨೯] ಈ ಪದ ಬಳಕೆಯ ನಂತರದಲ್ಲಿ ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಕೆಲವೊಂದು ಆಯೋಗಗಳನ್ನು ರಚಿಸಿ ಹಿಂದುಳಿದವರನ್ನು ಗುರುತಿಸಲು ಮತ್ತು ಅವರ ಅಭಿವೃದ್ಧಿಗೆ ಸಲಹೆಗಳನ್ನು ನೀಡಲು ತಿಳಿಸಿತು. ಅವುಗಳು ನೀಡಿದ ವರದಿಯನ್ನು ಆಧರಿಸಿ ಪರಿಶಿಷ್ಟ ಜಾತಿಯ ಪಟ್ಟಿಯೊಳಗೆ ಲಂಬಾಣಿ ಮತ್ತು ಮಾದಿಗರಲ್ಲದೆ ಅಸ್ಪೃಶ್ಯೇತರ ಜಾತಿಗಳಾದ ಭೋವಿ, ಹೊಲೆಯ, ಚೆನ್ನದಾಸರು ಇತ್ಯಾದಿ ೧೮೦ ಜಾತಿಗಳ ಸೇರ್ಪಡೆಯಾಗಿದೆ. ಈ ಪದ ಪ್ರಯೋಗವು ಸರ್ಕಾರಿ ದಾಖಲೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ.

**೩.೨.೭. ದಲಿತ**

ದಲಿತ ಎನ್ನುವ ಪದವು ದಮನಕ್ಕೆ ಒಳಗಾದ ಅಥವಾ ಶೋಷಿತ ಸಮುದಾಯಗಳನ್ನು ಗುರುತಿಸಲು ಮಹಾರಾಷ್ಟ್ರ ಜಾಗೃತ ದಲಿತರು ಬಳಸಲಾರಂಭಿಸಿದರು. ಈ ರೀತಿ ಶೋಷಿತ ಜಾತಿಗಳಲ್ಲಿ ಉಂಟಾದ ಜಾಗೃತಿ 'ದಲಿತ ಸಂಘಟನೆ'ಯ ಹುಟ್ಟಿಗೆ ಕಾರಣವಾಯಿತು. ಕರ್ನಾಟಕದಲ್ಲಿ ಈ ಪದದ ಬಳಕೆ ೧೯೭೦ರ ದಶಕದಲ್ಲಿ

ಆರಂಭಗೊಂಡಿತು. ಈ ಸಂಘಟನೆಯಲ್ಲಿ ಪ್ರಮುಖವಾಗಿ ಲಂಬಾಣಿಗರು, ಮಾದಿಗರು, ನಾಯಕರು, ಹೊಲೆಯರು ತೊಡಗಿಸಿಕೊಂಡಿದ್ದರಿಂದ ಅವರು ಈ ಪದ ಪ್ರಯೋಗದ ಮೂಲಕ ತಮ್ಮನ್ನೂ ಗುರುತಿಸಿಕೊಂಡರು. ಈ ಪದದ ಅರ್ಥವನ್ನು ಅನೇಕರು ವಿವಿಧ ರೀತಿಯಲ್ಲಿ ಅರ್ಥೈಸುತ್ತ ಬಡತನದಿಂದ ನರಳುತ್ತಿರುವ ಎಲ್ಲಾ ಜಾತಿಯ ಜನರು ಒಳಗೊಳ್ಳುವಂತೆ ಮಾಡಿದರೂ ಅದನ್ನು ಹೆಚ್ಚಾಗಿ ಲಂಬಾಣಿಗರು, ಮಾದಿಗರು ಮತ್ತು ಹೊಲೆಯರು ಮಾತ್ರವೇ ಬಳಸುತ್ತಾರೆ. ಸಾಹಿತ್ಯ ವಲಯದಲ್ಲಿ ಈ ಪದವು ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತದೆ.

ಈ ಮೇಲಿನ ಎಲ್ಲಾ ಹೆಸರುಗಳಿಂದ ಲಂಬಾಣಿಗರು ಗುರುತಿಸಿಕೊಂಡಿರುವುದು ಕಂಡುಬರುತ್ತದೆ.

**೩.೩. ಲಂಬಾಣಿಗರ ಸಂಬಂಧಿತ ಪ್ರಮುಖ ಜಾತಿಗಳು**

ಲಂಬಾಣಿ ಜನಾಂಗವು ಪೌರಾಣಿಕ, ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಹಲವಾರು ಜಾತಿಗಳೊಂದಿಗೆ ತಮ್ಮ ಸಂಬಂಧ ಹೊಂದಿರುವುದು ಕಂಡುಬರುತ್ತದೆ. ಕೆಲವೊಂದು ಜಾತಿಗಳು ವೃತ್ತಿನೆಲೆಯಲ್ಲಿ ಮತ್ತು ಕೆಲವು ಜಾತಿಗಳು ಸಾಂಸ್ಕೃತಿಕ ನೆಲೆಯಲ್ಲಿ ಇವರೊಂದಿಗೆ ಸಂಬಂಧ ಹೊಂದಿವೆ. ಇಂತಹ ಜಾತಿಗಳೊಂದಿಗೆ ಲಂಬಾಣಿಗರಿಗೆ ಯಾವುದೇ ವೈವಾಹಿಕ ಸಂಬಂಧಗಳಿರುವುದಿಲ್ಲ.

ಲಂಬಾಣಿಗರು ಪ್ರಾಥಮಿಕ ಹಂತದಲ್ಲಿ ಗುಡ್ಡ ಬೆಟ್ಟಗಳಲ್ಲಿ ಸಾಕುಪ್ರಾಣಿಗಳೊಂದಿಗೆ ವಾಸಿಸುತ್ತಿದ್ದರು. ಕಾಲಾನಂತರ ಸಾವಿರಾರು ಎತ್ತುಗಳ ಮೇಲೆ ಹೋರಾಟದ ವ್ಯಾಪಾರ ನಡೆಸುತ್ತಾ ಇದ್ದ ಕಾಲದಲ್ಲಿ ಅವರಿಗೆ ಅವಶ್ಯಕವಾಗಿ ಬೇಕಾದ ಕೆಲವು ಕಸುಬುದಾರ ಜಾತಿಯವರು ಅವರ ತಾಂಡಗಳ ಜೊತೆಯಲ್ಲಿ ಸೇರಿಕೊಂಡು ಅಲೆದಾಟ ನಡೆಸುತ್ತಿದ್ದರು. ಅಂತಹ ಜಾತಿಗಳನ್ನು ಅವರ ಒಡಹುಟ್ಟಿದ ಜಾತಿಗಳೆಂದು ಕರೆದುಕೊಂಡಿದ್ದಾರೆ.

ಬೇರೆ ಬೇರೆ ವೃತ್ತಿಯಾಧಾರಿತ, ವೃತ್ತಿಸಂಬಂಧಿತ ಖವಾಸಿ, ಢಾಲ್ಯ, ಡಾಡಿ, ಸನರಾ, ಭರವಾ ದೋಬಿ, ಸಿಂಗಾಡಿಯಾ, ರೋಹಿ ದಾಸ್ ಮೊದಲಾದವು ಪ್ರಮುಖವಾಗಿವೆ. ಈ ಜಾತಿಗಳು ಪ್ರದೇಶಕ್ಕನುಗುಣವಾಗಿ ವಿಭಿನ್ನ ರೂಪ ಪಡೆದುಕೊಂಡಿರುವುದು ಕಂಡುಬರುತ್ತದೆ.

**೧. ಖವಾಸಿ**

ಲಂಬಾಣಿಗರು ತಮ್ಮ ಸಮುದಾಯದಲ್ಲಿ ಕ್ಷೌರಿಕ ವೃತ್ತಿಯನ್ನು ಮಾಡುವವರನ್ನು 'ಖವಾಸಿ'ಗಳೆಂದು ಕರೆದುಕೊಳ್ಳುತ್ತಾರೆ. ಆದರೆ ಕ್ಷೌರಿಕರನ್ನು ಸಾಮಾನ್ಯವಾಗಿ ಲಂಬಾಣಿ ಭಾಷೆಯಲ್ಲಿ ನಾವಿಗಳೆಂದು ಕರೆಯುತ್ತಾರೆ. ಖವಾಸಿ (ನಾವಿ)ಗಳು ಲಂಬಾಣಿ ತಾಂಡಾಗಳಲ್ಲೇ ನೆಲೆಸಿದ್ದು ಅವರ ಭಾಷೆಯನ್ನು ಆಡುತ್ತಾ ಅವರ ಆಚಾರ ವಿಚಾರಗಳನ್ನು ತಪ್ಪದೇ ಪಾಲಿಸುತ್ತಾರೆ. ಲಂಬಾಣಿಗರಲ್ಲಿ ಈ ಸಮುದಾಯ ಅಲ್ಪಸಂಖ್ಯಾತರಾಗಿದ್ದು ಇವರ ಪ್ರವೇಶ ಇತ್ಯಾದಿ ವಿಷಯಗಳ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯದಂತಾಗಿದೆ.[೩೦]

ಖವಾಸಿ ಸಮುದಾಯವು ಲಂಬಾಣಿ ಸಮಾಜವನ್ನು ಮಧ್ಯದಲ್ಲಿ ಪ್ರವೇಶಿಸಿರಬಹುದೆಂಬುದಾಗಿ ಅರ್ಥೈಸಬಹುದಷ್ಟೇ ವಿನಃ ಅವರ ಮೂಲವನ್ನು ಖಚಿತವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಖವಾಸಿ ಹಿಂದೂ ಕ್ಷೌರಿಕ ವೃತ್ತಿಯಾಗಿದ್ದು ಅನಿವಾರ್ಯ ಸಂದರ್ಭದಲ್ಲಿ ಅವರನ್ನು ಲಂಬಾಣಿಗರು ತಮ್ಮ ಪಂಗಡದಲ್ಲಿ ಕ್ಷೌರಿಕ ವೃತ್ತಿ ನಿರ್ವಹಿಸಲು ಅವಕಾಶ ಕಲ್ಪಿಸಿಕೊಟ್ಟರೆಂಬುದಾಗಿಯೂ ತಿಳಿಯಬಹುದಾಗಿದೆ.

ಲಂಬಾಣಿಗರು ಖವಾಸಿಗಳನ್ನು ತಮಗಿಂತ ಕೀಳು ಎಂಬ ಭಾವನೆಯಿಂದ ನೋಡುತ್ತಾರೆ. ಇವರೊಂದಿಗೆ ವಿವಾಹವಾಗಲೀ, ಊಟ ಉಪಚಾರವಾಗಲೀ ನಡೆಯುವುದಿಲ್ಲ. ಆದರೆ ಖವಾಸಿಗಳು ಲಂಬಾಣಿಗರ ಆಚಾರ-

ವಿಚಾರ, ಉಡುಗೆ-ತೊಡುಗೆ, ಧಾರ್ಮಿಕ ನಂಬಿಕೆಗಳು, ಅರಾಧನೆ ಸೇರಿದಂತೆ ಕೌಟುಂಬಿಕ ಕಲಹಗಳನ್ನು ಇವರ ನ್ಯಾಯಪದ್ಧತಿ ಪ್ರಕಾರವೇ ಬಗೆಹರಿಸಿಕೊಳ್ಳುತ್ತಾರೆ. ಆದರೂ ಲಂಬಾಣಿಗರು ಇವರನ್ನು ದೂರವಿಡಲು ಕಾರಣವೇನೆಂದರೆ ಇವರ ವೃತ್ತಿಯ ಮೇಲಿನ ಕೀಳುಭಾವನೆ ಇರಬಹುದೆಂದು ಹೇಳಬಹುದು.[೨೧]

ವ್ಯಾಪಾರ ವೃತ್ತಿಯ ದಿನಗಳಲ್ಲಿ ಲಂಬಾಣಿಗರ ಜೀವನ ಉತ್ತಮವಾಗಿದ್ದು ತಲೆಕೂದಲು ತೆಗೆಯುವ ಆಚರಣೆ ವಿಜೃಂಭಣೆಯಿಂದ ಆಚರಿಸುತ್ತಿದ್ದರು. ಮಕ್ಕಳ ತಲೆಕೂದಲು ತೆಗೆಯುವ ಆಚರಣೆ ಖವಾಸಿಗಳಿಂದಲೇ ಮಾಡಿಸಬೇಕೆಂಬ ನಿಯಮವನ್ನು ತಪ್ಪದೆ ಪಾಲಿಸುತ್ತಿದ್ದರು.

ಇತ್ತೀಚಿನ ದಿನಗಳಲ್ಲಿ ತಲೆಕೂದಲು ತೆಗೆಯುವ ಆಚರಣೆ ಶಾಸ್ತ್ರವು ವಿರಳವಾಗಿದ್ದು, ಈ ಶಾಸ್ತ್ರದಲ್ಲಿ ಖವಾಸಿಗಳಲ್ಲದಿದ್ದರೂ ಮಾವನು ತಲೆಕೂದಲು ತೆಗೆಯುವ ಆಚರಣೆ ಶಾಸ್ತ್ರವನ್ನು ಮಾಡಿ ಪೂರೈಸುತ್ತಾನೆ.

**೨. ಡಾಲ್ಯ**

ಲಂಬಾಣಿಗರ ಥಾಲ್ಯಾ ಜಾತಿಯವರು "ತಾಂಡಾದಲ್ಲೆ ನೆಲೆಸಿದ್ದು ಕೊಟ್ಟಿದ್ದನ್ನು ಸ್ವೀಕರೀಸಿ ಅವರದೇ ಭಾಷೆಯನ್ನು ಮಾತನಾಡುತ್ತಾ ಅವರಿಗಿಂತ ಭಿನ್ನವಾಗಿದ್ದು ತಮ್ಮದೇ ಆದ ಬದುಕನ್ನು ರೂಪಿಸಿಕೊಂಡವರಾಗಿದ್ದಾರೆ".[೨೨] ಯಾವುದೇ ಒಂದು ಸಮುದಾಯದ ಚರಿತ್ರೆಯನ್ನು ತಿಳಿಯಬೇಕಾದರೆ ಸಾಮಾನ್ಯವಾಗಿ ಆ ಸಮುದಾಯದ ಮೂಲನೆಲೆ, ದೈವ, ಆಚರಣೆ, ನಂಬಿಕೆ, ಸಾಮಾಜಿಕ, ಆರ್ಥಿಕ ಸಾಂಸ್ಕೃತಿಕ ಚಟುವಟಿಕೆಗಳನ್ನು ಮುಖ್ಯವಾಗಿ ತಿಳಿಯಬೇಕಾಗುತ್ತದೆ. ಆ ಮೂಲಕ ಸಮುದಾಯಗಳ ಸಾಂಸ್ಕೃತಿಕ ಚರಿತ್ರೆಯನ್ನು ತಿಳಿಯಲು ಸಾಧ್ಯವಾಗುತ್ತದೆ. ಕರ್ನಾಟದಲ್ಲಿ ಜೀವಿಸುತ್ತಿರುವ ಅನೇಕ ಸಮುದಾಯಗಳಿಗೆ ತಮ್ಮದೇ ಆದ ಮೂಲವನ್ನು ಕಾಣಬಹುದು. ಸೋಲಿಗ, ಡೊಂಬರು, ಹಕ್ಕಿ, ಕಾಡುಕುರುಬ, ಜೇನುಕುರುಬ, ಆದಿ ಕರ್ನಾಟಕ (ಮಾದಿಗರು), ಮ್ಯಾಸಬೇಡರು ಮುಂತಾದ ಸಮುದಾಯಗಳು ತಮ್ಮದೇ ಆದ ಮೂಲವನ್ನು ಹೊಂದಿವೆ. ಅಲ್ಲದೇ ಪೂಜಿಸುವ ದೈವ, ಆಚರಣೆಗಳು, ಮೈಬಣ್ಣ, ಬೆಡಗುಗಳ ಮೂಲಕ ಮತ್ತು ಕೆಲವು ಲಿಖಿತ ಆಕರಗಳು ಈ ಸಮುದಾಯಗಳ ಸಾಂಸ್ಕೃತಿಕತೆಯನ್ನು ದಾಖಲಿಸಿರುವುದು ಕಂಡುಬರುತ್ತದೆ.

ಆದರೆ 'ಥಾಲ್ಯಾ' ಎಂಬ ಸಮುದಾಯ ಮೂಲನೆಲೆ, ಮೂಲ ಪುರುಷ, ಮೂಲ ದೈವ, ಕಥೆ ಸಾಹಿತ್ಯ ಲಿಖಿತ ಆಧಾರಗಳು ದೊರೆಯುವುದಿಲ್ಲ. ಥಾಲ್ಯಲಂಬಾಣಿ ಸಮುದಾಯದವರೇ ಎಂಬ ವಿಷಯಗಳು ಖಚಿತವಾದ ಮಾಹಿತಿ ದೊರೆಯುವುದಿಲ್ಲ. ಈ ಸಮುದಾಯ ಪ್ರಚಲಿತವಿರುವ ಪುರಾಣ ಇತಿಹಾಸಗಳನ್ನು ಸಂಗ್ರಹಿಸಿ ಅವರ ಮೂಲವನ್ನು ಗುರುತಿಸಲು ಬಳಸಿಕೊಳ್ಳಲಾಗಿದೆ.

**ಐತಿಹ್ಯ ೧.**

ಲಂಬಾಣಿ ಮೂಲಪುರುಷ ದಾದಾ ಮೋಲ ರಾವುಘಡ್‌ದಿಂದ ರಾಠೋಡ್‌ನನ್ನು ಪಾವುಗಡದಿಂದ ಪಮ್ಮಾರನನ್ನು ಚೌವುಗಡದಿಂದ ಚೌವಾಣ್‌ನನ್ನ ದತ್ತು ಪಡೆದ ಹಾಗೆಯೇ ರಣಗಡ್ ಎಂಬ ಸ್ಥಳದಿಂದ ಥಾಲ್ಯಾನನ್ನು ದತ್ತು ಪಡೆದನು. ಅಂದಿನಿಂದ ತಾವು ಅವರ ಸೇವೆಯನ್ನು ಮಾಡುತ್ತಾ ಬಂದಿದ್ದೇವೆ ಎಂದು ಹೇಳುತ್ತಾರೆ.[೨೩]

**ಐತಿಹ್ಯ ೨**

ಲಂಬಾಣಿಗರ ಮೂಲಪುರುಷ ದಾದಾಮೋಲಾ ಹಾಗೂ ರಾಧಿಕಾರಾಣಿ; ಇವರಿಗೆ ಮಕ್ಕಳಿರಲಿಲ್ಲ. ಆದ ಕಾರಣ ಭವಯ್ಯ ಎಂಬ ವ್ಯಕ್ತಿಯನ್ನು ಸಾಕಿಕೊಂಡರಂತೆ. ಅವರು ಮೂರು ಜನ ಮಾಂತ್ರಿಕ ವಿದ್ಯೆಯನ್ನು ಕಲಿತವರು.

ಈ ಮೂರು ಜನರು ರಾಜ ಮಹಾರಾಜರಲ್ಲಿ ಹೋಗಿ ತಮ್ಮ ವಿದ್ಯಾ ಪ್ರದರ್ಶನವನ್ನು ಮಾಡಿ ಅವರನ್ನು ಸಂತೋಷಗೊಳಿಸಿ ಅವರಿಂದ ಸನ್ಮಾನ ಮತ್ತು ಪ್ರಶಸ್ತಿಯನ್ನು ಪಡೆಯುತ್ತಿದ್ದರು. ತಮ್ಮ ನರ್ತನಗೀತೆ, ಹಾಡು, ಮಾಂತ್ರಿಕ ವಿದ್ಯೆಗಳಿಂದ ಮೂವರು ತಮ್ಮ ಬದುಕನ್ನು ಸಾಗಿಸುತ್ತಿದ್ದರು.

ಒಂದು ದಿನ ತಮ್ಮ ಕಲೆಯನ್ನು ಪ್ರದರ್ಶನ ಮಾಡಬೇಕೆಂದು ಸಿಕಂದರ್‌ಬಾದ್‌ಶಹನ ಪಟ್ಟಣ "ಮಾಸ್ಪರ್‌ಗಡ್" ಬಂದರು. ಆ ಪ್ರದೇಶದಲ್ಲಿ ಹುಂಜದಷ್ಟು ಗಾತ್ರದ ದೊಡ್ಡ ದೊಡ್ಡ ಸೊಳ್ಳೆಗಳ ಕಾಟದಿಂದಾಗಿ ರಾಜಮಹಾರಾಜರು ಬೇಸರ ಪಡುತ್ತಿದ್ದರಂತೆ. ರಾತ್ರಿಯೆಲ್ಲ ನಿದ್ದೆಗೆಟ್ಟು ಮನಸ್ಸಿನ ನೆಮ್ಮದಿಯನ್ನು ಕಳೆದುಕೊಂಡಿದ್ದರು. ದಾದಾಮೋಲ ಈ ಸಂದರ್ಭದಲ್ಲಿ ರಾಜನನ್ನು ಭೇಟಿಯಾಗಿ ತಾವು ಗೀತೆ, ನರ್ತನ ಮಾಡುವುದಾಗಿಯೂ, ಭವಯ್ಯ ಈ ಸೊಳ್ಳೆಗಳನ್ನು ತನ್ನ ಮಾಂತ್ರಿಕ ಶಕ್ತಿಯಿಂದ ಮಾಯಮಾಡುತ್ತಾನೆ ಎಂದು ಹೇಳಿದನು. ರಾಜನು ಸಂತೋಷದಿಂದ ಒಪ್ಪಿಕೊಂಡರು. ಅಂದು ರಾತ್ರಿ ನರ್ತನ ಗೀತೆ, ಪ್ರದರ್ಶನ ನಡೆಯಿತು. ಭವಯ್ಯ ತನ್ನ ವಿದ್ಯೆಯಿಂದ ಸೊಳ್ಳೆಗಳನ್ನು ನಾಶಮಾಡಿದನು. ಸೊಳ್ಳೆಗಳ ಕಾಟದಿಂದ ಮುಕ್ತನಾದ ರಾಜನು ಇವನನ್ನು ಜೀವಂತ ಉಳಿಸಿಬಿಟ್ಟರೆ ಮತ್ತೆ ಸೊಳ್ಳೆಗಳ ಕಾಟ ಹೆಚ್ಚಾಗಬಹುದೆಂದು ಭವಯ್ಯನನ್ನು ಕೊಂದು ಹಾಕಿದನು. ಈ ವಿಷಯವನ್ನು ತಿಳಿದು ದಾದಾ ಮೋಲಾ ಹಾಗೂ ರಾಧಿಕಾರಾಣಿ ದುಃಖಪಟ್ಟರು. "ಆವಾಗ ರಾಜನು ತನ್ನ ಆಸ್ಥಾನದ ಸಂಗೀತಗಾರ ಗುಜ ಗಾಂದ್ರನನ್ನು ಭವಯ್ಯದ ಬದಲಾಗಿ ಕೊಡುತ್ತೇನೆಂದು ಹೇಳಿ ಸಮಾಧಾನಗೊಳಿಸಿದ. ದಾದಾಮೋಲ ಹಾಗೂ ರಾಧಿಕರಾಣಿ ಸಿಂಕದರಬಾದ್‌ಶಹನಿಂದ ಮುಸಲ್ಮಾನನಾಗಿದ್ದ ಗಾಜು ಗಾಂದ್ರನನ್ನೇ ಪಡೆದುಕೊಂಡು ಹಿಂತಿರುಗಿದರು. ಮುಂದೆ ಗಾಜಧಾಡಿ ಹೆಸರಿನಿಂದ ಗಾಂದ್ರಧಾಲಿಯಾ ಹೆಸರಿನಿಂದ ಬಂಜಾರ ಸಮಾಜದಲ್ಲಿ ಬೆರತು ಒಂದಾಗಿ ಹೋದರು."



**ಐತಿಹ್ಯ ೩.**

ಲಂಬಾಣಿಗರ ಮೂಲಪುರುಷ ಮೋಳಾದಾದಾ, ರಾಧಿಕಾರಾಣಿ. ಇವರಿಗೆ ಮಕ್ಕಳು ಇರಲಿಲ್ಲ ಹೀಗಾಗಿ ಬೇರೆ ಬೇರೆ ಪ್ರಾಂತಗಳಿಂದ ದತ್ತು ಪಡೆದುಕೊಂಡರು. ರಾಹುಗಡದಿಂದ ಬಂದವನಿಗೆ ರಾಠೋಡ್, ಪಾವುಗಡದಿಂದ ತಂದವನಿಗೆ ಪವಾರ್, ಚಾವುಗಡದಿಂದ ಬಂದವನಿಗೆ ಚೌವ್ಹಾಣ, ಮುಚ್ಚರಗಡ್‌ದಿಂದ ಬಂದವನಿಗೆ ಧಾಡಿ, ರಾಣಾಗಡದಿಂದ ಬಂದವನಿಗೆ ಧಾಲಿಯಾ ಎಂದು ಕರೆದರು."

ಹೀಗೆ ಬೇರೆ ಬೇರೆ ರಾಜರ ಆಸ್ಥಾನಗಳಿಂದ ದತ್ತು ಪಡೆದು ತಂದು ರಾಹು, ಪಾವು ಮತ್ತು ಚಾವುನಿಗೆ ಸಮಾಜದಲ್ಲಿ ಕೂಡಿಸಿಕೊಳ್ಳುವ ಕಾರ್ಯ ಮಾಡಬೇಕಾಗಿತ್ತು. ಒಂದು ವೇಳೆ ಹೀಗೆ ಮಾಡದಿದ್ದರೆ ಈ ಮೂವರು ಜಾಂಗಡ ಎಂದು ಕರೆಸಿಕೊಳ್ಳುತ್ತಿದ್ದರು. ಇದನ್ನು ಅರ್ಥ ಮಾಡಿಕೊಂಡ ಮೋಲಾ ಮತ್ತು ರಾಧಿಕಾ ಮೂವರನ್ನು ವಾಯಿಗುರುವಿನ ಬಳಿಗೆ ಕರೆದೊಯ್ದರು.

ಮೋಲಾ ಮತ್ತು ರಾಧಾ ನಡೆದ ಘಟನೆ ವಾಯಿಗುರುವಿನ ಬಳಿ ಹೇಳಿದರು. ಆಗ ಸೂಕ್ಷ್ಮವಾಗಿ ಆಲೋಚನೆ ಮಾಡಿ ಗಮನಿಸಿದ ವಾಯಿಗುರು ಒಂದು ಕಂಚಿನ ತಟ್ಟೆಯಲ್ಲಿ ಅನ್ನ ಹಾಲು ಬೆರೆಸಿ ಶಿಷ್ಟಾಚಾರಕ್ಕಾಗಿ ಬಂದು ತಿಂದರು. ನಂತರ ಮೋಲಾ, ರಾಧಿಕಾ ಒಂದೊಂದು ತುತ್ತು ತಿಂದರು. ಆಮೇಲೆ ರಾಹು, ಪಾವು ಮತ್ತು ಚಾವುನಿಗೆ ಜೊತೆಗೂಡಿಸಿ ಅದೇ ತಟ್ಟೆಯಲ್ಲಿದ್ದ ಹಾಲು ಅನ್ನವನ್ನು ಉಣ್ಣಲು ಹೇಳಿದರು. ಮೂರು ಜನ ಜತೆಗೂಡಿ ಊಟ ಮಾಡಿದ ಮೇಲೆ ವಾಯಿಗುರು ಇನ್ನು ಮುಂದೆ ಬಂಜಾರ ಸಮಾಜದ ಉದ್ಧಾರ, ಆಗುಹೋಗು ತಮ್ಮಿಂದ

ಆಗಬೇಕೆಂದು ಆಶೀರ್ವದಿಸಿ ಬೀಳ್ಕೊಟ್ಟರು. ರಾಹು, ಪಾವು ಮತ್ತು ಚಾವು ಬಂಜಾರ ಸಮಾಜದಲ್ಲಿ ಬೆರೆತು ಒಂದಾಗಿ ಹೋದರೆಂದು ಹೇಳುತ್ತಾರೆ. ಮುಂದುವರೆದು ಹೇಳುವುದಾದರೆ ಢಾಡಿ, ಢಾಲಿಯ ಇಬ್ಬರನ್ನು ತಮ್ಮ ಸಮುದಾಯದಲ್ಲಿ ಸೇರಿಕೊಂಡಿಲ್ಲವೇನೋ ಎಂದು ಭಾಸವಾಗುತ್ತದೆ. ಹೀಗಾಗಿ ಇವರಿಗೆ ಇಂದಿಗೂ ತಮ್ಮ ಸಮುದಾಯದಲ್ಲಿ ಸೇರಿಕೊಳ್ಳದೆ, ಅಸ್ಪೃಶ್ಯರನ್ನಾಗಿ ಕಾಣುತ್ತಾರೆ. ಅವರೂ ಕೂಡ ತಮ್ಮದೇ ಆದ ಪ್ರತ್ಯೇಕತೆಯನ್ನು ಉಳಿಸಿಕೊಂಡು ಬಂದಿದ್ದಾರೆ.

**ಕಥೆ**: ದಾದಾಮೋಲಾ ಮತ್ತು ರಾಧಿಕಾರಾಣಿ ತಮ್ಮ ಸಮಾಜದ ಆಗುಹೋಗುಗಳನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸುದ್ದಿಯನ್ನು ಮುಟ್ಟಿಸಲು ರಾಣಗಡದಿಂದ ಢಾಲ್ಯಬಂಜಾರನ್ನು ದತ್ತು ತಂದು ಇವರಿಗೆ ಸಾಂಗ್ಯಾಢಾಲ್ಯಾನೆಂದು ಹೆಸರಿಟ್ಟರು. ರಾಣಗಡ ಎಂಬುದು ಹಿಂದೂ ಮಾದರ ಜನಾಂಗದ ಊರು. ಹೀಗಾಗಿ ಸಾಂಗ್ಯಾಢಾಲ್ಯಾನನ್ನು ಮಾದರೆಂದು ತಿಳಿದುಕೊಂಡು ಅವನಿಗೆ ತಮ್ಮ ತಳವಾರಿಕೆ ಕೆಲಸಕ್ಕಾಗಿ ನೇಮಕ ಮಾಡಿಕೊಂಡರು. ಸಂಗ್ಯಾಢಾಲ್ಯಾಗೆ ತಳವಾರ ಜನಾಂಗ ಸ್ತ್ರೀಯನ್ನು ಮದುವೆ ಮಾಡಿಸಿದರು. ಆದ್ದರಿಂದ ಇವರ ವಂಶಾಭಿವೃದ್ಧಿಯಾಯಿತೆಂದು ತಿಳಿದುಬರುತ್ತದೆ. ಢಾಲ್ಯಾರು ಮೂಲತಃ ಮಾದರ ತಳವಾರ ಸಮ್ಮಿಲನ ಜನಾಂಗವೆಂದು ತಿಳಿದು ಲಂಬಾಣಿಗರು ಅವರನ್ನು ಅಸ್ಪೃಶ್ಯರಾಗಿ ಕಾಣುತ್ತಾರೆ. (ಕುಮಾರಹಳ್ಳಿ, ತಾಂಡದ ಖೇಮಿಬಾಯಿ ಮಾಹಿತಿಯನ್ನು ನೀಡಿದರು).

**ಬೆಡಗು**

| ಲಂಬಾಣಿ | ಢಾಲ್ಯಾ | ಬೇಡರು | ಮಾದಿಗರು |
|---|---|---|---|
| ಭಾಕ್ಯಾ | ಗುಜಲೋರ್ | ಗುಜ್ಜರಲ್ | ಐಹೋಳ್ಳೆರು |
| ಜಾತೇತ್ | ಮುಂಗಲಿತಲೋರ್ | ಪೋಲರ್ | ಹೆಗ್ಗೇರು |
| ಧರಮಸೋತ್ | ಐಹೂಳೆಯರ್ | ಮೇಗಲ್ಲರ | ಕರಿಯರು |
| ವಾಂಕಡೋತ್ | ಮಿನಿಗಲೋರ್ | ಮಿನಗಲ್ಲರ್ | ಎಮ್ಮರು |
| ವಿಸಳಾವತ್ | ಕಂಬಳೋರ್ | ಮನೆಪೊಲ್ಕಾರ್ | ಛತ್ರರರು |
| ಆಮ್‌ಗೋತ್ | ನಂದಗಮಲೋರ್ | ಪೂಲೋರು | ಎಡಗತ್ತರು |
| ಝುರಪಲಾ | ಪೂಲ್ಲೋರ್ | ಗಜ್ಜರವರು | ಮುಚ್ಚಿಲರು |
| ತಿಕೇಳೂತ್ | ಕೌಲೋರ್ | ಗೂಜಲವರು | ಚೋಗೆಲರು |
| ಪಾಲತ್ಯಾ | ಮಲಶೆಟ್ಟಿ | ಮಿಲೀಗಲೋರ್ | ಸಾಕೇಲರು |
| ಮೂಡ್ | ಬಸ್ಲೋರ್ | ಬೋಸುರ್ರು | ಮಲ್ಲೇಲರು |
| ವಕ್ತ್ಯಾ | ರಾಮಚಿಗಲೋರ್ | ಮುಂದ್ಲಾರು | ಸಾಸಂಮ್ಲರು |
| ಗೋಳಾನ್ | - | ಮಿನಿಗ್ಲರು | ಶೇಟ್ಟೇಲರು |

ದೈವಗಳು

| ಲಂಬಾಣಿ | ಥಾಲ್ಯಾ | ಬೇಡರು | ಮಾದಿಗರು |
|---|---|---|---|
| ಸೇವಾಲಾಲ್ | ಯಲ್ಲಮ್ಮ | ಯಲ್ಲಮ್ಮ | ಮಾರಮ್ಮ |
| ಭೀಮ್ಯಾನಾಯ್ಕ | ಹುಲಿಗೆಮ್ಮ | ಮಾರಮ್ಮ | ಮಾತಂಗಿ |
| ಮರಿಯಮ್ಮ | ಗುಡ್ಡದ ಲಕ್ಕಮ್ಮ | ಬೋರದೇವರು | ದುರ್ಗಮ್ಮ |
| ಮತಕುಂಠಿಯಾಡಿ | ಓೀರ್‌ದೇವರು | ಗಾದ್ರಿಪಾಲನಾಯಕ | ಹೊಸೂರಮ್ಮ |
| ಮಿಟುಭೂಕ್ಯಾ | - | ಸೂರಪ್ಪದೇವರು | ಎಳವಮ್ಮ |
| ಸಾತಿಯಾಡಿ | - | - | ಗಲ್ಲೊಮ್ಮ |

ಹಬ್ಬಗಳು

| ಲಂಬಾಣಿ | ಥಾಲ್ಯಾ | ಬೇಡರು | ಮಾದಿಗರು |
|---|---|---|---|
| ಹೋಳಿ | ಹೋಳಿ | ಹೋಳಿ | ಹೋಳಿ |
| ಯುಗಾದಿ | ಯುಗಾದಿ | ಯುಗಾದಿ | ಯುಗಾದಿ |
| ದಸರಾ | ದಸರಾ | ದಸರಾ | ದಸರಾ |
| ದೀಪಾವಳಿ | ದೀಪಾವಳಿ | ದೀಪಾವಳಿ | ದೀಪಾವಳಿ |
| ನಾಗಪಂಚಮಿ | ನಾಗಪಂಚಮಿ | ನಾಗಪಂಚಮಿ | ನಾಗಪಂಚಮಿ |
| - | - | ಗುಗ್ಗರಿ ಹಬ್ಬ | ಹುಲಿಗಮ್ಮ |
| - | - | ಡಿಕ್ಕಿಹಬ್ಬ | ನಾಯಕನಟ್ಟಿ ಜಾತ್ರೆ" |

ಲಭ್ಯವಾದ ಮಾಹಿತಿಯ ಪ್ರಕಾರ ಬೆಡಗು ಮತ್ತು ದೈವಗಳನ್ನು ಗಮನಿಸಿದಾಗ ಮತ್ತು ಮೇಲೆ ತಿಳಿಸಿದ ಕೋಷ್ಟಕದ ನಾಲ್ಕು ಸಮುದಾಯಗಳ ಬೆಡಗು ದೈವಗಳ ಆಚರಣೆಗಳನ್ನು ಪರಿಶೀಲಿಸಿದಾಗ ಬೇಡ ಬುಡಕಟ್ಟು, ಮಾದಿಗರು ಮತ್ತು ಥಾಲ್ಯಾ ಈ ಮೂರು ಸಮುದಾಯಗಳ ಬೆಡಗು ಮತ್ತು ದೈವಗಳು ಒಂದಕ್ಕೊಂದು ಹೋಲಿಕೆಯಾಗುವಂತಿವೆ. ಥಾಲ್ಯ ಸಮುದಾಯದ ಜನರ ದೈಹಿಕ ಲಕ್ಷಣಗಳು ಲಂಬಾಣಿಗರಿಂದ ಪ್ರತ್ಯೇಕತೆಯನ್ನು ಸೂಚಿಸುತ್ತವೆ. ಸದೃಢ ಮೈಕಟ್ಟು, ಎತ್ತರವಾಗಿದ್ದರೆ ಇವರು ಹೆಚ್ಚಾಗಿ ಕಪ್ಪು ಮೈಬಣ್ಣ ಮತ್ತು ಕೆಲವರು ಗೋದಿಯುಕ್ತ ಮೈಬಣ್ಣದವರು ಇದ್ದಾರೆ. ಉದ್ದವಾದ ಮೂಗು ಆಕರ್ಷಕ ಮುಖಭಾವವಿರುತ್ತದೆ. ಇವರು ಲಂಬಾಣಿಗರಿಗೆ ಭಿನ್ನವಾಗಿ ಕಂಡುಬರುತ್ತಾರೆ.

ಹೀಗಾಗಿ ಲಂಬಾಣಿಗರು ತಮಗೆ ತಳವಾರಿಕೆ ಕೆಲಸಕ್ಕಾಗಿ ಕೆಳವರ್ಗದವರಾದ ಬೇಡ ಬುಡಕಟ್ಟು ಮಾದಿಗರನ್ನು ನೇಮಕ ಮಾಡಿಕೊಂಡಿರಲು ಸಾಧ್ಯವಿದೆ. ಆಯಾ ಪ್ರದೇಶದಲ್ಲಿ ಲಭ್ಯವಾದ ಕೆಳಸಮುದಾಯ ಈ ಕಸುಬಿಗೆ ನೇಮಕವಾದ್ದರಿಂದ ಇವರನ್ನು ತಳವಾರ ಥಾಲ್ಯಾವೆಂದು ಕರೆದಿರುವುದುಂಟು. ಆಯಾ ಪ್ರದೇಶಗಳಿಗೆ

ಅನುಗುಣವಾಗಿ ನೆಲೆ ಕಂಡುಕೊಂಡ ಲಂಬಾಣಿಗರು ಆಯಾ ಪ್ರದೇಶದಲ್ಲಿ ಲಭ್ಯವಿರುವ ಮಾದಿಗ ಮತ್ತು ಬೇಡ ವೃತ್ತಿಯಲ್ಲಿ ತೊಡಗಿದ್ದರಿಂದ ಈ ಎರಡು ಸಮುದಾಯಗಳು ಲಂಬಾಣಿಗರಲ್ಲಿ ಥಾಲ್ಯಾ ಆಗಿರುವುದುಂಟು.

ಈ ಅಂಶಗಳನ್ನು ಗಮನಿಸಿದಾಗ ಮತ್ತು ಕೊಮಾರಹಳ್ಳಿ ತಾಂಡದ ಖೇಮಿಬಾಯಿ ನೀಡಿದ ಮಾಹಿತಿ ಪ್ರಕಾರ ಇವರ ಬೆಡಗು ಮತ್ತು ಆದಿಕರ್ನಾಟಕ ಬೆಡಗುಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಮಾದಿಗರಾಗಿರಬಹುದೆಂದು ನಿರ್ಧರಿಸಲು ಸಾಧ್ಯವಿದೆ.[೧೯]




ಥಾಲ್ಯಾ ಪಂಗಡದವರು ತಾಂಡಾದ ದೇವಾಲಯದ ಅಂಗಳ ಗುಡಿಸುವುದು, ಹಬ್ಬ ಹರಿದಿನಗಳಲ್ಲಿ ತಮಟೆ ಬಾರಿಸುವುದು ಹಾಗೂ ತಾಂಡದ ಸಾರ್ವತ್ರಿಕ ವಿಚಾರಗಳನ್ನು ತಮಟೆ ಬಾರಿಸುತ್ತಾ ಸಾರುವುದು.[೨೦] ಪಂಚಾಯ್ತಿ ಸಂಘಟಿಸುವಲ್ಲಿ ನಾಯಕನ ಅಜ್ಞೆಯ ಮೇರೆಗೆ ಕಾರಬಾರಿ, ಡಾವಡ್ಯಾ ಹಾಗೂ ಇನ್ನಿತರ ವ್ಯಕ್ತಿಗಳನ್ನು ಕರೆಯುವುದು. ಮದುವೆ, ಮುಂಜಿ, ಶವಸಂಸ್ಕಾರ ಇತ್ಯಾದಿ ಸಂದರ್ಭಗಳಲ್ಲಿ ಹಗಲಿರುಳು ಸೇವೆಯನ್ನು ಮಾಡಿಕೊಂಡಿರುವುದು ಇವರ ಆದ್ಯ ಕರ್ತವ್ಯಗಳಾಗಿವೆ.

ಥಾಲ್ಯಾ ಪಂಗಡ ಅಸ್ಪೃಶ್ಯ ಜನಾಂಗದ ಮೂಲದವರಾಗಿದ್ದಾರೆ ಎಂದು ಪರಿಗಣಿಸಿರುವುದರಿಂದ ಅವರನ್ನು ಲಂಬಾಣಿಗರು ಕೀಳು ಭಾವನೆಯಿಂದ ನೋಡುತ್ತಾರೆ. ಆದ್ದರಿಂದ ಲಂಬಾಣಿಗರಲ್ಲಿ ಅವರನ್ನು ಪ್ರತ್ಯೇಕವಾಗಿಯೇ ಪರಿಗಣಿಸಿ ಅವರೊಂದಿಗೆ ಯಾವುದೇ ವಿವಾಹ ಸಂಬಂಧವನ್ನು ಮಾಡುವುದಿಲ್ಲ. ಇವರಲ್ಲಿಯೇ ಪ್ರತ್ಯೇಕವಾದ ಸೀತಾವಾಳ್ ಮತ್ತು ಸಿಂಗೇವಾಳ್ ಎಂಬ ಪ್ರಮುಖ ಉಪಗೋತ್ರಗಳಿವೆ. ಈ ಗೋತ್ರಗಳಲ್ಲಿ ೧. ಮಂಗತ್‌ಲೂರು, ೨. ಕಂಬಳೂರು, ೩. ಕಾಲೂರು ೪. ದುಡ್ಲೂರ್ ೫. ನಂದಗಮೆಲೋರ್ ೬. ರಾಮಜಗಲೂರ್ ೭. ಗುಜಲೂರ್ ೮. ಮನಗಲೋರ್ ೯. ಪುಲ್ಲೋರ್ ೧೦. ಲಸ್ಲೋರ್ ೧೧. ಐಹೊಳೆಯ ೧೨. ಮಲಶೆಟ್ಟಿ ಇನ್ನು ಮುಂತಾದ ಗೋತ್ರಗಳಿದ್ದು ಈ ವಿವಿಧ ಗೋತ್ರಗಳ ಮಧ್ಯೆ ಹೆಣ್ಣು ಗಂಡುಗಳನ್ನು ಕೊಟ್ಟುತೆಗೆದುಕೊಳ್ಳುವ ಸಂಬಂಧವನ್ನು ಬೆಳೆಸುತ್ತಾರೆ.[೨೧]

ಸಾಮಾನ್ಯವಾಗಿ ಥಾಲ್ಯಾ ಸಮುದಾಯದ ಕುಟುಂಬಗಳು ಎಲ್ಲಾ ತಾಂಡಕ್ಕೆ ಒಂದರಂತೆ ಇರುತ್ತದೆ. ಕೆಲವು ತಾಂಡಗಳಲ್ಲಿ ಸುಮಾರು ೨೫ಕ್ಕೂ ಹೆಚ್ಚಿನ ಕುಟುಂಬಗಳನ್ನು ನೋಡಬಹುದು. ಅಂತಹ ಕಡೆಗಳಲ್ಲಿ ಲಂಬಾಣಿಗರು ತಮ್ಮ ಸೇವೆಗಾಗಿ ವರ್ಷಕ್ಕೆ ಒಂದು ನಿರ್ದಿಷ್ಟ ಕುಟುಂಬ ಸರದಿಯಂತೆ ನೇಮಿಸಿ ಕೊಂಡಿರುತ್ತಾರೆ. ಪ್ರತಿಯಾಗಿ ಸೇವಾ ನಿರತ ಕುಟುಂಬಕ್ಕೆ ಪ್ರತಿಯೊಂದು ಹಬ್ಬಗಳಲ್ಲಿ ಕುರಿಮಾಂಸದ ಪಾಲನ್ನು ಉಚಿತವಾಗಿ ನೀಡುತ್ತಾರೆ. ಮದುವೆಗಳಲ್ಲಿ ಗಂಡು ಹೆಣ್ಣಿನ ಕಡೆಯವರು ತಲಾ ೨೫ ರೂಪಾಯಿಗಳನ್ನು ಕೊಡಬೇಕೆಂಬ ನಿಯಮವಿದೆ. ಅಲ್ಲದೇ ಕುಟುಂಬದಲ್ಲಿ ಗಂಡು ಮಗು ಜನಿಸಿದರೆ ೫ ರೂ ಕೊಡುವ ಸಂಪ್ರದಾಯವೂ ಇದೆ. ಹಿಂದೆ ಥಾಲ್ಯ ಪಂಗಡದವರು ಬೇರೆ ತಾಂಡಾಗಳಿಗೆ ಹೋದರೂ ಆ ತಾಂಡಾದ ನಾಯಕನು ಥಾಲ್ಯ ಪಂಗಡದವರನ್ನು ಗೌರವದಿಂದ

ಕಂಡು ಊಟದ ವ್ಯವ್ಯಸ್ಥೆ, ವಸತಿ ವ್ಯವಸ್ಥೆ ಮಾಡಿಸಿ ಬೆಳ್ಳಿಯ ನಾಣ್ಯವನ್ನು ಕೊಡುವ ಪದ್ಧತಿ ಸಹ ಮುಂದುವರಿಸಿಕೊಂಡು ಬಂದಿದ್ದಾರೆ.

ಲಂಬಾಣಿಗರ ಸಂಸ್ಕೃತಿಯಿಂದ ಥಾಲ್ಯಾ ಸಮುದಾಯದವರು ಭಿನ್ನವಾಗಿದ್ದು, ತಮ್ಮದೇ ಆದ ಆಚಾರ - ವಿಚಾರಗಳನ್ನು ರೂಢಿಮಾಡಿಕೊಂಡು ಬಂದಿದ್ದಾರೆ. ಇವರು ಮದುವೆ, ಮುಂಜಿ ಇನ್ನೂ ಮುಂತಾದ ಶಾಸ್ತ್ರಗಳನ್ನು ಲಂಬಾಣಿಗರ ಪದ್ಧತಿಗಳಿಗನುಸಾರವಾಗಿ ನಡೆಸದೇ ಹಿಂದೂ ಮಾದಿಗರ ಶಾಸ್ತ್ರಗಳಿಗನುಸಾರವಾಗಿ ನಡೆಸುತ್ತಾರೆ. ಅಂತೆಯೇ ಜನನ ಮರಣ, ಆಚಾರ - ವಿಚಾರಗಳಲ್ಲಿ ಎರಡೂ ಸಮುದಾಯಗಳ ನಡುವೆ ಬಹಳಷ್ಟು ಬದಲಾವಣೆಗಳಿವೆ.

ಥಾಲ್ಯಾಗಳೊಂದಿಗೆ ಲಂಬಾಣಿಗರು ಯಾವುದೇ ರೀತಿಯ ವಿವಾಹಗಳನ್ನು ಮಾಡುವುದಿಲ್ಲ. ಊಟ - ಉಪಚಾರಗಳು ಸಹ ನಡೆಯುವುದಿಲ್ಲ. ಅಂತೆಯೇ ಥಾಲ್ಯಾ ಸಮುದಾಯಗಳೂ ಸಹ ಲಂಬಾಣಿಗರೊಂದಿಗೆ ಬೇರೆಯದೇ ಅವರಿಂದ ದೂರವಿರಲು ಅನೇಕ ನಿಷೇಧಗಳನ್ನು ಹೇರಿಕೊಂಡಿದ್ದಾರೆ. ಥಾಲ್ಯಾ ಸಮುದಾಯದವರು ಲಂಬಾಣಿ ಸ್ತ್ರೀಯರೊಂದಿಗೆ ಮದುವೆಯಾಗಲಿಚ್ಛಿಸಿದಲ್ಲಿ ಅಂತಹ ಅಪರಾಧವನ್ನು ಘೋರ ಅಪರಾಧ ಎಂದು ಭಾವಿಸಿ ಶಿಕ್ಷೆಯನ್ನು ನೀಡುತ್ತಾರೆ.

ಆಧುನಿಕ ಸಮಾಜದಲ್ಲಿ ಥಾಲ್ಯಾ ಸಮುದಾಯವರು ತಮ್ಮದೇ ಆದ ಸಾಮಾಜಿಕ ಕಟ್ಟುಪಾಡುಗಳು ಇದ್ದರೂ ಆಚಾರ-ವಿಚಾರಗಳಲ್ಲಿ ಸ್ವಲ್ಪ ಬದಲಾವಣೆ ಕಂಡುಬರುವುದನ್ನು ಪ್ರಸ್ತುತ ದಿನಗಳಲ್ಲಿ ನೋಡಬಹುದು.

**೨. ಥಾಡಿ :**

ಲಂಬಾಣಿಗರಲ್ಲಿ ವೃತ್ತಿಗಾಯಕರನ್ನು 'ಥಾಡಿ' ಎಂದು ಕರೆಯುತ್ತಾರೆ. ಈ ಜನಪದ ವೃತ್ತಿಗಾಯಕರು ಕರ್ನಾಟಕದ ಧಾರ್ಮಿಕ ವೃತ್ತಿಗಾಯಕರ ಗುಂಪಿಗೆ ಸೇರುತ್ತಾರೆ. ಈ ಥಾಡಿಗಳು ತಮ್ಮನ್ನು ತಾವು 'ಗಾಜು ಗೋಣಿಯಾ' ಎಂದು ಹೆಮ್ಮೆಯಿಂದ ಕರೆದುಕೊಳ್ಳುತ್ತಾರೆ. ಗೋಣಿಯಾ ಎಂಬುದಕ್ಕೆ ರಾಜಸ್ಥಾನಿ ಭಾಷೆಯಲ್ಲಿ ಶ್ರೇಷ್ಠಗಾಯಕ ಎಂಬರ್ಥವಿದೆ.[೮೦]

ಪ್ರತಿ ವರ್ಷವೂ ಕರ್ನಾಟಕದ ಬಹುತೇಕ ತಾಂಡಾಗಳಿಗೆ ಭೇಟಿಕೊಟ್ಟು ತಮ್ಮ ವೃತ್ತಿಯನ್ನು ಮುಗಿಸಿ ಹಿಂದಿರುಗುತ್ತಾರೆ. ಇವರು ಮನೆಬಿಟ್ಟು ಹೊರಬಂದರೆ ತಿಂಗಳು ಕಳೆದರೂ ಹಿಂತಿರುಗುವುದಿಲ್ಲ. ಈ ಉದ್ದೇಶದಿಂದ ಸಾರಂಗಿವಾದ್ಯ, ಬಟ್ಟೆ ಇವುಗಳಿಂದ ಸಜ್ಜಾದ ಕೈಚೀಲವನ್ನು ಇಳಿಬಿಟ್ಟಿರುತ್ತಾರೆ. ಮೊದಲು ತಾಂಡಾದ ನಾಯಕನ ಮನೆಗೆ ಹೋಗುವುದು ರೂಢಿಯಲ್ಲಿರುವ ಸಂಪ್ರದಾಯ. ತಾಂಡಾದ ನಾಯಕನು ಥಾಡಿಯರಿಗೆ ಬರಮಾಡಿಕೊಂಡು ಊಟ ಉಪಚಾರ ಮತ್ತು ತಂಗುವ ವ್ಯವಸ್ಥೆ ನೋಡಿಕೊಳ್ಳುತ್ತಾನೆ. ಊಟದ ಬಳಿಕ ನಾಯಕನ ಮನೆಯ ಮುಂದೆ ಎಲ್ಲರೂ ಸೇರುತ್ತಾರೆ. ಕಿಕ್ಕಿರಿದು ತುಂಬಿದ ಶ್ರೋತೃಗಳ ಮಧ್ಯದಲ್ಲಿ ಥಾಡಿಯು ನಿಧಾನವಾಗಿ ಹಾಡು ಆರಂಭಿಸುತ್ತಾರೆ. ಈತನು ಹಾಡುವ ಪ್ರಮುಖ ಕಥನ ಗೀತಗಳೆಂದರೆ ಲಂಬಾಣಿ ಮೂಲಪುರುಷರ ಪರಂಪರೆ, ಲಂಬಾಣಿ ಜನಪದ, ಲಾವಣಿ ಮಹಾಸತಿಯರ ಗೀತೆ, ಸೇವಾಭಾಯ, ಭೀಮನಾಯ್ಕ, ಭೀಮಿಸತ್ತಿ, ಸಾಮಕಿಮಾತೆ, ರಾಮರಾವ್ ಮಹಾರಾಜ ಇತ್ಯಾದಿ. ವೀರಪುರುಷರ ವೀರಗೀತೆಗಳನ್ನು ಹಾಡಿ ಜನರ ಮನವನ್ನು ರಂಜಿಸುವರು.[೯೦]

ಈ ಢಾಡಿ ಪಂಗಡದವರ ಕುರಿತಂತೆ ಕೆಲವು ದಂತಕಥೆಗಳನ್ನು ನೋಡಬಹುದು. ಅವುಗಳ ಪ್ರಕಾರ ಲಂಬಾಣಿಗರ ಮೂಲಪುರುಷನಾದ ಮೋಲನು ಕೃಷ್ಣನ ಗೋವುಗಳನ್ನು ಕಾಯುತ್ತಿದ್ದನು. ಕೃಷ್ಣನ ಮನ ಒಲಿಸಿ ರಾಧೆಯನ್ನು ಕರೆತಂದನು. ಮಂತ್ರವಾದಿ ಭವಯ್ಯ ಎಂಬುವವನು ಮೋಲಾ, ರಾಧಿಕಾಳ ಜೊತೆ ನೃತ್ಯ ಮಾಡುತ್ತಾ ಸಂಚರಿಸುತ್ತಾ ಸಿಕಂದರದಬಾದ್‌ಷಹನ ಆಸ್ಥಾನಕ್ಕೆ ಬಂದು ಅಲ್ಲಿ ರಾಜನ ಅಪ್ಪಣೆಯ ಮೇರೆಗೆ ನೃತ್ಯ ಮಾಡಿದರು. ಅಲ್ಲಿ ಸೊಳ್ಳೆಗಳು ಮನುಷ್ಯರನ್ನು ಮುತ್ತಿ ರಕ್ತ ಹೀರಿಕೊಳ್ಳುತ್ತಿದ್ದವು. ಅವುಗಳನ್ನು ಭವಯ್ಯನು ನಿಯಂತ್ರಿಸಿದ. ಈ ಸೋಜಿಗ ಸಂಗತಿಯನ್ನರಿತ ಅರಸನು ಭವಯ್ಯನನ್ನು ಮುಗಿಸಿಬಿಡಬೇಕೆಂದು ಇಲ್ಲವಾದರೆ ಬೆಳಗಿನ ಜಾವ ಸೊಳ್ಳೆಗಳನ್ನು ಬಿಟ್ಟುಹೋಗುತ್ತಾನೆಂದು ತಿಳಿದು ಆ ಕ್ಷಣವೇ ಭವಯ್ಯನನ್ನು ಅರಮನೆಯೊಳಗೆ ಕರೆದೊಯ್ದು ಕೊಲೆಗೈದನು. ಆ ಹೇಯ ಕೃತ್ಯವನ್ನು ಸಹಿಸಲಾರದೇ ಮೋಲಾ ಮತ್ತು ರಾಧಿ, ಬಾದ್‌ಷಹನ ಜೊತೆಗೆ ಘರ್ಷಣೆಗಿಳಿದರು. ಬಾದ್‌ಷಹನು ನಿಜಸ್ಥಿತಿಯನ್ನು ಹೇಳಿ ಸಮಾಧಾನಪಡಿಸಿದನು. ನೀವು ದುಃಖಿಸುವ ಅವಶ್ಯಕತೆ ಇಲ್ಲ. ನಿಮ್ಮ ಭವಯ್ಯನ ಪರವಾಗಿ ಇಬ್ಬರು ಸಂಗೀತಗಾರ ಗಾಜು ಮತ್ತು ಗಾಂಜ್ರುರಿಗೆ ಕೊಡುತ್ತೇನೆಂದು ಹೇಳಿದನಂತೆ. ಅಂತಿಮವಾಗಿ ಮೋಲಾ ಮತ್ತು ರಾಧಿ ಒಪ್ಪಿಕೊಂಡು ಅವರಿಬ್ಬರನ್ನು ಕರೆತಂದರು. ಅವರಿಬ್ಬರೂ ಮುಸ್ಲಿಂ ಧರ್ಮಕ್ಕೆ ಸೇರಿದವರು. ಅಂದಿನಿಂದ ಗಾಜುಗಾಂಜ್ರ ಲಂಬಾಣಿ ವೃತ್ತಿಗಾಯಕರಾಗಿ ಬೆರೆತುಹೋದರು. ಗಾಜು ವಂಶಸ್ಥರೇ ಢಾಡಿಗಳು ಗಾಂಜ್ರುನ ವಂಶಸ್ಥರೇ ಭಾಟರೆಂದು ಹೇಳುತ್ತಾರೆ.''

ಎರಡನೇ ದಂತಕಥೆಯ ಪ್ರಕಾರ ''ಮಧ್ಯ ಪ್ರದೇಶದಲ್ಲಿ ಢಾಡಿ ಹಾಗೂ ಭಾಟರು ಒಂದೇ ಆಗಿದ್ದಾರೆ. ಭಾಟರು ಢಾಡಿಗಳ ಪೂರ್ವಜರಾಗಿದ್ದಾರೆ. ಗುರುನಾನಕನ ಸೇವಕನು ಹುಮಾಯೂನನ ಆಸ್ಥಾನಕ್ಕೆ ಹೋದಾಗ ಅಲ್ಲಿ ಮೋಸದಿಂದ ಹಸುವಿನ ಮಾಂಸವನ್ನು ತಿನ್ನಿಸಲಾಯಿತು. ಮೋಸಕ್ಕೆ ಒಳಗಾದ ಆತನು ಇಸ್ಲಾಂ ಧರ್ಮವನ್ನು ಸ್ವೀಕರಿಸಿದನು. ಆತನ ವಂಶಜರೇ ಢಾಡಿಗಳಾಗಿದ್ದಾರೆ. ಮೊಗಲರ ದರ್ಬಾರದಲ್ಲಿ ಕೆಲವರು ಗಾಯಕರಾಗಿ ಸೇರಿದರೆ, ಇನ್ನು ಕೆಲವರು ಲಂಬಾಣಿಗರಲ್ಲಿ ಸಮಾಜ ಸೇವಕರಾಗಿ ನಿಂತರು. ಇವರು ದಿಲ್ಲಿಯ ಬಾದ್‌ಶಹರಲ್ಲಿ ಕೀರ್ತನೆ, ಭಜನೆಗಳನ್ನು ಮಾಡುತ್ತಾರೆ. ಹಿಂದೂ-ಇಸ್ಲಾಂ ಮಿಶ್ರ ಸಂಸ್ಕೃತಿಯು ಅವರ ವೈಶಿಷ್ಟ್ಯವಾಗಿದೆ.''

ಮೂರನೇ ದಂತಕಥೆಯ ಪ್ರಕಾರ ಔರಂಗಜೇಬನ ಆಸ್ಥಾನದಲ್ಲಿ ತಮ್ಮ ಮೂಲ ವೃತ್ತಿಯಾದ ದೊಂಬರಾಟವನ್ನು ಕೆಲವು ಲಂಬಾಣಿ ಯುವತಿಯರು ಪ್ರದರ್ಶಿಸುತ್ತಾರೆ. ಲಂಬಾಣಿ ಯುವತಿಯರ ಸೌಂದರ್ಯಕ್ಕೆ ಮಾರುಹೋದ ಔರಂಗಜೇಬನ ಸೈನಿಕರು ಮೂವರು ಯುವತಿಯರನ್ನು ಅಪಹರಿಸುತ್ತಾರೆ. ಲಂಬಾಣಿಗರು ಒಗ್ಗಟ್ಟಾಗಿ ಔರಂಗಜೇಬನೊಂದಿಗೆ ಯುದ್ಧಕ್ಕೆ ಸಿದ್ಧರಾಗುತ್ತಾರೆ. ಅವರೊಂದಿಗೆ ವಿರೋಧ ಕಟ್ಟಿಕೊಳ್ಳಲು ಇಚ್ಛಿಸದೇ ಔರಂಗಜೇಬನು ತನ್ನ ಸೈನಿಕರು ಮಾಡಿದ ಅಪರಾಧಕ್ಕೆ ಕ್ಷಮೆ ಕೋರಿ ಆ ಯುವತಿಯರನ್ನು ಹಿಂದಕ್ಕೆ ಒಪ್ಪಿಸಲು ಕ್ರಮಕೈಗೊಳ್ಳುತ್ತಾನೆ. ಲಂಬಾಣಿಗರು ಧರ್ಮ ಭ್ರಷ್ಟರಾದ ಯುವತಿಯರನ್ನು ಹಿಂದಕ್ಕೆ ಪಡೆಯಲು ಒಪ್ಪುವುದಿಲ್ಲ. ಆಗ ಔರಂಗಜೇಬನು ಯುವತಿಯರ ಬದಲಾಗಿ ಮೂವರು ಯುವಕರನ್ನು ಲಂಬಾಣಿ ಜನಾಂಗದ ಸೇವೆ ಮಾಡಿಕೊಂಡಿರಲು ಒಪ್ಪಿಸುತ್ತಾನೆ. ಈ ಮೂವರಲ್ಲಿ ಢಾಡಿ ಅಥವಾ ಗೂಣಗನು ಒಬ್ಬ.''

ಈ ಮೇಲಿನ ಮೌಖಿಕ ಆಧಾರಗಳನ್ನು ಗಮನಿಸಿದಾಗ ಢಾಢಿಗಳು ಭಾಟ ಜನಾಂಗಕ್ಕೆ ಸೇರಿದವರಾಗಿದ್ದು, ಗವಾಯಿಗಳು ಲಂಬಾಣಿ ಸಮಾಜಕ್ಕೆ ಸೇರಿಕೊಂಡರು. ನಂತರದಲ್ಲಿ ಮೊಗಲರ ಆಳ್ವಿಕೆಯ ಕಾಲದಲ್ಲಿ ಯಾವುದೋ ಕಾರಣದಿಂದ ಇಸ್ಲಾಂ ಧರ್ಮವನ್ನು ಸ್ವೀಕರಿಸಿದರು. ಮೊಗಲರ ಆಳ್ವಿಕೆಯ ನಂತರದಲ್ಲಿ ಹಿಂದೂ ಮುಸ್ಲಿಂ ಎರಡು ಸಂಸ್ಕೃತಿಗಳ ಸಮ್ಮಿಶ್ರ ಸಂಸ್ಕೃತಿಯನ್ನು ರೂಢಿಸಿಕೊಂಡರೆಂಬುದು ತಿಳಿದುಬರುತ್ತದೆ.

ಹಿಮಾಚಲ ಪ್ರದೇಶದ ಚಂಬಾ ಜಿಲ್ಲೆಯಲ್ಲಿ ಢಾಡಿಗಳೆಂದು ಕರೆಯುವ 'ಖಾನ್ಸಿ' ಜನಾಂಗ ಬಂದು ನೆಲೆಸಿದ್ದು, ಲಂಬಾಣಿಗರಂತೆ ಇವರೂ ಸಹ ಇಂಡೋ-ಆರ್ಯನ್ ಗುಂಪಿಗೆ ಸೇರಿದ ಭಾಷೆಯನ್ನು ಮಾತನಾಡುತ್ತಾರೆ. ಅಲ್ಲದೇ ಹಬ್ಬ ಹರಿದಿನಗಳಲ್ಲಿ ಗಂಡು ಹೆಣ್ಣು ಒಟ್ಟಿಗೆ ಕಲೆತು ಸಾರಾಯಿ ಸೇವನೆ ಮಾಡುತ್ತಾರೆ. ಅವರಲ್ಲಿಯೂ ಪಿತೃ ಪ್ರಧಾನ ಕುಟುಂಬ, ವಿಧವಾ ವಿವಾಹ ಪದ್ಧತಿಗಳು ರೂಢಿಯಲ್ಲಿವೆ. ಇವರು ದೇವಸ್ಥಾನಗಳಲ್ಲಿ ಹಾಡುತ್ತಾ ಜೀವನ ನಡೆಸುವ ವೃತ್ತಿಯನ್ನು ಹೊಂದಿರುವವರು.[10] ಸಾಂಪ್ರದಾಯಿಕವಾಗಿ ಖಾನ್ಸಿಗಳು ಸಂಗೀತ ಪ್ರಿಯರಾಗಿದ್ದರೆಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ಇವರು ಮುಸ್ಲಿಂ ಆಡಳಿತ ಕಾಲದಲ್ಲಿ ಮುಸ್ಲಿಂ ಧರ್ಮವನ್ನು ಸ್ವೀಕರಿಸಿ ಹಲವಾರು ದಿನಗಳು ಆ ಧಾರ್ಮಿಕ ಪರಿಸರದಲ್ಲಿ ಕಳೆದು ಮುಂದೆ ಲಂಬಾಣಿ ವ್ಯಾಪಾರಿಗಳೊಂದಿಗೆ ಸಂಪರ್ಕ ಬೆಳೆದು ಅವರ ಸಮಾಜದಲ್ಲಿ ಪ್ರವೇಶಿಸಿ ಅಲ್ಲಿಯೇ ನೆಲೆನಿಂತಿರುವ ಸಾಧ್ಯತೆಗಳಿರಬಹುದೆಂದು ಊಹಿಸಬಹುದು. ಇವರು ಢಾಡಿ ಜನಾಂಗದಿಂದ ಬಂದವರಾಗಿದ್ದರಿಂದಲೇ ಲಂಬಾಣಿಗರು ಇವರನ್ನು ಢಾಡಿಗಳೆಂದು ಕರೆಯುವ ಪದ್ಧತಿ ರೂಢಿಗೆ ಬಂದಿರಬಹುದು.

ಢಾಡಿಗಳಲ್ಲಿ ಮುಖ್ಯವಾಗಿ ಎರಡು ಪಂಗಡಗಳಿವೆ. ಢಾಡಿ ಮತ್ತು ಭಾಟ ಈ ಮುಖ್ಯ ಪಂಗಡಗಳಲ್ಲಿ ಇತರೇ ಹಲವು ಉಪ ಪಂಗಡಗಳು ಕಂಡುಬರುತ್ತವೆ. ಢಾಡಿಗಳಲ್ಲಿ ಸೇವ್ಯಾ, ರತ್ಯಾ, ಭಾಣಿಯಾ, ರೋಢಿಯಾ, ಡೋಳಿಯಾ, ಡುಂಗ್ರಾ ಎಂಬ ಆರು ಪಂಗಡಗಳಿವೆ. ಹಾಗೂ ಭಾಟರಲ್ಲಿ ಗಂಗ್ಯಾ, ಹರಸಿಂಗ್, ಕಂಡೇಳಿಯಾ ಅಥವಾ ಕಪಾಂಡಿ, ಝುಡ್‌ಪೊಡ್, ಸಗಣ್ಯಾಝುಪಡಿ, ಮಘರಿಯಾ ಮತ್ತು ದೇವ್ಯಾಭಾಟ ಎಂಬ ಎಂಟು ಪಂಗಡಗಳನ್ನು ಕಾಣಬಹುದು. ಇವರಲ್ಲಿ ಕೆಲವು ಲಂಬಾಣಿಗಳೊಂದಿಗೆ ತಾಂಡಾಗಳಲ್ಲಿ ವಾಸಿಸುತ್ತಿದ್ದರೆ ಮತ್ತೆ ಕೆಲವರು ತಾಂಡಾಗಳನ್ನು ತೊರೆದು ಇಸ್ಲಾಂ ಧರ್ಮದಲ್ಲಿ ಬೆರೆತು ಹೋಗಿದ್ದಾರೆ. ಇವರ ಮಾತೃ ಭಾಷೆ ಉರ್ದುವಾಗಿದ್ದರೂ ಸಹ ಅವರು ನೆಲೆಸಿರುವ ರಾಜ್ಯದ ಮತ್ತು ಲಂಬಾಣಿ ಭಾಷೆಗಳು ಸಂಪರ್ಕ ಭಾಷೆಗಳಾಗಿರುತ್ತವೆ. ಢಾಡಿ ಮಹಿಳೆಯರು ಮುಸ್ಲಿಂ ಮಹಿಳೆಯರಂತೆ ಸೀರೆ, ಕುಪ್ಪಸವನ್ನು ಉಡುತ್ತಾರೆ. ಲಂಬಾಣಿಗರಂತೆ ವಿಶಿಷ್ಟವಾದ ಉಡುಗೆಗಳನ್ನು ತೊಡುವುದಿಲ್ಲ. ಕೊರಳಲ್ಲಿ ಸಾಮಾನ್ಯವಾಗಿ ಒಂದೆರಡು ಹಾರಗಳು, ಮೂಗಿನಲ್ಲಿ ನತ್ತು, ಇವರ ಆಭರಣಗಳಾಗಿವೆ. ಪುರುಷರು ಸಾಮಾನ್ಯವಾಗಿ ಅಂಗಿ, ಪಂಚೆಗಳನ್ನು ಧರಿಸುತ್ತಾರೆ. ಕೆಲವು ಕಡೆ ಅಂಗಿ ಮತ್ತು ಪೈಜಾಮ ಧರಿಸುತ್ತಾರೆ. ಬಳ್ಳಾರಿಯ ಕಡೆ ಢಾಡಿಗಳು ಲಂಬಾಣಿ ಪುರುಷರಂತೆ ಪೇಟವನ್ನು ಕಟ್ಟಿಕೊಳ್ಳುತ್ತಾರೆ.[11]

ಢಾಡಿಗಳಿಗೆ ಲಂಬಾಣಿ ಸಮಾಜದಲ್ಲಿ ವಿಶಿಷ್ಟವಾದ ಸ್ಥಾನವಿದೆ. ಲಂಬಾಣಿ ಸಂಸ್ಕೃತಿಯ ರಕ್ಷಕರಾಗಿ ಅವರು ತಮ್ಮ ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ. ತಾಂಡಾದಿಂದ ತಾಂಡಾಕ್ಕೆ ಹೋಗಿ ಪೂರ್ವಜರ ಕಥೆಗಳನ್ನು ಧಾರ್ಮಿಕ ಕಥನ ಗೀತೆಗಳನ್ನು ಹಾಗೂ ಬಿಡಿ ಗೀತೆಗಳನ್ನು ಹಾಡಿ ಮನರಂಜನೆಯನ್ನು ಒದಗಿಸುತ್ತಿದ್ದರು. ಲಂಬಾಣಿಗರಲ್ಲಿ

ತಮ್ಮ ಧರ್ಮ, ಸಂಸ್ಕೃತಿಗಳ ಬಗೆಗೆ ಅಭಿಮಾನಗಳನ್ನು ಜಾಗೃತಗೊಳಿಸುತ್ತಿದ್ದರು. ಇದಷ್ಟೇ ಅವರ ಕೆಲಸವಾಗಿರದೆ ಒಂದು ತಾಂಡಾದ ಹೆಣ್ಣುಗಳಿಗೆ ಗಂಡುಗಳನ್ನು, ಗಂಡುಗಳಿಗೆ ಹೆಣ್ಣುಗಳನ್ನು ಹುಡುಕುವ ಹಾಗೂ ಕ್ಷೇಮ ಸಮಾಚಾರಗಳನ್ನು ತಲುಪಿಸುವ ಕಾರ್ಯವನ್ನು ಕೂಡ ಮಾಡುತ್ತಿದ್ದರು. ಮದುವೆ-ಮುಂಜಿಗಳಲ್ಲಿ, ಧಾರ್ಮಿಕ ಉತ್ಸವಗಳಲ್ಲಿ ಅವರಿಗೆ ಅಗ್ರಪಟ್ಟ. ತಿಂಗಳುಗಟ್ಟಲೇ ನಡೆಯುವ ಮದುವೆಯಲ್ಲಿ ಜವಾಬ್ದಾರಿಯುತ ವ್ಯಕ್ತಿಯಾಗಿ ವರನ ಜೊತೆಗಾರರಾಗಿ (ಲೇರಿಯಾ) ಮದುವೆಯ ಕಾರ್ಯವನ್ನು ಪೂರ್ಣಗೊಳಿಸುತ್ತಿದ್ದರು. ಹೀಗೆ ಲಂಬಾಣಿ ಸಮಾಜದಲ್ಲಿ ಮನೋರಂಜಕರಾಗಿ, ಸಮಾಚಾರ ವಾಹಕರಾಗಿ, ಜ್ಯೋತಿಷಿಯಾಗಿ, ದಲ್ಲಾಳಿಯಾಗಿ, ವೈದ್ಯರಾಗಿ ಸೇವೆಯನ್ನು ಸಲ್ಲಿಸುವುದರ ಮೂಲಕ ಲಂಬಾಣಿಗರ ಧರ್ಮ ಹಾಗೂ ಸಂಸ್ಕೃತಿಯನ್ನು ರಕ್ಷಿಸುವ ಕೆಲಸ ನಿರ್ವಹಿಸುತ್ತಿದ್ದರು.[೧೭] ಅದಕ್ಕೆ ಪ್ರತಿಯಾಗಿ ಲಂಬಾಣಿಗರು ಅವರಿಗೆ ಧನ, ಧಾನ್ಯ, ಹಸು ಮುಂತಾದ ಸಾಮಗ್ರಿಗಳನ್ನು ಕೊಟ್ಟು, ಅವರ ಜೀವನ ನಿರ್ವಹಣೆಗೆ ಸಹಾಯಕರಾಗಿದ್ದಾರೆ.

ಆದರೆ ಇಂದು ಲಂಬಾಣಿ ಸಮಾಜದಲ್ಲಿ ಆಧುನಿಕತೆಯ ಅಲೆ ಕಾಣಿಸಿಕೊಳ್ಳುತ್ತಿವೆ. ಪೂರ್ವ ಸಂಪ್ರದಾಯ ಹಾಗೂ ನಂಬಿಕೆಗಳು ತಮ್ಮ ಮೌಲ್ಯಗಳನ್ನು ಕಳಚಿಕೊಳ್ಳುತ್ತಿವೆ. ಮದುವೆಯ (ಪೂರ್ವ) ಸಂಪ್ರದಾಯವು ಅಪರೂಪವಾಗುತ್ತಿದೆ. ಆಧುನಿಕ ಮನರಂಜನೆಯ ಸಾಧನಗಳು ತಾಂಡಾವನ್ನು ಪ್ರವೇಶಿಸಿವೆ. ಹೀಗಾಗಿ ಢಾಡಿಗಳ ಅವಶ್ಯಕತೆ ಈಗ ಲಂಬಾಣಿಗರಿಗಿಲ್ಲ.

ಒಂದು ಕಾಲಕ್ಕೆ ಸಮಾಜದಲ್ಲಿ ಮಹತ್ವದ ಸ್ಥಾನವನ್ನು ಹೊಂದಿದ್ದ 'ಢಾಡಿ'ಗಳು ಜೀವನ ನಿರ್ವಹಣೆಗಾಗಿ ಅಲೆಯುತ್ತ ಸಂಕ್ರಮಣ ಸ್ಥಿತಿಯಲ್ಲಿ ತೊಳಲಾಡುತ್ತಿದ್ದಾರೆ. ಸಮಾಜ ಹಾಗೂ ಸರಕಾರದ ಸಹಾಯವಿಲ್ಲದೆ ಅವರ ಬದುಕು ಚಿಂತಾಜನಕ ಸ್ಥಿತಿಗೆ ತಲುಪಿದೆ. ಉಳಿದ ಜನಾಂಗಗಳ ವೃತ್ತಿಗಾಯಕರನ್ನು ಗುರುತಿಸಿ ಅವರ ಜೀವನ ನಿರ್ವಹಣೆಗೆ ಸಹಾಯ ನೀಡುವ ಸರಕಾರವು, ಲಂಬಾಣಿ ವೃತ್ತಿಗಾಯಕರಾದ ಈ ಢಾಡಿಗಳನ್ನು ಗುರುತಿಸಿ ಸಹಾಯ ನೀಡುವಂತಾದರೆ ಬಳ್ಳಾರಿ ಜಿಲ್ಲೆಯ ಅಮೂಲ್ಯ ಕಲಾಕಾರರಾಗಿರುವ ಈ ಗಾಯಕರು ತಮ್ಮ ವೃತ್ತಿಯಲ್ಲಿ ಉಳಿದುಕೊಂಡಾರು.

೪. ಸನಾರ್: ಲಂಬಾಣಿಗರಿಗೆ ಬೇಕಾದ ಚಿನ್ನ, ಬೆಳ್ಳಿ, ಆಭರಣಗಳನ್ನು ಮಾಡಿಕೊಡುವ ಅಕ್ಕಸಾಲಿಗ.[೧೮]

೫. ಭರವಾ: ಇವರು ಲಂಬಾಣಿ ಮಹಿಳೆಯರಿಗೆ ಬೇಕಾದ ಸೀಸದ ಆಭರಣಗಳನ್ನು ಮಾಡಿಕೊಡುತ್ತಾರೆ.

೬. ದೋಬಿ: ಲಂಬಾಣಿಗರ ಬಟ್ಟೆ ಶುದ್ಧಗೊಳಿಸಿಕೊಡುವವರು

೭. ಸಿಂಗಾಡಿಯಾ: ಜಾತ್ರೆ, ಉತ್ಸವದಲ್ಲಿ ಕಹಳೆ ಊದುವವನು.

೮. ರೋಹಿದಾಸ್: ಇವರು ಲಂಬಾಣಿಗರಿಗೆ ಬೇಕಾದ ಚಪ್ಪಲಿ, ಚಡಾವು ಇತ್ಯಾದಿಗಳನ್ನು ಮಾಡಿಕೊಡುವವರು.[೧೯]

ಇವರೆಲ್ಲರೂ ತಮ್ಮ ಕಸುಬು ಮಾಡುತ್ತಾ ಲಂಬಾಣಿಗರ ತಾಂಡಗಳಲ್ಲಿಯೇ ಇದ್ದು ಅವರ ಭಾಷೆಯನ್ನಾಡುತ್ತಾ ಅವರ ವೇಶವನ್ನೇ ಧರಿಸುತ್ತಾರೆ. ಲಂಬಾಣಿಗರೊಂದಿಗೆ ವಿವಾಹ ಸಂಬಂಧ ಬೆಳೆಸದೇ ತಮ್ಮ ತಮ್ಮಲ್ಲೇ ವಿವಾಹ ಮಾಡಿಕೊಳ್ಳುತ್ತಾರೆ.

## ೩.೪. ಲಂಬಾಣಿಗರ ಮೂಲ

ಮಾನವ ಬೇಟೆಯಿಂದ ಪಶುಪಾಲನೆ ನಂತರ ವ್ಯಾಪಾರ ವೃತ್ತಿಗೆ ಪರಿವರ್ತನೆಗೊಂಡಾಗಿನಿಂದಲೇ ಲಂಬಾಣಿಗರ ಇತಿಹಾಸ ಪ್ರಾರಂಭವಾಗುತ್ತದೆ. ಲಂಬಾಣಿಗರು ಮೂಲತಃ ಅಲೆಮಾರಿಗಳಾಗಿದ್ದು, ನಂತರ ನೆಲೆಗೊಂಡ ಬುಡಕಟ್ಟು ಸಮುದಾಯವಾಗಿ ಜೀವಿಸುತ್ತಿದ್ದರು. ವಿಶ್ವದ ಎಲ್ಲ ಗುಡ್ಡಗಾಡು ಪ್ರದೇಶಗಳಲ್ಲಿ ನೆಲೆಸಿದ್ದಾರೆ. ಲಂಬಾಣಿಗರ ಮೂಲದ ಬಗ್ಗೆ ಅನೇಕ ಪುರಾಣಗಳು ಮಾಹಿತಿ ನೀಡುತ್ತವೆ. ಆದರೆ ಇವರ ಐತಿಹಾಸಿಕ ಮೂಲದ ಬಗ್ಗೆ ಹೆಚ್ಚಿನ ಆಧಾರಗಳಿಲ್ಲ. ಅಲ್ಲದೆ ವಿದ್ವಾಂಸರಲ್ಲಿ ಹಲವಾರು ಭಿನ್ನಾಭಿಪ್ರಾಯಗಳಿವೆ. ಈ ಹಿನ್ನೆಲೆಯಲ್ಲಿ ಲಂಬಾಣಿಗರ ಮೂಲವನ್ನು ಪೌರಾಣಿಕ ಮತ್ತು ಐತಿಹಾಸಿಕ ಮೂಲಗಳೆಂದು ವಿಂಗಡಿಸಿ ಅಧ್ಯಯನ ಮಾಡಲಾಗಿದೆ.

### ೩.೪.೧. ಪೌರಾಣಿಕ ಮೂಲ

ಯಾವುದೇ ಸಮುದಾಯದ ಚರಿತ್ರೆಯನ್ನು ತಿಳಿಯಲು ಪುರಾಣಗಳು ಮತ್ತು ಐತಿಹ್ಯಗಳು ಪ್ರಮುಖ ಆಕರಗಳಾಗಿವೆ. ಇವುಗಳು ಸಮುದಾಯದ ಹುಟ್ಟು, ಬೆಳವಣಿಗೆ, ಕುಲಗೋತ್ರ, ದೇವರುಗಳ ಬಗ್ಗೆ ತಿಳಿಯಲು ಸಹಾಯಕ. ಈ ಜನಪದ ಪುರಾಣಗಳು ಕಟ್ಟುಕಥೆಗಳಲ್ಲ, ಅತ್ಯಂತ ಕ್ರಿಯಾಶೀಲವಾದ ಸಾಂಸ್ಕೃತಿಕ ಶಕ್ತಿ ಎಂದು ಮ್ಯಾಲಿನೋವಸ್ಕಿಯವರು ಅಭಿಪ್ರಾಯಪಟ್ಟಿದ್ದಾರೆ.[೩೭] ಈ ಹಿನ್ನೆಲೆಯಲ್ಲಿ ಲಂಬಾಣಿಗರ ಸಮುದಾಯದ ಮೂಲವನ್ನು ತಿಳಿಯಲು ಪುರಾಣಗಳು ಪ್ರಮುಖ ಆಧಾರಗಳಾಗಿವೆ.

ಇರುವ ರೂಪದಲ್ಲಿ ತೀರಾ ಸರಳವಾಗಿದ್ದು ಒಂದು ನಿರ್ದಿಷ್ಟ ವ್ಯಕ್ತಿ, ಸ್ಥಳ ಅಥವಾ ಘಟನೆಗಳ ಹಿನ್ನೆಲೆಯಲ್ಲಿ ಹುಟ್ಟಿಕೊಳ್ಳುವ ಕತೆಗಳನ್ನು 'ಐತಿಹ್ಯ' ಎನ್ನುತ್ತೇವೆ.[೩೮] ಇವು ವಿವಿಧ ಜನಾಂಗದ ಮೂಲ, ಚರಿತ್ರೆ ಮುಂತಾದ ಅಂಶಗಳನ್ನು ತಿಳಿಸುತ್ತವೆ. 'ಐತಿಹ್ಯ' ಇತಿಹಾಸದ ಅಂಶಗಳನ್ನು ಒಳಗೊಂಡಿದ್ದು, ಸ್ಥಳೀಯವಾಗಿರುತ್ತದೆ. ಚರಿತ್ರೆಗೆ ಸ್ಥಳೀಯರ ತಮ್ಮ ಪರಿಸರದ ಸಂಬಂಧವನ್ನು ಕಲ್ಪಿಸುವ ಕಥೆಯೇ 'ಐತಿಹ್ಯ'. ಮನುಷ್ಯ ಸಾಮರ್ಥ್ಯದ ಅತ್ಯಧಿಕ ಪ್ರಮಾಣ ಐತಿಹ್ಯದಲ್ಲಿ ವ್ಯಕ್ತವಾಗುತ್ತದೆ. ಪುರಾಣದಲ್ಲಿ ಅತಿಮಾನುಷ ಗುಣವಿದ್ದರೆ, ಐತಿಹ್ಯದಲ್ಲಿ ಸಾಹಸದ ಪ್ರಯತ್ನಗಳನ್ನು ನೋಡುತ್ತೇವೆ.[೩೯] ಈ ಹಿನ್ನೆಲೆಯಲ್ಲಿ ಲಂಬಾಣಿಗರು ತಮ್ಮ ಮೂಲ, ಚರಿತ್ರೆಯ ಬಗ್ಗೆ ಪುರಾಣ ಮತ್ತು ಐತಿಹ್ಯಗಳಲ್ಲಿ ಯಾವ ರೀತಿಯ ಸಂಬಂಧ ಹೊಂದಿದ್ದಾರೆ ಎಂಬುದು ಇಲ್ಲಿ ಗೊತ್ತಾಗುತ್ತದೆ.

ರೂಪ್ಲಾನಾಯಕ ವೈ ಅವರ ''ರಂಗುರಂಗಿನ ಬಂಜಾರ ಲಂಬಾಣಿ ಜನಾಂಗದಲ್ಲಿ'' ಕೃತಿಯಲ್ಲಿ ಲಂಬಾಣಿಗರ ಮೂಲದ ಬಗ್ಗೆ ಪ್ರಸ್ತಾಪವಿದೆ. ಇವರ ಪ್ರಕಾರ ಪುರಾತನ ಧರ್ಮಗಳಾದ ಹಿಂದೂ, ಇಸ್ಲಾಂ, ಪಾರ್ಸಿ ಮತ್ತು ಕ್ರೈಸ್ತ ಧರ್ಮಗಳಲ್ಲಿ ಪ್ರಪಂಚವನ್ನು ಮತ್ತು ಮಾನವ ಜನಾಂಗವನ್ನು ದೇವರು ಸೃಷ್ಟಿ ಮಾಡಿದನೆಂದು ಸಾರುತ್ತವೆ. ಆ ಸೃಷ್ಟಿಯಲ್ಲಿ ಮೊದಲು ಬಂದ ಜನಾಂಗವೇ ಬಂಜಾರ ಜನಾಂಗವೆಂದು ಹೆಮ್ಮೆಪಡುತ್ತಾರೆ. ಇವರ ನಂತರ ಬೇರೆ ಬೇರೆ ಮಾನವ ಜನಾಂಗಗಳು ಬಂದವು. ಅವನಿಂದ ಮಾನವ ಜನಾಂಗಗಳು ಹೇಗೆ ಬೆಳೆದು ಬಂದವು ಎಂಬುದರ ಬಗ್ಗೆ ಕಾಲ್ಪನಿಕ ಪುರಾಣವನ್ನು ಒಂದು ಪದ್ಯದ ರೂಪದಲ್ಲಿ ತಮ್ಮ ಭಾಷೆಯಲ್ಲಿ ಈ ರೀತಿ ಹೇಳುತ್ತಾರೆ.

ಜಮಿ, ಅಸ್ಮಾನ್, ಚಾಂದ್, ಸೂರತ್, ಪವನ್, ಪಾಣಿ ಮೇಕ್ ಮೇಳ.

ಮನಕ್ಯಾ ಜಲಮಂ, ಮನಕ್ಯಾ ಜಮಮೀರೋ ಧಜ್

ಧಜೇರೂ ಕವರಥಜ್, ಕರ್ಮ ದಜೇರೋ ಕವರ್‌ಪಾಳ್

ಕವರಪಾಳೇರೋ ರಾಜಪಾಳ ರಾಜಪಾಳೇರೋ

ಅಭಯ ಚಂದ್, ಅಭಯ ಚಂದೇರೋ ರಾಜಧಸರಥ್

ರಾಜದಸರಥೆರೋ ರಾಮಲಚಮಣ್, ರಾಮೋರೋ

ರೀಮ್, ರಿಮಾರೋ ಸಂದಲ್

ಸಂದಲೇರೋ ಸರಿಸೂರತ್ ಸರಿಸೂರತೇರೋ ಕಾಸಬ್

ಕಾಸಬೇರೊ ಕರಣ್, ಕರಣೇರೋ ತೀಡಾ ಅನ್ ಭಾಡಾ

ತೀಡಾರ್, ನಾತಡ್, ಜೋಗಡ್, ಖಿಮಡ್, ಮೋಟಾ ಅನ್ ಮಾಲ,

ನಂತಾಡೇರ್ ವಾಗ್ರೀ ಜೋಗಡೇರ್ ಜೋಗಿ ಖಿಮಡೇರ್ ಲವಾರ್

ಮೋಟಾರ್ ಕೋರ್, ಮೊಲಾರ್ ಗೋರ್ ಭಾಡರ್,

ಹಾಬಲ್ ಅನ್ ಕಾಬಲ್ ಹಾಬಲೇರ್ ಹಿಂದೂ

ಕಾಬಲೇರ್ ಮಸನ್ಮಾನ್[೫]

ಭೂಮಿ, ಆಕಾಶ, ಚಂದ್ರ, ಸೂರ್ಯ ಮತ್ತು ಜಲ ಮೊದಲೇ ಇದ್ದುದರಲ್ಲಿ ಮಾನವನ ಜನನವಾಯಿತು. ಮಾನವರಲ್ಲಿ ಮೊದಲನೆಯವನು 'ಭಜ್' ಅವನ ಮಗ 'ಕವರ್‌ಪಾಳ್' ಅವನಿಂದ ರಾಜಪಾಳ್. ಇವನ ಮಗ ಅಭಯಚಂದ್, ಅಭಯಚಂದನ ಮಗ ರಾಜದಶರತ, ರಾಜದಶರತನ ಮಕ್ಕಳು ರಾಮ ಲಕ್ಷ್ಮಣರು ರಾಮನ ಮಗ ರೀಮ, ರೀಮನ ಮಗ ವಗಾದ್, ಅವನ ಮಗ ಜಗಾದ್, ಜಗಾದನ ಮಗ ಸಂದಲ್, ಸಂದಲನಿಂದ ಸಂಸೂರತ್ ಸಂಸೂರತ್‌ನ ಮಗ ಕಾಸಬ್ ಕಾಸಬನಿಂದ ಕರಣ. ಕರಣನಿಂದ ತೀಡ, ಮತ್ತು ಭಾಡ, ತೀಡನ ಮಕ್ಕಳು ನಾತಡ್, ಜೋಗಡ, ಭೀಮಡ, ಮಾಟ ಮತ್ತು ಮೋಲಾ ವಾತಡನಿಂದ ವಾಗ್ರಿ ಅಥವಾ ಹಕ್ಕಿಪಿಕ್ಕಿಗಳು, ಜೋಗಡನಿಂದ ಜೋಗಿಗಳು, ಖಿಮಡನಿಂದ ಕಮ್ಮಾರ್, ಮಾಟಾನಿಂದ ಮಾರ್ವಾಡಿಗಳು, ಹುಟ್ಟಿದರೆ ಮೋಲಾನಿಂದ ಬಂಜಾರರು ಹುಟ್ಟಿದರು. ಹಾಗೆಯೇ ಭಾಡಾನಿಂದ ಹಾಬಲ್ ಮತ್ತು ಕಾಬಲ್ ಎಂಬ ಮಕ್ಕಳಾದರು. ಹಲಬನಿಂದ ಹಿಂದೂಗಳು ಕಾಬಲನಿಂದ ಮುಸಲ್ಮಾನರು ಹುಟ್ಟಿದರು ಎಂಬುದಾಗಿ ಲಂಬಾಣಿ ಹಿರಿಯರು ಹೇಳುತ್ತಾರೆ.

ಈ ಮೇಲ್ಕಂಡ ಪದ್ಯದ ಕೊನೆಯ ಭಾಗದ ಹೇಳಿಕೆಯಿಂದ ತೀಡಾನ ಐದು ಜನ ಮಕ್ಕಳಾದ ನಾತಡ್ ಜೋಗಡ, ಖೇಮಡ, ಮೋಟ ಹಾಗೂ ಮೋಲಾ ಇವರು ಬೇರೆ ಬೇರೆ. ಇವರು ಕ್ರಮಬದ್ಧವಾಗಿ ಹಕ್ಕಿಪಿಕ್ಕಿಗಳು (ವಾಗರಿ), ಜೋಗಿ ಕಮ್ಮಾರ, ಮಾರವಾಡಿ ಹಾಗೂ ಲಂಬಾಣಿ. ಈ ಮೂರು ಪಂಗಡಗಳ ಜನನವಾಯಿತು. ಈ ಮೋಲನನ್ನು ಲಂಬಾಣಿಗಳ ಮೂಲ ಪುರುಷನೆಂದು ಈ ಕೃತಿಯಲ್ಲಿ ಉಲ್ಲೇಖವಿದೆ.

ಡಾ. ಡಿ.ಬಿ. ನಾಯಕ್‌ರವರ 'ಲಂಬಾಣಿ ಸಂಸ್ಕೃತಿ' ಎಂಬ ಕೃತಿಯಲ್ಲಿ ಲಂಬಾಣಿಗರ ಮೂಲವನ್ನು ಕುರಿತು ಈ ರೀತಿ ವಿವರಿಸುತ್ತಾರೆ. ಲಂಬಾಣಿಗಳು ವಾನರ ರಾಜರಾದ ವಾಲಿ ಸುಗ್ರೀವರ ವಂಶಜರು. ಆ ಜನಾಂಗದ ತೀಡಾ ಎಂಬುವವನ ಐದು ಜನ ಮಕ್ಕಳಲ್ಲಿ ಮೋಲಾ ಒಬ್ಬ. ಅವನು ಕೃಷ್ಣಭಕ್ತ ಅವನಿಗೆ ಮಕ್ಕಳಿದ್ದಿಲ್ಲ. ಅವನು ಸಂಗೀತ ನೃತ್ಯಗಳಲ್ಲಿ ಪ್ರವೀಣ ರಾಧಾಳನ್ನು ಕೃಷ್ಣಗೋಕುಲದಲ್ಲಿ ಬಿಟ್ಟು ಹೋದ ಸಂದರ್ಭದಲ್ಲಿ ರಾಧಾ ಈ ಮೋಲಾನನ್ನು ತನ್ನ ಸೇವಕನನ್ನಾಗಿ ಮಾಡಿಕೊಂಡಳು. ರಾಧಾಳಿಗೂ ಸಂಗೀತ ನೃತ್ಯದ ಪರಿಚಯವಿತ್ತು. ಇವರಿಬ್ಬರೂ ಅರಸರ ಹತ್ತಿರ ಹೋಗಿ ತಮ್ಮ ಕಲೆಯನ್ನು ಪ್ರದರ್ಶಿಸುತ್ತಿದ್ದರು. ಆ ರೀತಿ ಧನಜಿಗಡರಾಜನ ದರ್ಬಾರಿನಲ್ಲಿ ಇವರು ಮಾಡಿದ ಪ್ರದರ್ಶನವನ್ನು ಮೆಚ್ಚಿ ತಮಗೆ ಬೇಕಾದ ಕಾಣಿಕೆಯನ್ನು ಕೇಳಲು ತಿಳಿಸಿದನು. ಮಕ್ಕಳಿಗಾಗಿ ಕೊರಗುತ್ತಿದ್ದ ಅವರು ರಾಜನಿಗೆ ತನ್ನ ಒಬ್ಬ ಮಗನನ್ನು ಕೊಡಲು ಕೇಳಿದರು. ರಾಜನು ತನ್ನ ಒಬ್ಬ ಮಗನನ್ನು ಕೊಟ್ಟನು. ಇವನೇ ಮುಂದೆ ರಾಠೋಡ ವಂಶಜನಾದನು. ಇದೇ ರೀತಿ ಮೋಲಾ ಮತ್ತು ರಾಧಾ ಚಾನೋಗಡ ಮತ್ತು ಜಂಗತಗಡ ರಾಜರ ದರ್ಬಾರಿನಲ್ಲಿ ನೃತ್ಯ ಪ್ರದರ್ಶನ ಮಾಡಿ, ಅವರನ್ನು ಮೆಚ್ಚಿಸಿ ಪ್ರತಿಯೊಬ್ಬರಿಂದ ಒಂದೊಂದು ಮಗುವನ್ನು ಪಡೆದು ಸಾಕಿದರು. ಅವರೇ ಪವಾರ ಮತ್ತು ಚವ್ಹಾಣ ವಂಶಗಳ ಮೂಲಪುರುಷರಾದರು.

ಮಕ್ಕಳು ಬೆಳೆದು ದೊಡ್ಡವರಾದರು. ಇವರ ಮದುವೆಯ ಚಿಂತೆ ಮೋಲಾನನ್ನು ಕಾಡುತ್ತಿತ್ತು. ಒಮ್ಮೆ ನದಿ ತೀರದಲ್ಲಿ ಗೋವುಗಳನ್ನು ಮೇಯಿಸುತ್ತಿರುವಾಗ ಚಿಂತಿತನಾಗಿದ್ದ ಒಬ್ಬ ಬ್ರಾಹ್ಮಣನನ್ನು ಕಂಡನು. ಅವನ ಚಿಂತೆಗೆ ಕಾರಣವನ್ನು ಕೇಳಿದನು. ಆಗ ಆ ಬ್ರಾಹ್ಮಣನು ಬೆಳೆದು ದೊಡ್ಡವರಾಗಿಯೂ ಮದುವೆಯಾಗದ ತನ್ನ ಮೂವರು ಹೆಣ್ಣು ಮಕ್ಕಳ ವಿಷಯವನ್ನು ತಿಳಿಸಿದನು. ಮೋಲಾ ಆ ಮೂರು ಹೆಣ್ಣುಮಕ್ಕಳನ್ನು ತನ್ನ ಮೂರು ಜನ ಮಕ್ಕಳಿಗೆ ತಂದುಕೊಳ್ಳುವುದಾಗಿ ತಿಳಿಸಿದನು. ಕ್ಷತ್ರಿಯರಾದ ತನ್ನ ಆ ಮೂರು ಮಕ್ಕಳಿಗೆ ಬ್ರಾಹ್ಮಣನ ಈ ಮೂರು ಮಕ್ಕಳನ್ನು ತಂದು ಮದುವೆ ಮಾಡಿದನು. ಇವರ ಸಂತಾನವೇ ಮುಂದೆ ರಾಠೋಡ್, ಪವಾರ್ ಮತ್ತು ಚವ್ಹಾಣ ವಂಶಜರಾದರು.”

ಲಂಬಾಣಿಗರ ಮೂಲಪುರುಷ ಮೋಲಾ ಕೃಷ್ಣನ ಪರಮಭಕ್ತನಾಗಿದ್ದನು. ಆದುದರಿಂದ ಕೃಷ್ಣನು ಈತನಿಗೆ ತನ್ನ ದನಕಾಯುವ ಕಾರ್ಯವನ್ನು ಒಪ್ಪಿಸಿದನು. ಶ್ರೀ ಕೃಷ್ಣನು ಸ್ವರ್ಗಕ್ಕೆ ಹೊರಟುನಿಂತಾಗ ತನ್ನಲ್ಲಿರುವ ಸಕಲ ವಸ್ತುಗಳನ್ನು ತನ್ನ ಸೇವಕರಿಗೆ ದಾನ ಮಾಡುತ್ತಾನೆ. ಕೊನೆಯಲ್ಲಿ ದಾದಮೋಲಾನಿಗೆ ದಾನ ಕೊಡಲು ಅವನ ಬಳಿ ಏನೂ ಇಲ್ಲದಿದ್ದಾಗ ತನ್ನ ಆಪ್ತ ಸಖಿಯಾದ 'ರಾಧಾ'ಳನ್ನು ದಾನವಾಗಿ ಕೊಡುತ್ತಾನೆ. ಮೋಲ ರಾಧಿಕಾದೇವಿಯೊಡನೆ ದೇಶ ಪರ್ಯಟನೆಗೆ ಹೊರಟನು. ಈ ಸಂದರ್ಭದಲ್ಲಿ ಗೀತನೃತ್ಯ ಕಲೆಯನ್ನು ಕರಗತ ಮಾಡಿಕೊಂಡು ಮನೆಬಿಟ್ಟು ಬರುತ್ತಿರುವ ಭವಯ್ಯ (ಒಬ್ಬ ಮಂತ್ರವಾದಿ ಹಾಗೂ ಕಲಾಕಾರ) ಎಂಬುವವನ ಪರಿಚಯವಾಗುತ್ತದೆ.

ಮೋಲಾನು ರಾಧಾದೇವಿಯನ್ನು ದೈವೀಭಾವನೆಯಿಂದ ನೋಡಿದ ಕಾರಣ ಅವರಿಗೆ ಮಕ್ಕಳಾಗಲಿಲ್ಲ. ಮುಂದೆ ಅವರು ತಮ್ಮ ನೃತ್ಯಕಲೆಯನ್ನು ಉಪಯೋಗಿಸಿಕೊಂಡು 'ಪೌಘಡ್' ಎಂಬಲ್ಲಿಗೆ ಬಂದು ನೃತ್ಯಪ್ರದರ್ಶಿಸಿ

ಮುಂದೆ ಚೌಘಡ್ ಎಂಬಲ್ಲಿಯೂ ತಮ್ಮ ಕಲೆಯನ್ನು ಪ್ರದರ್ಶಿಸಿ ಎರಡು ರಾಜ್ಯಗಳ ರಾಜರನ್ನು ಸಂತೋಷಗೊಳಿಸುತ್ತಾರೆ. ಅವರಿಂದ ಒಬ್ಬೊಬ್ಬ ಬಾಲಕರನ್ನು ಕಾಣಿಕೆಯಾಗಿ ಪಡೆದು ಮುಂದೆ ಮಚ್ಚರ ಘಡ್ ಎಂಬಲ್ಲಿಗೆ ಬಂದು ಅಲ್ಲಿಯೂ ನೃತ್ಯ ಪ್ರದರ್ಶನ ಮಾಡಿ ಒಬ್ಬ ಬಾಲಕರನ್ನು ದತ್ತು ಪಡೆಯುತ್ತಾರೆ. ಈ ದತ್ತು ಮಕ್ಕಳು ಮುಂದೆ ದೊಡ್ಡವರಾಗಿ ಪ್ರಾಯಕ್ಕೆ ಬಂದಾಗ ಅವರಿಗೆ ಯಾರು ಹೆಣ್ಣು ಕೊಡಲು ಮುಂದೆ ಬರುವುದಿಲ್ಲ. ಅಂತಿಮವಾಗಿ ಮದುವೆಗೆ ಮುನ್ನ ಮೈಸೆರೆದ ಕಾರಣಕ್ಕಾಗಿಯೇ ಸಾಮಾಜಿಕ ಬಹಿಷ್ಕಾರಕ್ಕೆ ಒಳಗಾದ ಓರ್ವ ಬ್ರಾಹ್ಮಣನ ಮೂವರು ಕನ್ಯೆಯರೊಂದಿಗೆ ಅವರ ಮದುವೆ ನಡೆಯುತ್ತದೆ. ಅದರಿಂದ ಮುಂದೆ ಲಂಬಾಣಿ ಬುಡಕಟ್ಟು ಬೆಳೆಯುತ್ತದೆ."[೫೪]

ಅರಾವಳಿ ಬೆಟ್ಟ ಪ್ರದೇಶದಲ್ಲಿ ಅನೇಕ ಸಣ್ಣಪುಟ್ಟ ರಾಜಮನೆತನಗಳಿದ್ದವು. ಮಾರವಾಡದ ಖೈರಗಡ ರಾಠೋಡನ ಮಗ ಲಾಖಸಿಂಗ ಧಾರ ರಾಜ್ಯದ ಮುಂಜಿನ ಪವಾರನ ಮಗ ಲೋಹಾಸಿಂಗ್ ಪವಾರ ಮತ್ತು ತೂರಿಗಡದ ಚವ್ಹಾಣನ ಮಗ ರಣಬೀರ್‌ಸಿಂಗ್ ಚವ್ಹಾಣ; ಮೂವರೂ ಸೇರಿಕೊಂಡು ದೆಹಲಿಯ ಕವರಪಾಲ ರಾಜನೊಂದಿಗೆ ಬೇಟೆಗೆ ಹೋದರು. ಬೇಟೆ ಸಮಯಲ್ಲಿ ಸುಂದರ ಕನ್ಯೆಯರನ್ನು ಕಂಡು, ಅವರ ರಕ್ಷಣೆಗೆ ಯಾರು ಇಲ್ಲದ್ದರಿಂದ ಅವರನ್ನು ಪೀಡಿಸಲು ಮುಂದಾದರು. ಅದನ್ನು ಕಂಡ ದೆಹಲಿಯ ಅರಸ ದವರಪಾಲನು ಅವರಿಗೆ ವನವಾಸದ ಶಿಕ್ಷೆ ಕೊಟ್ಟನು. ಪಾಂಡವ ಪ್ರಸಾದನ ಮಗನಾದ ಭಾವಪ್ರಸಾದ (ಅಡುಗೆಭಟ್ಟ)ನೊಂದಿಗೆ ಶಿಕ್ಷೆ ಅನುಭವಿಸಲು ರಾಜಕುಮಾರರು ಸಿದ್ಧರಾದರು. ವನವಾಸದಲ್ಲಿ ಅವರು ಆಹಾರ ಹುಡುಕುತ್ತ 'ಖೋಡಪಲ್ಲಿ' ಎಂಬ ಗ್ರಾಮಕ್ಕೆ ಬಂದರು. ಅಲ್ಲಿಂದ ಮುಂದೆ ರಕೋಬನ ಘಟ್ಟಕ್ಕೆ ಬಂದರು. ಅಲ್ಲಿ ಸಾಧಾ ಲಬಾಣನ ಪರಿಚಯವಾಯಿತು. ಸಾಧಾ ಲಬಾಣನ ಆಶ್ರಯದಲ್ಲಿಯೇ ಇರತೊಡಗಿದರು. ಬೆಳೆದು ದೊಡ್ಡವರಾದ ಅವರಿಗೆ ಸಾಧಾ ಲಬಾಣನು ನಾಗ ಬ್ರಾಹ್ಮಣನ ಅಪ್ಸರ ಕನ್ಯೆಯಂತಿರುವ ಮೂರು ಜನ ಕನ್ಯೆಯರನ್ನು ತಂದು ಮದುವೆ ಮಾಡಿದನು. ಮುಂದೆ ಲಾಖನ ಸಿಂಗನ ಸಂತಾನ ರಾಠೋಡ್‌ವಾಯಿತು. ಲೋಹಾಸಿಂಗನ್ ಸಂತಾನ ಪವಾರ ಎಂದು, ರಣಬೀರಸಿಂಗ್‌ನ ಸಂತಾನ ಚವ್ಹಾಣ ಎಂದು ಕರೆಯಿಸಿಕೊಂಡಿತು.[೫೫]

ಲಂಬಾಣಿಗರ ಸೃಷ್ಟಿ ಮೂಲದ ಬಗ್ಗೆ ಇನ್ನೊಂದು ಕಥೆ ಪ್ರಚಲಿತದಲ್ಲಿದೆ. ಅದರ ಪ್ರಕಾರ ಮೊಗಲರ ಪೂರ್ವದಲ್ಲಿ ಭಾರತದ ಅನೇಕ ಸಣ್ಣಪುಟ್ಟ ಸಂಸ್ಥಾನಿಕ ರಾಜರುಗಳು ರಾಜ್ಯಭಾರ ಮಾಡುತ್ತಿದ್ದರು. ಅಂಥವರಲ್ಲಿ ರಜಪೂತ ವಂಶದ ಮೂಲಪುರುಷ ರಾಣಾಪ್ರತಾಪಸಿಂಗನು ಒಬ್ಬನಾಗಿದ್ದನು. ರಾಜಸ್ಥಾನ ಹಾಗೂ ದೆಹಲಿಯ ಕೆಲವು ಪ್ರದೇಶಗಳು ಅವನ ಅಧೀನದಲ್ಲಿದ್ದವು. ಆ ಸಮಯದಲ್ಲಿ ಮೊಗಲರ ಆಳ್ವಿಕೆಯು ಪ್ರಾರಂಭಗೊಂಡು ಅಕ್ಬರನು ರಾಣಾ ಪ್ರತಾಪಸಿಂಗನ 'ಉದಯಪುರ'ದ ಮೇಲೆ ದಾಳಿ ಮಾಡಿದನು. ಪರಿಸ್ಥಿತಿಯ ಪ್ರತಿಕೂಲತೆಯನ್ನರಿತ ರಾಣ ಪ್ರತಾಪಸಿಂಗ್‌ನು ಅಕ್ಬರನನ್ನು ಎದುರಿಸಲಾಗದೆ 'ಹಳದಿಘಾಟ್' ಪರ್ವತಕ್ಕೆ ಹೋಗಿ ತಲೆಮರೆಸಿಕೊಂಡನು. ಅವನೊಂದಿಗೆ ಅನೇಕ ರಾಷ್ಟ್ರಪ್ರೇಮಿಗಳು ಓಡಿ ಹೋದರು. ಅಕ್ಬರನು ಅಲ್ಲಿಗೂ ದಾಳಿಯನ್ನು ಮುಂದುವರಿಸಿದನು. ರಾಣಾ ಪ್ರತಾಪಸಿಂಗನು 'ಹಳಧಿ ಘಾಟ್' ಯುದ್ಧದಲ್ಲಿ ಸೋಲನ್ನು ಅನುಭವಿಸಿದನು. ವಿಜಯಿಯಾದ ಅಕ್ಬರನು ಶರಣಾಗತನಾದರೆ ಮರಳಿ ರಾಜ್ಯವನ್ನು ಕೊಡುವುದಾಗಿ ರಾಣಾ ಪ್ರತಾಪಸಿಂಗ್‌ನಿಗೆ ಸಂದೇಶವನ್ನು ಕಳುಹಿಸಿದನು.

ಸ್ವಾಭಿಮಾನಿಯಾದ ರಾಣಾ ಪ್ರತಾಪಸಿಂಗ್‌ನು ಅದಕ್ಕೆ ಒಪ್ಪದೇ ಯುದ್ಧ ಭೂಮಿಯಲ್ಲಿಯೇ ಮರಳಿ ರಾಜ್ಯ ಪಡೆಯುವುದಾಗಿ ಪ್ರತಿಜ್ಞೆ ಮಾಡಿ ಕಾಡನ್ನು ಸೇರಿದನು. ಅವನೊಂದಿಗೆ ಅನೇಕ ಕುಟುಂಬಗಳು ಕಾಡನ್ನು ಸೇರಿದವು. ರಾಣಾ ಪ್ರತಾಪಸಿಂಗ್‌ನನ್ನು ಸೋಲಿಸಲು ಅಕ್ಬರನು ಅನೇಕ ಪ್ರಕಾರದ ತೊಂದರೆಗಳನ್ನು ಕೊಡತೊಡಗಿದನು. ರಾಜನ ಪ್ರತಿಜ್ಞೆಯೇ ತಮ್ಮ ಪ್ರತಿಜ್ಞೆಯೆಂದು ಪಾಲಿಸಿಕೊಂಡು ಬಂದ ರಜಪೂತ ಕುಟುಂಬಗಳು ಅನೇಕ ರೀತಿಯ ಕಷ್ಟನಷ್ಟಗಳನ್ನು ಅನುಭವಿಸತೊಡಗಿದವು. ಕೊನೆಗೂ ಅಕ್ಬರನನ್ನು ಎದುರಿಸಲು ಆಗದೆ ರಾಣಾಪ್ರತಾಪಸಿಂಗ್‌ನು ಸೋತನು.

ಮೊಗಲರ ಹಿಂಸೆಯನ್ನು ಸಹಿಸದೆ ಮಾರವಾಡಿ, ಗೂರ್ಜರರು ಮುಂತಾದ ರಜಪೂತ್ ಪಂಗಡಗಳು ನಾಡನ್ನು ಸೇರಿದವು. ಇನ್ನು ಕೆಲವು ಕುಟುಂಬಗಳು ಅಡವಿಯಲ್ಲಿಯೇ ಉಳಿದುಕೊಂಡು, ಸಂಚಾರಿಗಳಾಗಿ ಬದುಕನ್ನು ಸಾಗಿಸಿದವು ಮುಂದೆ ಅವರೇ ಲಂಬಾಣಿಗಳೆಂದು ಕರೆಯಿಸಿಕೊಂಡರು.

ಲಂಬಾಣಿಗರ ಮೂಲವನ್ನು ಕುರಿತು ಹೇಳುವ ಈ ಪುರಾಣ, ಐತಿಹ್ಯಗಳಲ್ಲಿನ ಸತ್ಯಾಸತ್ಯತೆಯನ್ನು ಹೇಳುವುದು ಕಷ್ಟಸಾಧ್ಯ. ಆದರೆ ಅವುಗಳಲ್ಲಿ ಸಾಕಷ್ಟು ವಾಸ್ತವ ಹುದುಗಿಕೊಂಡಿರುವುದು ಸತ್ಯ. ಈ ಪುರಾಣ, ಐತಿಹ್ಯಗಳಲ್ಲಿಯ ಕೆಲವು ವಿಷಯಗಳನ್ನು ಆಧಾರವಾಗಿಟ್ಟುಕೊಂಡರೆ ಲಂಬಾಣಿಗರ ಮೂಲದ ಬಗ್ಗೆ ಸಾಕಷ್ಟು ವಾಸ್ತವ ಸಂಗತಿಗಳು ತಿಳಿದು ಬರುತ್ತದೆ. ಲಂಬಾಣಿಗರ ಮೂಲಪುರುಷ ಮೋಲಾ, ದನಗಳನ್ನು ಕಾಯುವ ವೃತ್ತಿ, ವ್ಯಾಪಾರ ವೃತ್ತಿ, ಪ್ರಾರಂಭವಾದಾಗಿನಿಂದಲೇ ಲಂಬಾಣಿಗರೆಂದು ಕರೆಯಲ್ಪಟ್ಟರು. ಹೀಗೆ ಪುರಾಣ, ಐತಿಹ್ಯಗಳ ಹಿನ್ನೆಲೆಯಿಂದ ಕೆಲವು ವಿಷಯಗಳು ಸ್ಪಷ್ಟಪಡುತ್ತವೆ.

**೩.೪.೨ ಐತಿಹಾಸಿಕ ಮೂಲ**

ಮಾನವನ ಮೊದಲನೆಯ ಅವಸ್ಥೆ ಆಹಾರ ಸಂಚಯವಾಗಿತ್ತು. ಈ ಅವಸ್ಥೆಯಲ್ಲಿ ಮಾನವನ ಪ್ರಗತಿ ಮಂದವಾಗಿತ್ತು. ಬೇಟೆಯಾಡುತ್ತ ಆಹಾರ ಸಂಗ್ರಹಕ್ಕಾಗಿ ಗುಡ್ಡ, ಕಾಡು, ಹಳ್ಳ-ಕೊಳ್ಳಗಳಲ್ಲಿ ಅಲೆದಾಡಬೇಕಾಗಿತ್ತು. ಒಂದೆಡೆ ನಿಲ್ಲುವುದು ಸಾಧ್ಯವಿದ್ದಿಲ್ಲ. ಜೀವನ ನಿರ್ವಹಣೆಗಾಗಿ ಮಾಡಬೇಕಾಗುವ ಹೋರಾಟದಲ್ಲಿ ಬಿಡುವು ಎಂಬುದಿರಲಿಲ್ಲ. ಕಾಲಾನಂತರ ಮಾನವನಿಗೆ ಆಹಾರ ನಿರ್ಮಾಣದ ಹದವು ತಿಳಿಯಿತು. ಈ ಆಹಾರ ನಿರ್ಮಾಣದ ಕಾಲದಿಂದಲೇ ಮಾನವನ ಸಂಸ್ಕೃತಿ ಆರಂಭವಾಯಿತೆಂದು ಹೇಳಬಹುದು. ಆಹಾರ ಉತ್ಪಾದನೆಯ ಕಾಲದ ಪ್ರಾಥಮಿಕ ಅವಸ್ಥೆಯೇ ಪಶುಪಾಲನೆ. ಈ ಕಾಲದಲ್ಲಿ ಆಕಳು, ದನ, ಕುರಿ, ನಾಯಿ, ಕೋಳಿ ಮೊದಲಾದ ಸಾಕು ಪ್ರಾಣಿಗಳ ಸಮೂಹವೇ ಆತನ ಜೀವನಾಧಾರವಾಗಿತ್ತು. ನಂತರ ಪ್ರಾಣಿಗಳ ಸಾಕಾಣಿಕೆಯ ಆಧಾರದ ಮೇಲೆ ಅವರನ್ನು ಗುರುತಿಸತೊಡಗಿದರು. ಉದಾ: ದನಗಳ ಪಾಲಕರು ದನಗಾರರಾದರು, ಗೋವುಗಳ ಪಾಲಕರು ಗೊಲ್ಲರಾದರು, ಕುರಿಗಳ ಪಾಲಕರು ಕುರುಬರಾದರು. ತದನಂತರ ವೃತ್ತಿಯ ಆಧಾರದ ಮೇಲೆ ಅವರನ್ನು ಗುರುತಿಸತೊಡಗಿದರು. ಉದಾ: ಬೇಟೆಯಾಡುವವರು ಬೇಡರು ಎಂದು, ಕಂಬಾರಿಕೆ ಮಾಡುವವರು ಕಂಬಾರ, ಹಾಗೂ ಲವಣ ವ್ಯಾಪಾರ ಮಾಡುವವರನ್ನು ಲಂಬಾಣಿಗರಾದರು. ಹೀಗಾಗಿ ಬೇಟೆಯಿಂದ ಕವಲೊಡೆದು ಪಶುಪಾಲನೆ, ಲವಣ ವ್ಯಾಪಾರವನ್ನು ಕೈಗೊಂಡಂದಿನಿಂದಲೇ ಲಂಬಾಣಿಗರ ಇತಿಹಾಸ ಪ್ರಾರಂಭವಾಯಿತೆಂದು ಹೇಳಬಹುದು.

ಸಮುದ್ರ ತೀರದಿಂದ ಲವಣವನ್ನು ತಮ್ಮ ರಾಸುಗಳ ಮೇಲೆ ಹೇರಿಕೊಂಡು ಒಳನಾಡು ಪ್ರದೇಶ ಬಯಲು ಸೀಮೆ ಘಟ್ಟ ಪ್ರಾಂತ್ಯಗಳು ಹಾಗೂ ನಾಡಿನಾದ್ಯಾಂತ ವ್ಯಾಪಾರ ಕೈಗೊಂಡದ್ದರಿಂದ ಈ ಜನರಿಗೆ ಲವಣಿಗರು, ಲಮಾಣಿಗರು, ಲಂಬಾಣಿಗಳು, ಲಂಬಾಡಿಗರು ಲಂಬಾಣಿಗರು ಎಂದು ಪರಿವರ್ತನೆ ಹೊಂದಿದರೆಂದು ಪಿ.ಕೆ. ಖಂಡೋಬಾರವರು ಅಭಿಪ್ರಾಯಪಟ್ಟಿದ್ದಾರೆ.[೫೭] ಈ ಹೆಸರುಗಳು ಅವರ ವೃತ್ತಿಯಿಂದಲೇ ಬಂದಿರುವುದು ಸ್ಪಷ್ಟ.

ಲಂಬಾಣಿಗರ ಮೂಲದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಕೆಲವರು ಲಂಬಾಣಿಗರನ್ನು ಆರ್ಯ ಮೂಲದವರೆಂದು ಹೇಳಿದರೆ, ಇನ್ನು ಕೆಲವರು ದ್ರಾವಿಡ ಮೂಲದವರೆಂದು ಹೇಳುತ್ತಾರೆ. ಅಲ್ಲದೆ ಮತ್ತೆ ಕೆಲವರು ದ್ರಾವಿಡ ಪೂರ್ವಗುಂಪಿಗೆ ಸೇರಿದವರೆಂದು ಅಭಿಪ್ರಾಯಪಡುತ್ತಾರೆ.

ಮಾನವಶಾಸ್ತ್ರಜ್ಞರು ಕಾಕೇಸಾಯ್ಡ್ ಜನಾಂಗದ ಲಕ್ಷಣವನ್ನು ಕುರಿತು ''ಈ ಜನಾಂಗಕ್ಕೆ ಸೇರಿದ ½ ರಷ್ಟು ಜನರು ಯುರೋಪಿನಲ್ಲಿ ಕಂಡುಬರುತ್ತಾರೆ. ಶೇಕಡ ಒಂದು ಭಾಗದಷ್ಟು ಜನರು ಭಾರತೀಯರು ಕಾಕೇಸಾಯ್ಡ್ ಜನರಾಗಿದ್ದಾರೆ. ಇವರು ಶ್ವೇತ ವರ್ಣದವರಾಗಿದ್ದು ನಸುಗೆಂಪು ಬಣ್ಣವುಳ್ಳವರಾಗಿದ್ದಾರೆ. ಕಣ್ಣುಗಳು ಸಾಧಾರಣ ನೀಲಿಯಿಂದ ಕಂದು ಬಣ್ಣವನ್ನು ಹೊಂದಿರುತ್ತವೆ. ತಲೆಗೂದಲು ನುಣುಪಾಗಿದ್ದು ನಸು ಹೊಂಬಣ್ಣ ಹಾಗೂ ಕಪ್ಪು ಬಣ್ಣದಿಂದ ಕೂಡಿರುತ್ತದೆ. ಪುರುಷನು ತನ್ನ ಮುಖ, ಎದೆ ಮತ್ತು ತಲೆಯ ಮೇಲೆ ದಟ್ಟವಾದ ಕೂದಲನ್ನು ಹೊಂದಿರುತ್ತಾನೆ. ಮೂಗು ತೆಳ್ಳಗೆ ಮತ್ತು ಉದ್ದವಾಗಿರುತ್ತದೆ. ಹಣೆ ಇಳಿಜಾರಾಗಿದ್ದು.''[೫೮] ತುಟಿಗಳು ತೆಳ್ಳಗೆ ಇರುತ್ತವೆ.''[೫೯] ಎಂಬುದಾಗಿ ವಿವರಿಸಿದ್ದಾರೆ. ಮುಂದುವರಿದು (೧) ನಾರ್ಡಿಕ್, (೨) ಅಲ್ಪೈನ್ (೩) ಮೆಡಿಟರೇನಿಯನ್ ಎಂಬ ಮೂರು ಮುಖ್ಯವಾದ ಗುಂಪುಗಳಿವೆ ಎಂಬುದಾಗಿ ತಿಳಿಸಿದ್ದಾರೆ.

ಬಳ್ಳಾರಿ ಜಿಲ್ಲೆಯ ಗೆಜೆಟಿಯರ್‌ನಲ್ಲಿ ಲಂಬಾಣಿ ಸಮುದಾಯದ ದೈಹಿಕ ಲಕ್ಷಣಗಳನ್ನು ಗುರ್ತಿಸುತ್ತಾ. ''ಅವರು ಒಳ್ಳೆಯ ದೇಹ ರಚನೆಯುಳ್ಳವರಿದ್ದು ಸುಂದರವಾಗಿ ಕಾಣುತ್ತಾರೆ. ''ಅವರು ಮೋಟು ತಲೆಯ ಜನಾಂಗದವರಿದ್ದು, ಅಂಡಾಕಾರದ ಮುಖ, ಕಪ್ಪು ಇಲ್ಲವೇ ಕಂದು ಬಣ್ಣದ ಕಣ್ಣುಗಳು ಮತ್ತು ಉದ್ದ ಮೂಗು ಉಳ್ಳವರಾಗಿದ್ದಾರೆ. ಅವರು ಇಂಡೋ ಆರ್ಯಭಾಷೆಯಾದ ಬಂಜಾರಿಯನ್ನು ಮಾತನಾಡುತ್ತಾರೆ.''[೬೦] ಎಂದು ನಮೂದಿಸಲಾಗಿದೆ. ಅಯ್ಯರ್ ಹೇಳುವ ಹಾಗೆ, ''ಲಂಬಾಣಿಗಳು ಸುಂದರವಾಗಿದ್ದು, ಅವರ ಮೈಕಟ್ಟು ಚೆನ್ನಾಗಿರುತ್ತದೆ.[೬೧] ಅವರು ಉದ್ದ ತಲೆಯನ್ನು ಅಂಡಾಕಾರ ಮುಖ, ಕಪ್ಪು ಅಥವಾ ಕಂದು ಬಣ್ಣದ ಕಣ್ಣುಗಳು, ಉದ್ದನೆಯ ರೇಷ್ಮೆ ಕೂದಲು ಮತ್ತು ಉದ್ದನೆಯ ಮೂಗು ಉಳ್ಳವರಾಗಿರುತ್ತಾರೆ. ಅವರ ಎದ್ದು ಕಾಣುವ ಮೂಗು ಉದ್ದಮುಖ, ಮುದುಡಿದ ಗಲ್ಲ, ಸುಂದರ ಚರ್ಮ ಇವುಗಳು ಅವರನ್ನು ದಕ್ಷಿಣದವರೊಡನೆ ಹೋಲಿಸಿದೆ. ಉತ್ತರ ಭಾರತದ ಜನರ ಹತ್ತಿರಕ್ಕೆ ನಿಲ್ಲುಸುತ್ತವೆ.[೬೨] ಎಂಥೋವನ್ ಹೇಳುವಂತೆ ಉತ್ತಮ ಮೈಕಟ್ಟಿನ ಮತ್ತು ದೇಹದಾರ್ಢ್ಯವುಳ್ಳ ಸಮುದಾಯದರಿದ್ದರೂ, ಬಂಜಾರಗಳ ಮುಖಛಾಯೆಯಲ್ಲಿ ಅನೇಕ ವೈವಿದ್ಯಗಳಿವೆ. ಮಾಂಥೂರ್‌ರವರು ಸುಂದರವಾಗಿದ್ದರೆ, ಮೂಲ ಮೆಹರೊರಾಗಳು ಮತ್ತು ಲಂಘಾಗಳು ಸ್ವಲ್ಪ ಮುಸುಕಾದ ಬಣ್ಣದವರಾಗಿದ್ದಾರೆ. ಮತ್ತು ಚರಣ್‌ಗಳು ಹಾಗೂ ಲಂಬಾಣಿಗಳು ಕಪ್ಪಗಿದ್ದು ಕೆಚ್ಚದೆಯರವರಾಗಿದ್ದಾರೆ.[೬೩] ಎಂಬುದಾಗಿ ತಿಳಿಸಲಾಗಿದೆ.

ಲಂಬಾಣಿಗರ ಲಕ್ಷಣಗಳು ಮೇಲೆ ತಿಳಿಸಿದ ಕಾಕೆಸಾಯ್ಡ್ ಜನಾಂಗದ ಲಕ್ಷಣಗಳನ್ನು ಸಂಪೂರ್ಣವಾಗಿ ಹೋಲುತ್ತವೆ ಎನ್ನಬಹುದು. ಆದ್ದರಿಂದ ಲಂಬಾಣಿ ಜನಾಂಗವನ್ನು ಕಾಕೇಸಾಯ್ಡ್ ಜನಾಂಗಕ್ಕೆ ಸೇರಿಸಬಹುದಾಗಿದೆ ಎಂದು ಈ ಬುಡಕಟ್ಟನ್ನು ಅಧ್ಯಯನ ಮಾಡಿದ ಬಹುಪಾಲು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಸಾವಿರಾರು ವರ್ಷಗಳ ಹಿಂದೆ ಮಿಶ್ರಣಗೊಂಡ ಮನುಕುಲವು ತನ್ನ ಮೂಲದ ಲಕ್ಷಣದ ಯಥಾಸ್ಥಿತಿಯನ್ನು ಉಳಿಸಿಕೊಂಡು ಬಂದಿರುವುದು ಸಾಧ್ಯವಿಲ್ಲವಾದ್ದರಿಂದ ಬುಡಕಟ್ಟು ಅಥವಾ ಜನಾಂಗವನ್ನು ಸ್ಪಷ್ಟವಾಗಿ ವರ್ಗೀಕರಿಸುವುದು ಒಂದು ಕಷ್ಟದಕಾರ್ಯ ಎಂಬುದಾಗಿ ಸ್ಟೀಫನ್ ಫೀಚಸ್‌ರವರು ಹೇಳಿದ್ದಾರೆ. ಸಮಕಾಲೀನ ಜನಾಂಗವೆಲ್ಲವೂ ಮಿಶ್ರಣವಾಗಿದೆ. ಒಂದು ಜನಾಂಗ ಮತ್ತೊಂದು ರೀತಿಯ ಜನಾಂಗವಾಗಿ ಪರಿವರ್ತನೆಯಾಗುವುದು ತಕ್ಷಣ ಸಂಭವಿಸುವುದಿಲ್ಲ ಎಂಬ ಮಾತುಗಳಿಂದ ಸ್ಪಷ್ಟವಾಗುತ್ತದೆ.

ಲಂಬಾಣಿಗರ ಮೂಲಸ್ಥಾನದ ಬಗ್ಗೆ ವಿದ್ವಾಂಸರು ಹಲವಾರು ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ''ಉತ್ತರ ಭಾರತದ ಗೋರಖಪುರದಿಂದ ಹರಿದ್ವಾರದವರೆಗಿನ ಉಪಪರ್ವತ ಶಿಖರವೇ ಬಂಜಾರರ ಮೂಲಸ್ಥಾನವಾಗಿದೆ.''[೧೪] ಬಂಜಾರ ರಾಜಸ್ಥಾನದ ಚರಣ ಇಲ್ಲವೇ ಬಾಟರಾಗಿದ್ದು ವೃತ್ತಿಯಿಂದ ವಾಣಿಜ್ಯಕಾರ ಹಾಗೂ ಜನ್ಮತಃ ಕವಿಗಳಾಗಿದ್ದಾರೆ.[೧೫] ''ಲಂಬಾಣಿಗಳು ಕ್ಷತ್ರಿಯ ವಂಶದ ರಜಪೂತರ ಉತ್ತರಾಧಿಕಾರಿಗಳಾಗಿದ್ದು ಇವರ ಮೂಲಸ್ಥಾನ ಮಾರವಾಡವಾಗಿದೆ.''[೧೬] ಮೂಲಭೂತವಾಗಿ ಬಂಜಾರರು ರಾಜಸ್ಥಾನದ ರಜಪೂತರಾಗಿದ್ದು ಸಾಕಷ್ಟು ಧೈರ್ಯಶಾಲಿಗಳಾಗಿದ್ದಾರೆ. ಅವರ ಯುದ್ಧಾಭಿಲಾಷೆ ಹಾಗೂ ಹೋರಾಟದ ಕಲೆ ಇಂದಿಗೂ ಬಿಟ್ಟುಹೋಗಿಲ್ಲ.[೧೭] ಬಂಜಾರರು ರಾಜಸ್ಥಾನದ ಮೂಲನಿವಾಸಿಗಳಾಗಿದ್ದು ವ್ಯಾಪಾರಕ್ಕಾಗಿ ಸಾಮಾನು ಸರಂಜಾಮುಗಳನ್ನು ಹೇರಿಕೊಂಡು ದೂರದ ಪ್ರದೇಶಕ್ಕೆ ಹೋಗುತ್ತಿದ್ದರು.[೧೮]

ಸ್ವಾತಂತ್ರ್ಯ ಪೂರ್ವದಲ್ಲಿ ಭಾರತ ಭಾಗವಾಗಿದ್ದು, ಆದರೆ ಇಂದು ಪಾಕಿಸ್ತಾನದಲ್ಲಿರುವ, ಸಿಂದ್ ಮತ್ತು ಬಲೂಚಿಸ್ತಾನದಲ್ಲಿ ಲಂಬಾಣಿಗಳಿದ್ದರು. ಇವರು ಯುದ್ಧಪ್ರಿಯರು. ಭಾರತದ ಮೇಲಿನ ಪರಕೀಯ ಆಕ್ರಮಣವನ್ನು ಎದುರಿಸುವಲ್ಲಿ ತುಂಬಾ ಮಹತ್ವದ ಪಾತ್ರ ವಹಿಸಿದ್ದರು.

ಸಿಂಧ್ ಹಾಗೂ ಬಲೂಚಿಸ್ತಾನಗಳಿಂದ ರಾಜಸ್ಥಾನದ ಪಹಾಡ ಪ್ರದೇಶಕ್ಕೆ ಪಸರಿಸಿದ ಲಂಬಾಣಿಗರು, ನಂತರ ಮಾಳವಾ ಮುಖಾಂತರವಾಗಿ ಕ್ರಮೇಣ ಭಾರತದ ಉದ್ದಗಲಕ್ಕೂ ಪಸರಿಸತೊಡಗಿದರು. ಇವರು ವ್ಯಾಪಾರದ ಸಲುವಾಗಿ ಉತ್ತರ ಭಾರತದಲ್ಲಿ ಮತ್ತು ಆನಂತರ ದೇಶದ ಬೇರೆ ಬೇರೆ ಭಾಗಗಳಿಗೂ ಚದುರಿದರು. ಇವರ ಪ್ರಯಾಣ ಭಾರತಕ್ಕೆ ಮಾತ್ರ ಸೀಮಿತವಾಗಿರದೆ ಮಧ್ಯ ಆಫ್ರಿಕಾ, ಯುರೋಪ್, ಅಫಘಾನಿಸ್ಥಾನ, ಖೈಬರ್, ಇಟಲಿ, ಚೀನಾ, ಟಿಬೇಟ್, ಅರಬಸ್ಥಾನ, 'ಬ್ರಹ್ಮದೇಶ' ಮುಂತಾದ ರಾಷ್ಟ್ರಗಳಿಗೆ ಪಸರಿಸಿತು. ಇಟಲಿಯ ಲೊಂಬಾರ್ಡಿಯಾ ಪಟ್ಟಣ ಅವರ ವ್ಯಾಪಾರ ಕೇಂದ್ರವಾಗಿತ್ತು. ಆಯಾ ದೇಶಗಳಲ್ಲಿ ನೆಲೆನಿಂತು ರೊಮ್ಯಾನೀಜ್ (ಜಿಪ್ಸಿ) ಎಂಬ ಹೆಸರಿನಿಂದ ಕರೆಸಿಕೊಂಡರೆಂದೂ ಅಭಿಪ್ರಾಯಪಡುತ್ತಾರೆ. ಹೀಗೆ ಹಲವಾರು ವಿದ್ವಾಂಸರುಗಳ ಅಭಿಪ್ರಾಯಗಳಿಂದ ಲಂಬಾಣಿಗಳು ರಜಪೂತ ವಂಶಕ್ಕೆ ಸೇರಿದವರಾಗಿದ್ದು, ರಜಪೂತ ಮತ್ತು ಲಂಬಾಣಿಗಳ ನಡುವೆ ಪರಸ್ಪರ ಸಂಬಂಧವಿದ್ದು, ಲಂಬಾಣಿಗಳ ಮೂಲಸ್ಥಾನ ರಾಜಸ್ಥಾನವೇ ಆಗಿತ್ತು ಎಂಬುದಾಗಿ ಹೇಳಬಹುದಾಗಿದೆ.

ಬಂಜಾರರ ಚರಿತ್ರೆ ತುಂಬಾ ಪ್ರಾಚೀನ ಹಾಗೂ ಗೌರವಯುತವಾಗಿದೆ. ಚರಿತ್ರೆ ಪೂರ್ವಕಾಲದಲ್ಲಿ ಪಂಜಾಬ್ ಹಾಗೂ ಉತ್ತರ ಭಾರತಕ್ಕೆ ಆರ್ಯರ ವಿಭಿನ್ನ ತಂಡಗಳು ಪ್ರವೇಶಿಸಿದವು. ರಜಪೂತರು ಆರ್ಯ ವಂಶದವರಾಗಿದ್ದಾರೆಂಬುದು ಸ್ಪಷ್ಟವಾಗಿದೆ. ಅಂತೆಯೇ ಲಂಬಾಣಿಗರು ಮೂಲತಃ ರಾಜಸ್ಥಾನದ ರಜಪೂತ ವಂಶಕ್ಕೆ ಸೇರಿದವರಾಗಿದ್ದಾರೆ. ಇವರು ಕ್ಷತ್ರಿಯ ಮೂಲಕ್ಕೆ ಸಂಬಂಧಿಸಿದವರೆಂದೂ, ಯುದ್ಧ, ಬೇಟೆ, ಕಾವಲು ಕಾಯುವುದರಲ್ಲಿ ನಿಪುಣರೆಂದೂ, ಬಂಜಾರ ಶಬ್ದ ಜಾತಿ ಸೂಚಕವಾಗಿರುವಂತೆ ವ್ಯವಸಾಯ ಸೂಚಕವೂ ಆಗಿದೆ. ಪಶುಪಾಲನೆ, ಭಾರ ಎತ್ತುವಿಕೆ, ಗೋರಕ್ಷಣೆ ಹಾಗೂ ವ್ಯಾಪಾರ ಮೊದಲಾದ ವೃತ್ತಿಯನ್ನು ಅವಲಂಬಿಸಿದ್ದಾರೆಂದು ೧೮೯೧ರ ಮದ್ರಾಸ್ ಜನಗಣತಿಯಲ್ಲಿ ವಿವರಿಸಲಾಗಿದೆ.[೪]

ಕಂಬರ್‌ಲೇಜ್ ಅವರು ತಮ್ಮ ಕೃತಿಯಲ್ಲಿ 'ಭಂಗಿ-ಜಂಗಿ' ಎಂಬ ಇಬ್ಬರು ಲಂಬಾಣಿ ನಾಯಕರುಗಳು ಅಸಫಜಾನ್ ಮತ್ತು ಅವನ ವಜೀರನಾದ ಷಹಜಹಾನ್ ಎಂಬುವರೊಂದಿಗೆ ಕ್ರಿ.ಶ. ೧೬೩೦ರಲ್ಲಿ ಮಾಡಿದ ಒಪ್ಪಂದದ ಒಂದು ತಾಮ್ರಪತ್ರವನ್ನು ಉಲ್ಲೇಖಿಸಿದ್ದಾರೆ. ಅದನ್ನು ಹೈದರಾಬಾದ್ ನ್ಯಾಯಾಲಯದ ಪ್ರವೇಶದ್ವಾರದಲ್ಲಿ ಈಗಲೂ ಕಾಣಬಹುದಾಗಿದೆ. ಉತ್ತರ ಭಾರತದಿಂದ ದಕ್ಷಿಣ ಭಾರತದ ಕಡೆಗೆ ಯುದ್ಧ ಮಾಡಲು ಹೊರಟ ತನ್ನ ಸೈನಿಕರನ್ನು ಹಿಂಬಾಲಿಸಲು ೧,೮೦,೦೦೦ ಜಾನುವಾರುಗಳ ಹೇರುಳ್ಳ 'ಭಂಗಿ-ಜಂಗಿ', ಹೆಸರಿನ ಬಂಜಾರ ನಾಯಕರಿಗೂ ೫೨,೦೦೦ ಜಾನುವಾರುಗಳ ಹೇರುಳ್ಳ ಭಗವಾನ್‌ದಾಸ್ ವಡತ್ಯಾನಿಗೂ ಅಸಫಜಾನ್ ಆದೇಶಿಸುತ್ತಾನೆ. ಸರಕು ಸಾಗಣೆಯಿಂದ ಆಗಬಹುದಾದ ತೊಂದರೆಯನ್ನು ಮನಗಂಡು ಅಸಫಜಾನ್ ಭಂಗಿ-ಜಂಗಿ ನಾಯಕರುಗಳಿಗೆ ತಾಮ್ರಶಾಸನದ ಮೂಲಕ ನಿರೂಪವೊಂದನ್ನು ಹೊರಡಿಸುತ್ತಾನೆ.

ರಂಜನ್ ಕಾ ಪಾನಿ
ಛಪ್ಪರ್ ಕಾ ಘಾಸ್
ದಿನ್ ಕಾ ತೀನ್ ಕೂನ್ ಮಾಫ್
ಔರ್ ಜಹಾನ್ ಅಸಫ್ ಜಾನ್‌ಪೂರ್
ವೆನ್ ಭಂಗಿ ಜಂಗಿ ಕಾ ಬೈಲ್[೫]

ಹೀಗೆ ಬರೆಸಿದ್ದಾರೆ- ಭಂಗಿ-ಜಂಗಿ ನಾಯಕರುಗಳೇ ನಿಮಗೆ ನೀರು ಎಲ್ಲಿಯೂ ಸಿಗದೆ ಕೊರತೆಯಾದರೆ ನನ್ನ ಹಿಂದೆ ಬರುತ್ತಿರುವ ಸೈನಿಕರ ಪಾತ್ರೆಗಳಿಂದ ಪಡೆದುಕೊಳ್ಳಬಹುದು. ನಿಮ್ಮ ಎತ್ತುಗಳಿಗೆ ಹುಲ್ಲು ಸಿಗದಿದ್ದರೆ ಮನೆಯ ಛಾವಣಿ ಮೇಲಿನ ಹುಲ್ಲನ್ನೇ ತೆಗೆದುಕೊಂಡು ಬಳಸಿಕೊಳ್ಳಬಹುದು. ದಿನಕ್ಕೆ ಮೂರು ಕೊಲೆಗಳಿಗೆ ಕ್ಷಮಾಪಣೆ ಆದರೆ ಒಂದು ಷರತ್ತು ವಿಧಿಸಲಾಗಿದೆ. ಎಲ್ಲಿ ನನ್ನ ಸೈನ್ಯವಿರುತ್ತದೆಯೋ ಅಲ್ಲಿ ನಿಮ್ಮ ಹೇರು ಎತ್ತುಗಳು ಹಾಜರಿರಬೇಕು. ಅಸಫಜಾನ್‌ನ ಹೇಳಿಕೆಯನ್ನು ಈ ಶಾಸನ ಉಲ್ಲೇಖಿಸಿದ್ದು, ಬಂಜಾರ ಜನಾಂಗವನ್ನು ಕುರಿತು ಮೊದಲ ದಾಖಲೆಯಾಗಿ ಚರಿತ್ರೆಯಲ್ಲಿ ಮಹತ್ವವನ್ನು ಪಡೆದಿದೆ. ಈ ಶಾಸನದ ಅಸಫಜಾನನ ಪ್ರಕಾರ ಆ ಜನಾಂಗದ ಮೇಲಿಟ್ಟಿದ್ದ ವಿಶ್ವಾಸ, ನಂಬಿಕೆಗಳು ವ್ಯಕ್ತವಾಗುತ್ತವೆ. ಇವರ ಸ್ಥಾನಮಾನಗಳು ಅಂದಿನ ಸಮಾಜದಲ್ಲಿ ಸಾಕಷ್ಟು ಉತ್ತಮ ಮಟ್ಟದ್ದಾಗಿದ್ದು ಕ್ರಿ.ಶ. ೧೬೩೨ರ ವೇಳೆಗೆ ಇವರ ಸೈನಿಕರಿಗೆ ಆಹಾರ ಧಾನ್ಯಗಳನ್ನು

ಪೂರೈಸುವ ಪ್ರಮುಖ ಜನಾಂಗವಾಗಿದ್ದು ಲಕ್ಷೋಪಲಕ್ಷ ರಾಸುಗಳನ್ನು ಸಾಕಿ ಅವುಗಳ ಸಹಾಯದಿಂದ ವ್ಯಾಪಾರ ಮಾಡುತ್ತಿದ್ದರು ಎಂಬುದು ಈ ಶಾಸನದಿಂದ ತಿಳಿದುಬರುತ್ತದೆ.

ಲಂಬಾಣಿಗರು ವಾಹನ ಸೌಕರ್ಯವಿಲ್ಲದ ಆ ಕಾಲದಲ್ಲಿ ತಮ್ಮ ದನಕರುಗಳ ಮೇಲೆ ಭಾರೀ ವಸ್ತುಗಳ ರಫ್ತು ಕಾರ್ಯವನ್ನು ಮಾಡುತ್ತಿದ್ದರು. ಈ ರಫ್ತುಕಾರ್ಯ ಸಾಮಾನ್ಯರಿಗೆ ಸಾಧ್ಯವಾಗಿರಲಿಲ್ಲ. ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಹೋಗುವಾಗ ಘೋರಾರಣ್ಯವನ್ನು ಹಾಯ್ದು ಹೋಗಬೇಕಾಗುತ್ತಿತ್ತು. ಆ ಕಾಲದಲ್ಲಿ ಮೊಗಲರಿಗೆ ಲಂಬಾಣಿಗರಂಥ ಧೈರ್ಯಶಾಲಿ ಹಾಗೂ ಪ್ರಾಮಾಣಿಕ ಜನರ ಅಗತ್ಯತೆ ಇತ್ತು. ಹೀಗಾಗಿ ಮೊಗಲರು ಲಂಬಾಣಿ ಜನರನ್ನು ತಮ್ಮ ಸೈನ್ಯಕ್ಕೆ ಆಹಾರ ವೊದಲಾದ ಸಾಮಗ್ರಿಗಳನ್ನು ಪೂರೈಸುವುದಕ್ಕಾಗಿ ನಿಯಮಿಸಿಕೊಂಡರೆಂದು ತಿಳಿಯುತ್ತದೆ.[೭೧]

ಅಸಂಖ್ಯಾತ ದನಕರುಗಳನ್ನು ಹೊಂದಿದ ಲಂಬಾಣಿಗರಿಗೆ ಈ ಕಾರ್ಯ ಅನಿವಾರ್ಯವಾಗಿತ್ತೆಂದು ತಿಳಿಯುತ್ತದೆ. ಹೀಗಾಗಿ ಮೊಗಲರ ಸೈನ್ಯಗಳಿಗೆ ಆಹಾರ ಧಾನ್ಯವನ್ನು ಪೂರೈಸುವ ಹೊಣೆಹೊತ್ತರು. ಬಹುದೂರದ ಶತ್ರು ಪ್ರದೇಶದಲ್ಲಿ ಹೋರಾಡುತ್ತಿದ್ದ ಸೈನ್ಯಗಳಿಗೆ ಇವರು ನಿರ್ಭಯವಾಗಿ ಆಹಾರವನ್ನು ಸರಬರಾಜು ಮಾಡುತ್ತಿದ್ದು ಇವರನ್ನು ಯಾವ ಪಕ್ಷದವರೂ ಹಿಂಸಿಸುತ್ತಿರಲಿಲ್ಲವಂತೆ. ಮಾರ್ಗಮಧ್ಯದಲ್ಲಿ ರಾತ್ರಿಯಾದೊಡನೆ ಆಹಾರ ಧಾನ್ಯದ ಚೀಲಗಳನ್ನು ಒಂದೆಡೆ ಇಟ್ಟು ಸುತ್ತಲೂ ತಮ್ಮ ದನಕರುಗಳನ್ನು ಕಟ್ಟಿ ಇಡೀ ರಾತ್ರಿ ನಾಯಿಗಳೂ ಎಚ್ಚರವಾಗಿದ್ದು ಧಾನ್ಯವನ್ನು ಕಾಯುತ್ತಿದ್ದರು. ಬಹು ಧೈರ್ಯಶಾಲಿಗಳಾಗಿದ್ದ ಇವರ ತಂಟೆಗೆ ಇತರರು ಹೋಗಲು ಹೆದರುತ್ತಿದ್ದರು. ಇದರಿಂದಾಗಿ ಮಹಮ್ಮದೀಯರ ಸೇನೆಗಳಿಗೆ ಆಹಾರ ಸರಬರಾಜು ನಿರಾತಂಕವಾಗಿ ನಡೆಯುತ್ತಿದ್ದಿತು.[೭೨]

''ದಶಕುಮಾರ ಚರಿತೆಯು ಮೊದಲು ಮುದ್ರಣ ಪ್ರತಿಯಲ್ಲಿ ಬಂಜಾರ ಎಂಬ ಪದದ ಬಳಕೆ ಇರದೇ ಅದಕ್ಕೆ ಪ್ರತಿಯಾಗಿ 'MAHATI NIGAME NEIGAMANAM' ಎಂಬ ಪದದ ಬಳಕೆ ಕಂಡುಬರುತ್ತದೆ. ಆದ್ದರಿಂದ ದಶಕುಮಾರ ಚರಿತೆಯ ನಂತರ ಮುದ್ರಣದಲ್ಲಿ ಕಾಣಸಿಗುವ ಬಂಜಾರ ಪದವು ಪ್ರಕ್ಷಿಪ್ತವಿರಬೇಕೆಂದು ಡಬ್ಲ್ಯೂ. ಕ್ರೂಕ್‌ರವರು ಅಭಿಪ್ರಾಯಪಡುತ್ತಾರೆ. ಅಲ್ಲದೇ ಈ ಸಂದರ್ಭದಲ್ಲಿ ಬರುವ ತಾಂಡಾದಲ್ಲಿನ ಕೋಳಿಕಾಳಗದ ವರ್ಣನೆ ಬಂಜಾರ ಜನಾಂಗದ ಸಂಸ್ಕೃತಿ ರೀತಿ ನೀತಿಗಳ ವಿವರವೇ ಆಗಿರುವುದರಿಂದ ದಂಡಿಯು 'ಬಂಜಾರ' ಪದವನ್ನು ನಿರ್ದಿಷ್ಟವಾಗಿ ಬಳಸದಿದ್ದರೂ ಆತನ ವಯಸ್ಸಿನಲ್ಲಿ ಈ ಜನಾಂಗವನ್ನು ಕುರಿತಾದ ವರ್ಣನೆ ಆಗಿರಬೇಕೆಂದು ಕ್ರೂಕ್‌ರವರ ಅಭಿಮತ: ಅಲ್ಲದೆ ಇದನ್ನು ಗ್ರಹಿಸಿಯೇ ಮುಂದಿನವರು 'MAHATI NIGAME NEIGAMANAM' ಪದಕ್ಕೆ ಪರ್ಯಾಯವಾಗಿ ಬಂಜಾರ ಪದವನ್ನು ಬಳಸಿರಬೇಕು ಎಂಬುದು ಕ್ರೂಕ್‌ರವರ ಅಭಿಪ್ರಾಯ.[೭೩] ದಂಡಿಯ ದಶಕುಮಾರ ಚರಿತೆಯಲ್ಲಿ ಈ ಸಮುದಾಯಕ್ಕೆ ಕುರಿತು ಸಿಗುವ ಮಾಹಿತಿಗಳು ಚರಿತ್ರೆಯನ್ನು ಗುರ್ತಿಸಲು ಅಮೂಲ್ಯ ಆಕರಗಳಾಗಿವೆ. ದಂಡಿಯು ಸಂಸ್ಕೃತ ಸಾಹಿತ್ಯದ ಶ್ರೇಷ್ಠ ಕವಿ. ಆತನ ಕಾಲ ಸುಮಾರು ಕ್ರಿ.ಶ. ೭ನೇ ಶತಮಾನ. ಈ ವೇಳೆಗಾಗಲೇ ಲಂಬಾಣಿ ಜನಾಂಗ ಅಸ್ತಿತ್ವದಲ್ಲಿ ಇತ್ತು ಎಂದು ತಿಳಿದುಬರುತ್ತದೆ.

ಕ್ರಿ.ಶ. ೧೬೩೦ರಲ್ಲಿ ಭಾರತಕ್ಕೆ ಭೇಟಿ ನೀಡಿದ್ದ ಪೀಟರ್ ಮಂಡಿಯ ತಿಳಿಸುವಂತೆ ''ಹೋಗುವ ದಾರಿಯಲ್ಲಿ ಬುರಾನ್‌ಪುರಕ್ಕೆ ದವಸ ಧಾನ್ಯಗಳನ್ನು ಸಾಗಿಸುವ ಹೇರಿತ್ತು. ಹೇರು ಕೋಣಗಳನ್ನು ಹೊಡೆದುಕೊಂಡು

ಹೋಗುತ್ತಿದ್ದು, ಅನೇಕ ಬಣಜಾರರನ್ನು ಕಂಡೆವು''[೬] ಮುಂದುವರಿದು ಅವರು ಮತ್ತೊಂದು ಅನುಭವವನ್ನು ವಿವರಿಸುತ್ತಾ ''ಆಗಸ್ಟ್ ೨೩ ರಂದು ನಮಗೆ ಒಂದು ತಾಂಡಾ, ಅಂದರೆ ಎತ್ತುಗಳ ಬಣಜಾರ ಸಿಕ್ಕಿತು. ತಾಂಡಾದಲ್ಲಿ ೧೪,೦೦೦ ಎತ್ತುಗಳಿದ್ದವು. ಗೋಧಿ, ಅಕ್ಕಿ ಮುಂತಾದ ದವಸ ಧಾನ್ಯಗಳನ್ನು ಅವುಗಳ ಮೇಲೆ ಹೇರಲಾಗುತ್ತಿತ್ತು. ಇವೆಲ್ಲಾ ಆಗ್ರಾಕ್ಕೆ ಹೋಗುತ್ತಿದ್ದವು. ಈ ಬಣಜಾರರು ತಮ್ಮ ಹಂಡತಿ ಮಕ್ಕಳು, ಸಾಮಾನು ಸರಂಜಾಮುಗಳ ಸಮೇತ ಹೊರಡುತ್ತಾರೆ. ಇವರು ಒಂದು ಕಡೆ ನಿಲ್ಲದೆ ಊರಿಂದೂರಿಗೆ ಹೋಗುತ್ತಿರುತ್ತಾರೆ. ಅವರವೇ ಈ ಎತ್ತುಗಳನ್ನು ಕೆಲವು ವೇಳೆ ವರ್ತಕರು ಬಾಡಿಗೆಗೆ ತೆಗೆದುಕೊಳ್ಳುತ್ತಾರೆ. ಆದರೆ ಬಹುತೇಕ ಬಂಜಾರ ವರ್ತಕರು ಅಗ್ಗವಾಗಿರುವ ಕಡೆ ದವಸ ಧಾನ್ಯಗಳನ್ನು ಕೊಂಡು ತುಟ್ಟಿಯಾಗಿರುವ ಕಡೆ ಸಾಗಿಸಿ ಮಾರಾಟ ಮಾಡಿ ಅಲ್ಲಿ ದೊರೆಯಬಹುದಾದ ಉಪ್ಪು, ಬೆಲ್ಲ, ಬೆಣ್ಣೆ ಮುಂತಾದವುಗಳನ್ನು ಕೊಂಡು ತರುತ್ತಾರೆ. ಇಂತಹ ಒಂದೊಂದು ತಂಡದಲ್ಲಿ ೬೦೦ ರಿಂದ ೭೦೦ ಹೆಂಗಸರು, ಗಂಡಸರು ಇರುತ್ತಾರೆ. ಹೆಂಗಸರು, ಗಂಡಸರು ಗಟ್ಟಿ ಮುಟ್ಟಾದ ಜನ, ಸಂದರ್ಭ ಬಂದರೆ ಹೆಂಗಸರೂ ಗಂಡಸರಂತೆ ಹೋರಾಡಬಲ್ಲರು. ಪ್ರತಿದಿನ ತಂಪು ಹೊತ್ತಿನಲ್ಲಿ ಆರೇಳು ಮೈಲಿಗಳಂತೆ ದಾರಿ ಸಾಗುತ್ತಾರೆ. ತಂಗಿದಾಗ ಹೇರನ್ನು ಇಳಿಸಿ ಎತ್ತುಗಳನ್ನು ಮೇಯಲು ಬಿಡುತ್ತಾರೆ''.[೭]

ಒಟ್ಟಾರೆ ಲಂಬಾಣಿ ಸಮುದಾಯದ ಮೂಲದ ಬಗ್ಗೆ ವಿದ್ವಾಂಸರಲ್ಲಿ ಹಲವಾರು ಭಿನ್ನಾಭಿಪ್ರಾಯಗಳಿದ್ದರೂ ಲಂಬಾಣಿಗರು ಭಾರತದ ಪೂರ್ವಿಕರ ಮಹತ್ವದ ಮೂಲಗಳಲ್ಲಿ ಒಂದು ಸಮುದಾಯವಾಗಿದ್ದಾರಲ್ಲದೆ, ಕ್ರಿ.ಶ. ೪೦೦ ವರ್ಷಗಳಷ್ಟು ಪ್ರಾಚೀನತೆಯನ್ನು ಹೊಂದಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ.

**ಟಿಪ್ಪಣಿಗಳು**

೧. ಕರ್ನಾಟಕದ ಲಂಬಾಣಿಗಳು-ಒಂದು ಸಾಂಸ್ಕೃತಿಕ ಅಧ್ಯಯನ, ಡಾ. ಪಿ.ಕೆ. ಖಂಡೋಬಾ, ದಿ|| ತೇಜ್‌ಸಿಂಗ್ ರಾಠೋಡ್ ಮೆಮೋರಿಯಲ್ ಟ್ರಸ್ಟ್, ಗುಲ್ಬರ್ಗ, ೧೯೯೧ ಪುಟ: ೮

೨. ಷೆಡ್ಯೂಲ್ಡ್ ಕ್ಯಾಸ್ಟ್, ಷೆಡ್ಯೂಲ್ಡ್ ಟ್ರೈಬ್ಸ್ ಅಮೆಂಡ್‌ಮೆಂಟ್ ಆಕ್ಟ್, ೧೯೭೬

೩. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ: ೮-೯

೪. ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್, ವಾಲ್ಯುಂ-II ೨, ಹೆಚ್.ವಿ ನಂಜುಂಡಯ್ಯ ಮತ್ತು ಎಲ್.ಕೆ. ಅನಂತಕೃಷ್ಣ ಅಯ್ಯರ್, ಮೈಸೂರು ಸರ್ಕಾರ, ಬೆಂಗಳೂರು, ೧೯೨೮, ಪುಟ: ೧೩೬

೫. ಕ್ಯಾಸ್ಟ್ ಅಂಡ್ ಟ್ರೈಬ್ಸ್ ಆಫ್ ಸದರನ್ ಇಂಡಿಯಾ, ವಾಲ್ಯೂಂ-IV, ಎಡ್ಗರ್ ಥರ್ಸ್ಟನ್, ಮದ್ರಾಸ್ ಸರ್ಕಾರ, ಮದ್ರಾಸ್, ೧೯೮೭, ಪುಟ: ೨೦೭-೨೦೮

೬. ಬಾಂಬೆ ಸ್ಟೇಟ್ ಗೆಜೆಟಿಯರ್, ಧಾರವಾಡ ಡಿಸ್ಟ್ರಿಕ್ಟ್, ಪುಟ: ೭೯೩

೭. ಲಿಂಗ್ಯುಸ್ಟಿಕ್ ಸರ್ವೇ ಆಫ್ ಇಂಡಿಯಾ, ವಾಲ್ಯುಂ-IX, ಗ್ರಿಯರಾಸನ್, ದೆಹಲಿ, ೧೯೦೭, ಪುಟ: ೩೫೫

೮. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ: ೧೧

೯. ಲಂಬಾಣಿ ಸಂಸ್ಕೃತಿ, ಸಣ್ಣರಾಮ, ಮಲ್ನಾಡ್ ಆಫ್‌ಸೆಟ್ ಪ್ರಿಂಟರ್ಸ್ ಆಂಡ್ ಪಬ್ಲಿಷರ್, ಶಿವಮೊಗ್ಗ, ೧೯೯೯, ಪುಟ: ೨೦

೧೦. ಲ್ಯಾಂಡ್‌ಮಾರ್ಕ್ಸ್ ಇನ್ ಇಂಡಿಯನ್ ಆಂತ್ರೋಪಾಲಜಿ, ದ ಟ್ರೈಬ್ಸ್ ಅಂಡ್ ಕ್ಯಾಸ್ಟ್ಸ್ ಆಫ್ ನಾರ್ತನ್ ವೆಸ್ಟ್ರನ್ ಇಂಡಿಯಾ, ವಾಲ್ಯೂಂ-XVI (I) ಹೆಮೋನ್ಡ್ ನ್ಯೂಡೆಲ್ಲಿ, ೧೯೮೭, ಪುಟ: ೧೪೯

೧೧. ಪೀಪಲ್ ಆಫ್ ಇಂಡಿಯಾ, ದ ಷೆಡ್ಯೂಲ್ಡ್ ಕ್ಯಾಸ್ಟ್, ವಾಲ್ಯೂಂ-II ಕೆ.ಎಸ್. ಸಿಂಗ್, ಆಕ್ಸ್‌ಫರ್ಡ್ ವಿಶ್ವವಿದ್ಯಾಲಯ, ಮದ್ರಾಸ್, ೧೯೯೩, ಪುಟ: ೧೩೩

೧೨. ಪೂರ್ವೋಕ್ತ, ಎಡ್ಗರ್ ಥರ್ಸ್ಟನ್, ವಾಲ್ಯೂಂ-IV, ಪುಟ: ೨೦೭

೧೩. ರಿಪೋರ್ಟ್ ಆಫ್ ಅಲ್ ಇಂಡಿಯಾ ಬಂಜಾರ ಸೇವಸ್ ಶಿಬಿರ, ರಂಜಿತ್ ನಾಯಕ್, ನ್ಯೂಡೆಲ್ಲಿ ೧೯೬೬, ಪುಟ: ೫೦

೧೪. ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ ವಾಲ್ಯೂಂ-II, ಹೆಚ್.ವಿ. ನಂಜುಂಡಯ್ಯ ಮತ್ತು ಎಲ್.ಕೆ. ಅನಂತಕೃಷ್ಣ ಅಯ್ಯರ್, ಮೈಸೂರು ಸರಕಾರ, ಬೆಂಗಳೂರು, ೧೯೨೮, ಪುಟ: ೧೩೬

೧೫. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ: ೧೦

೧೬. ವಾಗರ್ಥ, ಎಂ. ಚಿದಾನಂದಮೂರ್ತಿ, ಮೈಸೂರು, ಪುಟ: ೯೫

೧೭. ಟ್ರೇಡಿಂಗ್ ಕಮ್ಯುನಿಟೀಸ್ ಇನ್ ಇಂಡಿಯಾ ಫ್ರಂ ಅರ್ಲಿಯೆಸ್ಟ್ ಟೈಂ ಟು ೩೦೦ ಎ.ಡಿ. ಲೇ: ಅರುಣ್‌ಕುಮಾರ ಮಿಶ್ರ, ನ್ಯೂಡೆಲ್ಲಿ, ೧೯೯೦, ಪುಟ: ೩೦

೧೮. ಲ್ಯಾಂಡ್‌ಮಾರ್ಕ್ಸ್ ಇನ್ ಇಂಡಿಯನ್ ಆಂತ್ರೋಪಾಲಜಿ, ದ ಟ್ರೈಬ್ಸ್ ಅಂಡ್ ಕ್ಯಾಸ್ಟ್ಸ್ ಆಫ್ ನಾರ್ತನ್ ವೆಸ್ಟನ್ ಇಂಡಿಯಾ, ವಾಲ್ಯಾಂ-XVI (I) ಹೆಮೋಸ್ಟ್, ನ್ಯೂಡೆಲ್ಲಿ, ೧೯೮೭, ಪುಟ: ೧೫೦

೧೯. ಅದೇ, ಪುಟ: ೧೪೯

೨೦. ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ ವಾಲ್ಯೂಂ-II, ಹೆಚ್.ವಿ. ನಂಜುಂಡಯ್ಯ ಮತ್ತು ಎಲ್.ಕೆ. ಅನಂತಕೃಷ್ಣ ಅಯ್ಯರ್, ಮೈಸೂರು ಸರಕಾರ, ಬೆಂಗಳೂರು, ೧೯೨೮, ಪುಟ: ೧೩೬

೨೧. ಪೂರ್ವೋಕ್ತ, ವಾಲ್ಯೂಂ-IV, ಎಡ್ಗರ್ ಥರ್ಸ್ಟನ್, ಪುಟ: ೨೦೭

೨೨. ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್: ವಾಲ್ಯೂಂ-II, ಹೆಚ್.ವಿ. ನಂಜುಂಡಯ್ಯ ಮತ್ತು ಎಲ್.ಕೆ. ಅನಂತಕೃಷ್ಣ ಅಯ್ಯರ್, ಮೈಸೂರು ಸರಕಾರ ಬೆಂಗಳೂರು, ೧೯೨೮, ಪುಟ: ೩೬

೨೩. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ: ೧೨

೨೪. ಅದೇ, ಪುಟ: ೧೨

೨೫. ಸೇಮ್ ಅಕೌಂಟ್ ಆಫ್ ಬಂಜಾರ ಕ್ಲಾಸ್, ಕುಂಬರಲೇಜ್ ಎಸ್.ಆರ್, ಬಾಂಬೆ, ೧೯೮೨, ಪುಟ: ೧೫೧

೨೬. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ: ೧೪

೨೭. ಅದೇ, ಪುಟ: ೧೩

೨೮. ದಾರ್ಶನಿಕರು ಮತ್ತು ದಲಿತರು, ಪ್ರೊ. ಟಿ.ಯಲ್ಲಪ್ಪ ಬೂತಯ್ಯ, ಆದಿಸಾಹಿತ್ಯ ಪ್ರಕಾಶನ್, ಮೈಸೂರು, ೨೦೦೦, ಪುಟ: ೨೨೮

೨೯. ಪರಿಶಿಷ್ಟ ಜನಾಂಗದವರಿಗೆ ಸಂವಿಧಾನದ ಕೊಡುಗೆ, ಬಿ.ಎಂ.ಎಂ. ಆರಾಧ್ಯ, ಅಪ್ಪು ಪ್ರಕಾಶನ, ಬೆಂಗಳೂರು, ೧೯೯೫, ಪುಟ: ೧೯೪

೩೦. ಇವರಲ್ಲಿ ಪ್ರಚಲಿತದಲ್ಲಿರುವ ಒಂದು ಐತಿಹ್ಯದ ಪ್ರಕಾರ ಲಂಬಾಣಿಗರು ದೊಂಬರಾಟವನ್ನು ಪ್ರದರ್ಶಿಸುತ್ತಾ ಊರಿಂದೂರಿಗೆ ಅಲೆಯುತ್ತಿದ್ದ ದಿನಗಳಲ್ಲಿ ಅವರ ತಲೆ, ಗಡ್ಡ, ಕೇಶಗಳು ಹೇರಳವಾಗಿ ಬೆಳೆದು ಅವುಗಳಲ್ಲಿ ಹೇನು ಸೇರಿಕೊಂಡು ತೊಂದರೆಗೊಳಗಾದ ಇವರು ಸಾಕು ತಾಯಿಯಾದ ರಾಧದೇವಿಯ ಬಳಿಹೋಗಿ ತಮ್ಮ ನೋವನ್ನು ಹೇಳಿಕೊಳ್ಳುತ್ತಾರೆ. ಅವಳ ಮಾರ್ಗದರ್ಶನದಂತೆ ದೇವರನ್ನು ಪ್ರಾರ್ಥಿಸುತ್ತಾರೆ. ಅವರ ಪ್ರಾರ್ಥನೆಗೆ

ಒಲಿದ ಶಿವ-ಪಾರ್ವತಿಯರು ಒಬ್ಬ ಪುರುಷ ಮತ್ತು ಮಹಿಳೆಯನ್ನು ಸೃಷ್ಟಿಸಿದರು. ಅವರನ್ನು ಲಂಬಾಣಿಗಳ ಬಳಗದಲ್ಲಿ ಕ್ಷೌರಿಕ ವೃತ್ತಿಯನ್ನು ಮಾಡಿಕೊಂಡಿರುವಂತೆ ನಿರ್ದೇಶಿಸಿದರು.

೩೧. ಸಿದ್ಯಾನಾಯಕ್ ಹೆಚ್. ಬಿ (ಸಂ.), ಗೋರ್ ಬಂಜಾರ ದೀನ ದಲಿತರ ಶ್ರೇಯಸ್ಸಿನ ವಾರಪತ್ರಿಕೆ, ೧೫.೦೨.೨೦೧೧

೩೨. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ: ೧೫

೩೩. ಲಂಬಾಣಿ ಸಮುದಾಯದ ಥಾಲ್ಯಾ ಪಂಗಡದ ಅಧ್ಯಯನ. ಬೆಂಕ್ಯಾನಾಯ್ಕ ಎಸ್., ಅಪ್ರಕಟಿತ ಎಂ. ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪುಟ: ೧೪

೩೪. ಬಂಜಾರ ಗೋತ್ರಗಳು, ಹರಿಲಾಲ್ ಪವಾರ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೨೦೦೨, ಪುಟ: ೪

೩೫. ಲಂಬಾಣಿ ಸಮುದಾಯದ ಥಾಲ್ಯಾ ಪಂಗಡದ ಅಧ್ಯಯನ, ಬೆಂಕ್ಯಾನಾಯ್ಕ ಎಸ್., ಅಪ್ರಕಟಿತ ಎಂ. ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪುಟ: ೧೪

೩೬. ಅದೇ, ಪುಟ: ೧೫

೩೭. ಅದೇ, ಪುಟ: ೧೬

೩೮. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ: ೧೫

೩೯. ಲಂಬಾಣಿ ಸಮುದಾಯದ ಥಾಲ್ಯಾ ಪಂಗಡದ ಅಧ್ಯಯನ, ಬೆಂಕ್ಯಾನಾಯ್ಕ ಎಸ್., ಅಪ್ರಕಟಿತ ಎಂ. ಫಿಲ್. ಪ್ರಬಂಧ. ಕನ್ನಡ ವಿಶ್ವವಿದ್ಯಾಲಯ. ಹಂಪಿ, ೨೦೦೪, ಪುಟ: ೨೧

೪೦. ಲಂಬಾಣಿ ಸಾಂಸ್ಕೃತಿಕ ಸಂಶೋಧನ ಪ್ರಬಂಧ, ಖಂಡೋಬಾ ಪಿ.ಕೆ., ತೇಜ್‌ಸಿಂಗ್ ರಾಠೋಡ್ ಮೆಮೋರಿಯಲ್ ಟ್ರಸ್ಟ್, ಗುಲ್ಬರ್ಗ, ೧೯೮೮, ಪುಟ: ೭೭-(II)

೪೧. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ: ೧೪

೪೨. ಅಖಿಲ ಭಾರತ ಥಾಡಿ ಬಂಜಾರ ಸೇವಾ ಸಂಘ ಮತ್ತು ಅಖಿಲ ಭಾರತ ಸೇವಾಸಂಘ, ಪ್ರಕಟಣೆ, ದಿನಾಂಕ. ೩೧-೧೨-೧೯೮೯

೪೩. ಗಂಗಾನಾಯ್ಕ ಡಿ.ಬಿ, ಲಂಬಾಣಿ ತಾ. ಡಿ. ವೃತ್ತಿಗಾಯಕ, ಪ್ರಜಾವಾಣಿ ದಿನಪತ್ರಿಕೆ, ದಿನಾಂಕ. ೦೪-೦೩-೧೯೯೪

೪೪. ಅದೇ,

೪೫. ದಿ ಷೆಡ್ಯೂಲ್ಡ್ ಕ್ಯಾಸ್ಟ್ ವ್ಯಾಲ್ಯೂಂ-II , ಕೆ.ಎಸ್. ಸಿಂಗ್, ಆಕ್ಸ್‌ಫರ್ಡ್ ವಿಶ್ವವಿದ್ಯಾಲಯ, ಮದ್ರಾಸ್, ೧೯೯೩, ಪುಟ: ೧೩೬

೪೬. ಪೂರ್ಯಾನಾಯ್ಕ. ಕೆ.ಪಿ., ೭೫ ವರ್ಷ, ನಿವೃತ್ತ ಶಿಕ್ಷಕರು ಕೋಗಳಿ ತಾಂಡ, ಹಗರಿಬೊಮ್ಮನಹಳ್ಳಿ ತಾ. ಇವರನ್ನು ಭೇಟಿ ಮಾಡಿದಾಗ ಪ್ರಸ್ತುತ ಸಂಗತಿ ತಿಳಿದುಬಂದಿತು.

೪೭. ಅದೇ,

೪೮. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ: ೧೫

೪೯. ಅದೇ, ಪುಟ: ೧೬

೫೦. ಗ್ರಾಮದೇವತೆಗಳು, ಸಿದ್ದಲಿಂಗಯ್ಯ, ಮೂಲ ಭಾರತಿ ಪ್ರಕಾಶನ, ಬೆಂಗಳೂರು, ೧೯೯೭, ೫೭

೫೧. ಹರತಿಸಿರಿ, ಲಕ್ಷ್ಮಣ್ ತೆಲಗಾವಿ, ಹೆಚ್.ಪಿ. ವೀರನಾಯಕರ ನೆನಪಿನ ಸಂಪುಟ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೧೯೮೭, ಪುಟ: ೭೯೯

೫೨. ದುರುಗ ಜಾನಪದ, ಮೀರಾಸಾಬಿಹಳ್ಳಿ ಶಿವಣ್ಣ, ಶಕ್ತಿ ಮುದ್ರಣ ಮತ್ತು ಪ್ರಕಾಶನ, ಬೆಂಗಳೂರು, ೧೯೯೯, ಪುಟ:

೫೩. ರಂಗು ರಂಗಿನ ಬಂಜಾರ (ಲಂಬಾಣಿ) ಜನಾಂಗ, ರೂಪ್ಲಾನಾಯಕ್.ವೈ., ಎಸ್.ಟಿ.ಸಿ.ಆರ್.ಜಿ. ಪಬ್ಲಿಕೇಷನ್, ಬೆಂಗಳೂರು, ೧೯೯೮, ಪುಟ: ೨೭-೨೮

೫೪. ಲಂಬಾಣಿ ಸಂಸ್ಕೃತಿ, ನಾಯಕ ಡಿ.ಬಿ., ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩, ಪುಟ: ೩-೪

೫೫. ಲಂಬಾಣಿ ಸಂಸ್ಕೃತಿ, ಸಣ್ಣರಾಮ, ಮಲ್ನಾಡ್ ಆಫ್‌ಸೆಟ್ ಪ್ರಿಂಟರ್ಸ್ ಅಂಡ್ ಪಬ್ಲಿಷರ್, ಶಿವಮೊಗ್ಗ, ೧೯೯೯, ಪುಟ: ೨೪

೫೬. ಲಂಬಾಣಿ ಸಂಸ್ಕೃತಿ, ನಾಯಕ ಡಿ.ಬಿ., ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩ ಪುಟ: ೬

೫೭. ಪೂರ್ವೋಕ್ತ, ನಾಯಕ ಡಿ.ಬಿ., ಪುಟ: ೬-೭

೫೮. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ: ೧೧

೫೯. ಮಾನವಶಾಸ್ತ್ರ ಶಿವಣ್ಣ ಡಿ.ಕೆ., ಬೆಂಗಳೂರು, ೧೯೮೪, ಪುಟ: ೫೬

೬೦. ಬಳ್ಳಾರಿ ಜಿಲ್ಲೆ ಗೆಜೆಟಿಯರ್, ಮೈಸೂರು ಸರಕಾರ, ೧೯೭೨, ಪುಟ: ೧೧೯

೬೧. ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್, ವಾಲ್ಯೂಂ-II, ನಂಜುಂಡಯ್ಯ, ಅಯ್ಯರ್, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೨೮, ಪುಟ:

೬೨. ದಿ ಮೈಥಿಕಲ್ ಒರಿಜನ್ ಅಂಡ್ ಕ್ಲಾಸ್ ಸಿಸ್ಟಮ್ ಆಫ್ ಬಂಜಾರಸ್ ಆಫ್ ಹೈದರಾಬಾದ್, ಇನ್ ಮ್ಯಾನ್ ಇನ್ ಇಂಡಿಯಾ, ವ್ಯಾಲ್ಯುಂ-xxx, ಕಮಲ್ ಮೋಹನರಾಮ, ೧೯೫೦, ಪುಟ: ೧೬೭, ೭೭೦

೬೩. ಹಿಂದೂ ಟ್ರೈಬ್ಸ್ ಅಂಡ್ ಕ್ಯಾಸ್ಟ್ ಆಫ್ ದಿ ಸೆಂಟ್ರಲ್ ಪ್ರಾವಿನ್ಸ್ ಅಂಡ್ ಇಂಡಿಯಾ, ವ್ಯಾಲ್ಯೂಂ-III, ಷೇರಿಂಗ್, ಎಂ.ಎಂ., ಬಂಜಾರ ಪ್ರಕಾಶನ, ಕಲ್ಕತ್ತ, ೧೮೭೨, ಪುಟ: ೫

೬೪. ಪಂಜಾಬ್ ಕ್ಯಾಸ್ಟ್ ಅಂಡ್ ಟ್ರೈಬ್ಸ್, ಇಬ್ಬೆಸ್ಟನ್, ಪಂಜಾಬ್, ೧೯೧೬, ಪುಟ: ೬೨-೬೩

೬೫. ಜಾಟ್ ಜೇಮ್ಸ್ ಅಂಟಿಕ್ವಿಟಿಸ್ ಆಫ್ ರಾಜಸ್ಥಾನ, ಕರ್ನಲ್ ರಾಜಸ್ಥಾನ, ೧೯೭೩, ಪುಟ: ೫೭೩

೬೬. ದ ಮೈಸೂರು ಕ್ಯಾಸ್ಟ್ ಅಂಡ್ ಟ್ರೈಬ್ಸ್ ವಾಲ್ಯೂಂ-II ಹೆಚ್.ವಿ. ನಂಜುಂಡಯ್ಯ ಮತ್ತು ಎಲ್.ಕೆ. ಅನಂತಕೃಷ್ಣ ಅಯ್ಯರ್, ಮೈಸೂರು ಸರಕಾರ, ಬೆಂಗಳೂರು, ೧೯೨೮, ಪುಟ: ೧೫೬

೬೭. ದಿ ಸಿಕಾಲಿಗರ್ಸ್ ಆಫ್ ಪಂಜಾಬ್, ಶೇರ್‌ಸಿಂಗ್, ಪಂಜಾಬ್, ೧೮೮೩, ಪುಟ: ೯-೨೩

೬೮. ಮೆಕೆಂಝಿ, ಕರ್ನಲ್, ನ್ಯೂಡೆಲ್ಲಿ, ಪುಟ: ೧೫೨

೬೯. ರಿಪೋರ್ಟ್ ಆನ್ ಪಬ್ಲಿಕ್ ಇನ್‌ಸ್ಟ್ರಕ್ಷನ್, ಎಡ್ಗರ್ ಥರ್ಸ್ಟನ್, ೧೯೦೯, ಪುಟ: ೨೧೫

೭೦. ಟ್ರೈಬ್ಸ್ ಅಂಡ್ ಕ್ಯಾಸ್ಟ್ ಆಫ್ ದಿ ನಾರ್ತವೆಸ್ಟರ್ನ್ ಇಂಡಿಯಾ, ವಾಲ್ಯೂ-I, ಡಬ್ಲ್ಯೂ ಕ್ರೋಕ್, ದೆಹಲಿ, ೧೯೭೪, ಪುಟ: ೧೫೧

೭೧. ಕರ್ನಾಟಕ ಬುಡಕಟ್ಟಿನ ಲಂಬಾಣಿಗಳು, ಖಂಡೋಬಾ ಪಿ.ಕೆ., ಶ್ರೀ ಸಿದ್ಧಲಿಂಗೇಶ್ವರ ಬುಕ್ ಡಿಪೋ ಗುಲ್ಬರ್ಗಾ, ೨೦೦೦, ಪುಟ: ೧೩

೭೨. ಸಂಶೋಧನ ತರಂಗ, ಸಂ-೨, ಚಿದಾನಂದಮೂರ್ತಿ ಎಂ., ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೦, ಪುಟ: ೧೦

೭೩. ಟ್ರೈಬ್ಸ್ ಅಂಡ್ ಕ್ಯಾಸ್ಟ್ ಆಫ್ ದಿ ನಾರ್ತವೆಸ್ಟರ್ನ್ ಇಂಡಿಯಾ, ವಾಲ್ಯೂ-I, ಡಬ್ಲ್ಯೂ ಕ್ರೋಕ್, ದೆಹಲಿ, ೧೯೭೪, ಪುಟ: ೧೫೦

೭೪. ಪ್ರವಾಸಿ ಕಂಡ ಇಂಡಿಯಾ, ಸಂಪುಟ-೪, ನಾಗೇಗೌಡ ಹೆಚ್.ಎಲ್., ಮೈಸೂರು, ೧೯೭೨, ಲೇಖನ: ಪೀಟರ್ ಮೆಂಡ್ರಿ, ಪುಟ: ೩೦೧

೭೫. ಅದೇ, ಪುಟ: ೩೦೬

* * *

ಅಧ್ಯಾಯ ನಾಲ್ಕು

# ವಸಾಹತು ಹಾಗೂ ವಸಾಹತೋತ್ತರ ಕಾಲಘಟ್ಟದಲ್ಲಿ ಲಂಬಾಣಿಗರು

೪.೧ ವಸಾಹತು ಕಾಲಘಟ್ಟದಲ್ಲಿ ಪ್ರಾತಿನಿಧಿಕ ಸಂಸ್ಥೆಗಳು ಮತ್ತು ಲಂಬಾಣಿಗರು.

೪.೨ ವಸಾಹತೋತ್ತರ ಕಾಲಘಟ್ಟದಲ್ಲಿ ಪ್ರಾತಿನಿಧಿಕ ಸಂಸ್ಥೆಗಳು ಮತ್ತು ಲಂಬಾಣಿಗರು

೪.೩ ೧೯೭೩ರ ನಂತರದ ಸ್ಥಳೀಯ ಪ್ರಾತಿನಿಧಿಕ ಸಂಸ್ಥೆಗಳಲ್ಲಿ ಲಂಬಾಣಿಗರು

೪.೪ ಶಾಸನ ಸಭೆ ಮತ್ತು ವಿವಿಧ ಬೋರ್ಡ್‌ಗಳಲ್ಲಿ ಲಂಬಾಣಿಗರ ಪ್ರಾತಿನಿಧ್ಯ

೪.೫ ಸ್ವಾತಂತ್ರ್ಯ ಮತ್ತು ಮೈಸೂರು ಸಂಸ್ಥಾನ ಚಳವಳಿಗಳಲ್ಲಿ ಲಂಬಾಣಿಗರ ಪಾತ್ರ.

೪.೬ ಬ್ರಿಟಿಷರ ಆಳ್ವಿಕೆಯಲ್ಲಿ ಬಳ್ಳಾರಿ ಜಿಲ್ಲೆಯ ಲಂಬಾಣಿಗರು.

## ವಸಾಹತು ಹಾಗೂ ವಸಾಹತೋತ್ತರ ಕಾಲಘಟ್ಟದಲ್ಲಿ ಲಂಬಾಣಿಗರು

ಭಾರತದ ರಾಜಕೀಯ ಚರಿತ್ರೆ ಎಂದರೆ ವಿವಿಧ ಕಾಲಘಟ್ಟಗಳಲ್ಲಿ ವಿವಿಧ ರಾಜವಂಶಗಳ ಆಳ್ವಿಕೆ ಮಾಡಿರುವ ಕಾಲ ಎನ್ನಬಹುದು. ಇಲ್ಲಿ ಕೇವಲ ರಾಜತ್ವ ಮತ್ತು ಪುರೋಹಿತಶಾಹಿಗಳ ಕುರಿತು ಸಮಗ್ರ ಚಿತ್ರಣ ದೊರೆಯುತ್ತದೆ. ಅಂದಿನ ಸಾಮಾಜಿಕ ಸಂದರ್ಭದಲ್ಲಿ ವಾಸಿಸುತ್ತಿದ್ದ ಜನ ಸಮುದಾಯಗಳ ಬಗೆಗೆ ಕೆಲವೊಂದು ಸಾಲು ಅಥವಾ ಪದಗಳಲ್ಲಿ ಉಲ್ಲೇಖವಾಗಿರುವುದು ಮಾತ್ರವೇ ಕಂಡುಬರುತ್ತದೆ. ರಾಜಪ್ರಭುತ್ವದಿಂದ ಹಿಡಿದು ವಸಾಹತುಶಾಹಿ ಕಾಲದವರೆಗೆ ರಾಜಕಾರಣದಲ್ಲಿ ಪ್ರಮುಖ ಪಾತ್ರವಹಿಸಿರುವವರು ಪುರೋಹಿತಶಾಹಿಗಳು. ಅನೇಕ ಸ್ವದೇಶಿ ರಾಜವಂಶಗಳು ಆಳ್ವಿಕೆ ನಡೆಸುತ್ತಿದ್ದ ಕಾಲಕ್ಕೆ ರಾಜಕಾರಣದಲ್ಲಿ ಪ್ರಮುಖ ಸಲಹೆಗಾರರನ್ನಾಗಿ ಬ್ರಾಹ್ಮಣ ವರ್ಗವನ್ನು ಆಯ್ಕೆ ಮಾಡಿಕೊಳ್ಳಲಾಗುತ್ತಿತ್ತು. ಈ ಕಾರಣದಿಂದಾಗಿ ಆ ಕಾಲಘಟ್ಟದಲ್ಲಿ ರಾಜತ್ವ ಮತ್ತು ಪುರೋಹಿತಶಾಹಿಗಳ ಹೊರತುಪಡಿಸಿ ಉಳಿದೆಲ್ಲಾ ಜನವರ್ಗಗಳೂ ರಾಜಕೀಯ ಪ್ರಜ್ಞೆಯಿಂದ ದೂರ ಉಳಿದುಕೊಂಡವು. ವಸಾಹತುಶಾಹಿ ಕಾಲಘಟ್ಟದಲ್ಲಿ ಆಧುನಿಕತೆ ಎನ್ನುವುದು ಆರಂಭವಾಗುತ್ತದೆ. ಕೇವಲ ವ್ಯಾಪಾರ ದೃಷ್ಟಿಯಿಂದ ಭಾರತಕ್ಕೆ ಬಂದ ಬ್ರಿಟಿಷರು ಇಲ್ಲಿನ ಮೌಢ್ಯತೆ, ಅನಕ್ಷರತೆ, ಜಾತಿಪದ್ಧತಿ ಮುಂತಾದ ಅಂಶಗಳು ಇಲ್ಲಿ ಇವರು ಭದ್ರವಾಗಿ ನೆಲೆಯೂರಲು ಸಹಾಯಕವಾದವು. ಪರಿಣಾಮವಾಗಿ ಸುಮಾರು ಎರಡುನೂರಾ ಐವತ್ತು ವರ್ಷ ಈ ದೇಶವನ್ನು ಆಳ್ವಿಕೆ ಮಾಡಿದರು. ಇಂತಹ ಸಂದರ್ಭಗಳಲ್ಲೂ ಪ್ರಾಮುಖ್ಯತೆ ದೊರೆತದ್ದು ರಾಜಶಾಹಿ ವಂಶಸ್ಥರು ಹಾಗೂ ಪುರೋಹಿತಶಾಹಿಗಳಿಗೆ ಮಾತ್ರ. ಇವರ ಆಳ್ವಿಕೆಯ ಸಂದರ್ಭದಲ್ಲಿ ತಂದಂಥ ಅನೇಕ ಸುಧಾರಣೆಗಳು ಇಲ್ಲಿಯ ಜನ ಸಮುದಾಯಗಳಲ್ಲಿ ಜಾಗೃತಿಯನ್ನು ಮೂಡಿಸಿದವು. ಈ ಕಾಲಘಟ್ಟದಲ್ಲಿ ಅಭಿವೃದ್ಧಿಯ ಅಂಶಗಳಾದ ಶಿಕ್ಷಣ, ರೈಲ್ವೆ, ಟೆಲಿಫೋನ್, ರಸ್ತೆ ಮುಂತಾದವುಗಳ ಮೂಲಕ ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಪ್ರಗತಿಯನ್ನು ಸ್ಥಾಪಿಸಿರುವ ದೇಶಗಳ ಪರಿಚಯವಾಯಿತು. ಪಾಶ್ಚಾತ್ಯ ಶಿಕ್ಷಣದ ಪ್ರಭಾವದಿಂದಾಗಿ ಭಾರತೀಯರು ವೈಜ್ಞಾನಿಕವಾಗಿ, ವೈಚಾರಿಕವಾಗಿ ಆಲೋಚನೆ ಮಾಡುವುದು ಆರಂಭವಾಯಿತು. ಅಲ್ಲಿಂದ ಅವರ ಆಲೋಚನ ಕ್ರಮವೇ ಬೇರೆಯಾಗಿ ಇಲ್ಲಿಯ ಸಾಮಾಜಿಕ ಅನಿಷ್ಟಗಳ ಬಗ್ಗೆ ವೈಜ್ಞಾನಿಕವಾಗಿ ಆಲೋಚನೆ ಮಾಡತೊಡಗಿದರು. ಜೊತೆಗೆ ವಿದೇಶಿಯರ ಕೈಯಲ್ಲಿ ಸಿಕ್ಕ ಭಾರತದ ಸ್ಥಿತಿಯನ್ನು ಕಂಡು ಮರುಗಿದರು. ಅಲ್ಲಿಂದ ಭಾರತೀಯರಿಗೆ ರಾಜಕೀಯ ಪ್ರಜ್ಞೆ ಜಾಗೃತಗೊಳ್ಳತೊಡಗಿತು.

ಆಧುನಿಕತೆಯ ಪರಿಣಾಮವಾಗಿ ಭಾರತೀಯರು ನಾವು ಬ್ರಿಟಿಷರ ಗುಲಾಮರಾಗಿದ್ದೇವೆ ಎಂಬುದನ್ನು ಮನಗಂಡು ಅವರ ವಿರುದ್ಧ ಹೋರಾಟ ಮಾಡುವ ಆಲೋಚನೆ ಮಾಡತೊಡಗಿದರು. ಈ ಹಿಂದೆ ಅನೇಕ ದೇಶಿಯ ಅರಸರು ಬ್ರಿಟೀಷರ ವಿರುದ್ಧ ಹೋರಾಟ ಮಾಡಿದ್ದರೂ ಆ ಹೋರಾಟ ಕೇವಲ ರಾಜವಂಶ, ಪ್ರದೇಶ ಹಾಗೂ ಕೆಲವು ಹಕ್ಕುಗಳಿಗಾಗಿಯೇ ಸೀಮಿತವಾಗಿದ್ದುದರಿಂದ ಜಯ ಸಾಧಿಸಲಾಗಲಿಲ್ಲ. ಆದರೆ ೧೯ನೇ ಶತಮಾನದಲ್ಲಿ ಭಾರತೀಯರಲ್ಲಿ ಉಂಟಾದ ಜಾಗೃತಿ ಬ್ರಿಟಿಷರ ವಿರುದ್ಧ ಏಕತೆಯಿಂದ ಹೋರಾಟ ಮಾಡದ ಹೊರತು ಈ ದೇಶವನ್ನು ಬಿಡುಗಡೆ ಮಾಡಲು ಸಾಧ್ಯವಿಲ್ಲ ಎಂಬುದನ್ನು ಮನಗಂಡಿದ್ದರು. ಈ ಹಿನ್ನೆಲೆಯಲ್ಲಿ 'ಸ್ವಾತಂತ್ರ್ಯ ಹೋರಾಟ'ವನ್ನು ದೇಶದಾದ್ಯಂತ ಬ್ರಿಟಿಷರ ವಿರುದ್ಧ ಕಾಂಗ್ರೆಸ್ ನೇತೃತ್ವದಲ್ಲಿ ಮಾಡತೊಡಗಿದರು. ಇದೇ ಸಂದರ್ಭದಲ್ಲಿ ಸಾಮಾಜಿಕ ಮತ್ತು ಆರ್ಥಿಕವಾಗಿ ಹಿಂದುಳಿದಿದ್ದ ಮೇಲು ಜಾತಿಗಳಿಂದ ವಿವಿಧ ರೀತಿಯಲ್ಲಿ ಶೋಷಣೆಗೆ ಗುರಿಯಾಗಿದ್ದ ಕೆಳಜಾತಿಗಳು ಮತ್ತೊಂದು ಕಡೆ ತಮ್ಮ ಮೇಲೆ ನಿರಂತರವಾಗಿ ನಡೆಯುತ್ತಿದ್ದ ಶೋಷಣೆಯ ವಿರುದ್ಧ ಡಾ. ಬಿ.ಆರ್. ಅಂಬೇಡ್ಕರ್ ನೇತೃತ್ವದಲ್ಲಿ ಸಾಮಾಜಿಕ ಸಮಾನತೆಗಾಗಿ ಹೋರಾಟ ಆರಂಭಿಸಿದವು. ಒಂದು ವಿದೇಶಿಯರ ಆಳ್ವಿಕೆಯ ವಿರುದ್ಧ ರಾಜಕೀಯ ಚಳವಳಿಯಾಗಿದ್ದರೆ ಮತ್ತೊಂದು ಸಾಮಾಜಿಕ ಸಮಾನತೆಗಾಗಿ ನಡೆದ ಚಳವಳಿಯಾಗಿದೆ. ಇದು ಸ್ವಾತಂತ್ರ್ಯ ಚಳವಳಿಯ ವಿರೋಧಿಯಲ್ಲ. ರಾಜಕೀಯ ಸ್ವಾತಂತ್ರ್ಯ ಎರಡನೇ ಮೆಟ್ಟಿಲಾದರೆ ಸಾಮಾಜಿಕವಾಗಿ ಉನ್ನತ ಸ್ಥಾನಮಾನಗಳನ್ನು ಹೊಂದಿರುವವರು ಸ್ವಾತಂತ್ರ್ಯ ಚಳವಳಿಯಲ್ಲಿ ಹೆಜ್ಜೆಹಾಕಿದರೆ, ಸಾಮಾಜಿಕವಾಗಿ ಹಿಂದುಳಿದವರು ಸಾಮಾಜಿಕ ಸ್ವಾತಂತ್ರ್ಯ ಆಂದೋಲನದಲ್ಲಿ ಪಾಲ್ಗೊಂಡರು. ಕರ್ನಾಟಕದ ಸಂದರ್ಭದಲ್ಲಿ ಅನೇಕ ಕೆಳಜಾತಿಗಳು ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿರುವುದು ಕಂಡುಬರುತ್ತದೆ.

ಸ್ವಾತಂತ್ರ್ಯ ಚಳವಳಿಯು ತೀವ್ರವಾಗಿ ನಡೆದು ಭಾರತ ೧೯೪೭ ಆಗಸ್ಟ್ ೧೫ ರಂದು ಸ್ವಾತಂತ್ರ್ಯಗಳಿಸಿತು. ಅಂಬೇಡ್ಕರ್ ಅವರ ಅಧ್ಯಕ್ಷತೆಯಲ್ಲಿ ಸ್ವಾತಂತ್ರ್ಯ ಭಾರತಕ್ಕೊಂದು ಸಂವಿಧಾನ ರಚನೆಯಾಯಿತು. ಇದು ಈ ನೆಲದಲ್ಲಿ ವಾಸಿಸುವ ಪ್ರತಿಯೊಬ್ಬರಿಗೂ ಸಮಾನವಾದ ಹಕ್ಕನ್ನು ದೊರಕಿಸಿಕೊಟ್ಟಿತು. ಜೊತೆಗೆ ಕೆಲವೊಂದು ರಾಜಕೀಯ ಹಕ್ಕುಗಳನ್ನು ಮೀಸಲಾತಿಯ ಮೂಲಕ ಶೋಷಿತ ಜಾತಿಗಳಿಗೆ ನೀಡಿದ್ದರಿಂದ ಇಂದು ರಾಜಕಾರಣದಲ್ಲಿ ಭಾಗವಹಿಸಲು ಅವಕಾಶವಿದೆ. ಇದರಿಂದಾಗಿ ಅನೇಕ ಕೆಳಜಾತಿಗಳ ಪ್ರತಿನಿಧಿಗಳು ರಾಜ್ಯ ಮತ್ತು ರಾಷ್ಟ್ರೀಯ ಮಟ್ಟದ ರಾಜಕೀಯ ಕ್ಷೇತ್ರದಲ್ಲಿ ಇರುವಂತಾಯಿತು. ಈ ರೀತಿ ಕೆಲವೊಂದು ರಾಜಕೀಯ ಹಕ್ಕುಗಳನ್ನು ಸಂವಿಧಾನಾತ್ಮಕಗೊಳಿಸಿದ್ದು ಮುಂದೆ ಜಿಲ್ಲಾ, ತಾಲೂಕು ಹಾಗೂ ಸ್ಥಳೀಯ ಸಂಸ್ಥೆಗಳಲ್ಲಿ ಕೆಲವು ವಿಶೇಷ ಸೌಲಭ್ಯ ಕಲ್ಪಿಸಿಕೊಟ್ಟಿದೆ. ಈ ಹಿನ್ನೆಲೆಯಲ್ಲಿ ವಸಾಹತು ಕಾಲಘಟ್ಟದಿಂದ ಇಂದಿನವರೆಗೆ ಕೆಳಜಾತಿಗಳಿಗೆ ನೀಡಿರುವ ವಿಶೇಷ ರಾಜಕೀಯ ಹಕ್ಕುಗಳನ್ನೂ ಲಂಬಾಣಿ ಸಮುದಾಯ ಎಷ್ಟರಮಟ್ಟಿಗೆ ಪಡೆದುಕೊಂಡಿದೆ ಎಂಬುದನ್ನು ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ. ವಸಾಹತು ಸಂದರ್ಭದಿಂದ ಇಂದಿನವರೆಗೆ ಲಂಬಾಣಿಗರಿಗೆ ನೀಡಿರಬಹುದಾದ ಮೂರು ಕಾಲಘಟ್ಟಗಳನ್ನಾಗಿ ಮಾಡಿಕೊಂಡು ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ. ಹಾಗೂ ಸ್ವಾತಂತ್ರ್ಯ ಮತ್ತು ಮೈಸೂರು ಸಂಸ್ಥಾನ ಚಳವಳಿಗಳಲ್ಲಿ ಲಂಬಾಣಿಗರ ಪಾತ್ರ ಮತ್ತು ಬ್ರಿಟಿಷರ ಆಳ್ವಿಕೆಯಲ್ಲಿ ಬಳ್ಳಾರಿ ಜಿಲ್ಲೆಯ ಲಂಬಾಣಿಗರ ಪಾತ್ರವನ್ನು ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ.

## ೧. ವಸಾಹತು ಕಾಲಘಟ್ಟದಲ್ಲಿ ಪ್ರಾತಿನಿಧಿಕ ಸಂಸ್ಥೆಗಳು ಮತ್ತು ಲಂಬಾಣಿಗರು

ಬ್ರಿಟಿಷರು ತಮ್ಮ ವಸಾಹತುಗಳ ಸ್ಥಾಪನೆಯನ್ನು ಆರಂಭಿಸಿ ಭಾರತದ ಬಹುತೇಕ ಎಲ್ಲಾ ಪ್ರದೇಶಗಳನ್ನು ವಶಪಡಿಸಿಕೊಂಡು ಅವುಗಳ ಆಡಳಿತದ ಅನುಕೂಲತೆಯ ದೃಷ್ಟಿಯಿಂದ ವಿವಿಧ ಭಾಗಗಳಾಗಿ ವಿಂಗಡಿಸಿಕೊಂಡಿದ್ದರು. ಕೆಲ ಪ್ರದೇಶಗಳನ್ನು ನೇರವಾಗಿಯೂ ಇನ್ನೂ ಕೆಲವು ಸ್ಥಳೀಯ ರಾಜ್ಯಗಳಿಗೆ ತಮ್ಮ ಪ್ರತಿನಿಧಿಗಳಾಗಿ ನೇಮಕ ಮಾಡಿ ಆಳ್ವಿಕೆ ಮಾಡುತ್ತಿದ್ದರು. ಈ ರೀತಿಯಾಗಿ ತಮ್ಮ ಆಡಳಿತದ ಕಾರ್ಯವ್ಯಾಪ್ತಿಯನ್ನು ಕೇಂದ್ರ ಪ್ರದೇಶದಿಂದ ಹಿಡಿದು ಗ್ರಾಮೀಣ ಪ್ರದೇಶದವರೆಗೆ ಹರಡಿಕೊಂಡಿದ್ದರು. ಹಾಗೆಯೇ ಅವುಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಸ್ಥಳೀಯರನ್ನೂ ಪ್ರಮುಖ ಸ್ಥಾನಗಳಿಗೆ ನೇಮಕ ಮಾಡಿಕೊಳ್ಳುತ್ತಿದ್ದರು. ಮೈಸೂರು ರಾಜರು ಬ್ರಿಟಿಷರ ಪ್ರತಿನಿಧಿಯಾಗಿ ಆಳ್ವಿಕೆ ಮಾಡುತ್ತಿದ್ದ ಕಾಲಕ್ಕೆ ಯಾವ ವರ್ಗಗಳಿಗೆ ಪ್ರಾತಿನಿಧ್ಯ ನೀಡಿದ್ದರು ಎಂಬುದನ್ನು ತಿಳಿಯಲು ಈ ಕೆಳಗಿನ ಅಂಶಗಳನ್ನು ಒಂದೊಂದನ್ನಾಗಿ ಚರ್ಚಿಸಿದರೆ ನಮಗೆ ಆ ಕಾಲದ ರಾಜಕೀಯ ಪ್ರಾತಿನಿಧಿಕ ಸಂಸ್ಥೆಗಳ ಪ್ರಾತಿನಿಧ್ಯದ ಬಗ್ಗೆ ಸಮಗ್ರ ಮಾಹಿತಿ ತಿಳಿಯಲು ಸಾಧ್ಯವಾಗುತ್ತದೆ.

### ಗ್ರಾಮ ಮಟ್ಟದ ಪಂಚಾಯತ್ ವ್ಯವಸ್ಥೆ

ಗ್ರಾಮ ಆಡಳಿತವು ಆಡಳಿತದ ಕೊನೆಯ ಘಟಕವಾಗಿದೆ. ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿರುವ ಗ್ರಾಮ ಆಡಳಿತ ವ್ಯವಸ್ಥೆಯನ್ನು ವಸಾಹತು ಕಾಲದಲ್ಲೂ ಮುಂದುವರಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಇದಕ್ಕೆ ಚರಿತ್ರೆಯಲ್ಲಿ ದಾಖಲೆಗಳು ಸಾಕ್ಷ್ಯ ಸಿಗುತ್ತದೆ. ಅಶೋಕ ಶಾತವಾಹನರ ಶಾಸನಗಳಲ್ಲಿ ಗುರುತರವಾದ ಮಾಹಿತಿಗಳು ಲಭ್ಯವಾಗದಿದ್ದರೂ ೬ನೇ ಶತಮಾನದ ಗಂಗರು, ಪಲ್ಲವರು ನೊಳಂಬರು, ಚಾಲುಕ್ಯರು, ಹೊಯ್ಸಳರು ಮತ್ತು ವಿಜಯನಗರ ಅರಸರ ಶಾಸನಗಳಲ್ಲಿ ಗ್ರಾಮ ಆಡಳಿತವನ್ನು ಗುರುತಿಸಬಹುದಾಗಿದೆ.[೧] (ಕರ್ನಾಟಕ ವಿಕಾಸ- ಜೂನ್ ೨೦೦೦: ಪುಟ ೨೨) ಇಂತಹ ಗ್ರಾಮ ಆಡಳಿತ ವ್ಯವಸ್ಥೆಯಲ್ಲಿ ಗೌಡ, ಗೊಂಚಿಗಾರ, ಶಾನುಭೋಗ, ತೋಟಿ, ತಳವಾರ ಹೀಗೆ ಐದು ಜನರು ಪ್ರಮುಖರಾಗಿದ್ದರು. ಹೆಚ್ಚು ಕಡಿಮೆ ಅದೇ ವ್ಯವಸ್ಥೆಯನ್ನೇ ಮುಂದುವರಿಸಿಕೊಂಡು ಹೋಗಿರುವುದು ಮೈಸೂರು ಪ್ರಾಂತ್ಯದಲ್ಲಿ ಕಂಡುಬರುತ್ತದೆ. ಮೈಸೂರು ಸರ್ಕಾರವು ೧೯೦೨ರಲ್ಲಿ ಮೈಸೂರು ಲೋಕಲ್ ಬೋರ್ಡ್ ರೆಗ್ಯುಲೇಷನ್ ಮೈಸೂರು ಜಿಲ್ಲಾ ಮಂಡಳಿಗಳ ನಿಬಂಧನೆಯಂತೆ ಗ್ರಾಮ ಮಟ್ಟದಲ್ಲಿ ಪಂಚಾಯತ್ ಸಂಸ್ಥೆಗಳು, ತಾಲೂಕು ಮಟ್ಟದಲ್ಲಿ ತಾಲ್ಲೂಕು ಮಂಡಳಿಗಳು ಮತ್ತು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಮಂಡಳಿಗಳು ಸ್ಥಾಪಿತವಾದವು.[೨] ಇದರಲ್ಲಿ ಅಧಿಕಾರೇತರ ಸದಸ್ಯರನ್ನು ಪ್ರಥಮ ಬಾರಿಗೆ ಸೇರಿಸಲಾಯಿತು. ಮೊದಲು ಇದು ಹೆಸರಿಗೆ ಮಾತ್ರ ಎನ್ನುವಂತೆ ಇತ್ತು. ಹೀಗೆ ೧೯೦೨ರಲ್ಲಿ ೮ ಜಿಲ್ಲಾ ಬೋರ್ಡ್‌ಗಳಿದ್ದರೆ ೧೯೦೩ರಲ್ಲಿ ೨೮ ಪಂಚಾಯತ್ ಯೂನಿಯನ್‌ಗಳಿದ್ದವು. ೧೯೧೬ರಲ್ಲಿ ೨೬೪ಕ್ಕೆ ಏರಿತು.[೩] ನಂತರದಲ್ಲಿ ೧೯೧೯ರಲ್ಲಿ ಪ್ರತಿಯೊಂದು ಗ್ರಾಮ ಅಥವಾ ಗ್ರಾಮಗಳ ಗುಂಪಿಗೆ ಒಂದು ಗ್ರಾಮ ಪಂಚಾಯಿತಿಯನ್ನು ರಚಿಸಲಾಯಿತು. ಪ್ರತಿಯೊಂದು ಪಂಚಾಯತಿಗೆ ಪ್ರತ್ಯೇಕ ಸಂಪನ್ಮೂಲಗಳಿದ್ದು ಅವುಗಳಲ್ಲಿ ನಾಮಕರಣಗೊಂಡ ಅಧ್ಯಕ್ಷರಿರುತ್ತಿದ್ದರು. ಅವುಗಳ ಪ್ರಗತಿ ಸಾಮಾಧಾನಕರವಾಗಿದ್ದರೆ ಚುನಾವಣೆಯ ಹಕ್ಕು ಕೊಡಲಾಗುತ್ತಿತ್ತು. ಪಂಚಾಯತಿ ಹತೋಟಿ, ಮೇಲ್ವಿಚಾರಣೆ, ಪರಿಶೀಲನೆಯ ಅಧಿಕಾರವನ್ನು ಅಮಲ್ದಾರ್

ತಹಸಿಲ್ದಾರ್ ಅವರಿಗೆ ನೀಡಲಾಯಿತು.[೪] ಅನಂತರದಲ್ಲಿ ಪಂಚಾಯತ್ ವ್ಯವಸ್ಥೆಗೆ ಸಂಬಂಧಿಸಿದಂತೆ ಎರಡು ಕಾಯ್ದೆಗಳನ್ನು ರಚಿಸಲಾಗಿ ಇವುಗಳು ೧೯೨೭ ರಿಂದ ಜಾರಿಗೆ ಬಂದವು. ಇದರ ಅನ್ವಯ ತಾಲ್ಲೂಕು ಬೋರ್ಡ್‌ಗಳನ್ನು ರದ್ದುಪಡಿಸುವುದು ಮತ್ತು ಗ್ರಾಮ ಪಂಚಾಯಿತಿಗಳು ಮತ್ತಷ್ಟು ವ್ಯಾಪಕವಾಗುವಂತಹ ವ್ಯವಸ್ಥೆಯನ್ನು ಪದ ನಿಮಿತ್ತ ಸದಸ್ಯರು ಚುನಾಯಿತರಾಗಬೇಕಾಗಿತ್ತು. ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನವು ಚುನಾವಣೆಯ ಮೇರೆಗೆ ತುಂಬುವಂತಹದಾಗಿತ್ತು."

ಗ್ರಾಮ ಮಟ್ಟದ ರಾಜಕೀಯ ಸಂಸ್ಥೆ ಈ ರೀತಿಯಾದಂತಹ ಇಲ್ಲಿ ಪ್ರಮುಖವಾದ ಸ್ಥಾನವು ಊರಿನ ಗೌಡ ಮತ್ತು ಶಾನುಭೋಗರದಾಗಿತ್ತು. ಇವರು ಗ್ರಾಮ ಮಟ್ಟದ ಪ್ರಭುಗಳಾಗಿದ್ದರು. ಇಂತಹ ಹುದ್ದೆಗಳು ಸಮಾಜದ ಉನ್ನತ ವರ್ಗದವರಿಗೆ ಮಾತ್ರ ಸೀಮಿತವಾಗಿದ್ದು. ಶಾನುಭೋಗ ಹುದ್ದೆಯು ಕೇವಲ ಬ್ರಾಹ್ಮಣ ವರ್ಗಕ್ಕೆ ಮಾತ್ರ ಮೀಸಲಾಗಿತ್ತು. ಹೀಗಿರುವಾಗ ಗ್ರಾಮ ಮಟ್ಟದ ಪಂಚಾಯತ್ ಆಡಳಿತ ವ್ಯವಸ್ಥೆಯಲ್ಲಿ ವಸಾಹತು ಕಾಲಕ್ಕೆ ಲಂಬಾಣಿಗರನ್ನೊಳಗೊಂಡಂತೆ ಇನ್ನುಳಿದ ಯಾವ ಕೆಳಜಾತಿಗಳಿಗೂ ಪ್ರಾತಿನಿಧ್ಯ ದೊರಕಿಲ್ಲ ಎನ್ನಬಹುದು. ಈ ಹಿನ್ನೆಲೆಯಲ್ಲಿ ಬಳ್ಳಾರಿ ಪ್ರದೇಶಕ್ಕೆ ಸಂಬಂಧಿಸಿದಂತೆ ಈ ಪ್ರದೇಶವು ಅಂದು ಮದ್ರಾಸ್ ಪ್ರಾಂತ್ಯದಲ್ಲಿದ್ದು ಅಲ್ಲಿಯ ಪಂಚಾಯತ್ ವ್ಯವಸ್ಥೆಗೆ ಸಂಬಂಧಿಸಿದಂತೆ ೧೯೨೦ರಲ್ಲಿ ಮದ್ರಾಸ್ ವಿಲೇಜ್ ಪಂಚಾಯತ್ ಆಕ್ಟ್ ಜಾರಿಗೆ ಬಂತು. ಪ್ರತಿ ಕಂದಾಯ ಹಳ್ಳಿ ಕೂಡ ತನ್ನದೇ ಆದ ಪಂಚಾಯತ್ ಹೊಂದುವ ಅವಕಾಶ ಬಂತು. ಆದರೆ ಪಂಚಾಯಿತಿಯ ಅಧಿಕಾರ ಮತ್ತು ಕಾರ್ಯವ್ಯಾಪ್ತಿ ತುಂಬಾ ಸೀಮಿತವಾಗಿತ್ತು. ಕಂದಾಯ ಸಂಗ್ರಹ ಮತ್ತು ಆದಾಯದ ಮೂಲಗಳಿಗೆ ಸಂಬಂಧಿಸಿದಂತೆ ಪಂಚಾಯತ್‌ಗೆ ಯಾವುದೇ ಹಕ್ಕು ಇರಲಿಲ್ಲ. ಅಂದಮಾತ್ರಕ್ಕೆ ಕಂದಾಯ ಸಂಗ್ರಹಕ್ಕಾಗಿ ವಸಾಹತು ಸರಕಾರ ಆಧುನಿಕ ಪರಿಕರ ಹುಡುಕಲಿಲ್ಲ. ನಮ್ಮದೇ ಸಂಸ್ಕೃತಿಯಲ್ಲಿ ಚಾರಿತ್ರಿಕವಾಗಿ ರೂಪುಗೊಂಡ ಅಧಿಕಾರಶಾಹಿಗಳಿಗೆ - ಗೌಡರು ಮತ್ತು ಶಾನುಭೋಗರಿಗೆ ಕಂದಾಯ ವಸೂಲಿ ಜವಾಬ್ದಾರಿ ವಹಿಸಿತು. ಮತದಾನದ ಹಕ್ಕನ್ನು ಎಲ್ಲಾ ಸಾಮಾಜಿಕ ವರ್ಗಗಳಿಗೆ ವಿಸ್ತರಿಸಬೇಕೆಂಬ ಆದರ್ಶವಿದ್ದರೂ ಅದು ಕಾರ್ಯರೂಪದಲ್ಲಿ ಕೇವಲ ಭೂ ಕಂದಾಯ ಕಟ್ಟುವವರಿಗೆ ಮಾತ್ರವೇ ಸೀಮಿತವಾಗಿತ್ತು.[೬] ಈ ರೀತಿಯಾದ ವ್ಯವಸ್ಥೆ ವಸಾಹತು ಕಾಲದ ಸಂದರ್ಭದಲ್ಲಿದ್ದು ಲಂಬಾಣಿಗರು ಸ್ಪರ್ಧಿಸುವುದು ಅಥವಾ ಆಯ್ಕೆ ಆಗುವುದಕ್ಕೆ ಮತದಾನ ಮಾಡುವ ಹಕ್ಕನ್ನೂ ಹೊಂದಿರಲಿಲ್ಲವೆಂಬುದು ತಿಳಿದು ಬರುತ್ತದೆ.

## ಪ್ರಾಂತೀಯ ಮಟ್ಟದ ಪ್ರಾತಿನಿಧಿಕ ಸಂಸ್ಥೆಗಳು ಮತ್ತು ಲಂಬಾಣಿಗರು.

ಗ್ರಾಮ ಮಟ್ಟದಲ್ಲಿ ಸ್ಥಳೀಯ ಪಂಚಾಯತ್ ಸಂಸ್ಥೆಗಳು ಮಾತ್ರವಲ್ಲದೆ ತಾಲ್ಲೂಕು ಹಾಗೂ ಜಿಲ್ಲಾ ಮಂಡಳಿಗಳಲ್ಲಿಯೂ ಸಹ ಲಂಬಾಣಿಗರಿಗೆ ಪ್ರಾತಿನಿಧ್ಯ ಇರಲಿಲ್ಲ. ಅನಂತರದಲ್ಲಿ ಪ್ರಾಂತೀಯ ಮಟ್ಟದಲ್ಲಿ ಎರಡು ಪ್ರಮುಖ ಪ್ರಾತಿನಿಧಿಕ ಸಭೆಗಳು ವಿವಿಧ ಕಾಲದಲ್ಲಿ ಸ್ಥಾಪಿತಗೊಂಡವು.

## ಪ್ರಜಾ ಪ್ರತಿನಿಧಿ ಸಭೆ

ಪ್ರಾಂತೀಯ ಮಟ್ಟದಲ್ಲಿ ಮೊದಲು ರಂಗಾಚಾರ್ಯ ದಿವಾನರಾಗಿದ್ದ ಕಾಲದಲ್ಲಿ ಪ್ರಜಾ ಪ್ರತಿನಿಧಿ ಸಭೆ ೧೮೮೧ರಲ್ಲಿ ಸ್ಥಾಪಿಸಲ್ಪಟ್ಟಿತು. ಇಂತಹ ವಿಶಿಷ್ಟ ರಾಜಕೀಯ ಸಂಸ್ಥೆಯೊಂದನ್ನು ಮೊಟ್ಟಮೊದಲಿಗೆ ತೆರೆದ ಕೀರ್ತಿ

ಮೈಸೂರು ಸಂಸ್ಥಾನಕ್ಕೆ ಸೇರುತ್ತದೆ. ಇದು ಮೊದಲು ಮೈಸೂರು ಸಂಸ್ಥಾನದ ಎಲ್ಲಾ ತಾಲ್ಲೂಕುಗಳ ವ್ಯಾಪಾರಿಗಳ ಹಾಗೂ ರೈತರ ಪ್ರಾತಿನಿಧಿಕ ಸಭೆ ಎಂದು ಹೇಳಲಾಗಿತ್ತು. ಅದರ ಗುರಿ ಮೂಲತಃ ಜನತೆಯ ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸುವಿಕೆ ಆಗಿರಲಿಲ್ಲ. ಬದಲಾಗಿ ಸರ್ಕಾರ ಕೈಗೊಳ್ಳುವ ಆಡಳಿತಾತ್ಮಕ ನಿರ್ಧಾರಗಳನ್ನು ಸಾರ್ವಜನಿಕರಿಗೆ ತಿಳಿಸುವ ಮತ್ತು ಅವರ ಸಹಕಾರ ಪಡೆವ ಗುರಿಯುಳ್ಳದಾಗಿತ್ತು. ಅದಕ್ಕೆ ಒಂದು ರಾಜಕೀಯ ಭದ್ರ ನೆಲೆ ಇರಲಿಲ್ಲ. ಅಲ್ಲದೆ ಕ್ರಿ.ಶ ೧೯೨೩ ರವರೆಗೆ ವಾಸ್ತವವಾಗಿ ಅದು ಪ್ರಜಾಪ್ರಭುತ್ವ ತತ್ವವನ್ನೊಳಗೊಂಡ ಪ್ರಾತಿನಿಧಿಕ ಸ್ವರೂಪ ಪಡಲಿಲ್ಲ. ರಾಜ್ಯದ ದಿವಾನರು ಆ ಸಭೆಯ ಅಧ್ಯಕ್ಷತೆಯನ್ನು ವಹಿಸುತ್ತಿದ್ದರು.[೭] ಇದಕ್ಕೆ ಯಾವುದೇ ರೀತಿಯಿಂದಲೂ ಸ್ವಂತ ನಿರ್ಧಾರಕ್ಕೆ ಬರುವ ಇಲ್ಲವೆ ಚರ್ಚಿಸುವ ಅವಕಾಶಗಳ ಇದ್ದಂತೆ ತೋರುವುದಿಲ್ಲ. ಸುಮಾರು ಹತ್ತು ವರ್ಷಗಳ ಕಾಲ ಮೂಕಪ್ರೇಕ್ಷಕರಾಗಿದ್ದರೂ ಸ್ಥಾಪಿತವಾದ ಒಂದು ದಶಕ ನಂತರ ಕೆಲವು ಆಸಕ್ತರು ಸದಸ್ಯರು ಅಧಿಕಾರ ವಿಸ್ತರಣೆಯ ಬಗ್ಗೆ ಪ್ರಸ್ತಾಪ ಮಾಡಿದಾಗ ದಿವಾನರು ಈ ಸಭೆಯನ್ನು ಸ್ಥಾಪಿಸಿದ ಉದ್ದೇಶ ಸದಸ್ಯರು ಜನರ ಸಮಸ್ಯೆಗಳ ಬಗ್ಗೆ ಮನವಿ ಅರ್ಪಿಸಲು ಅವಕಾಶ ಮಾಡಿಕೊಡುವುದಕ್ಕೆ ಮಾತ್ರ ಆಡಳಿತದ ಮೇಲೆ  ಅಧಿಕಾರ ಚಲಾಯಿಸುವುದಕ್ಕಲ್ಲ.[೮] ಎಂಬ ಹೇಳಿಕೆಯು ಈ ಸಭೆಗೆ ಯಾವುದೇ ತೀರ್ಮಾನ ತೆಗೆದುಕೊಳ್ಳುವ ಅಧಿಕಾರ ಇರಲಿಲ್ಲವೆಂಬುದು ತಿಳಿದುಬರುತ್ತದೆ. ಇದು ಕೇವಲ ಸಾರ್ವಜನಿಕ ಸಮಸ್ಯೆ ಬಗೆಗೆ ಅಹವಾಲನ್ನು ಸರ್ಕಾರಕ್ಕೆ ನೀಡುವ ಅವಕಾಶ ಮಾತ್ರವೇ ನೀಡಿತ್ತೆ ವಿನಃ ಯಾವುದೇ ಹಿಡಿತ ಆಡಳಿತದ ಮೇಲೆ ಹೊಂದಿರಲಿಲ್ಲವೆಂದು ತಿಳಿದುಬರುತ್ತದೆ. ಇದು ಕೇವಲ ಸಾರ್ವಜನಿಕ ಸಮಸ್ಯೆ ಬಗೆಗೆ ಅಹವಾಲನ್ನು ಸರ್ಕಾರಕ್ಕೆ ನೀಡುವ ಅವಕಾಶ ಮಾತ್ರವೇ ನೀಡಿತ್ತು ವಿನಃ ಯಾವುದೇ ಹಿಡಿತ ಆಡಳಿತದ ಮೇಲೆ ಹೊಂದಿರಲಿಲ್ಲವೆಂದು ತಿಳಿದುಬರುತ್ತದೆ. ಆನಂತರ ೧೯೨೩ರಲ್ಲಿ ಪ್ರಜಾ ಪ್ರತಿನಿಧಿ ಸಭೆಗೆ ಸಂವಿಧಾನಿಕ ಸ್ಥಾನಮಾನವನ್ನು ಸೀಲ್ ಕಮಿಟಿಯ ಶಿಫಾರಸ್ಸಿನಂತೆ ನೀಡಲಾಯಿತು. ಸಾರ್ವಜನಿಕ ಆಡಳಿತ ಮತ್ತು ಹಣಕಾಸಿನ ಆಯವ್ಯಯ ರೀತಿ ನೀತಿಗಳ ಮೇಲೆ ಅಭಿಪ್ರಾಯ ನೀಡಲು ಪ್ರಜಾಪ್ರತಿನಿಧಿ ಸಭೆಗೆ ಅಧಿಕಾರ ನೀಡಲಾಯಿತು.[೯] ಈ ಬಗೆಯಲ್ಲಿ ಕೇವಲ ನಾಮಕಾವಸ್ಥೆಯಿಂದ ಕೂಡಿದ ಪ್ರತಿನಿಧಿ ಸಭೆಯು ೧೯೨೩ರ ನಂತರದಲ್ಲಿ ಹೊಸ ಬಗೆಯ ಅಧಿಕಾರ ವ್ಯಾಪ್ತಿ ಹಾಗೂ ಸ್ಥಾನಮಾನಗಳ ಜೊತೆಯಲ್ಲಿ ಅನೇಕ ಹಕ್ಕುಗಳು ದೊರೆತು ಪ್ರಜಾಪ್ರಭುತ್ವದ ಮಾದರಿಯ ಪ್ರಾತಿನಿಧಿಕ ಸಂಸ್ಥೆಗಳತ್ತ ಹೆಜ್ಜೆ ಹಾಕಿತು. ಆನಂತರದಲ್ಲಿ ಲಂಬಾಣಿ ಸಮುದಾಯಕ್ಕೆ ಸೇರಿದ ರಾಮನಾಯ್ಕನವರು ೧೯೩೭ರಲ್ಲಿ ಮಾಸೂರು ಪ್ರಜಾಪ್ರತಿನಿಧಿ ಸಭಾ ಸದಸ್ಯರಾಗಿ[೧೦] ಆಯ್ಕೆಯಾದುದು ಇತಿಹಾಸ.

**ನ್ಯಾಯ ವಿಧಾಯಕ ಸಭೆ**

ಪ್ರಾಂತೀಯ ಮಟ್ಟದ ಎರಡನೆಯ ಪ್ರಾತಿನಿಧಿಕ ಸಂಸ್ಥೆಯೆಂದರೆ ಅದು ನ್ಯಾಯ ವಿಧಾಯಕ ಸಭೆಯಾಗಿದೆ. ಇದು ೧೯೦೭ರಲ್ಲಿ ಸ್ಥಾಪನೆಗೊಂಡಿತು. ಸರ್ಕಾರ ತಾನು ಆಶಿಸಿದ ಶಾಸನವಿಧಿಗಳಿಗೆ ಒಪ್ಪಿಗೆ ಪಡೆಯಲು ಈ ಸಭೆಗೆ ತರಲಾಗುತ್ತಿತ್ತು. ಒಪ್ಪಿಗೆ ನೀಡುವಲ್ಲಿ ಈ ಸಭೆಗೆ ಒಂದು ಮತಾಧಿಕಾರವಿತ್ತು. ಮತಾಧಿಕಾರವೆನ್ನಲು ಕಾರಣ ಇಷ್ಟೆ. ನ್ಯಾಯ ವಿಧಾಯಕ ಸಭೆಯು ಬಹುಸಂಖ್ಯಾತರು ಸರ್ಕಾರಿ ಅಧಿಕಾರಿಗಳು ಮತ್ತು ಸರ್ಕಾರದಿಂದ ನೇಮಕಗೊಂಡ ಸದಸ್ಯರಿದ್ದು[೧೧] ಇವರು ಸರ್ಕಾರದ ಅಧೀನ ಅಧಿಕಾರಿಗಳು ಹಾಗೂ ಅದರಿಂದ ನಾಮಕರಣಗೊಂಡ

ಸದಸ್ಯರು ಆಗಿರುವುದರಿಂದ ಅವರು ವೈಮುಕ್ತವಾಗಿ ಯಾವುದೇ ತೀರ್ಮಾನಕ್ಕೆ ಬರುವುದೇ ಆಗಲಿ ಅಥವಾ ಒಪ್ಪಿಗೆಗೆ ಕಳುಹಿಸಿದ ಶಾಸನಗಳನ್ನು ಹಿಂದಕ್ಕೆ ಕಳುಹಿಸುವ ಅಥವಾ ತಿರಸ್ಕರಿಸುವ ಧೈರ್ಯ ಮಾಡಲು ಆಗುತ್ತಿರಲಿಲ್ಲ. ಈ ನ್ಯಾಯ ವಿಧಾಯಕ ಸಭೆಯು ೧೯೪೭ರವರೆಗೆ ಕೂಡ ಸಂಪೂರ್ಣ ಸರ್ಕಾರದ ಹತೋಟಿಯಲ್ಲಿ ಇತ್ತು.[೧೨] ಈ ರೀತಿಯ ವ್ಯವಸ್ಥೆಯಲ್ಲಿ ಸದಸ್ಯರ ಸಂಖ್ಯೆಯನ್ನು ೧೯೧೪ರಲ್ಲಿ ೨೧, ೧೯೧೯ರಲ್ಲಿ ೩೦ಕ್ಕೆ ಏರಿಸಲಾಯಿತು. ೧೯೨೩ರಲ್ಲಿ ಈ ಸಂಖ್ಯೆ ೫೦ ಮುಟ್ಟಿತು. ನಂತರ ೧೯೩೯ ರಲ್ಲಿ ಸದಸ್ಯರ ಸಂಖ್ಯೆಯನ್ನು ೭೮ಕ್ಕೆ ಹೆಚ್ಚಿಸಲಾಯಿತು.[೧೩] ಹೀಗೆ ನ್ಯಾಯ ವಿಧಾಯಕ ಸಭೆಯು ಬರಬರುತ್ತಾ ತನ್ನ ಸದಸ್ಯರ ಬಲವನ್ನು ಹೆಚ್ಚಿಸಿಕೊಳ್ಳುತ್ತಾ ನಡೆಯಿತು.

ಈ ಮೇಲ್ಕಾಣಿಸಿದ ಮೈಸೂರು ಪ್ರಾಂತ್ಯದ ಎರಡು ಪ್ರಮುಖ ಪ್ರಾತಿನಿಧಿಕ ಸಂಸ್ಥೆಗಳಲ್ಲಿ ಆರಂಭದಲ್ಲಿ ದಲಿತ ವರ್ಗಕ್ಕೆ ಮಾತ್ರವಲ್ಲದೇ ಆ ಸಭೆಯ ಸದಸ್ಯರಾಗಲು ಇರಬೇಕಾದ ಅರ್ಹತೆಗಳನ್ನು ಹೊಂದದೆ ಇರುವ ಇತರೆ ಯಾವ ವರ್ಗಕ್ಕೂ ಸಹ ಯಾವುದೇ ಪ್ರಾತಿನಿಧ್ಯ ದೊರಕಿಲ್ಲ. ಕೇವಲ ಭೂ ಕಂದಾಯ ಕಟ್ಟುವಂತಹ ಭೂ ಮಾಲೀಕರು, ಮತ್ತು ವ್ಯಾಪಾರಿಗಳಿಗೆ ಬಂಡವಾಳಗಾರರಿಗೆ ಮಾತ್ರ ಮತ ಚಲಾಯಿಸುವ ಹಾಗೂ ಆಯ್ಕೆಯಾಗುವ ಅವಕಾಶ ಇತ್ತು. ಹೀಗಿರುವಾಗ ಭೂರಹಿತವಾಗಿ ಕೂಲಿ ಮಾಡಿ ಜೀವನ ಮಾಡುವ ಲಂಬಾಣಿಗಳಿಗೆ ಅವಕಾಶ ಸಾಧ್ಯವೆ? ನಂತರದ ದಿನಗಳಲ್ಲಿ ಕೆಲವೊಂದು ವರ್ಗಗಳಿಗೆ ಅವಕಾಶ ಮಾಡಿಕೊಟ್ಟಿರುವುದು ಕಂಡುಬರುತ್ತದೆ. ಹಿಂದುಳಿದ ವರ್ಗಗಳು ಪ್ರತಿನಿಧಿ ಸಭೆಯಲ್ಲಿ ಜಾತಿ ಆಧಾರಿತ ಪ್ರಾತಿನಿಧ್ಯವನ್ನು ನೀಡಿ ತಮ್ಮ ಶಕ್ತಿವರ್ಧನೆ ಅವಕಾಶ ಮಾಡಿಕೊಡಬೇಕೆಂಬ ಬೇಡಿಕೆಯನ್ನು ಮುಂದಿಟ್ಟಿದ್ದವು. ಈ ಬೇಡಿಕೆಯನ್ನು ಈಡೇರಿಸದಿದ್ದರೂ ಕೆಲವು ನಿಗದಿಪಡಿಸಿದ ಅರ್ಹತೆಗಳನ್ನು ಪೂರೈಸುವ ಜಾತಿ ಸಂಘಟನೆಗಳಿಗೆ ಪ್ರತಿನಿಧಿ ಸಭೆಯಲ್ಲಿ ಪ್ರಾತಿನಿಧ್ಯ ಕೊಟ್ಟು ೨೫ ಸದಸ್ಯರನ್ನು ಈ ಸಂಘಟನೆಗಳಿಗೆ ನೀಡಲಾಯಿತು.[೧೪] ನಂತರದ ಬೆಳವಣಿಗೆಯಲ್ಲಿ ೧೯೪೧ರ ಸಂವಿಧಾನ ಸುಧಾರಣೆಗಳ ರೀತ್ಯಾ ೪ ನ್ಯಾಯ ವಿಧಾಯಕ ಸಭಾಸ್ಥಾನಗಳನ್ನು ೩೦ ಪ್ರತಿನಿಧಿ ಸಭೆ ಸ್ಥಾನಗಳನ್ನು ದಲಿತರಿಗೆ ಮೀಸಲಿಸಲಾಯಿತು.[೧೫] ಈ ರೀತಿಯಲ್ಲಿ ದಲಿತರಿಗೆ ಕೆಲವು ಅವಕಾಶಗಳನ್ನು ಕೊಟ್ಟ ಪರಿಣಾಮ ಆ ವರ್ಗದಲ್ಲಿ ಬರುವ ಲಂಬಾಣಿ ಸಮುದಾಯದ ಪ್ರತಿನಿಧಿಗಳು ಇರುವುದು ಕಂಡುಬರುತ್ತದೆ. ಲಂಬಾಣಿ ಸಮುದಾಯಕ್ಕೆ ಸೇರಿದ ರಾಮನಾಯ್ಕ ಅವರು ೧೯೪೧ ರಲ್ಲಿ ನ್ಯಾಯ ವಿಧಾಯಕ ಸಭೆ ಸದಸ್ಯರಾಗಿ ನಾಮಕರಣಗೊಂಡರು.[೧೬] ಎಂಬುದು ತಿಳಿದುಬರುವುದು. ಈ ರೀತಿ ಜಾತಿವಾರು ಪ್ರಾತಿನಿಧ್ಯವು ಜಾತಿ ಸಂಘಟನೆಯನ್ನು ಕೈಗೊಳ್ಳಲು ಹೆಚ್ಚಿನ ಪ್ರೇರಣೆ ನೀಡಿತೆನ್ನಬಹುದು.

ಪ್ರತಿನಿಧಿ ಸದಸ್ಯತ್ವದ ನೇಮಕಾತಿಗೆ ಸಂಬಂಧಿಸಿದಂತೆ ಬೆಂಗಳೂರಿನಲ್ಲಿ ದಲಿತ ಸಂಘಟನೆಯೊಂದರ ಪ್ರತಿನಿಧಿಯಾಗಿದ್ದ ಡಿಸೌಜಾ ಎಂಬುವರು ಗಾಂಧೀಜಿ ಕರ್ನಾಟಕಕ್ಕೆ ಬಂದಿದ್ದಾಗ ಅವರೊಂದಿಗೆ ಚರ್ಚೆ ಮಾಡುತ್ತಾ ದಲಿತ ಜನರ ಸಂಖ್ಯೆಗೆ ತಕ್ಕಂತೆ ಮೈಸೂರು ಪ್ರತಿನಿಧಿ ಸಭೆಗಳಲ್ಲಿ ದಲಿತರಿಗೆ ಪ್ರಾತಿನಿಧ್ಯ ಸಿಗುವಂತೆ ಮಾಡಿ ಎಂದಾಗ ಗಾಂಧಿಯವರು ಈಗ ಇರುವ ಮಹಾರಾಜರನ್ನು ಕೆಳಗಿಳಿಸಿ ಒಂದು ವಾರ ಮಾತ್ರ ನನಗೆ ಮಹಾರಾಜನ ಪದವಿ ಕೊಡಿ ಎಂದರಂತೆ. ಈ ರೀತಿಯಾಗಿ ಕೆಲವೊಂದು ನ್ಯಾಯಯುವಾದ ಬೇಡಿಕೆಗಳನ್ನು ಕೆಳಜಾತಿಯವರು

ಇಟ್ಟಾಗ ಗಾಂಧಿಯಂಥವರು ಕೂಡ ಅವರ ಆಸೆಗೆ ತಣ್ಣೀರೆರಚುವಂತೆ ಮಾತನಾಡಿರುವುದು ಕಂಡುಬರುತ್ತದೆ. ಅಲ್ಲದೆ ಜನಸಂಖ್ಯೆಗೆ ತಕ್ಕಂತೆ ದೊರಕದಿರುವುದು ತಿಳಿದುಬರುತ್ತದೆ. ೧೯೪೦ ನಂತರವೇ ಕೆಲವು ಅವಕಾಶಗಳು ದಲಿತರಿಗೆ ಸಿಕ್ಕಿವೆ. ಸಿ.ಟಿ. ಹನುಮಂತಯ್ಯ ಎಂಬುವರು ೧೯೪೧ರಲ್ಲಿ ತುಮಕೂರು ತಾಲ್ಲೂಕಿನಿಂದ ಕಾಂಗ್ರೆಸ್ ಪರ ಸ್ಪರ್ಧಿಸಿ ಪ್ರಜಾ ಪ್ರತಿನಿಧಿ ಸಭೆಗೆ ಆಯ್ಕೆಗೊಂಡರೆ,[೧೭] ದಲಿತರು ತಾವಾಗಿಯೇ ಮುಂದೆ ಬಂದು ಬೆಂಗಳೂರಿನಲ್ಲಿ ಮಾಡಿಕೊಂಡ ಸಹಕಾರ ಸಂಘದ ಮೊದಲ ಅಧ್ಯಕ್ಷರನ್ನೂ ಸರ್ಕಾರವು ಪ್ರಜಾಪ್ರತಿನಿಧಿ ಸಭೆಗೂ, ಜಿಲ್ಲಾ ಬೋರ್ಡಿಗೂ ಸದಸ್ಯರಾಗಿ ನಾಮಕರಣ ಮಾಡಿತು.[೧೮] ಈ ರೀತಿಯಾಗಿ ಸ್ವಾತಂತ್ರ್ಯಪೂರ್ವದ ಪ್ರಾಂತೀಯ ಪ್ರಾತಿನಿಧಿಕ ಸಭೆಗಳಲ್ಲಿ ದಲಿತರಿಗೆ ಅಲ್ಪ ಪ್ರಮಾಣದಲ್ಲಿ ಪ್ರಾತಿನಿಧ್ಯ ದೊರಕಿದೆ. ಆದರೆ ಈ ಅವಧಿಯಲ್ಲಿ ಲಂಬಾಣಿ ಸಮುದಾಯದವರಿಗೆ ಪ್ರಾತಿನಿಧ್ಯ ದೊರಕದೆ ಇರುವುದು ಕಂಡುಬರುತ್ತದೆ.

**ಮತದಾನದ ಹಕ್ಕು**

ಆರಂಭದಲ್ಲಿ ಪ್ರಜಾಪ್ರತಿನಿಧಿ ಸಭೆಗೆ ಪ್ರತಿನಿಧಿಗಳನ್ನು ಆಯ್ಕೆ ಮಾಡುವ ಚುನಾವಣೆಯ ಪ್ರಕ್ರಿಯೆಯಲ್ಲಿ ಕೇವಲ ಭೂ ಕಂದಾಯ ನೀಡುತ್ತಿದ್ದ ವರ್ಗಕ್ಕೆ ಮಾತ್ರವೇ ಅವಕಾಶ ಮಾಡಿಕೊಟ್ಟಿತು. ಇದರಿಂದಾಗಿ ಜಮೀನ್ದಾರರು, ರೈತರು, ವ್ಯಾಪಾರಿಗಳಿಗೆ ಮಾತ್ರವೇ ಮತದಾನದ ಹಕ್ಕು ದೊರಕಿದೆ. ಅಂದು ಚುನಾಯಿಸುವ ಹಕ್ಕಿನ ಜನ ಸಹ ಒಂದು ಸಂಕುಚಿತ ಸಣ್ಣ ಪ್ರಮಾಣದ್ದಾಗಿತ್ತು. ಪ್ರತಿನಿಧಿಗಳನ್ನು ಒಂದು ಬಗೆಯ ಅನೌಪಚಾರಿಕ ಘೋಷಣೆಯಿಂದ ಆರಿಸಲಾಗುತಿತ್ತು.[೧೯] ಹೀಗಾಗಿ ಬಹುಸಂಖ್ಯಾತರಾಗಿರುವ ಭೂ ರಹಿತ ಜನ ಸಮುದಾಯಗಳು ಅಂತಹ ಅವಕಾಶದಿಂದ ವಂಚಿತರಾಗಿದ್ದರು. ದಿವಾನ್ ಕಾಂತರಾಜರ ಸಂದರ್ಭದಲ್ಲಿ ಕೆಲವೊಂದು ಬಿಗಿ ನಿಯಮಗಳು ಸಡಿಲಗೊಂಡು ಕಡಿಮೆ ಕಂದಾಯ ನಿಡುವಂಥವರಿಗೂ ಮತದಾನ ಮಾಡುವ ಅವಕಾಶ ಮಾಡಲಾಯಿತು. ಈ ೧೯೧೯ರ ಸುಧಾರಣೆಯ ಮುನ್ನ ೧೦೦ರೂ ಹೆಚ್ಚು ಭೂ ಕಂದಾಯ ಮತ್ತು ೨೦ ರೂ ಹೆಚ್ಚು ಪುರಸಭಾ ತೆರಿಗೆ ಸಲ್ಲಿಸುವವರು ಮಾತ್ರ ಚುನಾವಣೆಯಲ್ಲಿ ಪಾಲ್ಗೊಳ್ಳುವ ಅರ್ಹತೆ ಪಡೆದಿದ್ದರು. ನಂತರ ಈ ನಿಯಮವನ್ನು ಸಡಿಲಗೊಳಿಸಿ ರೂ ೫೦ ಭೂ ಕಂದಾಯ ಹಾಗೂ ೧೦ ರೂ ಪುರಸಭಾ ತೆರಿಗೆ ಸಲ್ಲಿಸುವವರೆಲ್ಲರಿಗೂ ಮತದಾನದ ಹಕ್ಕು ಕೊಡಲಾಯಿತು.[೨೦] ಹಾಗೆಯೇ ಮಹಿಳೆಯರಿಗೆ ಮತದಾನದ ಹಕ್ಕು ನೀಡಬೇಕೆಂದು ಪ್ರಯತ್ನಪಟ್ಟರು. ಸಂಪ್ರದಾಯವಾದಿಗಳ ಮತ್ತು ಮೇಲಾಗಿ ಮಹಾರಾಜರ ವಿರೋಧದಿಂದಾಗಿ ಈ ಕಾರ್ಯವನ್ನು ಮಾಡಲಾಗಲಿಲ್ಲ.[೨೧] ಈ ರೀತಿಯಾಗಿ ಮತದಾನ ಹಕ್ಕಿಗೆ ಸಂಬಂಧಿಸಿದಂತೆ ಅನೇಕ ಬದಲಾವಣೆಗಳಾದವು. ಹೀಗಿದ್ದರೂ ಸಹ ಅಂತಹ ಅರ್ಹತೆಯು ಸಹ ಸಾಮಾಜಿಕವಾಗಿ, ಆರ್ಥಿಕವಾಗಿ ಹಿಂದುಳಿದಂತಹ ಲಂಬಾಣಿಗರಿಗೆ ಆಗ ಇರಲಿಲ್ಲ.

೧೯೨೩ರ ಸಂವಿಧಾನ ಸುಧಾರಣೆಗಳನ್ನು ಸರ್ಕಾರ ಘೋಷಿಸಿತು.[೨೨] ಅದರಲ್ಲಿ ಹೆಣ್ಣುಮಕ್ಕಳಿಗೂ ಮತ ನೀಡುವ ಹಕ್ಕನ್ನು ಕೊಡಲಾಯಿತು. ನಂತರ ೧೯೪೦ರ ವೇಳೆಗೆ ಮೂರುಬಾರಿ ಮತದಾರರ ಅರ್ಹತೆಯನ್ನು ಕಡಿಮೆ ಮಾಡಿದರೂ ಒಟ್ಟು ಮತದಾರರ ಸಂಖ್ಯೆ ಕೇವಲ ೩,೫೭,೨೨೩ ಅಥವಾ ಜನಸಂಖ್ಯೆ ಶೇ ೪.೬ ಭಾಗ ಮಾತ್ರವಾಗಿತ್ತು.[೨೩] ಹೀಗಿರುವಾಗ ಅಂತಹ ಅರ್ಹತೆ, ಭೂ ರಹಿತ ಲಂಬಾಣಿಗರ ಸಮುದಾಯಕ್ಕೆ ಇರಲಿಲ್ಲವೆನ್ನಬಹುದು. ಅಂತಹ ಅರ್ಹತೆ ಇರುವ ಜನ ಇದ್ದರೆ ಅದೊಂದು ಅಪರೂಪದ ಘಟನೆಯಾಗಿರುತ್ತದೆ. ಕೆಲವೊಂದು ವಿಶೇಷ ಅವಕಾಶದಿಂದಾಗಿ ಮಾತ್ರವೇ ಲಂಬಾಣಿಗರು ಪ್ರತಿನಿಧಿ ಸಭೆಯ ಸದಸ್ಯರಾಗಿದ್ದಾರೆ.

**೨. ವಸಾಹತೋತ್ತರ ಕಾಲಘಟ್ಟದಲ್ಲಿ ಪ್ರಾತಿನಿಧಿಕ ಸಂಸ್ಥೆಗಳು ಮತ್ತು ಲಂಬಾಣಿಗರು.**

ಸುಮಾರು ಎರಡು ನೂರಾ ಐವತ್ತು ವರ್ಷಗಳಿಗೂ ಹೆಚ್ಚು ಕಾಲ ಬ್ರಿಟಿಷರು ಭಾರತವನ್ನು ಆಳ್ವಿಕೆ ಮಾಡಿದ್ದಾರೆ. ಈ ಪರಕೀಯ ಪ್ರಭುತ್ವದ ವಿರುದ್ಧ ನಿರಂತರವಾಗಿ ನಡೆದ ಸ್ವಾತಂತ್ರ್ಯ ಚಳುವಳಿಯ ಪರಿಣಾಮ ಭಾರತವು ಆಗಸ್ಟ್ ೧೫, ೧೯೪೭ರಂದು ಸ್ವತಂತ್ರವಾಯಿತು. ಅಲ್ಲಿಂದ ಭಾರತವು ಆಡಳಿತದ ಹೊಣೆಗಾರಿಕೆಗೆ ಸಂಬಂಧಿಸಿದಂತೆ ಮಾತ್ರವಲ್ಲದೇ ಎಲ್ಲಾ ರೀತಿಯಿಂದಲೂ ಹೊಸ ಸವಾಲನ್ನು ಎದುರಿಸಬೇಕಾಯಿತು. ಇಂತಹ ಸವಾಲನ್ನು ಸಮರ್ಥವಾದ ರೀತಿಯಲ್ಲಿ ನಿಭಾಯಿಸಲು ಸಿದ್ಧವಾಯಿತು. ಈ ಹಿಂದೆ ಅಂದರೆ ೧೯ನೇ ಶತಮಾನದ ಕಡೆಯ ಭಾಗದಲ್ಲಿ ಜಾರಿಗೆ ಬಂದ ರಿಪ್ಪನ್ನಿನ ಸುಧಾರಣೆಗಳ ಫಲವಾಗಿ ದೊರೆತ ಸ್ಥಳೀಯ ಸಂಸ್ಥೆಗಳ ಅಧಿಕಾರ, ೧೯೦೯, ೧೯೧೯ ಮತ್ತು ೧೯೩೫ರಲ್ಲಿ ಅನುಕ್ರಮವಾಗಿ ಜಾರಿಗೆ ಬಂದ ಇಂಡಿಯಾ ಸರ್ಕಾರದ ಶಾಸನಗಳಿಂದ ಹೆಚ್ಚು ಹೆಚ್ಚು ಸ್ವಾಯತ್ತತೆಯನ್ನೂ ಭಾರತೀಯರು ಪಡೆದಂತಾಯಿತು. ಈ ಹಿನ್ನೆಲೆಯಲ್ಲಿ ಆಡಳಿತದಲ್ಲಿ ಅನೇಕ ಸುಧಾರಣೆಗಳನ್ನು ಜಾರಿಗೊಳಿಸಿದರು. ರಾಜ್ಯ, ಜಿಲ್ಲೆ ತಾಲ್ಲೂಕು ಹಾಗೂ ಗ್ರಾಮ ಮಟ್ಟದ ರಾಜಕೀಯ ಸಂಸ್ಥೆಗಳನ್ನೂ ಒದಗಿಸಿಕೊಡುವುದು ಮಾತ್ರವಲ್ಲದೇ ಯೋಜನೆಗಳನ್ನು ನಿಭಾಯಿಸುವ ಸಾಮರ್ಥ್ಯ ತರುವ ನಿಟ್ಟಿನಲ್ಲಿ ಕ್ರಮ ಕೈಗೊಳ್ಳಬೇಕಾಗಿತ್ತು. ಬ್ರಿಟಿಷರ ಕಾಲದಲ್ಲಿ ಕರ್ನಾಟಕದ ಅನೇಕ ಪ್ರದೇಶಗಳು ವಿವಿಧ ಪ್ರಾಂತ್ಯಗಳ ಆಡಳಿತಕ್ಕೆ ಒಳಪಟ್ಟಿದ್ದರಿಂದ ರಾಜ್ಯದಲ್ಲಿ ಸ್ವಾತಂತ್ರ್ಯ ನಂತರ ಹಲವು ವಿಧದ ಪಂಚಾಯತ್ ವ್ಯವಸ್ಥೆಗಳಿದ್ದವು. ಹಳೇ ಮೈಸೂರು ಪ್ರಾಂತ್ಯ, ಮದ್ರಾಸ್ ಪ್ರಾಂತ್ಯ, ಮುಂಬೈ ಪ್ರಾಂತ್ಯ ಮತ್ತು ಹೈದರಾಬಾದ್-ಕರ್ನಾಟಕ ಪ್ರಾಂತ್ಯಗಳಲ್ಲಿ ಏಕೀಕರಣಕ್ಕೆ ಮುನ್ನ ಪ್ರತ್ಯೇಕ ಪಂಚಾಯತ್ ವ್ಯವಸ್ಥೆಗಳಿದ್ದವು. ಇದರಿಂದಾಗಿ ವಿವಿಧ ರೀತಿಯ ಕಾಯಿದೆಗಳ ನೆಲೆಯಲ್ಲಿ ಇವು ರಚನೆಗೊಂಡು ಕಾರ್ಯನಿರ್ವಹಿಸುತ್ತಿದ್ದರಿಂದ ಸ್ವಾತಂತ್ರ್ಯ ನಂತರದಲ್ಲಿ ಅವೆಲ್ಲವನ್ನು ಏಕರೂಪದ ಕಾನೂನು ಚೌಕಟ್ಟಿನಲ್ಲಿ ಬಂಧಿಸಬೇಕಾದ್ದು ಅನಿವಾರ್ಯವಾಗಿತ್ತು. ಅಲ್ಲದೆ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳನ್ನು ನಿರ್ವಹಿಸಲು ಹೆಚ್ಚಿನ ಅಧಿಕಾರ ಮತ್ತು ಹೊಣೆಗಾರಿಕೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಕ್ರಮ ಕೈಗೊಳ್ಳುವಂತರಹ ಆಡಳಿತ ವ್ಯವಸ್ಥೆಯನ್ನು ಸ್ಥಳೀಯ ಸಂಸ್ಥೆಗಳಿಗೆ ನೀಡಬೇಕೆನ್ನುವ ದೃಷ್ಟಿಯಿಂದ ಅನೇಕ ಕಾಯಿದೆಗಳನ್ನು ರಚನೆ ಮಾಡಲಾಯಿತು. ಈ ಕಾಯಿದೆಗಳೆಲ್ಲವೂ ಅನೇಕ ತಜ್ಞರು ಕೈಗೊಂಡ ಅಧ್ಯಯನದ ನಂತರದಲ್ಲಿ ಮಾಡಿದ ಶಿಫಾರಸ್ಸುಗಳ ಹಿನ್ನೆಲೆಯಲ್ಲಿ ರೂಪಿತಗೊಂಡಿದ್ದವು. ಸ್ವಾತಂತ್ರ್ಯ ಬಂದಂದಿನಿಂದ ಕರ್ನಾಟಕ ಏಕೀಕರಣದವರೆಗೆ ಸ್ಥಳೀಯ ಸಂಸ್ಥೆಗಳಿಗೆ ಸಂಬಂಧಿಸಿದ ಕಾಯಿದೆಗಳು ಮತ್ತು ಅವು ಎಷ್ಟರಮಟ್ಟಿಗೆ ಪರಿಶಿಷ್ಟ ಜಾತಿಯವರಿಗೆ ಸಾಮಾಜಿಕ ನ್ಯಾಯವನ್ನು ಒದಗಿಸಲಾಗಿದೆ ಎಂಬುದನ್ನು ಇಲ್ಲಿ ಚರ್ಚಿಸಲಾಗುವುದು. ಇದರೊಂದಿಗೆ ಲಂಬಾಣಿಗರಿಗೆ ಸಿಕ್ಕಿರಬಹುದಾದ ಪ್ರಾತಿನಿಧ್ಯವನ್ನು ತಿಳಿಯಲು ಪ್ರಯತ್ನಿಸಲಾಗಿದೆ.

**೧೯೫೨ರ ಮೈಸೂರು ಪಂಚಾಯತ್ ಮತ್ತು ಜಿಲ್ಲಾ ಬೋರ್ಡ್ ಕಾಯಿದೆ.**

ಸ್ವತಂತ್ರಗೊಂಡ ಕರ್ನಾಟಕವನ್ನು ಮೊದಲು ಮೈಸೂರು ರಾಜ್ಯವೆಂದೇ ಕರೆಯಲಾಗುತ್ತಿತ್ತು. ಈ ಮೈಸೂರು ರಾಜ್ಯ ಸರ್ಕಾರವು ಸ್ಥಳೀಯ ಸಂಸ್ಥೆಗಳಲ್ಲಿ ಏಕರೂಪದ ಆಡಳಿತ ವ್ಯವಸ್ಥೆಯನ್ನು ತಂದು ಪ್ರಜಾಪ್ರಭುತ್ವದ ನೆಲೆಯಲ್ಲಿ ಸ್ಥಳೀಯ ಸಂಸ್ಥೆಗಳನ್ನು ರೂಪಿಸುವ ಸಲುವಾಗಿ ಕೆಲವೊಂದು ಅಧ್ಯಯನ ಸಮಿತಿಗಳನ್ನು ನೇಮಕ

ಮಾಡಿದೆ. ಅವುಗಳಲ್ಲಿ ೧೯೪೯ರಲ್ಲಿ ವಿ. ವೆಂಕಟಪ್ಪನವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ಆಯ್ಕೆ ಮಾಡಿತು. ಕೆಲವು ಮುಖ್ಯ ಶಿಫಾರಸ್ಸುಗಳೊಂದಿಗೆ ಈ ಸಮಿತಿ ೧೯೫೦ರ ಜೂನ್ ೧೨ ರಂದು ತನ್ನ ವರದಿಯನ್ನು ಸಲ್ಲಿಸಿತು. ಈ ವರದಿಯಲ್ಲಿ ಪರಿಶಿಷ್ಟ ಜಾತಿಗಳಿಗೆ ಪ್ರಾತಿನಿಧ್ಯ ದೊರೆಯದಿದ್ದಾಗ, ಆ ಗುಂಪುಗಳಿಂದ ಸದಸ್ಯರನ್ನು ಸೇರಿಸಿಕೊಳ್ಳಲು ಅಧಿಕಾರ ಇರಬೇಕೆಂದು ಸಮಿತಿ ಸೂಚಿಸಿತು.[೨೩] ಇದರಿಂದಾಗಿ ಪರಿಶಿಷ್ಟ ಜಾತಿಯಲ್ಲಿ ಒಂದಾದ ಲಂಬಾಣಿ ಸಮುದಾಯವು ಸಹ ಸದಸ್ಯರಾಗಿ ನೇಮಕಗೊಳ್ಳಲು ಅವಕಾಶವಾಯಿತು. ವೆಂಕಟಪ್ಪನವರ ಅಧ್ಯಕ್ಷತೆಯ ಸಮಿತಿ ಅನೇಕ ಸತ್ಯಾಂಶಗಳನ್ನು ಪರಿಶೀಲಿಸಿ ನೀಡಿರುವ ಸಲಹೆಗಳು ಮತ್ತು ಶಿಫಾರಸ್ಸುಗಳ ಆಧರಿಸಿ ಮೈಸೂರು ವಿಲೇಜ್ ಪಂಚಾಯತ್ ಮತ್ತು ಡಿಸ್ಟ್ರಿಕ್ಟ್ ಬೋರ್ಡ್ ಆಕ್ಟ್ ೧೯೫೯ನ್ನು ರಚಿಸಲಾಯಿತು. ಇದರ ಪ್ರಕಾರ ಮೈಸೂರು ರಾಜ್ಯದಲ್ಲಿ ಸ್ಥಳೀಯ ಆಡಳಿತ ಸಂಸ್ಥೆಗಳು ಏಕ ಪ್ರಕಾರವಾಗಿ ರೂಪಿತಗೊಂಡಿರುವುದು ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ಕರ್ನಾಟಕದಲ್ಲಿ ಮೊದಲು ಎನ್ನಬಹುದಾಗಿದೆ. ಇತರೆ ಎರಡು ಹಂತದ ಆಡಳಿತ ವ್ಯವಸ್ಥೆಯನ್ನು ರೂಪಿಸಿದೆ.

೧೯೫೦ ಜನವರಿ ೨೬ ರಂದು ಭಾರತವು ಡಾ. ಬಿ. ಆರ್. ಅಂಬೇಡ್ಕರ್ ಕರಡು ಸಮಿತಿ ಅಧ್ಯಕ್ಷತೆಯಲ್ಲಿ ಸಮಿತಿ ರಚಿಸಿದ ಭಾರತದ ಸಂವಿಧಾನವನ್ನೂ ಘೋಷಿಸಿದ ನಂತರ ಈ ಸಂವಿಧಾನವು ಯಾವುದೇ ತಾರತಮ್ಯ ತೋರದೆ ಪ್ರೌಢ ಮತದಾನಕ್ಕೆ ಪ್ರತಿಯೊಬ್ಬರಿಗೂ ಅವಕಾಶ ಮಾಡಿಕೊಟ್ಟಿದ್ದು ರಾಜಕಾರಣದಲ್ಲಿ ಪ್ರತಿಯೊಂದು ವರ್ಗದ ಜನರು ಭಾಗವಹಿಸುವಂತೆ ಮಾಡಿದ್ದು ಮಹತ್ವವಾದ ಘಟನೆಯಾಗಿದೆ.

ಮೊದಲನೆಯ ಹಂತದಲ್ಲಿ ಗ್ರಾಮ ಅಥವಾ ಗ್ರೂಪ್ ಪಂಚಾಯತ್‌ಗೆ ಮಯಸ್ಕ ಮತದಾನದ ಮೂಲಕ ಸದಸ್ಯರಾಗಿ ಆಯ್ಕೆಯಾಗಬೇಕು. ಮತ್ತು ಅದರ ಸದಸ್ಯರ ಸಂಖ್ಯೆಯನ್ನು ಸಹ ಕನಿಷ್ಠ ೧೦ ರಿಂದ ಗರಿಷ್ಠ ೨೦ ಮಂದಿಗೆ ನಿಗದಿಗೊಳಿಸಲಾಯಿತು. ಇಂತಹ ಪಂಚಾಯತ್‌ನ ಸದಸ್ಯತ್ವದಲ್ಲಿ ಪರಿಶಿಷ್ಟ ಜನಾಂಗಕ್ಕೆ ಇಂತಿಷ್ಟು ಸ್ಥಾನಗಳನ್ನು ಮೀಸಲಿಡುವಂತೆ ಇರಬೇಕು.[೨೪] ಎಂದು ತಿಳಿಸಿದೆ. ಹಾಗೆಯೇ ಎರಡನೇ ಹಂತದ ಆಡಳಿತ ವ್ಯವಸ್ಥೆಯಾದ ಜಿಲ್ಲಾ ಮಟ್ಟದ ಜಿಲ್ಲಾ ಮಂಡಳಿಗಳ ಸದಸ್ಯರ ಆಯ್ಕೆ ಮಾತ್ರ ಪರೋಕ್ಷ ಚುನಾವಣೆಯ ಮೂಲಕ ನಡೆಯಬೇಕಾಗಿತ್ತು. ಇದರ ಸದಸ್ಯರ ಸಂಖ್ಯೆ ಕನಿಷ್ಠ ೨೦, ಗರಿಷ್ಠ ೪೦ ಇರಬೇಕಾಗಿತ್ತು. ಇಲ್ಲಿಯೂ ಸಹ ಪರಿಶಿಷ್ಟ ಜಾತಿಗೆ ಸ್ಥಾನಗಳನ್ನು ಮೀಸಲಿಡುವುದು ಕಂಡುಬರುತ್ತದೆ. ಆದರೆ ಸಾಮಾಜಿಕ ಮತ್ತು ಆರ್ಥಿಕವಾಗಿ ಹಿಂದುಳಿದಿರುವ ಲಂಬಾಣಿಗರು ಈ ಅವಕಾಶ ಬಳಸಿಕೊಂಡು ಮುಂದೆ ಬರಲು ಪ್ರಯತ್ನಿಸಿದರೆ ಇದು ಸಾಧ್ಯವೇ ಎನಿಸುತ್ತಿದೆಯಾದರೂ ಆ ಸಂದರ್ಭದಲ್ಲಿ ಕೆಲವು ಆಯ್ಕೆ ಅಥವಾ ನೇಮಕವಾಗಿಲ್ಲ ಎಂದು ಹೇಳಲಾಗದು.

ವೆಂಕಟಪ್ಪ ಸಮಿತಿಯ ಆಧಾರದ ಮೇಲೆ ರೂಪಿಸಲಾದ ಕಾಯಿದೆಯನ್ನು ಹೆಚ್ಚು ವರ್ಷಗಳ ಕಾಲ ಮುಂದುವರಿಸಲಿಲ್ಲ. ಈ ಕಾಯಿದೆಯಿಂದಾದ ಅನುಕೂಲತೆಗಳು ಮತ್ತು ಅನಾನುಕೂಲತೆಗಳ ಕುರಿತು ಅಧ್ಯಯನ ಮಾಡಿ ಇನ್ನೂ ಉತ್ತಮ ರೀತಿಯಲ್ಲಿ ಆಡಳಿತ ನಡೆಸುವಂತಾಗಲು ಸ್ಥಳೀಯ ಸಂಸ್ಥೆಗಳನ್ನು ಪುನರ್‌ರಚಿಸಲು ಮತ್ತೊಂದು ಸಮಿತಿಯನ್ನು ಸರ್ಕಾರ ಡಿ.ಎಸ್.ಚಂದ್ರಶೇಖರಯ್ಯನವರ ಅಧ್ಯಕ್ಷತೆಯಲ್ಲಿ ನೇಮಕ ಮಾಡಿತು. ಅಧ್ಯಯನ ಮಾಡಿದ ನಂತರ ಈ ಸಮಿತಿ ತೀರ್ಮಾನಗಳನ್ನು ೧೯೫೪ರಲ್ಲಿ ಸರ್ಕಾರಕ್ಕೆ ಸಲ್ಲಿಸಿತು.[೨೫] ಈ ವರದಿಯು

ಮೂರು ಹಂತದ ಆಡಳಿತ ವ್ಯವಸ್ಥೆಯನ್ನು ಜಾರಿಗೆ ತರುವಂತೆ ಸೂಚಿಸಿತು. ಈ ಪ್ರಕಾರ ಹಿಂದಿನ ವ್ಯವಸ್ಥೆಯೊಂದಿಗೆ ಕೆಲವೊಂದು ಬದಲಾವಣೆ ಮಾಡಿ ಗ್ರಾಮ ಮಟ್ಟದಲ್ಲಿ ಗ್ರಾಮ ಪಂಚಾಯತ್, ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಬೋರ್ಡ್‌ಗಳು ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಬೋರ್ಡ್‌ಗಳನ್ನು ರೂಪಿಸಿತು. ತಾಲ್ಲೂಕು ಮಟ್ಟದ ಸದಸ್ಯರ ಆಯ್ಕೆಯ ೨/೩ ಭಾಗ ನೇರವಾಗಿ ೧/೩ ಭಾಗದ ಸದಸ್ಯರನ್ನು ಪರೋಕ್ಷವಾಗಿ ಆಯ್ಕೆ ಮಾಡಬೇಕೆಂದು ಸೂಚಿಸಿದ ಸಲಹೆಯೊಂದಿಗೆ ವಿಶೇಷವಾಗಿ ಹಿಂದುಳಿದ ಗುಂಪುಗಳು ಮತ್ತು ಮಹಿಳೆಯರಿಗೆ ಸೂಕ್ತ ಪ್ರಾತಿನಿಧ್ಯ ನೀಡುವ ಮೂಲಕ ಅವಕಾಶ ಕಲ್ಪಿಸಬೇಕೆಂದು ಸಮಿತಿ ೨೯ ವರದಿಯಲ್ಲಿ ತಿಳಿಸಿತ್ತು. ಆ ಪ್ರಕಾರ ಕೆಲವೊಂದು ಸ್ಥಾನಗಳನ್ನು ಪರಿಶಿಷ್ಟ ಜಾತಿಗಳಿಗೆ ನೀಡಿದ್ದರಿಂದ ಲಂಬಾಣಿ ಸಮುದಾಯದವರು ಆಯ್ಕೆಯಾಗಿರುವುದು ಕಂಡುಬರುತ್ತದೆ. ೧೯೫೪-೫೫ ರಲ್ಲಿ ಗ್ರಾಮ ಪಂಚಾಯತಿಗಳಿಗೆ ಚುನಾವಣೆಗಳು ನಡೆದವು. ೧೯೫೬ರಲ್ಲಿ ೧೨.೫೦೦ ಗ್ರಾ ಪಂಚಾಯತ್‌ಗಳು ಮೈಸೂರು ರಾಜ್ಯದಲ್ಲಿದ್ದವು. ಅಂತೆಯೇ ನವಮೈಸೂರು ರಾಜ್ಯದ ಕೆಲವೆಡೆ ಪಂಚಾಯತ್‌ಗಳು ಅಸ್ತಿತ್ವದಲ್ಲಿರಲಿಲ್ಲ. ೧೯೫೬-೫೭ರಲ್ಲಿ ಗುಲ್ಬರ್ಗ ವಿಭಾಗದ ೩.೨೩೮ ಗ್ರಾಮಗಳ ಪೈಕಿ ೬೦೦ ಗ್ರಾಮಗಳಲ್ಲಿ ಮಾತ್ರ ಇದ್ದವು ಅವು ಪ್ರಾರಂಭಿಕ ಹಂತದಲ್ಲಿದ್ದವು.[೪೦]

**೧೯೫೯ರ ಮೈಸೂರು ಗ್ರಾಮ ಪಂಚಾಯತ್ ಮತ್ತು ಜಿಲ್ಲಾ ಬೋರ್ಡ್‌ಗಳ ಕಾಯಿದೆ.**

೧೯೫೨ ಕಾಯಿದೆ ಪ್ರಕಾರ ಸ್ಥಳೀಯ ಸಂಸ್ಥೆಗಳು ಚಂದ್ರಶೇಖರಯ್ಯ ಸಮಿತಿಯು ಮಾಡಿದ ಶಿಫಾರಸ್ಸುಗಳ ಮೇಲೆ ಕೆಲವೊಂದು ಮಾರ್ಪಾಡುಗಳೊಂದಿಗೆ ಮುಂದುವರೆದಿತ್ತು. ೧೯೫೬ರಲ್ಲಿ ರಾಜ್ಯ ಪುನರ್‌ವಿಂಗಡಣೆಯಾದಾಗ ರಾಜ್ಯಕ್ಕೆ ಸೇರಿದ ನಾಲ್ಕು ಪ್ರದೇಶಗಳಲ್ಲಿ ಪ್ರತ್ಯೇಕವಾದ ಸ್ಥಳೀಯ ಸರಕಾರ ಕಾಯ್ದೆಗಳ ಅನುಷ್ಠಾನದಲ್ಲಿದ್ದವು. ಅವುಗಳೆಂದರೆ ೧೯೨೩ರ ಬಾಂಬೆ ಜಿಲ್ಲಾ ಸ್ಥಳೀಯ ಬೋರ್ಡ್‌ಗಳ ಕಾಯಿದೆ ಮತ್ತು ೧೯೩೩ ಮದ್ರಾಸ್ ಗ್ರಾಮ ಪಂಚಾಯತ್ ಕಾಯ್ದೆ. ೧೯೫೬ರ ಹೈದ್ರಾಬಾದ್ ಜಿಲ್ಲಾ ಬೋರ್ಡ್‌ಗಳ ಕಾಯಿದೆ ಮತ್ತು ೧೯೫೧ರ ಹೈದ್ರಾಬಾದ್ ಗ್ರಾಮ ಪಂಚಾಯತ್‌ಗಳ ಕಾಯ್ದೆ ಮತ್ತು ೧೯೫೬ರ ಕೂರ್ಗ್ ಗ್ರಾಮ ಪಂಚಾಯತ್ ಕಾಯ್ದೆ[೪೧] ಹೀಗೆ ಅನೇಕ ಕಾಯಿದೆಗಳು ವಿವಿಧ ಸಂದರ್ಭದಲ್ಲಿ ಪ್ರದೇಶವಾರು ರಚನೆಗೊಂಡು ಅಸ್ತಿತ್ವದಲ್ಲಿದ್ದವು. ಇವುಗಳೆಲ್ಲವನ್ನೂ ಒಟ್ಟಾಗಿಸಿ ರಾಜ್ಯಾದ್ಯಂತ ಏಕರೂಪದ ಕಾಯಿದೆಗೆ ಒಳಪಡಿಸುವ ಉದ್ದೇಶವನ್ನು ಸರ್ಕಾರ ಹೊಂದಿತ್ತು. ಆಗ ಕೇಂದ್ರ ಸರ್ಕಾರವು ಸ್ಥಳೀಯ ಪಂಚಾಯತ್ ಸಂಸ್ಥೆಗಳ ಅಧ್ಯಯನ ಮಾಡಲು ರಾಷ್ಟ್ರಮಟ್ಟದಲ್ಲಿ ಬಲವಂತರಾಯ್ ಮೆಹತಾ ಸಮಿತಿಯೊಂದನ್ನು ನೇಮಕ ಮಾಡಿತು. ಅದು ಅಧ್ಯಯನ ಕೈಗೊಂಡು ಸ್ಥಳೀಯ ಸಂಸ್ಥೆಗಳ ಆಡಳಿತ ಕಾರ್ಯವೈಖರಿ ಯೋಜನೆಗಳ ಜಾರಿಯಲ್ಲಿ ಅದರ ಪಾತ್ರ ಮುಂತಾದ ವಿಷಯಗಳನ್ನೊಳಗೊಂಡಂತೆ ಸಮಗ್ರವಾಗಿ ಅಧ್ಯಯನ ಮಾಡಿ ಅನೇಕ ಶಿಫಾರಸ್ಸುಗಳನ್ನು ಮಾಡಿ ತನ್ನ ವರದಿಯನ್ನು ಸಲ್ಲಿಸಿತು. ಈ ವರದಿಯನ್ನು ಅನುಸರಿಸಿದ ಮೈಸೂರು ಸರ್ಕಾರ ಮೈಸೂರು ವಿಲೇಜ್ ಪಂಚಾಯತ್ ಮತ್ತು ಡಿಸ್ಟ್ರಿಕ್ಟ್ ಬೋರ್ಡ್ ಕಾಯಿದೆಯನ್ನು ೧೯೫೯ರಲ್ಲಿ ಜಾರಿಗೊಳಿಸಿತು. ಈ ಹೊಸ ಕಾಯ್ದೆಯ ೧೯೫೯ನೇ ನವೆಂಬರ್ ೧ ರಂದು ಜಾರಿಗೆ ಬಂದಿತು. ೧೯೬೦ರಲ್ಲಿ ಸ್ಥಳೀಯ ಸಂಸ್ಥೆಗಳಿಗೆ ಚುನಾವಣೆ ನಡೆದು ಪಂಚಾಯತ್ ೧೯೬೨ ಡಿಸೆಂಬರ್ ೨೧ ರಂದು ಭಾರತದ ರಾಷ್ಟ್ರಾಧ್ಯಕ್ಷರಿಂದ ಉದ್ಘಾಟಿಸಲಾಯಿತು.[೪೨]

ಈ ಕಾಯಿದೆ ಪ್ರಕಾರ ಮೂರು ಹಂತದ ಪಂಚಾಯತ್ ವ್ಯವಸ್ಥೆ ರೂಪುಗೊಂಡಿತು. ಗ್ರಾಮ ಮಟ್ಟದಲ್ಲಿ ಗ್ರಾಮ ಪಂಚಾಯತ್ ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಅಭಿವೃದ್ಧಿ ಮಂಡಳಿ ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಲಹಾ ಸಮಿತಿಗಳು ಅಸ್ತಿತ್ವಕ್ಕೆ ಬಂದವು.

ಮೊದಲನೆಯ ಹಂತದ ಕನಿಷ್ಠ ೧೫೦೦ ರಿಂದ ೧೦.೦೦೦ ಜನಸಂಖ್ಯೆ ಹೊಂದಿರುವ ಪ್ರದೇಶಗಳಲ್ಲಿ ಒಂದು ಗ್ರಾಮ ಪಂಚಾಯತ್ ರಚನೆಯಾಯಿತು. ಇದರ ಸದಸ್ಯತ್ವದ ಸಂಖ್ಯೆ ಕನಿಷ್ಠ ೧೧, ಗರಿಷ್ಠ ೧೫ ಮಂದಿ ಮಾತ್ರವೇ ಇರಬೇಕಾಗಿತ್ತು. ಇಲ್ಲಿಯೂ ಕೆಲವೊಂದು ಸ್ಥಾನವನ್ನು ಪರಿಶಿಷ್ಟ ಸಮುದಾಯದವರಿಗೆ ನೀಡಬೇಕಾಗಿತ್ತು. ಈ ಗ್ರಾಮ ಪಂಚಾಯತ್‌ನ ಅಧ್ಯಕ್ಷ ಮತ್ತು ಉಪಾಧ್ಯಕ್ಷ, ಸ್ಥಾನಗಳನ್ನು ಸದಸ್ಯರಲ್ಲೇ ತೀರ್ಮಾನವಾಗುತ್ತಿತ್ತು. ಇದರಿಂದಾಗಿ ಸ್ಥಾನಗಳಿಗೆ ಆಯಾ ಗ್ರಾಮ ಪಂಚಾಯತ್‌ನ ವ್ಯಾಪ್ತಿಯಲ್ಲಿ ಬರುವ ಗ್ರಾಮದ ಪ್ರಬಲ ಜಾತಿಯ ವ್ಯಕ್ತಿಗಳು ಮಾತ್ರವೇ ಸಾಧ್ಯವಾಗುತ್ತಿತ್ತು ಎನ್ನಬಹುದು. ಈ ರೀತಿಯ ಪರಿಸ್ಥಿತಿ ಇರುವಾಗ ಸಾಮಾಜಿಕವಾಗಿ ಆರ್ಥಿಕವಾಗಿ ಹಿಂದುಳಿದಿರುವ ಆಯ್ಕೆಯಾಗಿರುವ ಲಂಬಾಣಿ ಸಮುದಾಯದ ಸದಸ್ಯ ಅಂತಹ ಸ್ಥಾನಗಳನ್ನು ಕಲ್ಪಿಸಿಕೊಳ್ಳಲು ಸಹ ಸಾಧ್ಯವಿರಲಿಲ್ಲ. ೧೯೯೫ರಲ್ಲಿ ರಾಜ್ಯದಲ್ಲಿ ಗ್ರಾಮ ಪಂಚಾಯತ್‌ಗಳ ಸಂಖ್ಯೆ ೧೫೦೦ಕ್ಕೇರಿತು.[೨೩]

ಎರಡನೇ ಹಂತದಲ್ಲಿ ತಾಲ್ಲೂಕು ಅಭಿವೃದ್ಧಿ ಮಂಡಳಿಗಳನ್ನು ಕಾಣಬಹುದಾಗಿದೆ. ಅದರ ಸದಸ್ಯರು ಸಹ ನೇರ ಚುನಾವಣೆಯ ಮೂಲಕ ಆರಿಸಿ ಬರಬೇಕಿತ್ತು. ಅಲ್ಲಿಯೂ ಕೂಡ ಕೆಲವೊಂದು ಸ್ಥಾನಗಳನ್ನು ಪರಿಶಿಷ್ಟ ಜಾತಿಯವರಿಗೆ ನೀಡಲಾಗಿದ್ದು, ಆ ಸ್ಥಾನಕ್ಕೆ ಲಂಬಾಣಿಗರು ಸಹ ಸ್ಪರ್ಧಿಸುವವರಲ್ಲಿ ಒಬ್ಬರಾಗಲು ಅವಕಾಶವಾಯಿತು. ಇಲ್ಲಿಯೂ ಸಹ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳಿಗೆ ಯಾವುದೇ ಮೀಸಲು ನಿಯಮ ಇಲ್ಲದೆ ಇರುವುದರಿಂದ ಆ ಸ್ಥಾನಗಳು ಕೇವಲ ಮೇಲುಜಾತಿಗಳಿಗೆ ಮಾತ್ರವೇ ಸಿಗುತ್ತಿತ್ತು. ತಾಲ್ಲೂಕು ಅಭಿವೃದ್ಧಿ ಬೋರ್ಡ್‌ಗಳಲ್ಲಿ ಒಂದೇ ಬ್ಲಾಕ್ ಇದ್ದರೆ, ೭೯ ತಾಲ್ಲೂಕು ಅಭಿವೃದ್ಧಿ ಬೋರ್ಡ್‌ಗಳಲ್ಲಿ ಮೂರು ಬ್ಲಾಕ್‌ಗಳು ಹಾಗೂ ೨ ತಾಲ್ಲೂಕು ಅಭಿವೃದ್ಧಿ ಬೋರ್ಡ್‌ಗಳಲ್ಲಿ ನಾಲ್ಕು ಬ್ಲಾಕ್‌ಗಳಿದ್ದವು. ೧೯೬೮ ನಂತರ ಹೆಚ್ಚುವರಿ ಬ್ಲಾಕ್‌ಗಳನ್ನು ವಿಸ್ತರಿಸಿ ತಾಲ್ಲೂಕಾಗಿ ಮಾರ್ಪಡಿಸಿದ್ದರಿಂದ ಪ್ರತಿ ತಾಲ್ಲೂಕಿಗೆ ಒಂದು ಬ್ಲಾಕ್ ಇದೆ.[೨೪]

ಮೂರನೇ ಹಂತದಲ್ಲಿ ಬರುವುದೇ ಜಿಲ್ಲಾ ಅಭಿವೃದ್ಧಿ ಸಲಹಾ ಸಮಿತಿ, ಈ ಸಮಿತಿಯು ಸದಸ್ಯರು ನೇರವಾಗಿ ಚುನಾಯಿತರಾಗಬೇಕಿರಲಿಲ್ಲ. ಆಗಾಗಲೇ ತಾಲ್ಲೂಕು ಅಭಿವೃದ್ಧಿ ಮಂಡಳಿಯ ಅಧ್ಯಕ್ಷರು ಮತ್ತು ಜಿಲ್ಲಾ ವ್ಯಾಪ್ತಿಯಲ್ಲಿ ವಿವಿಧ ಕ್ಷೇತ್ರಗಳಲ್ಲಿ ಆಯ್ಕೆಯಾಗಿರುವ ವಿಧಾನಸಭೆ, ವಿಧಾನ ಪರಿಷತ್ ಹಾಗೂ ಲೋಕಸಭಾ ಸದಸ್ಯರಿಂದ ಈ ಸಮಿತಿಗೆ ಸದಸ್ಯರು ನೇಮಕಗೊಳ್ಳುತ್ತಿದ್ದರು. ಹೀಗೆ ನೇಮಕಗೊಂಡ ಸಮಿತಿಯೊಂದಿಗೆ ೧೫ಕ್ಕೂ ಹೆಚ್ಚಿಲ್ಲದ ಸರ್ಕಾರದಿಂದ ಹೀಗೆ ನೇಮಕವಾದ ಅಧಿಕಾರಿಗಳು ಇರುತಿದ್ದರು. ಜಿಲ್ಲಾಧಿಕಾರಿಗಳು ಅದರ ಪದನಿಮಿತ್ತ ಅಧ್ಯಕ್ಷರು ಆಗಿದ್ದರು. ಈ ಹಂತದ ಆಡಳಿತ ವ್ಯವಸ್ಥೆಯಲ್ಲಿಯೂ ಕೂಡ ೧೯೫೯ರ ಮೈಸೂರು ವಿಲೇಜ್ ಮತ್ತು ಡಿಸ್ಟ್ರಿಕ್ಟ್ ಬೋರ್ಡ್‌ಆಕ್ಟ್ ಹರಿಜನರಿಗೆ, ಗಿರಿಜನರಿಗೆ, ಲಂಬಾಣಿಗರಿಗೆ ಹಾಗೂ ಮಹಿಳೆಯರಿಗೆ ಕೆಲವು ಸೀಟುಗಳನ್ನು ಕಾದಿರಿಸಲು ಈ ಕಾಯಿದೆ ಅವಕಾಶ ಮಾಡಿಕೊಟ್ಟಿದೆ.[೨೫] ಈ ಹಿನ್ನೆಲೆಯಲ್ಲಿ ಲಂಬಾಣಿಗರು,

ಮಾದಿಗರು, ಹರಿಜನರಿಗೆ ಮೀಸಲು ಇರುವ ಸ್ಥಾನಗಳಲ್ಲಿ ಸ್ಪರ್ದಿಸಲು ಅವಕಾಶ ಪಡೆದುಕೊಂಡಿತು. ಈ ಅವಕಾಶವನ್ನು ಬಳಸಿಕೊಂಡ ಲಂಬಾಣಿ ಸಮುದಾಯದ ಅನೇಕರು ತಾಲ್ಲೂಕು ಅಭಿವೃದ್ಧಿ ಮಂಡಳಿ ಮತ್ತು ಜಿಲ್ಲಾ ಅಭಿವೃದ್ಧಿ ಸಲಹಾ ಸಮಿತಿಗೆ ಆಯ್ಕೆಯಾಗಿರುವ ಉದಾಹರಣೆಗಳು ಬಳ್ಳಾರಿ ಜಿಲ್ಲೆಯಲ್ಲಿ ದೊರಕುತ್ತದೆ.

ಬಳ್ಳಾರಿ ಜಿಲ್ಲೆಯಲ್ಲಿ ಗೋಪಾಲಸ್ವಾಮಿ ಮೊರಿಯರ್ ಬಳ್ಳಾರಿ ಜಿಲ್ಲಾಧ್ಯಕ್ಷರಾಗಿದ್ದ ಕಾಲದ ಅಂದಿನ ಚುನಾವಣೆಯಲ್ಲಿ ಚಿಕ್ಕಜೋಗಿಹಳ್ಳಿ ತಾಂಡಾದ ಸಕ್ರನಾಯ್ಕ (ಲಂಬಾಣಿ), ಬಣವಿಕಲ್ಲು ಗ್ರಾಮದ ಬಿ.ಎಂ ವೀರಭದ್ರಪ್ಪನವರ ಜೊತೆ ಒದೋರಂಗಪ್ಪ (ಮಾದಿಗರು) ಜಿಲ್ಲಾ ಬೋರ್ಡ್ ಸದಸ್ಯರಾಗಿ ಆರಿಸಿ ಬಂದಿದ್ದಾರೆ.[೩೬] ಈ ಅಂಶಗಳು ಲಂಬಾಣಿ ಸಮುದಾಯದಿಂದ ಅನೇಕರು ತಾಲ್ಲೂಕು ಮತ್ತು ಜಿಲ್ಲಾಅಭಿವೃದ್ಧಿ ಮಂಡಳಿಗಳಿಗೆ ಆಯ್ಕೆಯಾಗಿರುವುದನ್ನು ಖಚಿತಪಡಿಸುತ್ತದೆ.

ಈ ರೀತಿ ಗ್ರಾಮ ಮಟ್ಟದಿಂದ ಹಿಡಿದು ಜಿಲ್ಲಾ ಮಟ್ಟದವರೆಗಿನ ಪಂಚಾಯತ್ ಆಡಳಿತದಲ್ಲಿ ಭಾಗಿಗಳಾಗಲು ಪರಿಶಿಷ್ಟ ಜಾತಿಗೆ ನೀಡಿರುವ ಅವಕಾಶಗಳನ್ನು ಬಳಸಿಕೊಂಡ ಲಂಬಾಣಿಗರು ರಾಜಕೀಯ ಪ್ರತಿನಿಧಿಗಳಾಗಿ ಆಯ್ಕೆಯಾಗಿರುವುದು ಆ ವರ್ಗದ ಜನರಲ್ಲಿ ರಾಜಕೀಯ ಪ್ರಜ್ಞೆ ಮೂಡಲು ಸಹಕಾರಿಯಾಗಿದೆ.

## ೩. ೧೯೭೩ರ ನಂತರ ಸ್ಥಳೀಯ ಪ್ರಾತಿನಿಧಿಕ ಸಂಸ್ಥೆಗಳಲ್ಲಿ ಲಂಬಾಣಿಗರು

ಮೈಸೂರು ರಾಜ್ಯವು ಭಾಷಾ ನೆಲೆಯಲ್ಲಿ ಏಕೀಕರಣಗೊಂಡು ಕರ್ನಾಟಕ ರಾಜ್ಯ ಎಂದು ನಾಮಕರಣಗೊಂಡಿತು. ಅನಂತರ ಸ್ಥಳೀಯ ಪಂಚಾಯತ್ ಸಂಸ್ಥೆಗಳಿಗೆ ಸಂಬಂಧಿಸಿದಂತೆ ರಾಜ್ಯ ಸರ್ಕಾರ ಜಾರಿಯಲ್ಲಿ ತಂದ ಪ್ರಮುಖವಾದ ಕಾಯಿದೆ ೧೯೮೩ರ ಕಾಯಿದೆಯಾಗಿದೆ. ಇದು ಕೇಂದ್ರ ಸರ್ಕಾರವು ೧೯೭೭ರಲ್ಲಿ ನೇಮಕ ಮಾಡಿದ ಅಶೋಕ ಮೆಹತಾ ಸಮಿತಿಯ ವರದಿಯನ್ನು ಅನುಸರಿಸಿ ಸರ್ಕಾರ ೧೯೮೩ರ ಕರ್ನಾಟಕ ಜಿಲ್ಲಾ ಪರಿಷತ್, ತಾಲ್ಲೂಕು ಪಂಚಾಯತ್ ಸಮಿತಿ, ಮಂಡಲ ಪಂಚಾಯತ್‌ಗಳು ಮತ್ತು ನ್ಯಾಯ ಪಂಚಾಯತ್ ಕಾಯ್ದೆಯನ್ನು ರೂಪಿಸಿತು. ಇದಕ್ಕೆ ೧೯೮೫ರಲ್ಲಿ ರಾಷ್ಟ್ರಾಧ್ಯಕ್ಷರ ಅನುಮತಿ ದೊರಕಿತು. ೧೯೮೭ ಜನವರಿಯಲ್ಲಿ ಚುನಾವಣೆಗಳು ನಡೆದು ಈ ಕಾಯ್ದೆ ಜಾರಿಗೆ ಬಂದಿತು.[೩೭] ಇದರ ಪ್ರಕಾರ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪರಿಷತ್ ಮತ್ತು ಕೆಳಮಟ್ಟದಲ್ಲಿ ಮಂಡಲ ಪಂಚಾಯತ್ ಎಂಬ ಎರಡು ಹಂತದ ಚುನಾಯಿತ ಸಂಸ್ಥೆಗಳನ್ನೂ ಹೊಂದುವಂತೆ ಮಾಡಿ ಜೊತೆಗೆ ಇವುಗಳ ಕಾಲಾವಧಿಯನ್ನು ೧೯೭೮ರ ತಿದ್ದುಪಡಿಯ ನಂತರ ಪಂಚಾಯತ್‌ರಾಜ್ ಸಂಸ್ಥೆಗಳ ಕಾಲಾವಧಿಯನ್ನು ೪ ವರ್ಷದಿಂದ ೫ ವರ್ಷಕ್ಕೆ ವಿಸ್ತರಿಸಲಾಯಿತು.[೩೮]

### ಮಂಡಲ ಪಂಚಾಯತ್

೧೯೮೩ರ ಕಾಯಿದೆಯ ಪ್ರಕಾರ ೮೦೦೦ ದಿಂದ ೧೨೦೦೦ ಜನ ಸಂಖ್ಯೆಯುಳ್ಳ ಗ್ರಾಮಗಳನ್ನೊಳಗೊಂಡಂತೆ ಒಂದು ಮಂಡಲ ಪಂಚಾಯತನ್ನು ರೂಪಿಸಲಾಗಿದೆ. ೪೦೦ ಜನರಿಗೆ ಒಬ್ಬ ಸದಸ್ಯನಂತೆ ಜನಸಂಖ್ಯೆಯ ಆಧಾರದ ಮೇಲೆ ಆಯಾ ಮಂಡಲ ಪಂಚಾಯತ್ ಸದಸ್ಯರ ಒಟ್ಟು ಸಂಖ್ಯೆ ನಿರ್ಧಾರವಾಗಿರುತ್ತದೆ. ಇದು ಕೆಲವು ಸಮಿತಿಗಳನ್ನು ರಚಿಸಿಕೊಂಡು ಗ್ರಾಮೀಣಾಭಿವೃದ್ಧಿಯಲ್ಲಿ ಯೋಜನೆಗಳನ್ನು ಕಾರ್ಯಗತಗೊಳಿಸಲು ಕ್ರಮ ಕೈಗೊಳ್ಳಬೇಕಾಗುತ್ತದೆ.

**ತಾಲ್ಲೂಕು ಪಂಚಾಯತ್ ಸಮಿತಿ**

ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಪಂಚಾಯತ್ ಸಮಿತಿಯನ್ನು ಹೊಂದಿದ್ದು ಈ ಸಮಿತಿಯಲ್ಲಿ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಮಂಡಲ ಪಂಚಾಯತ್‌ಗಳ ಪ್ರಧಾನರು ಸದಸ್ಯರಾಗಿರುತ್ತಾರೆ. ಇವರೊಂದಿಗೆ ತಾಲ್ಲೂಕಿನ ವಿಧಾನಸಭಾ ಸದಸ್ಯರು, ತಾಲ್ಲೂಕಿನಿಂದ ಆಯ್ಕೆಯಾದ ಜಿಲ್ಲಾ ಪರಿಷತ್ ಸದಸ್ಯ, ತಾಲ್ಲೂಕು ವ್ಯವಸಾಯೋತ್ಪನ್ನ ಸಹಕಾರಿ ಮಾರುಕಟ್ಟೆ ಸಂಘದ ಅಧ್ಯಕ್ಷರು ಸಹ ಸದಸ್ಯರಾಗಿ ಸಮಿತಿಯಲ್ಲಿ ಇರುತ್ತಾರೆ. ಇವರಲ್ಲದೆ ಸರ್ಕಾರವು ಪರಿಶಿಷ್ಟ ಜಾತಿ ಮತ್ತು ಪಂಗಡದ, ಹಿಂದುಳಿದ ವರ್ಗ ಮತ್ತು ಮಹಿಳೆಯರಲ್ಲಿ ಒಟ್ಟು ೫ ಜನ ಸದಸ್ಯರನ್ನು ನೇಮಕ ಮಾಡಿರುವಂಥವರು ಸದಸ್ಯರಾಗುವರು.[೪] ಹೀಗೆ ಮೇಲಿನವರನ್ನು ಒಳಗೊಂಡಂತೆ ತಾಲ್ಲೂಕು ಪಂಚಾಯತ್ ಸಮಿತಿ ರೂಪುಗೊಂಡಿರುತ್ತದೆ. ಇದರ ಅಧ್ಯಕ್ಷರಾಗಿ ಆಯಾ ಕ್ಷೇತ್ರದ ಶಾಸಕರಾಗಿರುತ್ತಾರೆ. ಒಂದು ವೇಳೆ ಇಬ್ಬರು ಶಾಸಕರನ್ನೊಳಗೊಂಡಿದ್ದರೆ ಹೆಚ್ಚಿನ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯನ್ನು ಹೊಂದಿರುವವರು ಅಧ್ಯಕ್ಷರಾಗುವರು. ಈ ರೀತಿ ರೂಪುಗೊಂಡ ಸಮಿತಿಯು ತಾಲ್ಲೂಕಿನ ವಿವಿಧ ಇಲಾಖೆಗಳ ಕಾರ್ಯಕ್ರಮಗಳನ್ನು ಪರಿಶೀಲಿಸಲು ಹಾಗೂ ಮಾರ್ಗದರ್ಶನ ಮಾಡುವ ಅಧಿಕಾರವನ್ನು ಹೊಂದಿರುತ್ತದೆ.

**ಜಿಲ್ಲಾ ಪರಿಷತ್**

ಜಿಲ್ಲಾ ಮಟ್ಟದಲ್ಲಿ ಹಿಂದಿನ ಜಿಲ್ಲಾ ಅಭಿವೃದ್ಧಿ ಮಂಡಳಿಗೆ ಬದಲಾಗಿ ಜಿಲ್ಲಾ ಪರಿಷತ್ ಅಸ್ತಿತ್ವಕ್ಕೆ ಬಂದಿದೆ. ಇದರ ಸದಸ್ಯರು ನೇರವಾಗಿ ಚುನಾವಣೆಯ ಮೂಲಕ ಆಯ್ಕೆಯಾಗಿ ಬಂದಿರುತ್ತಾರೆ. ಇದು ೨೮,೦೦೦ ಜನ ಸಂಖ್ಯೆಗೆ ಒಬ್ಬ ಸದಸ್ಯನಂತೆ ಆಯಾ ಜಿಲ್ಲಾ ವ್ಯಾಪ್ತಿಯನ್ನು ಬರುವ ಪ್ರದೇಶದ ಜನಸಂಖ್ಯೆಯನ್ನಾಧರಿಸಿ ಒಟ್ಟು ಸದಸ್ಯರ ಸಂಖ್ಯೆಯನ್ನು ಹೊಂದಿರುತ್ತದೆ. ಆಯ್ಕೆಗೊಂಡ ಸದಸ್ಯರಲ್ಲದೆ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ವಿಧಾನಸಭಾ ಮತ್ತು ವಿಧಾನ ಪರಿಷತ್ ಸದಸ್ಯರು ಹಾಗೂ ಲೋಕಸಭಾ ಸದಸ್ಯ, ಅಲ್ಲದೆ ಜಿಲ್ಲಾ ಸಹಕಾರ ಬ್ಯಾಂಕಿನ ಅಧ್ಯಕ್ಷರು ಸಹ ಸದಸ್ಯರಾಗಿರುತ್ತಾರೆ. ಈ ರೀತಿ ಸದಸ್ಯರನ್ನೊಳಗೊಂಡ ಜಿಲ್ಲಾ ಪರಿಷತ್ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಚುನಾಯಿತ ಸದಸ್ಯರಲ್ಲಿ ಯಾರಾದರೂ ಇಬ್ಬರನ್ನು ಚುನಾವಣೆಯ ಮೂಲಕ ನೇಮಕ ಮಾಡಲಾಗುತ್ತದೆ. ಇಂತಹ ಸಂದರ್ಭದಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ ಪ್ರಬಲರಾಗಿರುವ ಪ್ರಭಾವಿತ ವ್ಯಕ್ತಿಗಳು ಮಾತ್ರವೇ ಆಯ್ಕೆಯಾಗಲು ಹೆಚ್ಚು ಅವಕಾಶವಿದೆ ಎನ್ನಬಹುದು. ಹೀಗಾಗಿ ಎಲ್ಲಾ ರೀತಿಯಿಂದಲೂ ಹಿಂದುಳಿದ ಸಮುದಾಯವಾದ ಲಂಬಾಣಿಗರು ಬಳ್ಳಾರಿ ಜಿಲ್ಲೆಗಳ ಜಿಲ್ಲಾ ಪರಿಷತ್ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳಿಗೆ ಆಯ್ಕೆಯಾಗಿರುವುದು ಕಂಡುಬಂದಿಲ್ಲ. ಜಿಲ್ಲಾ ಪರಿಷತ್ ಅನೇಕ ಉಪಸಮಿತಿಗಳನ್ನು ನೇಮಕ ಮಾಡಿಕೊಂಡು ಜಿಲ್ಲೆಯ ವ್ಯವಹಾರ ಮತ್ತು ಅಭಿವೃದ್ಧಿಗಳ ಯೋಜನೆಗಳನ್ನು ಕಾರ್ಯಗತಗೊಳಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಹೀಗೆ ಆಯಾ ಜಿಲ್ಲೆಯಲ್ಲಿ ಮಂಡಲ ಪಂಚಾಯತ್, ತಾಲ್ಲೂಕು ಪಂಚಾಯತ್ ಹಾಗೂ ಜಿಲ್ಲಾ ಪರಿಷತ್‌ಗಳು ಗ್ರಾಮ ಮಟ್ಟದಿಂದ ಜಿಲ್ಲಾ ಮಟ್ಟದವರೆಗಿನ ಆಡಳಿತಕ್ಕೆ ಸಂಬಂಧಿಸಿದಂತೆ ವಿವಿಧ ಇಲಾಖೆಗಳು ಕಾರ್ಯಕ್ರಮವನ್ನು ಗಮನಿಸುವುದರೊಂದಿಗೆ ಸರ್ಕಾರ ಗ್ರಾಮೀಣ ಅಭಿವೃದ್ಧಿಗಾಗಿ ಕೈಗೊಂಡಿರುವ ಯೋಜನೆಗಳನ್ನೂ ಜಾರಿಗೆ ತರುವಲ್ಲಿ ಪ್ರಮುಖ ಪಾತ್ರವಹಿಸಿವೆ. ಇಂತಹ ಅಧಿಕಾರವನ್ನು ಹೊಂದಲು ಅವಕಾಶ

ವಂಚಿತರಾದ ವರ್ಗಗಳಿಗೆ ೧೯೮೩ರ ಕಾಯಿದೆ ಅವಕಾಶ ಮಾಡಿಕೊಟ್ಟಿತು. ಅದರ ಅಧಿನಿಯಮದ ಅನ್ವಯ ೨ ಹಂತದ ಸಂಸ್ಥೆಗಳಲ್ಲಿನ ಸದಸ್ಯರ ಸ್ಥಾನಗಳಲ್ಲಿ ಶೇ ೨೫ರಷ್ಟು ಸ್ಥಾನಗಳು ಮಹಿಳೆಯರಿಗೆ ಮೀಸಲಿರಿಸಿ ಮತ್ತು ಪರಿಶಿಷ್ಟ ಜಾತಿ ಜನಾಂಗಕ್ಕೆ ಶೇ ೧೮ ರಷ್ಟು ಸ್ಥಾನಗಳು ಮತ್ತು ಪರಿಶಿಷ್ಟ ವರ್ಗದವರಿಗೆ ಶೇ ೩ರಷ್ಟು ಸ್ಥಾನಗಳನ್ನು ನೀಡುವುದರ ಮೂಲಕ ಸಾಮಾಜಿಕ ನ್ಯಾಯ ಸಿದ್ಧಾಂತವನ್ನು ಪ್ರತಿಪಾದಿಸಲಾಗಿತ್ತು.[೪೦] ಇದರಿಂದಾಗಿ ಪರಿಶಿಷ್ಟ ಜಾತಿಗೆ ನೀಡಿರುವ ಅವಕಾಶದಲ್ಲಿ ಸ್ಪರ್ಧಿಸುವ ಹಕ್ಕುಗಳನ್ನು ಆ ವರ್ಗದಲ್ಲಿ ಬರುವ ಒಂದು ಪಂಗಡವಾದ ಲಂಬಾಣಿ ಸಮುದಾಯವು ಸಹ ಪಡೆದಿತ್ತು.

ತಾಲ್ಲೂಕು ಪಂಚಾಯತಿ ಸಮಿತಿಯಲ್ಲಿ ತಾಲ್ಲೂಕು ಪಂಚಾಯತಿ ನಿಲುವಳಿ ಮೇರೆಗೆ ಜಿಲ್ಲಾ ಪರಿಷತ್, ಅನುಮೋದಿಸಿದ ಪರಿಶಿಷ್ಟ ಜಾತಿ ಮತ್ತು ಪ.ವರ್ಗ ಹಿಂದುಳಿದ ವರ್ಗ ಮತ್ತು ಮಹಿಳಾ ಸದಸ್ಯರು ನಾಮನಿರ್ದೇಶಕ ಸದಸ್ಯರಾಗಿರುತ್ತಾರೆ.[೪೧] ಇಂತಹ ಸದಂರ್ಭಗಳಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಬರುವ ತಾಲ್ಲೂಕು ಪಂಚಾಯತ್ ಸಮಿತಿಯ ನಾಮನಿರ್ದೇಶನ ಸಂದರ್ಭದಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಲಂಬಾಣಿ ಸಮುದಾಯದ ಕೆಲವರು ನೇಮಕವಾಗಿರುವುದು ಕಡಿಮೆ.

೧೯೮೩ರ ಕಾಯಿದೆ ಮಂಡಲ ಮತ್ತು ಪರಿಷತ್‌ಗಳೆರಡರಲ್ಲಿಯೂ ಸಾಮಾಜಿಕ ನ್ಯಾಯ ಸಮಿತಿಯನ್ನು ಹೊಂದಿರಬೇಕೆಂದು ತಿಳಿಸಿದೆ. ಇದು ಪರಿಶಿಷ್ಟ ಜಾತಿಯ, ಹಿಂದುಳಿದ ಹಾಗೂ ಮಹಿಳೆಯರ ಸಾಮಾಜಿಕ ಆರ್ಥಿಕ, ಶೈಕ್ಷಣಿಕ ಅಭಿವೃದ್ಧಿ ಮತ್ತು ನ್ಯಾಯವನ್ನೂ ದೊರಕುವಂತೆ ನೋಡಿಕೊಳ್ಳುವ ಜವಾಬ್ದಾರಿ ಈ ಸಮಿತಿಗೆ ಇರುತ್ತದೆ. ಈ ಸಾಮಾಜಿಕ ನ್ಯಾಯ ಸಮಿತಿಯಲ್ಲಿ ಮಹಿಳೆ ಮತ್ತು ಪರಿಶಿಷ್ಟ ಜಾತಿ ಮತ್ತು ಪ.ವರ್ಗದ ಸದಸ್ಯರಿರಲೇಬೇಕು.[೪೨] ಎಂಬ ನಿಯಮ ಇರುವುದರಿಂದ ಈ ಸಮಿತಿಗೆ ಪರಿಶಿಷ್ಟ ಜಾತಿಗೆ ಸೇರಿರುವ ಲಂಬಾಣಿ ಸಮುದಾಯದ ಕೆಲವರು ನೇಮಕವಾಗಿರುವುದು ಬಳ್ಳಾರಿ ಜಿಲ್ಲೆಯ ಮಂಡಲ ಮತ್ತು ಜಿಲ್ಲಾ ಪರಿಷತ್‌ಗಳಿಗೆ ಸಾಮಾಜಿಕ ಸಮಿತಿಗೆ ಹಾಗೂ ಆಯ್ಕೆಯಾಗಿರುವುದು ಕಂಡುಬರುತ್ತದೆ. ಹೀಗೆ ಮೀಸಲು ಸ್ಥಾನಗಳ ಮೂಲಕ ಆಯ್ಕೆ ಮತ್ತು ನೇಮಕವಾಗುವುದರ ಮೂಲಕ ಲಂಬಾಣಿಗರ ಸಮುದಾಯದ ರಾಜಕೀಯ ಪ್ರಜ್ಞೆಯನ್ನು ಹೆಚ್ಚಿಸಿಕೊಳ್ಳಲು ಸಾಧ್ಯವಾಗಿದೆ.

ಏಕೀಕರಣ ಚಳುವಳಿಯ ನಂತರದಲ್ಲಿ ಜಾರಿಗೆ ಬಂದ ಪಂಚಾಯತ್ ಕಾಯಿದೆಗಳ ಪ್ರಕಾರ ಸ್ಥಾನಗಳ ಮೀಸಲಾತಿ, ಸಾಮಾಜಿಕ ನ್ಯಾಯ ಸಮಿತಿಗೆ ಪ.ಜಾತಿಯ ಸದಸ್ಯರ ನೇಮಕ ಕಡ್ಡಾಯ. ಈ ಅಂಶಗಳು ಪರಿಶಿಷ್ಟ ಜಾತಿಯವರಲ್ಲಿ ಒಬ್ಬರಾದ ಲಂಬಾಣಿ ಸಮುದಾಯದ ಅನೇಕರು ಮಂಡಲ ಪಂಚಾಯತ್ ಸದಸ್ಯ ಸ್ಥಾನಗಳಿಗೆ ಆಯ್ಕೆಯಾದರು. ಕೆಲವೊಂದು ಭಾಗಗಳಲ್ಲಿ ಮಂಡಲ ಉಪಪ್ರಧಾನರಾಗಿರುವುದು ಇದೆ. ಅಲ್ಲದೆ ಆಯ್ಕೆಯಾದ ಲಂಬಾಣಿ ಸಮುದಾಯದ ಅನೇಕ ಸದಸ್ಯರು ಸಾಮಾಜಿಕ ನ್ಯಾಯ ಸಮಿತಿಯ ಅಧ್ಯಕ್ಷರು ಮತ್ತು ಸದಸ್ಯರು ಸಹ ಆಗಿದ್ದಾರೆ.

೧೯೮೩ರ ಕಾಯಿದೆಯು ಪಂಚಾಯತ್ ವ್ಯವಸ್ಥೆಯಲ್ಲಿ ಎಷ್ಟರಮಟ್ಟಿಗೆ ತನ್ನ ಪ್ರಭಾವವನ್ನು ಬೀರಿದೆ ಮತ್ತು ಅದರ ಕಾರ್ಯ ವಿಧಾನಗಳು ಹಾಗೂ ಸಾಧನೆಗಳ ಬಗ್ಗೆ ತಿಳಿಯಲು ಕೃಷ್ಣಸ್ವಾಮಿಯವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ಸರ್ಕಾರ ನೇಮಕ ಮಾಡಿತು. ಆ ಸಮಿತಿಯು ನೀಡಿರುವ ವರದಿಯಲ್ಲಿ ಮಹಿಳೆಯರು

ಮತ್ತು ಪರಿಶಿಷ್ಟಜಾತಿ ವರ್ಗದ ಸದಸ್ಯರುಗಳು ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಇನ್ನೂ ನಿಖರವಾಗಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಬೇಕು ಮತ್ತು ದೃಢಪಡಿಸಬೇಕು" ಎಂದು ತಿಳಿಸಿದೆ. ಈ ಹಿನ್ನೆಲೆಯಲ್ಲಿ ಮಹಿಳೆಯರನ್ನೊಳಗೊಂಡಂತೆ ಪರಿಶಿಷ್ಟ ಜಾತಿ ವರ್ಗ ಆಯ್ಕೆಗೊಂಡ ಸದಸ್ಯರು ಶಿಕ್ಷಣ ಮತ್ತು ಅನುಭವದ ಕೊರತೆಯಿಂದ ಕೂಡಿರುವುದರ ಜೊತೆಗೆ ಗ್ರಾಮ ಸಭೆಗಳಲ್ಲಿ ಅಥವಾ ಸಭೆಗಳಲ್ಲಿ ಚರ್ಚೆ ಮಾಡುವಾಗ ಸ್ಥಳಿಯ ಮೇಲುಜಾತಿಯ ಜನ ಪ್ರತಿನಿಧಿಗಳೆದುರು ಮಾತನಾಡುವ ಧೈರ್ಯ ತೋರದೆ ಇರುವುದು ಬಳ್ಳಾರಿ ಜಿಲ್ಲೆಯ ಅನೇಕ ಭಾಗಗಳಲ್ಲಿ ಕಂಡುಬರುತ್ತದೆ.

**೧೯೯೩ರ ಕರ್ನಾಟಕ ಪಂಚಾಯತ್ ಕಾಯಿದೆ.**

೧೯೮೩ರ ಕಾಯ್ದೆಯು ಸ್ಥಳಿಯ ಪಂಚಾಯತ್ ಸಂಸ್ಥೆಗಳಿಗೆ ಹೆಚ್ಚಿನ ಅಧಿಕಾರ ಹಾಗೂ ಹೊಣೆಗಾರಿಕೆಯನ್ನು ನೀಡಿದೆ. ಕೇಂದ್ರದಿಂದ ತಳಮಟ್ಟದ ಪಂಚಾಯತ್ ಸಂಸ್ಥೆಯವರೆಗೆ ಅಧಿಕಾರ ಹಂಚಿಕೆಯ ವಿಕೇಂದ್ರಿಕರಣ ಪ್ರಕ್ರಿಯೆಯ ಇದೊಂದು ಮೈಲುಗಲ್ಲು ಎನ್ನಬಹುದು. ಈ ಕಾಯಿದೆಯು ಕೆಳಜಾತಿಗಳು ಸೇರಿದಂತೆ ಹಿಂದುಳಿದ ವರ್ಗ ಹಾಗೂ ಮಹಿಳೆಯರಿಗೆ ಕೆಲವು ಮೀಸಲು ಸ್ಥಾನಗಳನ್ನು ಕಲ್ಪಿಸಿ ಅವಕಾಶ ಮಾಡಿಕೊಟ್ಟಿದೆ. ೧೯೮೩ರ ಅಧಿನಿಯಮವನ್ನು ವ್ಯಾಪಕವಾಗಿ ಬದಲಾಯಿಸಿ ೭೩ನೇ ತಿದ್ದುಪಡಿಗೆ ಅನುಗುಣವಾಗಿ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮವನ್ನು ೧೯೯೩ನ್ನು ಜಾರಿಗೆ ತರಲಾಯಿತು. ಈ ಹೊಸ ಕಾಯಿದೆ ಪ್ರಕಾರ ಪಂಚಾಯತ್ ಸಂಸ್ಥೆಯು ಮೂರು ಹಂತದ ಚುನಾಯಿತ ವ್ಯವಸ್ಥೆಯನ್ನು ಹೊಂದಲಾಯಿತು. ಈ ಕಾಯಿದೆ ಜಾರಿಗೊಂಡು ನಡೆದ ಮೊದಲ ಚುನಾವಣೆಯಲ್ಲಿ ಪಕ್ಷಗಳನ್ನೂ ಆಧರಿಸದೇ ೫೬೪೦ ಗ್ರಾಮ ಪಂಚಾಯತ್‌ಗಳಿಗೆ ೧೯೯೩ರ ಡಿಸೆಂಬರ್‌ನಲ್ಲಿ ಚುನಾವಣೆಗಳನ್ನು ನಡೆಸಿದರೆ ಪಕ್ಷಗಳ ಆಧಾರದ ಮೇಲೆ ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತ್‌ಗಳಿಗೆ ೧೯೯೫ರಲ್ಲಿ ಚುನಾವಣೆಗಳನ್ನು ನಡೆಯಿತು.

**ಗ್ರಾಮ ಪಂಚಾಯತ್**

೧೯೯೩ರ ಕಾಯಿದೆ ಪ್ರಕಾರ ಗ್ರಾಮ ಮಟ್ಟದಲ್ಲಿ ಮಂಡಲ ಪಂಚಾಯತ್‌ಗೆ ಬದಲಾಗಿ ಗ್ರಾಮ ಪಂಚಾಯತ್ ಸ್ಥಾನ ಪಡೆಯಿತು. ೫೦೦೦ ದಿಂದ ೭೦೦೦ ಜನಸಂಖ್ಯೆಯನ್ನು ಹೊಂದಿರುವ ಗ್ರಾಮ ಅಥವಾ ಗ್ರಾಮಗಳ ಸಮೂಹವೊಂದಕ್ಕೆ ಒಂದು ಗ್ರಾಮ ಪಂಚಾಯತಿ ಇರುವಂತೆ ಸೂಚಿಸಿತು.

**ತಾಲ್ಲೂಕು ಪಂಚಾಯತ್**

ಎರಡನೆಯ ಹಂತದಲ್ಲಿ ಬರುವ ತಾಲ್ಲೂಕು ಪಂಚಾಯತ್ ೧೦೦೦ ಜನಸಂಖ್ಯೆಗೆ ಒಬ್ಬರು ಸದಸ್ಯರನ್ನು ಚುನಾಯಿಸಬೇಕೆಂದು ತಿಳಿಸಿತು. ಇದರ ವ್ಯಾಪ್ತಿಯಲ್ಲಿ ಬರುವ ಪಟ್ಟಣ ಪಂಚಾಯತ್, ಪುರಸಭೆ ಹಾಗೂ ನಗರ ಸಭೆಗಳ ವ್ಯಾಪ್ತಿಗೆ ಬರುವ ಪ್ರದೇಶಗಳನ್ನು ಹೊರತುಪಡಿಸಿ ಉಳಿದಂತೆ ಪ್ರದೇಶಗಳ ಜನಸಂಖ್ಯೆಯನ್ನು ಆದರಿಸಿ ಒಟ್ಟು ಸದಸ್ಯರ ಸಂಖ್ಯೆ ನಿರ್ಧರಿತವಾಗುತ್ತಿತ್ತು. ಆಯ್ಕೆಗೊಂಡ ಸಂದಸ್ಯರಲ್ಲದೆ ಸ್ಥಳೀಯ ವಿಧಾನಸಭಾ ಸದಸ್ಯ ಮತ್ತು ಲೋಕಸಭಾ ಸದಸ್ಯರು ಹಾಗೂ ವಿಧಾನ ಪರಿಷತ್ ಮತ್ತು ರಾಜ್ಯಸಭಾ ಸದಸ್ಯರು ಸಹ ಈ ತಾಲ್ಲೂಕು ಪಂಚಾಯತಿಯ ಸದಸ್ಯತ್ವವನ್ನು ಪಡೆದಿದ್ದರು.

## ಜಿಲ್ಲಾ ಪರಿಷತ್

ಮೂರನೆಯ ಹಂತದಲ್ಲಿ ಜಿಲ್ಲಾ ಪರಿಷತ್‌ಗೆ ೪೦,೦೦೦ ಜನಸಂಖ್ಯೆಗೆ ಒಬ್ಬರಂತೆ ಸದಸ್ಯರನ್ನು ಆಯ್ಕೆ ಮಾಡಲಾಗುವುದು. ರಾಜ್ಯದ ಕೆಲವೊಂದು ಭಾಗಗಳಲ್ಲಿ ಅದರ ಸಂಖ್ಯೆ ಕಡಿಮೆಯಾಗಿರುವುದನ್ನು ಕಾಣಬಹುದು. ಜಿಲ್ಲಾ ಪರಿಷತ್‌ನಲ್ಲಿ ಆಯ್ಕೆಗೊಂಡ ವಿಧಾನಸಭಾ ಮತ್ತು ಲೋಕಸಭೆ ಸದಸ್ಯರು ಅಲ್ಲದೇ ವಿಧಾನ ಪರಿಷತ್ ಹಾಗೂ ರಾಜ್ಯಸಭಾ ಸದಸ್ಯರನ್ನೊಳಗೊಂಡಂತೆ ಜಿಲ್ಲಾ ಪರಿಷತ್ ಅಸ್ತಿತ್ವಕ್ಕೆ ಬಂದಿತ್ತು.

ಈ ಮೇಲಿನ ಮೂರು ಹಂತದ ಸಂಸ್ಥೆಗಳ ಸದಸ್ಯರು ನೇರವಾಗಿ ಚುನಾವಣೆಯ ಮೂಲಕವೇ ಆರಿಸಿ ಬರಬೇಕೆಂದು ೧೯೯೩ರ ಕಾಯಿದೆ ತಿಳಿಸಿದೆ. ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಆಯಾ ಪಂಚಾಯತ್ ಪ್ರದೇಶದಲ್ಲಿ ಅವರವರ ಜನಸಂಖ್ಯೆ ಪ್ರಮಾಣಕ್ಕನುಗುಣವಾಗಿ ಸ್ಥಾನಗಳ ಮೀಸಲಾತಿ ನೀಡಬೇಕೆಂದು ಕಾಯಿದೆ ತಿಳಿಸಿದ್ದು ಆ ಪ್ರಕಾರ ಶೇ ೩೩.೩ ಸ್ಥಾನಗಳನ್ನು ಇತರೆ ಹಿಂದುಳಿದ ಜಾತಿ ವರ್ಗಗಳಿಗೂ, ೧೫ ಸ್ಥಾನಗಳನ್ನು ಪರಿಶಿಷ್ಟ ಜಾತಿಯವರಿಗೂ, ೩ ಸ್ಥಾನಗಳನ್ನು ಪರಿಶಿಷ್ಟ ವರ್ಗದವರಿಗೂ ಮೀಸಲಾಗಿ ನೀಡಲಾಯಿತು. ಜೊತೆಗೆ ಮಹಿಳೆಯರಿಗೂ ಸಹ ಪ್ರತಿ ವರ್ಗದಲ್ಲಿನ ಸದಸ್ಯರ ಸಂಖ್ಯೆಯಲ್ಲಿನ ಮೂರನೇ ಒಂದು ಭಾಗಕ್ಕಿಂತ ಕಡಿಮೆ ಇಲ್ಲದಷ್ಟು ಸ್ಥಾನಗಳು ಮತ್ತು ಹುದ್ದೆಗಳನ್ನು ಆಯಾ ವರ್ಗದ ಮಹಿಳೆಯರಿಗೆ ಮೀಸಲಿಡುವುದು ಒಳಗೊಂಡಂತೆ ಶೇ ೩೩.೩ ಸ್ಥಾನಗಳನ್ನು ಮಹಿಳೆಯರಿಗಾಗಿ ಮೀಸಲಿಡಲಾಯಿತು. ಇದರಿಂದಾಗಿ ಪರಿಶಿಷ್ಟ ಜಾತಿಯ ಸ್ಥಾನಗಳಿಗೆ ಲಂಬಾಣಿ ಸಮುದಾಯವು ಸ್ಪರ್ಧಿಸಲು ಅವಕಾಶ ಇರುವುದರಿಂದ ಅನೇಕ ಕಡೆಗಳಲ್ಲಿ ಲಂಬಾಣಿ ಸಮುದಾಯದ ಮಹಿಳೆಯರು, ಪುರುಷರು ಆಯ್ಕೆಯಾಗಲು ಸಾಧ್ಯವಾಯಿತು.

೧೯೯೩ರ ಕಾಯಿದೆ ಕೈಗೊಂಡ ಮಹತ್ತರವಾದ ಕ್ರಮವೆಂದರೆ ಗ್ರಾಮ ಪಂಚಾಯತ್, ತಾಲ್ಲೂಕು ಪಂಚಾಯತ್ ಹಾಗೂ ಜಿಲ್ಲಾ ಪರಿಷತ್ ಈ ಎಲ್ಲಾ ಹಂತದಲ್ಲಿನ ಅಧ್ಯಕ್ಷ ಅಥವಾ ಉಪಾಧ್ಯಕ್ಷರ ಹುದ್ದೆಗಳಿಗೂ ಸಹ ಮೀಸಲಾತಿಯ ಆವರ್ತನ ಪದ್ಧತಿಯಲ್ಲಿ ಅನ್ವಯಿಸಬೇಕೆಂದು ತಿಳಿಸಿರುವುದು ಪರಿಶಿಷ್ಟ ಜಾತಿ ವರ್ಗ, ಹಿಂದುಳಿದ ವರ್ಗ ಹಾಗೂ ಮಹಿಳೆಯರು ಸಾಮಾಜಿಕ ಹಿನ್ನೆಲೆಯಲ್ಲಿ ಅಧ್ಯಕ್ಷ ಮತ್ತು ಉಪಾಧ್ಯಕ್ಷರಂತಹ ಮಹತ್ವದ ಸ್ಥಾನಗಳಿಗೆ ನೇಮಕವಾಗುತ್ತಿರಲಿಲ್ಲ. ಈ ಹಿನ್ನೆಲೆಯಲ್ಲಿ ಆ ಸ್ಥಾನಗಳಿಗೂ ಮೀಸಲಾತಿ ನೀತಿಯು ಅನ್ವಯವಾಗುವಂತೆ ಮಾಡಿದುದು ಅಂತಹ ಸ್ಥಾನಗಳು ಕನಸೆಂದು ಭಾವಿಸಿದವರಿಗೆ ಅವಕಾಶ ಸಿಗುವಂತೆ ಮಾಡಿದೆ. ಈ ರೀತಿ ಅಧ್ಯಕ್ಷ ಹಾಗೂ ಉಪಾಧ್ಯಕ್ಷ ಸ್ಥಾನಗಳಿಗೆ ನೀಡಿರುವ ಮೀಸಲಾತಿ ಕುರಿತು ಕರ್ನಾಟಕದ ಮೂಲೆ ಮೂಲೆಗಳಲ್ಲೂ ಮೇಲ್ಜಾತಿ ಜನರಿಂದ ಪ್ರತಿಭಟನೆ ವ್ಯಕ್ತವಾಗಿದೆ.

೧೯೯೩ರ ಪಂಚಾಯತ್ ಕಾಯಿದೆಯ ಕೆಲವೊಂದು ಬದಲಾವಣೆ ಮಾಡಿದ ಅನಂತರ ಮೊದಲ ಚುನಾವಣೆಯಲ್ಲಿ ಪರಿಶಿಷ್ಟ ಜಾತಿಯ ಲಂಬಾಣಿಗರ ಸಮುದಾಯದ ಅನೇಕ ಗ್ರಾಮ ಪಂಚಾಯತ್, ತಾಲ್ಲೂಕು ಪಂಚಾಯತ್ ಹಾಗೂ ಜಿಲ್ಲಾ ಪಂಚಾಯತ್‌ಗಳಿಗೆ ಆಯ್ಕೆಯಾಗಿರುವುದು ಕಂಡುಬರುತ್ತದೆ.

ಬಳ್ಳಾರಿ ಜಿಲ್ಲೆಯಲ್ಲಿ ವಿವಿಧ ತಾಲ್ಲೂಕುಗಳ ವ್ಯಾಪ್ತಿಯಲ್ಲಿ ಬರುವ ಪಂಚಾಯತಿಗಳಿಗೆ ಆಯ್ಕೆಯಾದ ಲಂಬಾಣಿ ಸಮುದಾಯದ ಸದಸ್ಯ ಸಂಖ್ಯೆ ಹೀಗಿದೆ.

| ಕ್ರ ಸಂ | ತಾಲ್ಲೂಕು | ಪ.ಜಾತಿ | ಲಂಬಾಣಿಗರು | |
|---|---|---|---|---|
| | | | ಪುರುಷರು | ಮಹಿಳೆಯರು |
| ೧ | ಬಳ್ಳಾರಿ | ೧೩೭ | ೨೭ | ೨೦ |
| ೨ | ಸಿರುಗುಪ್ಪ | ೮೭ | ೧೧ | ೭ |
| ೩ | ಹೊಸಪೇಟೆ | ೭೨ | ೩೦ | ೧೨ |
| ೪ | ಹಗರಿ ಬೊಮ್ಮನಹಳ್ಳಿ | ೯೨ | ೪೦ | ೨೦ |
| ೫ | ಹೂವಿನ ಹಡಗಲಿ | ೮೧ | ೪೧ | ೧೫ |
| ೬ | ಕೂಡ್ಲಿಗಿ | ೯೮ | ೨೮ | ೨೯ |
| ೭ | ಸಂಡೂರು | ೯೪ | ೧೦ | ೧೧ |
| | ಒಟ್ಟು | ೬೪೧ | ೧೮೧ | ೧೦೯ |

ಪರಿಶಿಷ್ಟ ಜಾತಿಗೆ ಮೀಸಲಾದ ಒಟ್ಟು ೬೪೧ ಗ್ರಾಮ ಪಂಚಾಯಿತಿ ಸದಸ್ಯರಲ್ಲಿ ಲಂಬಾಣಿ ೨೯೦ ಸದಸ್ಯರನ್ನು ಹೊಂದಿದ್ದು ಅದರಲ್ಲಿ ೧೮೧ ಜನ ಪುರುಷರು ಮತ್ತು ೧೦೯ ಜನ ಮಹಿಳೆಯರು ಆಯ್ಕೆಯಾಗಿರುವುದು ಕಂಡುಬರುತ್ತದೆ. ಬಳ್ಳಾರಿ, ಸಿರುಗುಪ್ಪ ತಾಲ್ಲೂಕನ್ನು ಹೊರತುಪಡಿಸಿದರೆ ಉಳಿದೆಲ್ಲಾ ತಾಲ್ಲೂಕು, ಗ್ರಾಮ ಪಂಚಾಯಿತಿಗಳ ಚುನಾಯಿತರಾದ ಪರಿಶಿಷ್ಟ ಜಾತಿಯ ಸದಸ್ಯರಲ್ಲಿ ಲಂಬಾಣಿಗರ ಪ್ರಮಾಣ ಸ್ವಲ್ಪಮಟ್ಟಿಗೆ ಹೆಚ್ಚಿದೆ. ಈ ತಾಲ್ಲೂಕಿನಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಮಾದಿಗರು, ಹರಿಜನ ಇತ್ಯಾದಿ ಸಮುದಾಯ ಪಡೆದುಕೊಂಡಿದೆ. ಈ ಅಂಕಿಅಂಶಗಳು ಪುರುಷರಷ್ಟು ಸ್ತ್ರೀಯರು ರಾಜಕೀಯ ಪ್ರಾತಿನಿಧ್ಯ ಪಡೆದಿರುವುದಿಲ್ಲ ಎಂದು ತಿಳಿಸುತ್ತದೆ. ಅಲ್ಲದೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳಿಗೆ ಮೀಸಲು ಸೌಲಭ್ಯ ಕಲ್ಪಿಸಿಕೊಟ್ಟಿದ್ದರಿಂದ ಈ ಸಮುದಾಯದ ಪುರುಷ ಮತ್ತು ಮಹಿಳೆಯರು ಕೆಲವೊಂದು ಭಾಗಗಳಲ್ಲಿ ಈ ಸ್ಥಾನಗಳನ್ನು ಪಡೆದಿರುವುದು ಕಂಡುಬರುತ್ತದೆ. ಅಂತಹ ಸ್ಥಾನಗಳಿಗೆಲ್ಲ ಹೆಚ್ಚಿನ ಪ್ರಮಾಣದಲ್ಲಿ ಲಂಬಾಣೇತರನ್ನು ಆಯ್ಕೆ ಮಾಡಲಾಗಿದೆ.

ತಾಲ್ಲೂಕು ಪಂಚಾಯತಿಗೆ ಸಂಬಂಧಿಸಿದಂತೆ ಬಳ್ಳಾರಿ ಜಿಲ್ಲೆಯಲ್ಲಿ ತಾಲ್ಲೂಕುವಾರು ವಿವಿಧ ಮೀಸಲು ಕ್ಷೇತ್ರಗಳಿಂದ ಆಯ್ಕೆಯಾದ ಸದಸ್ಯರ ಅಂಕಿಸಂಖ್ಯೆ ಈ ರೀತಿ ಇದೆ. ಬಳ್ಳಾರಿ ತಾಲ್ಲೂಕಿನ ಪರಿಶಿಷ್ಟ ಜಾತಿಯ ಒಟ್ಟು ೧೧ ಸದಸ್ಯ ಸ್ಥಾನಗಳಿಗೆ ನಡೆದ ಚುನಾವಣೆಯಲ್ಲಿ ಲಂಬಾಣಿ ಜನಾಂಗದ ಮೂರು ಸದಸ್ಯರು ಮಾತ್ರವೇ ಆಯ್ಕೆಯಾಗಿದ್ದಾರೆ. ಹೆಚ್ಚಿನ ಸ್ಥಾನಗಳನ್ನು ಲಂಬಾಣೇತರ ಸಮುದಾಯ ಪಡೆದುಕೊಂಡಿದೆ. ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿಯ ೮ ಜನ ಸದಸ್ಯರಲ್ಲಿ ಲಂಬಾಣಿ ಜನಾಂಗದವರು (೩) ಜನ ಆಯ್ಕೆಯಾಗಿದ್ದು ಹೆಚ್ಚಿನ ಪ್ರಮಾಣದಲ್ಲಿ ಲಂಬಾಣೇತರರು ಪಡೆದುಕೊಂಡಿರುವುದು ಕಂಡು ಬರುತ್ತದೆ. ಕೂಡ್ಲಿಗಿ ತಾಲ್ಲೂಕಿನ ಪರಿಶಿಷ್ಟ ಜಾತಿಯ ೩ ಸದಸ್ಯರಲ್ಲಿ ಮೂಕನಡುಕ ಕ್ಷೇತ್ರದಿಂದ ಲಂಬಾಣಿ ಸಮುದಾಯದ ಅಮ್ಮಿನ ಬಾಯಿ ಚಂದ್ರನಾಯ್ಕನವರು ಆಯ್ಕೆಯಾಗಿದ್ದು, ಇನ್ನುಳಿದ ದುಪ್ಪದಹಳ್ಳಿ ಮತ್ತು ತೂಲಹಳ್ಳಿ ಕ್ಷೇತ್ರದಿಂದ ಮಾದಿಗ ಸಮುದಾಯದ ದೊಡ್ಡರಾಮಪ್ಪ ಮತ್ತು ಸುಶೀಲಮ್ಮನವರು ಆಯ್ಕೆಯಾಗಿದ್ದಾರೆ. ಸಂಡೂರು ತಾಲ್ಲೂಕಿನಲ್ಲಿ

ಪರಿಶಿಷ್ಟ ಜಾತಿಯ ೪ ಸ್ಥಾನಗಳಲ್ಲಿ ಲಂಬಾಣಿ ಜನಾಂಗದ ಒಬ್ಬರು, ಮಾದಿಗರ ಸಮುದಾಯದಿಂದ ಇಬ್ಬರು ಮತ್ತು ಭೋವಿ ಸಮುದಾಯದಿಂದ ಒಬ್ಬ, ಆಯ್ಕೆಯಾಗಿರುವುದು ಕಂಡುಬರುತ್ತದೆ. ಸಿರುಗುಪ್ಪ ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿಯ ೩ ಸ್ಥಾನಗಳಲ್ಲಿ ಮಾದಿಗ ಜನಾಂಗದವರೇ ಚುನಾಯಿತರಾಗಿದ್ದಾರೆ. ಇಲ್ಲಿ ಲಂಬಾಣಿಗರು ಚುನಾಯಿತರಾಗಿರುವುದಿಲ್ಲ. ಹೊಸಪೇಟೆ ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿಯ ೪ ಸ್ಥಾನಗಳಲ್ಲಿ ಒಂದು ಕ್ಷೇತ್ರದಲ್ಲಿ ಮಾತ್ರ ಲಂಬಾಣಿಗರು ಚುನಾಯಿತರಾಗಿದ್ದಾರೆ. ಉಳಿದ ಮೂರು ಕ್ಷೇತ್ರದಿಂದ ಮಾದಿಗ ಸಮುದಾಯದವರು ಆಯ್ಕೆಯಾಗಿದ್ದಾರೆ. ಕೆಲವೊಂದು ತಾಲ್ಲೂಕುಗಳಲ್ಲಿ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳನ್ನೂ ಲಂಬಾಣೇತರ ಸದಸ್ಯರು ಪಡೆದುಕೊಂಡಿರುವುದು ಕಂಡುಬರುತ್ತದೆ. ಕೂಡ್ಲಿಗಿ ತಾಲ್ಲೂಕು ಪಂಚಾಯತ್ ಅಧ್ಯಕ್ಷರಾಗಿ ಜನತಾದಳದ ಚಿಕ್ಕಜೋಗಿನಹಳ್ಳಿ ತಾಂಡದ ಅಮ್ಮಿನಬಾಯಿ ಅವರ ೩೦ ತಿಂಗಳ ಅವಧಿಯವರೆಗೆ ಇದ್ದರು.[೯೧]

ಜಿಲ್ಲಾ ಪಂಚಾಯತ್‌ಗೆ ನಡೆದ ಚುನಾವಣೆಯಲ್ಲಿ ೧೯೯೫ ಬಳ್ಳಾರಿ ಜಿಲ್ಲೆಯಲ್ಲಿ ಲಂಬಾಣಿ ಸಮುದಾಯ ಕೆಲವರು ಚುನಾಯಿತರಾಗಿರುವುದು ಕಂಡು ಬರುತ್ತದೆ.

ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ೩೮ ಸ್ಥಾನಗಳಲ್ಲಿ ೮ ಸ್ಥಾನಗಳು ಪರಿಶಿಷ್ಟ ಜಾತಿಗೆ ಮೀಸಲು ಸ್ಥಾನಗಳನ್ನು ಇಡಲಾಗಿದ್ದು ಅವುಗಳಲ್ಲಿ ಮೂರು ಸ್ಥಾನಗಳಲ್ಲಿ ಲಂಬಾಣಿಗರು, ಭೋವಿ ಅಥವಾ ವಡ್ಡರ ೨, ಮಾದಿಗರು ೩ ಸ್ಥಾನ ಪಡೆದುಕೊಂಡಿರುವುದು ಕಂಡು ಬರುತ್ತದೆ.[೯೨]

ಈ ಮೇಲಿನ ಅಂಶಗಳು ಗ್ರಾಮ ಮಟ್ಟದಿಂದ ಜಿಲ್ಲಾ ಮಟ್ಟದವರೆಗಿನ ರಾಜಕೀಯ ಪ್ರಾತಿನಿಧಿಕ ಸಂಸ್ಥೆಗಳಲ್ಲಿ ಲಂಬಾಣಿ ಸಮುದಾಯದ ಅನೇಕರು ಚುನಾಯಿತರಾಗಿರುವುದನ್ನು ಸ್ಪಷ್ಟಪಡಿಸುತ್ತದೆ. ಆದರೆ ಸಂಖ್ಯೆ ದೃಷ್ಟಿಯಿಂದ ನೋಡಿದರೆ ಲಂಬಾಣಿಗರಿಗೆ ಸಿಕ್ಕಿರುವ ಪ್ರಾತಿನಿಧ್ಯ ಕಡಿಮೆ ಎನ್ನಬಹುದು. ಅಲ್ಲದೇ ಗ್ರಾಮ ಮಟ್ಟದಿಂದ ಜಿಲ್ಲಾ ಮಟ್ಟದವರೆಗೆ ಮೀಸಲಿಟ್ಟ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳಿಗೆ ಆಯ್ಕೆ ಮಾಡುವಾಗ ಹಲವು ಕಡೆ ಅವಕಾಶದಿಂದ ವಂಚಿತರಾಗಿರುವ ಉದಾಹರಣೆಗಳು ಕಂಡುಬರುತ್ತವೆ. ಬಳ್ಳಾರಿ ಜಿಲ್ಲೆಯಲ್ಲಿ ಜಿಲ್ಲಾ ಪಂಚಾಯತ್ ಅಧ್ಯಕ್ಷ ಸ್ಥಾನಕ್ಕೆ ಪೈಪೋಟಿ ನಡೆದಾಗ ಲಂಬಾಣೇತರರನ್ನು ಆಯ್ಕೆ ಮಾಡಿರುವುದು ಇದೆ. ಬಳ್ಳಾರಿ ಜಿಲ್ಲೆಯಲ್ಲಿ ಅಧ್ಯಕ್ಷ ಅಥವಾ ಉಪಾಧ್ಯಕ್ಷ ಸ್ಥಾನಗಳಿಗೆ ಆಯ್ಕೆ ನಡೆಯುವಾಗ ಮೊದಲ ಆದ್ಯತೆ ಲಂಬಾಣಿಗರಿಗೆ ನೀಡುತ್ತದೆ. ಅಸ್ಪೃಶ್ಯರ ಮಧ್ಯೆ ಆಯ್ಕೆ ಪ್ರಶ್ನೆ ಬಂದಾಗ ಲಂಬಾಣೇತರ ಜಾತಿಯನ್ನು ಸೂಚಿಸಿರುವಂಥ ಘಟನೆಗಳು ಕಂಡುಬರುತ್ತದೆ.

**೨೦೦೦ರಲ್ಲಿ ನಡೆದ ಗ್ರಾಮ, ತಾಲ್ಲೂಕು ಹಾಗೂ ಜಿಲ್ಲಾ ಪಂಚಾಯತ್ ಚುನಾವಣೆ**

೧೯೯೭ರಲ್ಲಿ ಹೊಸ ಜಿಲ್ಲೆಗಳ ರಚನೆಯಿಂದಾಗಿ ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿದ್ದ ಹರಪನಹಳ್ಳಿ ತಾಲ್ಲೂಕು ದಾವಣಗೆರೆ ಜಿಲ್ಲೆಗೆ ಸೇರ್ಪಡೆಯಾಗಿದ್ದರಿಂದ ಜಿಲ್ಲಾ ಪ್ರಾತಿನಿಧಿಕ ಸ್ಥಾನಗಳು ಕಡಿಮೆಯಾದವು. ಅನಂತರದಲ್ಲಿ ನಡೆದ ೨೦೦೦ನೇ ಸಾಲಿನ ಚುನಾವಣೆಯಲ್ಲಿ ಈ ಬಳ್ಳಾರಿ ಜಿಲ್ಲೆಯಲ್ಲಿ ಲಂಬಾಣಿ ಸಮುದಾಯದ ಅನೇಕರು ಗ್ರಾಮ ಪಂಚಾಯತ್, ತಾಲ್ಲೂಕು ಪಂಚಾಯತ್ ಹಾಗೂ ಜಿಲ್ಲಾ ಪಂಚಾಯತ್ ಸದಸ್ಯರಾಗಿ ಚುನಾಯಿತರಾಗಿರುವುದು ಕಂಡುಬರುತ್ತದೆ. ಈ ಸಂಬಂಧ ದೊರೆತ ಅಂಕಿಅಂಶಗಳನ್ನು ಇಲ್ಲಿ ವಿವರಿಸಲಾಗಿದೆ.

ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ವಿವಿಧ ತಾಲ್ಲೂಕುಗಳಲ್ಲಿನ ಗ್ರಾಮ ಪಂಚಾಯತ್‌ಗಳಿಗೆ ಲಂಬಾಣಿಗರ ಸಮುದಾಯದ ಅನೇಕರು ಆಯ್ಕೆಯಾಗಿರುವುದನ್ನು ಈ ಕೆಳಗಿನ ಅಂಕಿ-ಅಂಶಗಳು ಸಾಬೀತು ಪಡಿಸುತ್ತದೆ.

| ಕ್ರ.ಸಂ | ತಾಲ್ಲೂಕು | ಪ.ಜಾತಿ | ಲಂಬಾಣಿಗರು | |
|---|---|---|---|---|
| | | | ಪುರುಷರು | ಸ್ತ್ರೀಯರು |
| ೧ | ಬಳ್ಳಾರಿ | ೧೦೮ | ೨೦ | ೨೧ |
| ೨ | ಸಿರಗುಪ್ಪ | ೬೯ | ೧೫ | ೧೦ |
| ೩ | ಹೊಸಪೇಟೆ | ೮೩ | ೨೮ | ೨೨ |
| ೪ | ಸಂಡೂರು | ೬೫ | ೧೦ | ೬ |
| ೫ | ಕೂಡ್ಲಿಗಿ | ೧೦೪ | ೩೪ | ೧೮ |
| ೬ | ಹಡಗಲಿ | ೮೨ | ೪೨ | ೧೮ |
| ೭ | ಹ.ಬೊ.ಹಳ್ಳಿ | ೫೫ | ೨೦ | ೨೧ |
| | ಒಟ್ಟು | ೫೬೬ | ೧೬೬ | ೧೧೬ |

ಬಳ್ಳಾರಿ ಜಿಲ್ಲೆಯ ತಾಲ್ಲೂಕು ಪಂಚಾಯತಿಗಳಲ್ಲಿ ಲಂಬಾಣಿ ಸಮುದಾಯದ ಅನೇಕರು ಚುನಾಯಿತರಾಗಿರುವುದು ಕಂಡುಬರುತ್ತದೆ. ಬಳ್ಳಾರಿ ತಾಲ್ಲೂಕಿನಲ್ಲೂ ಮೀಸಲಿಟ್ಟಿರುವ ೫ ಸ್ಥಾನಗಳಲ್ಲಿ ಒಬ್ಬರು ಚುನಾಯಿತರಾಗಿದ್ದಾರೆ. ಸಿರಗುಪ್ಪ ೩ ಸ್ಥಾನಗಳಲ್ಲಿ ಒಬ್ಬರು, ಹಡಗಲಿಯಲ್ಲಿ ೩ ಸ್ಥಾನ, ಹಗರಿಬೊಮ್ಮನಹಳ್ಳಿ ೨ ಸ್ಥಾನ, ಸಂಡೂರು, ಹೊಸಪೇಟೆ ಮತ್ತು ಕೂಡ್ಲಿಗಿ ತಾಲ್ಲೂಕುಗಳಲ್ಲಿ ಈ ಸಮುದಾಯದವರು ಆಯ್ಕೆಯಾಗಿರುವುದು ಕಂಡು ಬರುವುದಿಲ್ಲ.

೨೦೦೦ ನೇ ಸಾಲಿನಲ್ಲಿ ನಡೆದ ಜಿಲ್ಲಾ ಪಂಚಾಯತ್ ಚುನಾವಣೆಯಲ್ಲಿ ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದಂತೆ ಲಂಬಾಣಿಗರು ಕೆಲವರು ವಿವಿಧ ಪಕ್ಷದಿಂದ ಜಿಲ್ಲಾ ಪಂಚಾಯತ್ ಸದಸ್ಯರಾಗಿ ಚುನಾಯಿತರಾಗಿದ್ದಾರೆ. ಜಿಲ್ಲೆಯ ಒಟ್ಟು ೩೨ ಸ್ಥಾನಗಳಲ್ಲಿ ೭ ಸ್ಥಾನಗಳು ಪರಿಶಿಷ್ಟ ಜಾತಿಗೆ ಮೀಸಲಿಟ್ಟದ್ದು ಅವುಗಳಲ್ಲಿ ೩ ಸ್ಥಾನ ಮಹಿಳೆಯರಿಗಿದೆ. ಇವುಗಳಲ್ಲಿ ಇಟ್ಟಿಗಿ ಕ್ಷೇತ್ರದಿಂದ ಲಂಬಾಣಿ ಸಮುದಾಯದ ಎಸ್. ದೂದನಾಯ್ಕ್ ಚುನಾಯಿತರಾಗಿದ್ದಾರೆ.[೫೩] ಉಳಿದಂತೆ ಬೋವಿ ೨, ೪ ಮಾದಿಗ ಜನಾಂಗದ ಸದಸ್ಯರು ಚುನಾಯಿತರಾಗಿದ್ದಾರೆ. ಈ ರೀತಿಯಲ್ಲಿ ಗ್ರಾಮ ಪಂಚಾಯತ್, ತಾಲ್ಲೂಕು ಪಂಚಾಯತ್ ಹಾಗೂ ಜಿಲ್ಲಾ ಪಂಚಾಯತ್ ಸ್ಥಾನಗಳಿಗೆ ನಡೆದ ಚುನಾವಣೆಯಲ್ಲಿ ಪರಿಶಿಷ್ಟ ಜಾತಿಗೆ ಮೀಸಲಿಸಿದ್ದ ೫೬೬ ಸದಸ್ಯ ಸ್ಥಾನಗಳಲ್ಲಿ ಈ ಸಮುದಾಯವು ೨೮೫ ಜನ ಸದಸ್ಯತ್ವವನ್ನು ಪಡೆದಿದ್ದಾರೆ. ಅವರಲ್ಲಿ ೧೬೯ ಪುರುಷರು ಮತ್ತು ೧೧೬ ಮಹಿಳೆಯರು ಇದ್ದಾರೆ. ಬಳ್ಳಾರಿ, ಹೊಸಪೇಟೆ, ಸಿರುಗುಪ್ಪ ತಾಲ್ಲೂಕಿನ ವ್ಯಾಪ್ತಿಯಲ್ಲಿರುವ ಗ್ರಾಮ ಪಂಚಾಯತ್ ಸ್ಥಾನಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಮಾದಿಗ

ಸಮುದಾಯದವರು ಪಡೆದುಕೊಂಡಿದೆ. ಈ ತಾಲ್ಲೂಕು ಹೊರತುಪಡಿಸಿ ಉಳಿದೆಲ್ಲಾ ತಾಲ್ಲೂಕುಗಳ ಗ್ರಾಮ ಪಂಚಾಯತಿಗಳಲ್ಲಿ ಪರಿಶಿಷ್ಟ ಜಾತಿಯ ಇತರೆ ಜಾತಿಗಳಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಲಂಬಾಣಿಗರೇ ಪಡೆದುಕೊಂಡಿರುವುದನ್ನು ಮೇಲಿನ ಅಂಕಿ ಅಂಶಗಳು ಸ್ಪಷ್ಟಪಡಿಸುತ್ತವೆ. ಕೆಲವು ಗ್ರಾಮ ಪಂಚಾಯತಿಗಳಲ್ಲಿ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳನ್ನು ಸಹ ಹೊಂದಿದ್ದಾರೆ.

**೨೦೦೬ ರಲ್ಲಿ ನಡೆದ ಗ್ರಾಮ, ತಾಲ್ಲೂಕು ಹಾಗೂ ಜಿಲ್ಲಾ ಪಂಚಾಯತ್‌ಗಳ ಚುನಾವಣೆ**

ಬಳ್ಳಾರಿ ಜಿಲ್ಲೆಯಲ್ಲಿ ನಡೆದ ೨೦೦೬ನೇ ಸಾಲಿನ ಚುನಾವಣೆಯಲ್ಲಿ ಲಂಬಾಣಿ ಸಮುದಾಯದವರು ಅನೇಕ ಗ್ರಾಮ ಪಂಚಾಯತ್, ತಾಲ್ಲೂಕು ಪಂಚಾಯತ್ ಹಾಗೂ ಜಿಲ್ಲಾ ಪಂಚಾಯತ್ ಸದಸ್ಯರಾಗಿ ಚುನಾಯಿತರಾಗಿರುವುದು ಕಂಡುಬರುತ್ತದೆ. ಈ ಸಂಬಂಧ ದೊರೆತ ಅಂಕಿ ಅಂಶಗಳನ್ನು ಇಲ್ಲಿ ವಿವರಿಸಲಾಗಿದೆ.

| ಕ್ರ.ಸಂ | ತಾಲ್ಲೂಕು | ಪ.ಜಾತಿ | ಲಂಬಾಣಿಗರು | |
|---|---|---|---|---|
| | | | ಪುರುಷರು | ಸ್ತ್ರೀಯರು |
| ೧ | ಬಳ್ಳಾರಿ | ೧೨೦ | ೨೮ | ೨೩ |
| ೨ | ಸಿರಗುಪ್ಪ | ೭೦ | ೧೦ | ೧೧ |
| ೩ | ಹೊಸಪೇಟೆ | ೮೫ | ೨೫ | ೨೨ |
| ೪ | ಸಂಡೂರು | ೭೨ | ೨೦ | ೧೩ |
| ೫ | ಕೂಡ್ಲಿಗಿ | ೧೧೧ | ೩೦ | ೧೮ |
| ೬ | ಹಡಗಲಿ | ೯೪ | ೩೩ | ೨೧ |
| ೭ | ಹ,ಬೊ.ಹಳ್ಳಿ | ೭೫ | ೨೭ | ೧೯ |
| | ಒಟ್ಟು | ೬೧೭ | ೧೭೩ | ೧೨೬ |

ಬಳ್ಳಾರಿ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿಗೆ ಮೀಸಲಿರಿಸಿದ್ದ ೬೧೭ ಜನ ಸದಸ್ಯ ಸ್ಥಾನಗಳಲ್ಲಿ ಲಂಬಾಣಿ ಸಮುದಾಯದ ೨೯೯ ಜನ ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ಅವರಲ್ಲಿ ಪುರುಷರು ೧೭೩, ಸ್ತ್ರೀಯರು ೧೨೬ ಇದ್ದಾರೆ.

ತಾಲ್ಲೂಕು ಪಂಚಾಯಿತಿಗೆ ಸಂಬಂಧಿಸಿದಂತೆ ಬಳ್ಳಾರಿ ಜಿಲ್ಲೆಯಲ್ಲಿ ೨೦೦೬ರಲ್ಲಿ ನಡೆದ ಚುನಾವಣೆಯಲ್ಲಿ ಅಂಕಿ ಅಂಶಗಳು ಲಂಬಾಣಿ ಜನಾಂಗದ ಪ್ರಾತಿನಿಧ್ಯವನ್ನು ತಿಳಿಸುತ್ತದೆ. ಹೂವಿನ ಹಡಗಲಿ ತಾಲ್ಲೂಕಿನಲ್ಲಿ ನಾಗತಿ ಬಸಾಪುರ ಕ್ಷೇತ್ರದಿಂದ ಎಂ. ಜಯನಾಯ್ಕ, ಸೋಗಿ ಕ್ಷೇತ್ರದಿಂದ ಯು. ಕೊಟ್ರೇಶ್‌ನಾಯ್ಕ ಚುನಾಯಿತರಾಗಿದ್ದಾರೆ. ಕೂಡ್ಲಿಗಿ ತಾಲ್ಲೂಕಿನಲ್ಲಿ ಮುಕನಡುಕು ಕ್ಷೇತ್ರದಿಂದ ಬಿ. ಬೋಜರಾಜ್‌ನಾಯ್ಕ, ದೂಪದಹಳ್ಳಿ ಕ್ಷೇತ್ರದಿಂದ ಪೂಜಾರಿಗುಂಡ ನಾಯ್ಕ ಚುನಾಯಿತರಾಗಿದ್ದಾರೆ. ಹಗರಿಬೊಮ್ಮನಹಳ್ಳಿಯ ಕೋಗಳಿ ಕ್ಷೇತ್ರದಿಂದ ಮಂಜುಳಬಾಯಿ, ಹೊಸಪೇಟೆಯ ತಾಲ್ಲೂಕಿನ ಮರಿಯಮ್ಮನಹಳ್ಳಿ ಕ್ಷೇತ್ರದಿಂದ ನೇಮಿರಾಜ್‌ನಾಯ್ಕ, ಚುನಾಯಿತರಾಗಿದ್ದಾರೆ. ಸಿರಗುಪ್ಪ ಹಾಗೂ ಬಳ್ಳಾರಿ ತಾಲ್ಲೂಕುಗಳಲ್ಲಿ ಲಂಬಾಣಿ ಸಮುದಾಯದವರು ಆಯ್ಕೆಯಾಗಿರುವುದು ಕಂಡು ಬಂದಿಲ್ಲ.

೨೦೦೬ನೇ ಸಾಲಿನಲ್ಲಿ ನಡೆದ ಜಿಲ್ಲಾ ಪಂಚಾಯತ್ ಚುನಾವಣೆಯಲ್ಲಿ ಜಿಲ್ಲೆಯ ಒಟ್ಟು ೩೨ ಸ್ಥಾನಗಳಲ್ಲಿ ೬ ಸ್ಥಾನಗಳು ಪರಿಶಿಷ್ಟ ಜಾತಿಗೆ ಮೀಸಲಿಟ್ಟಿದ್ದು ಅವುಗಳಲ್ಲಿ ಕುಡಿತಿನಿ ಕ್ಷೇತ್ರದಿಂದ ಲಂಬಾಣಿ ಜನಾಂಗದ ಶ್ರೀಮತಿ ಸವಿತಾಬಾಯಿ, ಸೋಗಿ ಕ್ಷೇತ್ರದಿಂದ ಬಿ. ಚಂದ್ರನಾಯ್ಕ ಚುನಾಯಿತರಾಗಿದ್ದಾರೆ, ಮಾದಿಗ ಬೋವಿ ಸಮುದಾಯದ ಇಬ್ಬರು ಸದಸ್ಯರು ಚುನಾಯಿತರಾಗಿದ್ದಾರೆ. ಸೋಗಿ ಕ್ಷೇತ್ರದಿಂದ ಉಪಚುನಾವಣೆಯಲ್ಲಿ ವಿ.ಪಿ. ಪರಮೇಶ್ವರ ನಾಯ್ಕರವರು ಆಯ್ಕೆಯಾಗಿದ್ದಾರೆ. ಈ ರೀತಿಯಲ್ಲಿ ಗ್ರಾಮ ಪಂಚಾಯತ್, ತಾಲ್ಲೂಕು ಪಂಚಾಯತ್ ಹಾಗೂ ಜಿಲ್ಲಾ ಪಂಚಾಯತ್ ಸ್ಥಾನಗಳಿಗೆ ಚುನಾಯಿತರಾದ ಲಂಬಾಣಿ ಜನಾಂಗದವರು ಸ್ಪರ್ಧಿಸಿ ಆಯ್ಕೆಯಾಗಿರುವುದು ಕಂಡುಬರುತ್ತದೆ.

### ೨೦೧೦ನೇ ಸಾಲಿನ ನಡೆದ ಗ್ರಾಮ, ತಾಲ್ಲೂಕು ಹಾಗೂ ಜಿಲ್ಲಾ ಪಂಚಾಯತ್‌ಗಳ ಚುನಾವಣೆ

ಬಳ್ಳಾರಿ ಜಿಲ್ಲೆಯಲ್ಲಿ ನಡೆದ ೨೦೧೦ನೇ ಸಾಲಿನ ಚುನಾವಣೆಯಲ್ಲಿ ಜಿಲ್ಲೆಯ ಲಂಬಾಣಿ ಸಮುದಾಯದ ಅನೇಕರು ಗ್ರಾಮ ಪಂಚಾಯತ್, ತಾಲ್ಲೂಕು ಪಂಚಾಯತ್ ಹಾಗೂ ಜಿಲ್ಲಾ ಪಂಚಾಯತ್ ಸದಸ್ಯರಾಗಿ ಚುನಾಯಿತರಾಗಿರುವುದು ಕಂಡುಬರುತ್ತದೆ. ಈ ಸಂಬಂಧ ದೊರೆತ ಅಂಕಿ-ಅಂಶಗಳನ್ನು ಇಲ್ಲಿ ವಿವರಿಸಲಾಗಿದೆ.

ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ವಿವಿಧ ತಾಲ್ಲೂಕುಗಳಲ್ಲಿನ ಗ್ರಾಮ ಪಂಚಾಯತಿಗಳಿಗೆ ಲಂಬಾಣಿ ಸದಸ್ಯರು

| ಕ್ರ.ಸಂ | ತಾಲ್ಲೂಕು | ಪ.ಜಾತಿ | ಲಂಬಾಣಿಗರು | |
|---|---|---|---|---|
| | | | ಪುರುಷರು | ಸ್ತ್ರೀಯರು |
| ೧ | ಬಳ್ಳಾರಿ | ೧೧೧ | ೪ | ೨ |
| ೨ | ಸಿರಗುಪ್ಪ | ೮೨ | ೮ | ೩ |
| ೩ | ಹೊಸಪೇಟೆ | ೯೧ | ೨೦ | ೧೮ |
| ೪ | ಸಂಡೂರು | ೬೨ | ೬ | ೪ |
| ೫ | ಕೂಡ್ಲಿಗಿ | ೧೧೦ | ೩೨ | ೧೭ |
| ೬ | ಹಡಗಲಿ | ೮೫ | ೪೦ | ೨೨ |
| ೭ | ಹ.ಬೊ.ಹಳ್ಳಿ | ೯೫ | ೩೮ | ೧೯ |
| | ಒಟ್ಟು | ೬೩೬ | ೧೪೮ | ೮೫ |

ಪರಿಶಿಷ್ಟ ಜಾತಿಗೆ ಮೀಸಲಾಗಿದ್ದ ಒಟ್ಟು ೬೩೬ ಗ್ರಾಮ ಪಂಚಾಯತಿ ಸದಸ್ಯರಲ್ಲಿ ಈ ಸಮುದಾಯ ೨೩೩ ಸದಸ್ಯರನ್ನು ಹೊಂದಿದ್ದು ಅದರಲ್ಲಿ ೧೪೮ ಜನ ಪುರುಷರು ಮತ್ತು ೮೫ ಜನ ಮಹಿಳೆಯರು ಆಯ್ಕೆಯಾಗಿರುವುದು ಕಂಡು ಬರುತ್ತದೆ. ಸಿರಗುಪ್ಪ, ಬಳ್ಳಾರಿ, ಸಂಡೂರು ತಾಲ್ಲೂಕನ್ನು ಹೊರತುಪಡಿಸಿದರೆ ಉಳಿದೆಲ್ಲಾ ತಾಲ್ಲೂಕು ಗ್ರಾಮ ಪಂಚಾಯತಿಗಳ ಚುನಾಯಿತರಾದ ಪರಿಶಿಷ್ಟ ಜಾತಿಯ ಸದಸ್ಯರಲ್ಲಿ ಲಂಬಾಣಿಗರ ಪ್ರಮಾಣ ಸ್ವಲ್ಪಮಟ್ಟಿಗೆ ಹೆಚ್ಚಿದೆ. ಈ ತಾಲ್ಲೂಕಿನಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಮಾದಿಗರು(ಹರಿಜನ), ಬೋವಿ ಇತ್ಯಾದಿ ಸಮುದಾಯದವರು ಸ್ಥಾನ ಪಡೆದುಕೊಂಡಿದೆ. ಈ ಅಂಕಿ-ಅಂಶಗಳು ಪುರುಷರಷ್ಟು ಸ್ತ್ರೀಯರು ರಾಜಕೀಯದಲ್ಲಿ ಪ್ರಾತಿನಿಧ್ಯ ಪಡೆದಿರುವುದಿಲ್ಲ ಎಂದು ತಿಳಿಯುತ್ತದೆ.

ತಾಲ್ಲೂಕು ಪಂಚಾಯಿತಿಗೆ ಸಂಬಂಧಿಸಿದಂತೆ ಬಳ್ಳಾರಿ ಜಿಲ್ಲೆಯಲ್ಲಿ ೨೦೧೦ರಲ್ಲಿ ನಡೆದ ಚುನಾವಣೆಯಲ್ಲಿ ಅಂಕಿಅಂಶಗಳು ಲಂಬಾಣಿ ಜನಾಂಗದ ಪ್ರಾತಿನಿಧ್ಯವನ್ನು ತಿಳಿಸುತ್ತದೆ. ಹೊಸಪೇಟೆ ತಾಲ್ಲೂಕಿನಲ್ಲೂ ಮೀಸಲಿಟ್ಟಿರುವ ೪ ಸ್ಥಾನಗಳಲ್ಲಿ ಒಬ್ಬರು ಸದಸ್ಯರು ಚುನಾಯಿತರಾಗಿದ್ದಾರೆ. ಅವರೆಂದರೆ ಭೀಮಾನಾಯ್ಕ್ ಎಲ್ (ಹಂಪಿ), ಕೂಡ್ಲಿಗಿ ೫ ಸ್ಥಾನಗಳಲ್ಲಿ ಸದಸ್ಯರು ಆಯ್ಕೆಯಾಗಿದ್ದಾರೆ. ಲಕ್ಷ್ಮೀಬಾಯಿ ಕಾಂತರಾಜ (ಬಣವಿಕಲ್ಲು), ಹೂವಿನ ಹಡಗಲಿ ತಾಲ್ಲೂಕಿನಲ್ಲಿ ೪ ಸ್ಥಾನಗಳಲ್ಲಿ ಒಬ್ಬರು ಸದಸ್ಯರು ಆಯ್ಕೆಯಾಗಿದ್ದಾರೆ. ಅವರೆಂದರೆ ಕೃಷ್ಣನಾಯ್ಕ್ (ಹೊಳಗುಂದಿ), ಹಗರಿಬೊಮ್ಮನಹಳ್ಳಿ ತಾಲ್ಲೂಕು ಪಂಚಾಯತಿಯಲ್ಲಿ ೩ ಸ್ಥಾನಗಳಲ್ಲಿ ೨ ಜನ ಸದಸ್ಯರು ಆಯ್ಕೆಯಾಗಿದ್ದಾರೆ. ಡಿ. ವಿಜಯಲಕ್ಷ್ಮಿ ಪೂರ್‍ಯಾನಾಯ್ಕ್ ನಕರಾಳ್ ತಾಂಡ (ಮರಬ್ಬಿಹಾಳ್) ಮತ್ತು ಯು ಮಂಜುಳ ಕೃಷ್ಣನಾಯ್ಕ್ ಕಲ್ಲಹಳ್ಳಿ ತಾಂಡ (ಹನಸಿ), ಸಂಡೂರು ತಾಲ್ಲೂಕಿನ ಪಂಚಾಯತಿಯಲ್ಲಿ ೩ ಸ್ಥಾನಗಳಲ್ಲಿ ಲಂಬಾಣಿ ಸಮುದಾಯದವರು ಆಯ್ಕೆಯಾಗಿರುವುದಿಲ್ಲ. ಸಿರಗುಪ್ಪ ತಾಲ್ಲೂಕು ಪಂಚಾಯಿತಿಗೆ ೩ ಸ್ಥಾನದಲ್ಲಿ ಲಂಬಾಣಿ ಜನಾಂಗದವರು ಚುನಾಯಿತರಾಗಿರುವುದಿಲ್ಲ. ಮೂರು ಕ್ಷೇತ್ರದಲ್ಲಿ ಮಾದಿಗ ಸಮುದಾಯ ಆಯ್ಕೆಯಾಗಿರುವುದು ಕಂಡುಬರುತ್ತದೆ. ಅದೇ ರೀತಿ ಬಳ್ಳಾರಿ ತಾಲೂಕು ಪಂಚಾಯತಿಯಲ್ಲಿ ೬ ಸ್ಥಾನ ಮೀಸಲು ಕ್ಷೇತ್ರದಲ್ಲಿ ಲಂಬಾಣಿ ಜನಾಂಗದವರು ಚುನಾಯಿತರಾಗಿರುವುದಿಲ್ಲ. ಸಿರಗುಪ್ಪ, ಬಳ್ಳಾರಿ, ಸಂಡೂರುಗಳಲ್ಲಿ ಈ ಜನಾಂಗದಿಂದ ಆಯ್ಕೆಯಾಗಿರುವುದು ಕಂಡುಬರುವುದಿಲ್ಲ.

೨೦೧೦ನೇ ಸಾಲಿನಲ್ಲಿ ನಡೆದ ಜಿಲ್ಲಾ ಪಂಚಾಯತ್ ಚುನಾವಣೆಯಲ್ಲಿ ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದಂತೆ ವಿವಿಧ ಪಕ್ಷದಿಂದ ಲಂಬಾಣಿ ಜನಾಂಗದ ಕೆಲವರು ಜಿಲ್ಲಾ ಪಂಚಾಯತ್ ಸದಸ್ಯರಾಗಿ ಚುನಾಯಿತರಾಗಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ೩೬ ಸದಸ್ಯರನ್ನು ಹೊಂದಿದ್ದು ಅದರಲ್ಲಿ ಪರಿಶಿಷ್ಟ ಜಾತಿ ಪುರುಷರಿಗೆ ೩ ಮತ್ತು ಮಹಿಳೆಯರಿಗೆ ೪ ಸ್ಥಾನಗಳನ್ನು ನೀಡಲಾಗಿದೆ. ಇಂತಹ ಕ್ಷೇತ್ರಗಳಿಂದ ೫ ಜನ ಲಂಬಾಣಿ ಜನಾಂಗದವರು ಆಯ್ಕೆಯಾಗಿದ್ದಾರೆ. ಚೋರನೂರು ಕ್ಷೇತ್ರದಿಂದ ಎಸ್. ಭೀಮಾನಯ್ಕ, ಎಂ.ಬಿ. ಅಯ್ಯನಹಳ್ಳಿ ಕ್ಷೇತ್ರದಿಂದ ಶ್ರೀಮತಿ ಸುನಂದ ಬಾಯಿ ಕೃಷ್ಣನಾಯ್ಕ, ಹಗರಿಬೊಮ್ಮನಹಳ್ಳಿ ಕ್ಷೇತ್ರದಿಂದ ಶ್ರೀಮತಿ ಹೇಮವ್ವ ಕೃಷ್ಣನಾಯ್ಕ್, ಇಟಗಿ ಕ್ಷೇತ್ರ ಹೂವಿನಹಡಗಲಿದಿಂದ ಶ್ರೀಮತಿ ತಿಪ್ಪಿಬಾಯಿ ಠಾಕ್ರಾನಾಯ್ಕ್. ಉಳಿದಂತೆ ೧ ಸ್ಥಾನ ಭೋವಿ ಜನಾಂಗದವರಿಗೆ ಹಾಗೂ ೧ ಆದಿಕರ್ನಾಟಕ ಜನಾಂಗದ ಶ್ರೀಮತಿ ಸರಸ್ವತಿ (ಸಿರಗುಪ್ಪ) ಆಯ್ಕೆಯಾದರೆ ೫ ಜನ ಲಂಬಾಣಿ ಸಮುದಾಯದವರು ಆಯ್ಕೆಯಾಗಿದ್ದಾರೆ.

### ೪. ಶಾಸನಸಭೆ ಮತ್ತು ವಿವಿಧ ಬೋರ್ಡ್ ಲಂಬಾಣಿಗರ ಪ್ರಾತಿನಿಧ್ಯ

ರಾಜ್ಯಮಟ್ಟದಲ್ಲಿ ಪ್ರಮುಖವಾದ ರಾಜಕೀಯ ಸಂಸ್ಥೆಗಳೆಂದರೆ ವಿಧಾನಸಭೆ ಮತ್ತು ವಿಧಾನ ಪರಿಷತ್ ಆಗಿದೆ. ಮೈಸೂರು ಪ್ರಾಂತ್ಯದಲ್ಲಿ ಹಿಂದಿದ್ದ ಪ್ರಜಾ ಪ್ರತಿನಿಧಿ ಸಭೆ ಮತ್ತು ನ್ಯಾಯವಿಧಾಯಕ ಸಭೆಗಳ ರೂಪಾಂತರವಾಗಿ ಇವು ಕಂಡುಬರುತ್ತವೆಯಾದರೂ ಹಿಂದೆ ಈ ಸಭೆಗಳಿಗೆ ಪ್ರತಿನಿಧಿಗಳನ್ನು ಆಯ್ಕೆ ಮಾಡಲು ಮತ ಚುನಾಯಿಸುವ ಹಕ್ಕು ಕೇವಲ ಸೀಮಿತ ವ್ಯಕ್ತಿಗಳಿಗೆ ಮಾತ್ರವೇ ದೊರಕಿತ್ತು. ಆದರೆ ಸ್ವಾತಂತ್ರ್ಯ ಭಾರತದಲ್ಲಿ ೧೯೫೦ ಜನವರಿ ೨೬ ರಂದು ಅಂಗೀಕರಿಸಿದ ಹೊಸ ಸಂವಿಧಾನವು 'ಪ್ರೌಢ ವಯಸ್ಕ ಮತದಾನ ಪದ್ಧತಿ'ಯನ್ನು

ಜಾರಿಗೆ ತಂದಿತು. ಇದರಿಂದಾಗಿ ಯಾವುದೇ ತಾರತಮ್ಯವಿಲ್ಲದೆ ಪುರುಷ ಸ್ತ್ರೀಯರಾದಿಯಾಗಿ ವಯಸ್ಸಿಗೆ ಬಂದಂಥವರು ಮತ ಚಲಾಯಿಸುವ ಮೂಲಕ ವಿಧಾನಸಭೆಗೆ ಪ್ರತಿನಿಧಿಗಳನ್ನೂ ಆರಿಸಿ ಕಳುಹಿಸಲು ಅವಕಾಶವಾಯಿತು. ಈ ಬಗೆಯ ರಾಜಕೀಯ ಹಕ್ಕು ಜನರಿಗೆ ಸಂವಿಧಾನ ಒದಗಿಸಿಕೊಡುವುದರ ಮೂಲಕ ರಾಜ್ಯ ಮತ್ತು ರಾಷ್ಟ್ರ ರಾಜಕಾರಣದಲ್ಲಿ ಜನತೆ ಪಾಲ್ಗೊಳ್ಳುವಂತೆ ಮಾಡಿತು. ಕೆಲವೊಂದು ಮೀಸಲಾತಿ ಸೌಲಭ್ಯವನ್ನು ನೀಡಿದ್ದರಿಂದ ಶೋಷಿತ ಜಾತಿಗಳಿಗೆ ಪ್ರಾಮುಖ್ಯತೆ ದೊರೆಯುವಂತಾಯಿತು. ಇದು ಆ ಜಾತಿಗಳಲ್ಲಿ ಜನ ಪ್ರತಿನಿಧಿಗಳಾಗುವಂತೆ ಮಾಡಿತು. ಈ ಹಿನ್ನೆಲೆಯಲ್ಲಿ ರಾಜ್ಯಮಟ್ಟದ ಸಭೆಗಳಾದ ವಿಧಾನಸಭೆ, ವಿಧಾನ ಪರಿಷತ್‌ಗಳಲ್ಲಿ ಲಂಬಾಣಿ ಜನಾಂಗದ ಪ್ರಾತಿನಿಧ್ಯ ಎಷ್ಟರಮಟ್ಟಿಗೆ ದೊರಕಿದೆ ಎಂಬುದನ್ನು ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ.

**ವಿಧಾನಸಭೆ**

ವಸಾಹತೋತ್ತರ ಕರ್ನಾಟಕ ರಾಜ್ಯದಲ್ಲಿ ವಿದಾನಸಭೆಯ ಮೊದಲ ಚುನಾವಣೆ ನಡೆದದ್ದು ೧೯೫೧ - ೫೨ರಲ್ಲಿ. ಈ ಚುನಾವಣೆಯಲ್ಲಿ ಲಂಬಾಣಿಗರು ಆಯ್ಕೆಯಾಗಿರುವುದು ಕಂಡುಬರುವುದಿಲ್ಲ. ನಂತರ ೧೯೫೭, ೧೯೬೭, ೧೯೮೩, ೧೯೯೦ರ ಸಾರ್ವತ್ರಿಕ ಚುನಾವಣೆಯಲ್ಲಿ ಸ್ಪರ್ಧಿಸದೇ ಇರುವುದು ಕಂಡುಬರುತ್ತದೆ. ೧೯೯೬ರಲ್ಲಿ ನಡೆದ ಚುನಾವಣೆಯಲ್ಲಿ ಚಿಕ್ಕಜೋಗಿನಹಳ್ಳಿ ತಾಂಡದ ಡಾ. ಎಂ. ಶಂಕರನಾಯ್ಕರವರು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ಪರಿಶಿಷ್ಟ ಜಾತಿಗೆ ಮೀಸಲು ಕ್ಷೇತ್ರದಿಂದ ಸಂಯುಕ್ತ ಜನತಾದಳ ಸ್ಪರ್ಧಿಸಿ ಚುನಾಯಿತರಾಗಿ ಜೆ.ಹೆಚ್. ಪಟೇಲ್ ಸರ್ಕಾರದಲ್ಲಿ ವೈದ್ಯಕೀಯ ಶಿಕ್ಷಣ ಸಚಿವರಾಗಿರುವುದು ಕಂಡುಬರುತ್ತದೆ. ನಂತರ ೨೦೦೦ರಲ್ಲಿ ನಡೆದ ಚುನಾವಣೆಯಲ್ಲಿ ಭಾರತೀಯ ಕಾಂಗ್ರೆಸ್ ಪಕ್ಷದ ಪ್ರಧಾನ ಕಾರ್ಯದರ್ಶಿಯಾಗಿದ್ದ ಜೆ.ಎಂ. ರತ್ನನಾಯ್ಕರವರಿಗೆ ಕಾಂಗ್ರೆಸ್ ಪಕ್ಷದ ಬಿ. ಫಾರ್ಮ (ಟಿಕೇಟ್) ದೊರೆಯದೆ ಕಾಂಗ್ರೆಸ್ ಬಂಡಾಯ ಪಕ್ಷೇತರ ಅಭ್ಯರ್ಥಿಯಾಗಿ ಸ್ಪರ್ಧಿಸಿ ಸಿರಾಜ್ ಶೇಖರವರ ವಿರುದ್ಧ ಸೋಲು ಅನುಭವಿಸಿದರು.

೨೦೦೮ರ ಚುನಾವಣೆಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ೨ ಸ್ಥಾನಗಳನ್ನು ಪರಿಶಿಷ್ಟ ಜಾತಿಗೆ ನೀಡಲಾಗಿತ್ತು. ಈ ಎರಡು ಸ್ಥಾನಗಳಲ್ಲಿ ಲಂಬಾಣಿ ಜನಾಂಗದವರು ಚುನಾಯಿತರಾಗಿರುವುದು ಕಂಡುಬರುತ್ತದೆ. ಹಗರಿ ಬೊಮ್ಮನಹಳ್ಳಿ ಕ್ಷೇತ್ರದಿಂದ ನೇಮಿರಾಜ ನಾಯ್ಕ ಮತ್ತು ಹೂವಿನಹಡಗಲಿ ಕ್ಷೇತ್ರದಿಂದ ಬಿ. ಚಂದ್ರನಾಯ್ಕನವರು ಭಾರತೀಯ ಜನತಾ ಪಾರ್ಟಿ(ಬಿ.ಜೆ.ಪಿ) ಪಕ್ಷದಿಂದ ಚುನಾಯಿತರಾಗಿದ್ದಾರೆ. ಅವರಿಬ್ಬರು ಈ ಜಿಲ್ಲೆಯಿಂದ ರಾಜ್ಯ ರಾಜಕಾರಣಕ್ಕೆ ಆಯ್ಕೆಯಾದವರು.

೨೦೧೩ರ ಚುನಾವಣೆಯಲ್ಲಿ ಬಳ್ಳಾರಿ ಜಿಲ್ಲೆಯಲಿ ೨ ಸ್ಥಾನಗಳು ಪರಿಶಿಷ್ಟ ಜಾತಿಗೆ ಮೀಸಲು ನೀಡಲಾಗಿದೆ. ಈ ಎರಡು ಕ್ಷೇತ್ರಗಳಲ್ಲಿ ಲಂಬಾಣಿ ಸಮುದಾಯದವರು ಚುನಾಯಿತರಾಗಿರುವುದು ಕಂಡುಬರುತ್ತದೆ. ಹೂವಿನ ಹಡಗಲಿ ಕ್ಷೇತ್ರದಿಂದ ಪಿ.ಟಿ. ಪರಮೇಶ್ವರ ನಾಯ್ಕ ಕಾಂಗ್ರೆಸ್ ಹಾಗೂ ಹಗರಿಬೊಮ್ಮನಹಳ್ಳಿ ಕ್ಷೇತ್ರದಿಂದ ಎಸ್. ಭೀಮಾನಾಯ್ಕನವರು ಜೆ.ಡಿ.ಎಸ್ ಪಕ್ಷದಿಂದ ಚುನಾಯಿತರಾಗಿದ್ದಾರೆ. ಪಿ.ಟಿ. ಪರಮೇಶ್ವರ ನಾಯ್ಕರವರು ಸಿದ್ಧರಾಮಯ್ಯನವರ ಸಚಿವ ಸಂಪುಟದಲ್ಲಿ ಕಾರ್ಮಿಕ ಸಚಿವರಾಗಿರುವುದು ಕಂಡುಬರುತ್ತದೆ. ಜೊತೆಗೆ ಬಳ್ಳಾರಿ ಜಿಲ್ಲೆಯ ಉಸ್ತುವಾರಿ ಸಚಿವರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ವಿಧಾನ ಪರಿಷತ್

ವಿಧಾನ ಪರಿಷತ್ ಹಾಗೂ ನಿಗಮ ಮಂಡಳಿಗಳಲ್ಲಿ ಬಳ್ಳಾರಿ ಜಿಲ್ಲೆಯ ಲಂಬಾಣಿಗರಿಗೆ ಪ್ರಾತಿನಿಧ್ಯ ನೀಡಿರುವುದು ಕಂಡುಬರುವುದಿಲ್ಲ. ಬಳ್ಳಾರಿ ಜಿಲ್ಲೆಯ ಪರಿಶಿಷ್ಟ ಜಾತಿಯಲ್ಲಿ ಒಬ್ಬರಾದ ಮಾದಿಗ ಜನಾಂಗಕ್ಕೆ ಸೇರಿದ ಕೆ. ರಂಗಪ್ಪ ಎಂಬುವರು ಬಳ್ಳಾರಿ ಜಿಲ್ಲೆಯ ಪ್ರತಿನಿಧಿಯಾಗಿ ಆಯ್ಕೆಯಾಗಿದ್ದರು. ಬಳ್ಳಾರಿ ಜಿಲ್ಲೆಯಿಂದ ಯಾರು ಸಹ ವಿಧಾನ ಪರಿಷತ್ ಸದಸ್ಯಸ್ಥಾನಕ್ಕೆ ನಾಮಕರಣಗೊಂಡಿಲ್ಲ. ಇತರೆ ಭಾಗಗಳಿಂದ ಲಂಬಾಣಿ ಜನಾಂಗದ ದಿವಂಗತ ತೇಜ್‌ಸಿಂಗ್ ರಾಠೋಡ, ಬಿ.ಟಿ. ಲಲಿತನಾಯ್ಕ್, ಪ್ರಕಾಶ ಪವಾರ್ ವಿಧಾನ ಪರಿಷತ್‌ಗೆ ಆಯ್ಕೆಯಾಗಿರುವುದು ಕಂಡುಬರುತ್ತದೆ. ಉಳಿದಂತೆ ಯಾವುದೇ ನಿಗಮ ಮಂಡಳಿಗೆ ಬಳ್ಳಾರಿ ಜಿಲ್ಲೆಯ ಲಂಬಾಣಿ ಸಮುದಾಯದ ಯಾರೊಬ್ಬರು ಆಯ್ಕೆಯಾಗಿಲ್ಲ. ಆದರೆ ದಾವಣಗೆರೆ ಜಿಲ್ಲೆಯ ವ್ಯಾಪ್ತಿಯಲ್ಲಿದ್ದ ಆನೆಕೊಂಡ ಕ್ಷೇತ್ರದಿಂದ ಆಯ್ಕೆಯಾಗಿದ್ದ ವಿಧಾನಸಭೆಯ ಸದಸ್ಯರಾದ ಬಸವರಾಜ್ ನಾಯ್ಕರವರು ಮಾತ್ರ 'ತಾಂಡ ಅಭಿವೃದ್ಧಿ ನಿಗಮ' ಮಂಡಳಿಯ ಅಧ್ಯಕ್ಷರಾಗಿದ್ದರು.

**೫. ಸ್ವಾತಂತ್ರ್ಯ ಮತ್ತು ಮೈಸೂರು ಸಂಸ್ಥಾನ ಚಳವಳಿಗಳಲ್ಲಿ ಲಂಬಾಣಿಗರ ಪಾತ್ರ.**

ಬ್ರಿಟಿಷರ ದಾಸ್ಯಕ್ಕೆ ಒಳಗಾಗಿ ಸ್ವಾತಂತ್ರ್ಯವನ್ನು ಕಳೆದುಕೊಂಡು ಗುಲಾಮಗಿರಿಯಲ್ಲಿ ನರಳುತ್ತಿದ್ದ ಭಾರತ ದೇಶವನ್ನು ವಿಮೋಚನೆಗೊಳಿಸಿ ಸ್ವಾತಂತ್ರ್ಯ ಪಡೆಯಲು ಬ್ರಿಟಿಷರ ವಿರುದ್ಧ ಭಾರತೀಯರು ದೇಶದಾದ್ಯಂತ ನಡೆಸಿದ ಬೃಹತ್ ಆಂದೋಲನವೇ ಸ್ವಾತಂತ್ರ್ಯ ಹೋರಾಟವಾಗಿದೆ. ಗುಲಾಮಗಿರಿಗೆ ಒಳಗಾಗಿರುವ ಯಾವುದೇ ದೇಶದಲ್ಲಿ ಈ ಬಗೆಯ ಹೋರಾಟ ಅನಿವಾರ್ಯ. ಭಾರತದಂತಹ ದೇಶದಲ್ಲಿ ಪರಕೀಯರ ಪ್ರವೇಶವು ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೂ ನಡೆದಿರುವುದು ಚಾರಿತ್ರಿಕ ದಾಖಲೆಗಳಿಂದ ಖಚಿತಗೊಳ್ಳುತ್ತದೆ. ಆದರೆ ಪ್ರಬಲವಾಗಿ ಹಾಗೂ ವಿಸ್ತಾರವಾಗಿ ದೇಶದಾದ್ಯಂತ ತಮ್ಮ ಪ್ರಭುತ್ವವನ್ನು ಸ್ಥಾಪನೆ ಮಾಡಿಕೊಂಡು ಆಳ್ವಿಕೆ ನಡೆಸಿದವರೆಂದರೆ ಬ್ರಿಟಿಷರು ಮಾತ್ರ. ಸುಮಾರು ಮೂರು ನೂರ ಐವತ್ತು ವರ್ಷಗಳ ಕಾಲ ಈ ದೇಶದಲ್ಲಿ ನೆಲೆಯೂರಿದ್ದರು. ಇದರಿಂದಾಗಿ ಬ್ರಿಟಿಷರ ಪ್ರಭುತ್ವದ ಬೇರುಗಳು ಈ ನೆಲದಲ್ಲಿ ಪ್ರಬಲವಾಗಿ ಬೇರೂರಿದ್ದವು. ಇಂತಹ ಪ್ರಬಲವಾದ ಪ್ರಭುತ್ವದ ವಿರುದ್ಧ ಹೋರಾಟ ಮಾಡಲು ಅಣಿಯಾಗುವುದು ಸುಲಭ ಕೆಲಸವಾಗಿರಲಿಲ್ಲ. ಅದರಲ್ಲೂ ವಿವಿಧ ಧರ್ಮ, ಭಾಷೆ, ಜನಾಂಗಗಳಿಗೆ ಸೇರಿರುವ ಜನ ಸಮುದಾಯಗಳ ನಡುವೆ ಏಕತೆಯನ್ನು ತಂದು ಬ್ರಿಟಿಷರ ವಿರುದ್ಧ ಹೋರಾಟ ಮಾಡಲು ಅಸಾಧ್ಯ. ಅದನ್ನು ಸಾಧ್ಯಗೊಳಿಸಿದ್ದು ಈ ಸ್ವಾಂತಂತ್ರ್ಯ ಹೋರಾಟ. ಈ ಆಂದೋಲನದಲ್ಲಿ ವಿವಿಧ ಧರ್ಮ, ಭಾಷೆ, ಜನಾಂಗ ಹಾಗೂ ಲಿಂಗಭೇಧ ತಾರತಮ್ಯವಿಲ್ಲದೆ ಭಾರತವನ್ನು ಸ್ವಾತಂತ್ರ್ಯಗೊಳಿಸಲು ಏಕತೆಯಿಂದ ಹೋರಾಡಿರುವುದು ಗಮನಾರ್ಹ. ಹಿಂದೆ ಪರಕೀಯರ ವಿರುದ್ಧ ಪ್ರತಿಭಟನೆಗಳು ನಡೆದಿರುವುದು ಚರಿತ್ರೆಯಲ್ಲಿ ಕಂಡುಬಂದರೂ ಕೇವಲ ವೈಯಕ್ತಿಕ ಮತ್ತು ಪ್ರಾದೇಶಿಕ ನೆಲೆಯಲ್ಲಿ ಮಾತ್ರವೇ. ಈ ಕಾರಣದಿಂದಾಗಿ ಅಂತಹ ಪ್ರತಿಭಟನೆ, ಹೋರಾಟಗಳನ್ನು ಹತ್ತಿಕ್ಕುವಲ್ಲಿ ಬ್ರಿಟಿಷರು ಯಶಸ್ವಿಯಾದರು. ಆದರೆ ಸ್ವಾತಂತ್ರ್ಯ ಹೋರಾಟ ರಾಷ್ಟ್ರೀಯ ಏಕತೆಯ ದೃಷ್ಟಿಯಿಂದ ಸಾಮೂಹಿಕ ನೆಲೆಯಲ್ಲಿ ದೇಶದಾದ್ಯಂತ ನಡೆಸಿದ ಹೋರಾಟವಾಗಿದೆ. ಈ ಹಿನ್ನೆಲೆಯಲ್ಲಿ ಭಾರತದ ಚರಿತ್ರೆಯಲ್ಲಿ ಸ್ವಾತಂತ್ರ್ಯ ಹೋರಾಟ ಒಂದು ಪ್ರಮುಖ ಸ್ಥಾನ ಪಡೆದುಕೊಂಡಿದೆ.

ಸ್ವಾತಂತ್ರ್ಯ ಹೋರಾಟದಲ್ಲಿ ಕರ್ನಾಟಕ ರಾಜ್ಯದ ಜನತೆಯ ಪಾತ್ರವು ಸಹ ಪ್ರಮುಖವಾದದ್ದು. ಬ್ರಿಟಿಷರ ದಾಸ್ಯಕ್ಕೆ ಒಂದು ಕಡೆ ಒಳಗಾಗಿದ್ದರೆ ಮತ್ತೊಂದು ಕಡೆ ಇಲ್ಲಿ ದೇಶಿಯ ರಾಜರ ಪ್ರಭುತ್ವದ ದಾಸ್ಯಕ್ಕೂ ಒಳಗಾಗಿದ್ದರು. ಹೀಗೆ ಕರ್ನಾಟಕದ ಜನತೆ ಎರಡು ಬಗೆಯ ಗುಲಾಮಗಿರಿಯಲ್ಲಿ ತೊಳಲಾಡುತ್ತಿದ್ದರು. ಮೊದಲು ದೇಶವ್ಯಾಪಿ ಹರಡಿಕೊಂಡಿರುವ ಬ್ರಿಟಿಷರ ಪ್ರಭುತ್ವದ ವಿರುದ್ಧ ಹೋರಾಟಕ್ಕೆ ತೊಡಗಿಕೊಂಡರೂ ಅನಂತರದಲ್ಲಿ ಅದರ ಜೊತೆಯಲ್ಲಿಯೇ ದೇಶಿಯ ಪ್ರಭುತ್ವದ ವಿರುದ್ಧ 'ಜವಾಬ್ದಾರಿ ಸರ್ಕಾರ ರಚನೆ'ಗಾಗಿ ಹೋರಾಡಿದರು. ಈ ಬಗೆಯ ಚಾರಿತ್ರಿಕ ಮಹತ್ವ ಪಡೆದಿರುವ ಹೋರಾಟಗಳಲ್ಲಿ ಸಾಮಾಜಿಕ ಮತ್ತು ಆರ್ಥಿಕವಾಗಿ ಹಿಂದುಳಿದಿರುವ ಸಮಾಜದ ಮೇಲು ಜಾತಿಗಳ ತಿರಸ್ಕಾರಕ್ಕೆ ಗುರಿಯಾಗಿದ್ದು ಕೆಳಜಾತಿಗಳು ಅಥವಾ ಶೋಷಿತ ಜಾತಿಗಳು ಕಂಡುಬರುತ್ತಿರುವುದು ಗಮನಾರ್ಹ. ಪುರೋಹಿತಶಾಹಿ, ರಾಜಶಾಹಿ ಹಾಗೂ ಜಾತಿಪದ್ಧತಿ ವ್ಯವಸ್ಥೆಗಳಿಂದಾಗಿ ಕೆಳಜಾತಿಗಳು ಮೇಲು ಜಾತಿಗಳಿಂದ ವಿವಿಧ ಬಗೆಯ ಶೋಷಣೆಗೆ ಒಳಗಾಗಿ ತಮ್ಮ ವೈಯಕ್ತಿಕ ಸ್ವಾತಂತ್ರ್ಯಪಡೆಯಲು ನಡೆಸಿದ ಹೋರಾಟಗಳಲ್ಲಿ ತೊಡಗಿಕೊಂಡಿರುವುದು ಚಾರಿತ್ರಿಕ ದಾಖಲೆ. ಈ ಹಿನ್ನೆಲೆಯಲ್ಲಿ ಕೆಳಜಾತಿ ಬಂದಾಗ ಲಂಬಾಣಿ ಜನಾಂಗವು ಬಳ್ಳಾರಿ ಜಿಲ್ಲೆಯಲ್ಲಿ 'ಸ್ವಾತಂತ್ರ್ಯ ಚಳುವಳಿ' ಹಾಗೂ 'ಜವಾಬ್ದಾರಿ ಸರ್ಕಾರ ರಚನೆ'ಗಾಗಿ ನಡೆಸಿದ ಹೋರಾಟದಲ್ಲಿ ತೊಡಗಿಕೊಂಡಿರುವುದನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

### ಬಳ್ಳಾರಿ ಜಿಲ್ಲೆಯಲ್ಲಿ ನಡೆದ ಸ್ವಾತಂತ್ರ್ಯ ಹೋರಾಟಗಳು

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಆರಂಭಗೊಂಡ 'ಸತ್ಯಾಗ್ರಹ ಶಿಬಿರ'ಗಳು ಚಳವಳಿಯಾಗಿ ಯಶಸ್ವಿಗೊಳ್ಳುವಲ್ಲಿ ಪ್ರಮುಖ ಪಾತ್ರ ವಹಿಸಿವೆ. ಇವು ಒಂದು ರೀತಿಯಲ್ಲಿ ಸತ್ಯಾಗ್ರಹಿಗಳು ಅಥವಾ ಹೋರಾಟಗಾರರನ್ನು ತಯಾರು ಮಾಡುವ ಕಾರ್ಖಾನೆಗಳಾಗಿದ್ದವು. ಅನೇಕ ವಿಚಾರಗಳನ್ನು ಸತ್ಯಾಗ್ರಹಿಗಳಿಗೆ ತಿಳಿಸಿಕೊಟ್ಟು ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಳ್ಳುವಂತೆ ಪ್ರೇರೇಪಿಸುವುದರ ಜೊತೆಗೆ ಇವು ಕಾರ್ಯಕ್ರಮಗಳನ್ನು ರೂಪಿಸುವ ಮುಖ್ಯ ಕೇಂದ್ರಗಳು ಕೂಡ. ಇಂತಹ ಶಿಬಿರಗಳು ರಾಷ್ಟ್ರದಾದ್ಯಂತ ಅನೇಕ ಸ್ಥಳಗಳಲ್ಲಿ ತೆರೆಯಲಾಗಿತ್ತು. ಅವುಗಳಲ್ಲಿ ಕೆಲವು ಗ್ರಾಮೀಣ ಪ್ರದೇಶಗಳಿಗೂ ವಿಸ್ತರಿಸಿಕೊಂಡಿದ್ದವು. ಬಳ್ಳಾರಿ ಜಿಲ್ಲೆಯಲ್ಲಿ ಸತ್ಯಾಗ್ರಹ ಶಿಬಿರಗಳು ಇಲ್ಲದಿಲ್ಲ. ಗ್ರಾಮೀಣ ಜನರು ಸಹ ಈ ಹೋರಾಟದಲ್ಲಿ ಪಾಲ್ಗೊಳ್ಳಲು ಇವು ಪ್ರೇರಣೆ ನೀಡಿವೆ. ಈ ರೀತಿಯ ಪರಕೀಯ ಪ್ರಭುತ್ವದ ವಿರುದ್ಧ ಹೋರಾಟಕ್ಕೆ ತಯಾರು ಮಾಡುವ ಸತ್ಯಾಗ್ರಹ ಶಿಬಿರಗಳು ಮತ್ತು ಹಲವು ನಾಯಕರ ಪ್ರಭಾವ ಎಲ್ಲಾ ಜಾತಿಗಳ ಜನರ ಮೇಲೆ ಆಗಿದ್ದರಿಂದ ಎಲ್ಲ ವರ್ಗದ ಜನರು ಭಾಗವಹಿಸುವಂತಾಯಿತು. ''೧೯೨೪ರ ಬೆಳಗಾವಿ ಅಧಿವೇಶನದ ಕಾಲಕ್ಕೆ ಅನೇಕ ಜಾತಿ ವರ್ಗಗಳು ಕಾಂಗ್ರೆಸ್‌ನ ಹತ್ತಿರ ಬಂದವು''.[೫೭] ಹೀಗೆ ಪ್ರತಿಯೊಂದು ವರ್ಗದ ಜನರು ಈ ಚಳವಳಿಯಲ್ಲಿ ಭಾಗವಹಿಸತೊಡಗಿದರು. ಸಮಾಜದ ಎಲ್ಲಾ ವರ್ಗಗಳನ್ನು ೧೯೪೦ರ ಹೊತ್ತಿಗೆ ಚಳವಳಿಯ ತನ್ನತೆಕ್ಕೆಗೆ ತೆಗೆದುಕೊಂಡಿತು. ಸಮಾಜದಲ್ಲಿದ್ದ ಕೆಳವರ್ಗ, ಕೆಳಜಾತಿ, ಮಹಿಳೆ, ಗ್ರಾಮೀಣ ರೈತ, ಕಾರ್ಮಿಕ ಮುಂತಾದವರು ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಳ್ಳತೊಡಗಿದರು.[೫೮] ೧೯೩೦ರ ಕಾಲಘಟ್ಟದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಲಂಬಾಣಿಗರು ಕೂಡ ಸ್ವಾತಂತ್ರ ಚಳವಳಿಯಲ್ಲಿ ಭಾಗವಹಿಸತೊಡಗಿದರು.[೫೯] ಈ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಲಂಬಾಣಿ ಜನಾಂಗದ

ವ್ಯಕ್ತಿಗಳ ಕುರಿತು ಇಲ್ಲಿ ಚರ್ಚಿಸಲಾಗಿದೆ. ಅವರು ಭಾಗವಹಿಸಿದ ಘಟನೆಗಳ ವಿವರಗಳನ್ನು ತಿಳಿಸಲೆತ್ನಿಸಿದೆ. ಸ್ವಾತಂತ್ರ್ಯ ಚಳವಳಿಯ ಜೊತೆಯಲ್ಲಿ ಮೈಸೂರು ಸಂಸ್ಥಾನ ಚಳವಳಿಯು ನಡೆಯುತ್ತಿದ್ದುದರಿಂದ ಇವೆರಡರಲ್ಲಿ ಭಾಗವಹಿಸಿರುವ ಲಂಬಾಣಿಗರನ್ನು ಪ್ರತ್ಯೇಕವಾಗಿ ಗುರುತಿಸಲು ಪ್ರಯತ್ನಿಸಿಲ್ಲ. ಸ್ವಾತಂತ್ರ್ಯ ಚಳವಳಿಯ ಕಾಲಕ್ಕೆ ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿದ್ದ ಎಲ್ಲಾ ತಾಲ್ಲೂಕುಗಳನ್ನು ಗಮನಿಸಲಾಗಿದೆ.

**ಮುನಿಯ ನಾಯ್ಕ ಎಂ.**

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಚಿಕ್ಕಜೋಗಿಹಳ್ಳಿ ತಾಂಡ ಎಂಬ ಹಳ್ಳಿಯಲ್ಲಿ ಲಂಬಾಣಿ ಸಮುದಾಯದ ಮುನಿಯನಾಯ್ಕ ಎಂ. ಇವರ ಜನನವಾಯಿತು. ತಂದೆ ಮೇಘುವತ್‌ಬದ್ಯನಾಯ್ಕ, ತಾಯಿ ಮುಚ್ಚಳ್ ಜಮಣಿಬಾಯಿ.

ಮುನಿಯನಾಯ್ಕರವರು ಗಡ್ಡ ಬಿಟ್ಟಿದ್ದರಿಂದಾಗಿ ಜನರು ಇವರಿಗೆ 'ಡಾಡಿವಾಳು' ಎಂಬ ಹೆಸರಿನಿಂದ ಕರೆಯುತ್ತಿದ್ದರು 'ಡಾಡಿವಾಳೊ' ಎಂದರೆ ಲಂಬಾಣಿ ಭಾಷೆಯಲ್ಲಿ ಗಡ್ಡಬಿಟ್ಟಿದವನು ಎಂದರ್ಥ. ಹೀಗಾಗಿ ಇಂದಿಗೂ ಡಾಡಿವಾಳೊ ಎಂದು ಕರೆಯುತ್ತಾರೆ. ಇವರು ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡಿರುವುದಕ್ಕೆ ಅನೇಕ ದಾಖಲೆಗಳಿದ್ದು ಇಂದಿಗೂ ಕೇಂದ್ರ ಹಾಗೂ ರಾಜ್ಯ ಸರ್ಕಾರ ಸ್ವಾತಂತ್ರ್ಯ ಹೋರಾಟಗಾರರಿಗೆ ನೀಡುವ ಪಿಂಚಣಿ ಪಡೆಯುತ್ತಿದ್ದಾರೆ. ಹೋರಾಟದಲ್ಲಿ ಭಾಗವಹಿಸಿದಾಗ ಚಿಕ್ಕವಯಸ್ಸಿನವರಾಗಿದ್ದು ಜೈಲುವಾಸ ಅನುಭವಿಸಿದ್ದಾರೆ. ಇವರು ಭಾಗವಹಿಸಿದ ಘಟನೆ ಮತ್ತು ಈ ಸಮುದಾಯದ ಕೆಲವರ ಭಾಗವಹಿಸುವಿಕೆಯನ್ನು ಸಹ ಅವರು ಖಚಿತಪಡಿಸುತ್ತಾರೆ.

ಬಳ್ಳಾರಿ ಜಿಲ್ಲೆಯಲ್ಲಿ ನಡೆದ ಸ್ವಾತಂತ್ರ್ಯ ಹೋರಾಟಗಳಲ್ಲಿ ''ಸವಿನಯ ಕಾಯಿದೆ ಭಂಗ ಚಳವಳಿ ಭಾಗವಾಗಿ ಬಳ್ಳಾರಿಯಲ್ಲಿ ಉಪ್ಪಿನ ಸತ್ಯಾಗ್ರಹ ನಡೆಸಲು ಸಾಧ್ಯವಿರಲಿಲ್ಲ. ಕರ್ನಾಟಕ ಪ್ರಾಂತದಲ್ಲಿ ಉಪ್ಪಿನ ಸತ್ಯಾಗ್ರಹ ನಡೆಸಲು 'ಅಂಕೋಲ'ವನ್ನು ಆರಿಸಿಲಾಗಿತ್ತು. ಬಳ್ಳಾರಿಯಲ್ಲಿ ಮದ್ಯಪಾನ ವಿರೋಧಿ ಚಳವಳಿ ತೀವ್ರವಾಯಿತು. ಈಚಲಮರ ಕಡಿಯುವುದು, ಹೆಂಡದಂಗಡಿಗಳ ಮುಂದೆ ಪಿಕೆಟಿಂಗ್ ನಡೆಸುವುದು, ಹೆಂಡದಂಗಡಿಗಳ ಬಹಿರಂಗ ಹರಾಜನ್ನು ತಡೆಯುವುದು, ವಿದೇಶಿ ಬಟ್ಟೆ ಸುಡುವುದು, ಪ್ರಭಾತ್‌ಭೇರಿ ನಡೆಸುವುದು ಮುಂತಾದವು ಬಳ್ಳಾರಿ ಜಿಲ್ಲೆಯಲ್ಲಿ ೧೯೩೦ರ ಸವಿನಯ ಕಾಯಿದೆ ಭಂಗ ಚಳುವಳಿ ಕಾಲದಲ್ಲಿ ನಡೆದ''[೬೦] ಹೋರಾಟ ಅತ್ಯಂತ ಮಹತ್ವದ್ದು. ಈ ಹೋರಾಟ ಅನೇಕರನ್ನು ಭಾಗವಹಿಸಲು ಪ್ರೇರಣೆ ನೀಡಿದೆ. ಚಿಕ್ಕ ವಯಸ್ಸಿನಲ್ಲಿಯೇ ಈ ಹೋರಾಟವನ್ನು ಕಣ್ಣಾರೆ ಕಂಡಿದ್ದ ಎಂ. ಮುನಿಯನಾಯ್ಕ ತನ್ನಲ್ಲಿ ಹೋರಾಟದ ಕಿಚ್ಚನ್ನು ಬೆಳೆಸಿಕೊಂಡಿದ್ದರು. ಬಳ್ಳಾರಿಯ ಸ್ವಾತಂತ್ರ್ಯ ಹೋರಾಟದ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ನಿರ್ಧರಿಸಿದ ಚಿಕ್ಕಜೋಗಿಹಳ್ಳಿ ಗ್ರಾಮದ ಮುಖಂಡರು ಲಂಬಾಣಿ ತಾಂಡಕ್ಕೆ ಬರುತ್ತಾರೆ. ಅಲ್ಲಿ ಲಂಬಾಣಿಗರನ್ನೆಲ್ಲಾ ಒಂದು ಕಡೆ ಸೇರಿಸಿ ಹೋರಾಟದಲ್ಲಿ ಪಾಲ್ಗೊಳ್ಳಲು ನಿಮ್ಮಲ್ಲಿ ಯಾರು ಬರುತ್ತಿರಾ ಎಂದು ಕೇಳಿದಾಗ ಲೋಕನಾಯ್ಕ ಮತ್ತು ಎಲ್. ಸಕ್ರನಾಯಕ್ ಎಂಬುವರು ನಾವು ಬರುತ್ತೇವೆಂದು ಕೈ ಎತ್ತುತ್ತಾರೆ. ಅವರನ್ನು ಕರೆದುಕೊಂಡು ಹೊರಟ ಮುಖಂಡರ ಮೆರವಣಿಗೆ ಆ ತಾಂಡದ ಸೇವಾಲಾಲ್ ಗುಡಿ ಹತ್ತಿರ ಬರುವ ವೇಳೆಗೆ ಹೆದರಿದ ಲೋಕನಾಯ್ಕ ಹಿಂದೆ ಸರಿದರೂ

ಮುನಿಯನಾಯ್ಕ ಎಂ., ಸಕ್ರನಾಯ್ಕ ಎಲ್. ಮಾತ್ರ ಧೃತಿಗೆಡಲಿಲ್ಲ. ಈ ರೀತಿ ಬಳ್ಳಾರಿ ಜಿಲ್ಲೆಯಲ್ಲಿ ಹೋರಾಟ ಚಟುವಟಿಕೆಗಳಲ್ಲಿ ಭಾಗವಹಿಸಲು ಹೊರಟ ಈ ಹೋರಾಟಗಾರರಿಗೆ ತಾಂಡದವರು ಆರತಿ ಎತ್ತಿ ಹೂವಿನ ಹಾರ ಹಾಕಿ ಮೆರವಣಿಗೆ ಮಾಡಿ ಕಳುಹಿಸಿಕೊಟ್ಟರು. ಅವರು ಎತ್ತಿನಗಾಡಿ ಹತ್ತಿಕೊಂಡು ರಾತ್ರಿ ವೇಳೆಗೆ ಕೊಟ್ಟೂರು ತಲುಪಿ ಹೋಟೆಲ್‌ನಲ್ಲಿ ಊಟಮಾಡಿ ಕಾಂಗ್ರೆಸ್ ಕಛೇರಿಯಲ್ಲಿ ಮಲಗಿಕೊಂಡರು. ಆ ರಾತ್ರಿ ಬೆಳಿಗ್ಗೆ ಧ್ವಜ ಹಾರಿಸುವ ಕಾರ್ಯಕ್ರಮವಿತ್ತು. ಮೂರನೆ ದಿನ ಮುಂಜಾನೆ ಬಾವುಟ ಹಾರಿಸಲು ತಂಡಗಳು ಸಿದ್ಧಗೊಂಡವು. ಈ ರೀತಿ ಸಿದ್ಧಗೊಂಡ ಮೊದಲನೆ ತಂಡದಲ್ಲಿ ಎಂ. ಮುನಿಯನಾಯ್ಕ, ಸಕ್ರನಾಯ್ಕ .ಎಲ್ ಇಬ್ಬರಿದ್ದರು. ಇವರು ಧ್ವಜ ಹಾರಿಸಲು ಬರುತ್ತಿದ್ದಂತೆಯೇ ಈ ವಿಷಯ ತಿಳಿದ ಪೋಲಿಸರು ತಮ್ಮ ವ್ಯಾನ್‌ನೊಂದಿಗೆ ಇವರನ್ನು ಬಂಧಿಸಲು ಸಾಲುಗಟ್ಟಿ ನಿಂತಿದ್ದರು. ಧ್ವಜ ಹಾರಿಸಲು ಮೆಟ್ಟಿಲೇರುತ್ತಿದ್ದಂತೆ ಮುನಿಯನಾಯ್ಕ ಎಂ, ಸಕ್ರನಾಯ್ಕ ಎಲ್ ಹಾಗೂ ಇತರೆ ಪ್ರಮುಖ ನಾಯಕರನ್ನು ಬಂಧಿಸಿದರು. ಇದೇ ರೀತಿ ಬಂಧನಕ್ಕೊಳಗಾದ ಎಲ್ಲರನ್ನು ಕೂಡ್ಲಿಗಿ ಠಾಣೆಗೆ ಕರೆದುಕೊಂಡು ಹೋಗಿ, ನಂತರ ಚಿತ್ರದುರ್ಗ ಸೆರೆಮನೆಗೆ ಹಾಕಿದರು.[೪೦] ತದನಂತರ ವೆಲ್ಲೂರು ಕೇಂದ್ರ ಕಾರಾಗೃಹಕ್ಕೆ ವರ್ಗಾವಣೆ ಮಾಡಲಾಯಿತು. ಸ್ವಾತಂತ್ರ್ಯ ನಂತರ ಅವರನ್ನು ಬಿಡುಗಡೆ ಮಾಡಲಾಯಿತು. ಈ ರೀತಿಯಲ್ಲಿ ಎಂ. ಮುನಿಯನಾಯ್ಕನವರು ಹೋರಾಟದಲ್ಲಿ ಪಾಲ್ಗೊಂಡು ಜೈಲು ಶಿಕ್ಷೆ ಅನುಭವಿಸಿ ಸ್ವಾತಂತ್ರ್ಯ ಹೋರಾಟಗಾರರೆಂದು ಖ್ಯಾತಿ ಪಡೆದರು. ಲಂಬಾಣಿಗರು ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಏಕೆ ಭಾಗವಹಿಸಲಿಲ್ಲ ಎಂದು ಕೇಳಿದ್ದಕ್ಕೆ ಅವರ ಮಗ ಕೊಟ್ಟ ಉತ್ತರ 'ಭಯ' ಎಂಬುದಾಗಿತ್ತು. ಸಾಮಾಜಿಕ ಕೆಳಸ್ತರದಲ್ಲಿರುವ ಜನರು ಪ್ರಭುತ್ವದ ವಿರುದ್ಧ ಹೋರಾಟಕ್ಕೆ ತೊಡಗಲು ಹಿಂದೇಟು ಹಾಕಿದ ಪ್ರಮುಖ ಕಾರಣ ಭಯವೆಂದರೆ ಅದು ಉತ್ಪ್ರೇಕ್ಷೆಯಾಗಲಾರದು. ತಮ್ಮ ತಾಂಡದಲ್ಲಿಯೇ ಲಂಬಾಣಿ ಸಮುದಾಯದ ಸಕ್ರನಾಯ್ಕ್ ಎಲ್. ಲೋಕನಾಯ್ಕ ಎಂ. ಎಂಬುವರು ಸಹ ಸ್ವಾತಂತ್ರ್ಯ ಹೋರಾಟದ ಚಟುವಟಿಕೆಗಳಲ್ಲಿ ಭಾಗವಹಿಸಿರುವುದನ್ನು ಖಚಿತಪಡಿಸಿದರು.

**ಸಕ್ರನಾಯ್ಕ ಎಲ್.**

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಚಿಕ್ಕಜೋಗಿಹಳ್ಳಿ ತಾಂಡದ ಎಲ್. ಸಕ್ರನಾಯ್ಕರವರು ಸಹ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಒಬ್ಬರು. ಚಿಕ್ಕಜೋಗಿಹಳ್ಳಿ ತಾಂಡದಲ್ಲಿ ಇವರ ಜನನವಾಯಿತು. ತಂದೆ ವಿ. ಲೋಕ್ಯನಾಯ್ಕ ತಾಯಿ ಹುನ್ನಿಬಾಯಿ ಮತ್ತು ಅಜ್ಜ ತೋಕ್ಯನಾಯ್ಕನಾಗಿದ್ದನು. ಚಿಕ್ಕ ವಯಸ್ಸಿನಲ್ಲಿ ತಂದೆ ತಾಯಿಯನ್ನು ಕಳೆದುಕೊಂಡು. ಅನೇಕ ಕಷ್ಟ ಕಾರ್ಪಣ್ಯದ ಮೂಲಕ ಚಿಕ್ಕಮ್ಮನ ಆಶ್ರಯದಲ್ಲಿ ಬೆಳೆದನು. ಪ್ರಸ್ತುತ ರಾಜ್ಯ ಮತ್ತು ಕೇಂದ್ರ ಸರ್ಕಾರಗಳೆರಡರಿಂದಲೂ ಪಿಂಚಣಿ ಪಡೆಯುತ್ತಿದ್ದಾರೆ.

ಕ್ವಿಟ್ ಇಂಡಿಯಾ ಚಳವಳಿಗೆ ಕರೆಕೊಟ್ಟಾಗ ಗಾಂಧೀಜಿಯವರನ್ನು ಬಂಧಿಸಲಾಗಿತ್ತು. ಆ ಸಂದರ್ಭದಲ್ಲಿ ಇವರು ಸ್ವಾತಂತ್ರ್ಯ ಹೋರಾಟದಲ್ಲಿ ಸ್ವಯಂಪ್ರೇರಿತರಾಗಿ ಭಾಗವಹಿಸಿದವರು. ಕೊಟ್ಟೂರು ಗ್ರಾಮದಲ್ಲಿ ಧ್ವಜ ಹಾರಿಸುವ ಕಾರ್ಯಕ್ರಮವಿತ್ತು, ಚಿಕ್ಕಜೋಗಿಹಳ್ಳಿಯಿಂದ ಅನೇಕ ಧ್ವಜ ಹಿಡಿದುಕೊಂಡು (ವಿವಿಧ ಚಟುವಟಿಕೆಗಳಲ್ಲಿ ತೊಡಗಲು)ಗುಂಪೊಂದು ಬಂದಾಗ ಇವರು ಸಹ ಬಾವುಟವನ್ನು ಹಿಡಿದುಕೊಂಡು ಎತ್ತಿನಗಾಡಿಯ ಮೂಲಕ

ಕೊಟ್ಟೂರು ತಲುಪಿ ಪೋಲಿಸ್ ಠಾಣೆಗೆ ನುಗ್ಗಿ ಧ್ವಜಹಾರಿಸಿದರು. ಈ ಎಲ್ಲಾ ಕೃತ್ಯಗಳನ್ನು ಗಮನಿಸಿದ್ದ ಒಬ್ಬ ಪೋಲಿಸ್ ಮಾಹಿತಿಯಂತೆ ಅನೇಕರನ್ನು ಬಂಧಿಸಲಾಯಿತು. ಆ ಬಂದಿತ ಗುಂಪಿನಲ್ಲಿ ಎಲ್. ಸಕ್ರನಾಯ್ಕ ಇವರೆಲ್ಲರನ್ನು ಬಂಧಿಸಿ ಚಿತ್ರದುರ್ಗಕ್ಕೆ ತರಲಾಯಿತು. ಅಲ್ಲಿ ವಿಚಾರಣೆ ನಡೆದು ಶಿಕ್ಷೆ ವಿಧಿಸಿದರು. ಅಲ್ಲಿಂದ ಬೆಂಗಳೂರು ಜೈಲಿಗೆ ಕರೆದುಕೊಂಡು ಹೋದರು. ಪುನಃ ಅಲ್ಲಿಂದ ವೆಲ್ಲೂರು ಕೇಂದ್ರ ಕಾರಗೃಹಕ್ಕೆ ಹಾಕಿದರು. ಅಲ್ಲಿ ಇವರು ಶಿಕ್ಷೆ ಅನುಭವಿಸಿದರು. ಶಿಕ್ಷೆಯ ಅವಧಿಯ ಮೊದಲೇ ಅವರನ್ನು ಬಿಡುಗಡೆ ಮಾಡಲಾಯಿತು. ಹೀಗೆ ಸಕ್ರನಾಯ್ಕರವರು ಈ ಭಾಗದ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರೆಂದು ತಿಳಿಯುತ್ತದೆ.

### ಎಂ. ಲೋಕನಾಯ್ಕ

ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿರುವ ಮತ್ತೊಬ್ಬರೆಂದರೆ ಎಂ. ಲೋಕನಾಯ್ಕರವರು. ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಚಿಕ್ಕಜೋಗಿಹಳ್ಳಿಗೆ ಹೊಂದಿರುವ ದಟ್ಟದಾರಿದ್ರ್ಯದ ಲಂಬಾಣಿ ತಾಂಡಾದಲ್ಲಿ ೧೯೧೯ರಲ್ಲಿ ಇವರು ಜನಿಸಿದರು. ಅವರ ತಂದೆ ಬಾವ್‌ಸಿಂಗ್‌ನಾಯ್ಕ ಮತ್ತು ಗೋಜಿಬಾಯಿ, ತಂದೆ-ತಾಯಿಗಳಿಗೆ ಲಂಬಾಣಿಗರ ಗುರುನಾನಕ ಪಂಥದಲ್ಲಿ ನಂಬಿಕೆಯಿತ್ತು. ಅವರ ಮೊದಲ ಮಗನಾಗಿ ಹುಟ್ಟಿದ ಲೋಕನಾಯ್ಕರು ಬಾಲ್ಯದಿಂದಲೇ ಹಲವು ಕಷ್ಟ-ನಷ್ಟಗಳನ್ನು ಅನುಭವಿಸಬೇಕಾಯಿತು. ಬಡತನ ಒಂದು ಶಾಪವಾಗಿ ಪರಿಣಮಿಸಿತು. ಬಡತನದ ಕಾರಣದಿಂದಾಗಿ ತಂದೆಯ ಬಳಗದವರೆಲ್ಲ ಇವರನ್ನು ಉಪೇಕ್ಷಿಸಿದರು. ಅತ್ಯಂತ ಕೀಳು ದೃಷ್ಟಿಯಿಂದ ಕಂಡರು. ವಾರಗೆಯ ಮಕ್ಕಳೊಂದಿಗೆ ಅವರು ಬೆರೆಯಲಾಗಲಿಲ್ಲ. ಸಾಕಷ್ಟು ಅವಮಾನ ಆಸಡ್ಡೆಗಳನ್ನು ಅನುಭವಿಸಬೇಕಾಯಿತು. ಹೀಗಿದ್ದೂ ಅವರು ಬದುಕಿನಲ್ಲಿ ನಂತರ ಏರಿದ ಎತ್ತರ ವಿಶೇಷವಾದದ್ದೆನ್ನಬೇಕು.[೨೨]

ಶಾಲಾ ದಿನಗಳಲ್ಲೇ ಗಾಂಧೀಜಿಯರಿಂದ ಪ್ರಭಾವಿತರಾಗಿದ್ದ ಎಂ. ಲೋಕನಾಯ್ಕರವರು ಗಾಂಧಿಜಿಯ ಟೋಪಿಯನ್ನು ಹಾಕುತ್ತಿದ್ದನು, ಜನರು ಇವರಿಗೆ ಟೋಪಿಲೋಕ್ಯನಾಯ್ಕ ಎಂಬ ಹೆಸರು ನೀಡಿದರು ಎಂಬ ಪ್ರತೀತಿಯಿದೆ; ಇಂದಿಗೂ ಟೋಪಿಲೋಕ್ಯ ಎಂದು ಕರೆಯುತ್ತಾರೆ. ಇವರು ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡಿರುವುದಕ್ಕೆ ಅನೇಕ ದಾಖಲೆಗಳಿದ್ದು ಮರಣ ಹೊಂದುವವರೆಗೆ ರಾಜ್ಯ ಸರ್ಕಾರ ಸ್ವಾತಂತ್ರ್ಯ ಹೋರಾಟಗಾರರಿಗೆ ನೀಡುವ ಪಿಂಚಣಿ ಪಡೆಯುತ್ತಿದ್ದರು. ಹೋರಾಟದಲ್ಲಿ ಭಾಗವಹಿಸಿ ಜೈಲುವಾಸ ಅನುಭವಿಸಿದ್ದರು.

ಅವರು ಕೊಟ್ಟೂರಿನ ಬೋರ್ಡ್ ಮಿಡ್ಲ್‌ಸ್ಕೂಲ್‌ಗೆ ೧೯೨೯ರಲ್ಲಿ ಸೇರಿದರು.[೨೩] ''೧೯೩೦ರಲ್ಲಿ ಪಾನ ಪ್ರತಿಬಂಧದ ಅಂಗವಾಗಿ ದೇಶದಾದ್ಯಂತ ಈಚಲ ಮರ ಕಡಿಯುವ ಚಳವಳಿ ನಡೆದಿತ್ತು. ಜುಲೈ ೧೫, ೧೯೩೦ ರಂದು ಹರಪನಹಳ್ಳಿಯಲ್ಲಿ ವಸುಪಾಲಪ್ಪ ಇಜಾರಿಯವರ ನೇತೃತ್ವದಲ್ಲಿ ಈಚಲಗಿಡ ಕಡಿಯಲಾಯಿತು. ದೇಶಭಕ್ತರಾಗಿದ್ದ ವಸುಪಾಲಪ್ಪನವರು ಈ ಚಳವಳಿಯ ಪ್ರಚಾರಕರಾಗಿ ಆಗ ಕೊಟ್ಟೂರಿಗೆ ಸಹ ಬಂದಿದ್ದರು. ಇದು ಬಳ್ಳಾರಿ ಜಿಲ್ಲೆಯುದ್ದಕ್ಕೂ ನಂತರ ವ್ಯಾಪಿಸಿತು. ಆಗ ಚಿಕ್ಕವರಾಗಿದ್ದ ಲೋಕನಾಯ್ಕರು ಈ ಚಳವಳಿ ಬಗ್ಗೆ ಕೇಳಿದ್ದರು. ೧೯೩೩ರಲ್ಲಿ ನಾಯ್ಕರು ಕೊಟ್ಟೂರಿನಲ್ಲಿರುವಾಗಲೇ ಅಲ್ಲಿ ಬಳ್ಳಾರಿ ಜಿಲ್ಲೆಯ ರಾಜಕೀಯ ಕಾರ್ಯಕರ್ತರ ಸಮ್ಮೇಳನ ನಡೆಯಿತು. ಶ್ರೀ ಹರ್ಡೇಕರ ಮಂಜಪ್ಪನವರ ಅಧ್ಯಕ್ಷತೆಯಲ್ಲಿ ಈ ಸಮ್ಮೇಳನವು

ಸಂಘಟನೆಯಾಗಿತ್ತು. ಇವೆರಡೂ ಘಟನೆಗಳು ಲೋಕನಾಯ್ಕರ ಮನಸ್ಸಿನಲ್ಲಿ ಸದಾ ಉಳಿದವು. ಈ ಎರಡು ಘಟನೆ ನೋಡಿ ಹೋರಾಟದಲ್ಲಿ ತೊಡಗಿಕೊಂಡರು.''[೬೮]

೧೯೪೨ರಲ್ಲಿ ಗಾಂಧೀಜಿಯವರು 'ಕ್ವಿಟ್ ಇಂಡಿಯಾ ಚಳವಳಿ' ಕರೆಕೊಟ್ಟರು. ಅದು ೧೯೪೨ ಆಗಸ್ಟ್ ೮ ರಂದು ಪ್ರಾರಂಭವಾಯಿತು. ಚಳವಳಿ ಪ್ರಾರಂಭವಾಗುವ ಮೊದಲ ದಿನ ರಾತ್ರಿಯೇ ಬ್ರಿಟಿಷ್ ಸರಕಾರ ನೆಹರು, ಪಟೇಲ, ರಾಜೇಂದ್ರಪ್ರಸಾದ ಮುಂತಾದ ನಾಯಕರನ್ನು ಬಂಧಿಸಿ ಅಜ್ಞಾತಸ್ಥಳದಲ್ಲಿ ಬಂಧನದಲ್ಲಿಟ್ಟಿತು. ಆಗ ದೇಶಾದ್ಯಂತ ತಲ್ಲಣ ಉಂಟಾಯಿತು. ಜನ ಸರಕಾರದ ವಿರುದ್ಧ ಬಂಡೆದ್ದರು. ವ್ಯಕ್ತವಾದ ಕ್ರೋಧ, ಪ್ರತಿಭಟನೆ ಲೋಕನಾಯ್ಕರನ್ನು ಸಹ ಸುಮ್ಮನಿರಗೊಡಲಿಲ್ಲ. ಕರ್ತವ್ಯದ ಕರೆಗೆ ಕೂಡಲೇ ಸ್ಪಂದಿಸಿದರು. ನೌಕರಿಗೆ ರಜ ಹಾಕಿ ಊರಿಗೆ ಬಂದು ಕೂಡ್ಲಿಗಿ ಹಾಗೂ ಬಳ್ಳಾರಿ ಜಿಲ್ಲೆಯ ಲಂಬಾಣಿ ಜನಾಂಗದ ಹಿರಿಯ ಕಾಂಗ್ರೆಸ್ ಮುಖಂಡರನ್ನು ಭೇಟಿಯಾಗಿ ಅವರನ್ನು ಚಳವಳಿಗಾಗಿ ಹುರಿದುಂಬಿಸಿದರು.

ಈ ನಾಲ್ಕು ತಿಂಗಳ ಅವಧಿಯಲ್ಲಿ ನಾಯ್ಕರು ಕೂಡ್ಲಿಗಿ ಭಾಗದಲ್ಲಿ ಚಳವಳಿಯನ್ನು ಆಸ್ಥೆ ಮತ್ತು ಉತ್ಸಾಹದಿಂದ ಸಂಘಟಿಸಿದರು. ಕಾಂಗ್ರೆಸ್ ಪಕ್ಷದ ಚಳವಳಿಗಾರರಾಗಿದ್ದ ಎಸ್.ಟಿ. ತಿಪ್ಪೇಸ್ವಾಮಿ, ಎಸ್.ಎಚ್. ಕೊಟ್ರಯ್ಯ ಇವರೊಂದಿಗೆ ಹರಿಹರ, ದಾವಣಗೆರೆ ಮುಂತಾದೆಡೆಗಳ ಭೂಗತ ಚಳವಳಿಯಲ್ಲಿ ಸಹ ಅವರು ಭಾಗಿಗಳಾದರು. ಈ ಸಮಯದಲ್ಲಿಯೇ ವಿದ್ಯಾರ್ಥಿಗಳು ಬಾಣಾವರ ರೈಲ್ವೆಸ್ಟೇಷನ್ನಿಗೆ ಬೆಂಕಿಯಿಟ್ಟರು. ಇದರಲ್ಲಿ ನಾಯ್ಕರು ನೇರವಾಗಿ ಭಾಗಿಯಾಗದಿದ್ದರೂ ಈ ಚಳವಳಿ ನಿರತ ವಿದ್ಯಾರ್ಥಿಗಳಿಗೆ ಅವರು ಗುಪ್ತವಾಗಿ ಆಹಾರ ಪದಾರ್ಥ ಒದಗಿಸುತ್ತಿದ್ದರು.[೬೯]

ನಾಯ್ಕರ ಭೂಗತ ಚಟುವಟಿಕೆಗಳು ತೀವ್ರಗೊಳ್ಳುತ್ತಿದ್ದಂತೆ ಪೋಲಿಸ್ ಅಧಿಕಾರಿಗಳ ಅವಕೃಪೆಗೆ ಅವರು ಪಾತ್ರರಾದರು. ಅವರನ್ನು ೧೯೪೨ ಅಕ್ಟೋಬರ್ ೨೪ ರಂದು ಬಂಧಿಸಿ ಡಿಸೆಂಬರ್ ೨೩ ರವರೆಗೆ ಚಿತ್ರದುರ್ಗದ ಕಾರಾಗೃಹದಲ್ಲಿಡಲಾಯಿತು.[೭೦] ಸರ್ಕಾರ ನೀಡಿರುವ ತಾಮ್ರ ಪದಕ ಇಂದಿಗೂ ಅವರ ಮನೆಯಲ್ಲಿದೆ. ಇದರಿಂದಾಗಿ ಎಂ. ಲೋಕನಾಯ್ಕರವರು ಒಬ್ಬ ಸ್ವಾತಂತ್ರ್ಯ ಹೋರಾಟಗಾರರಾಗಿದ್ದುದು ಸ್ಪಷ್ಟವಾಗುತ್ತದೆ.

**ತೌಡೂರು ಲಂಬಾಣಿ ಭೋಜ್ಯನಾಯ್ಕ**

ಲಂಬಾಣಿ ಸಮುದಾಯದವರಾದ ಇವರು ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕು (ಇಂದು ದಾವಣಗೆರೆ ಜಿಲ್ಲೆ) ತೌಡೂರು ತಾಂಡದ ಪಿ.ಎಲ್. ಭೋಜ್ಯನಾಯ್ಕ ಅವರು ಸ್ವಾತಂತ್ರ್ಯ ಹೋರಾಟಗಾರರಲ್ಲಿ ಒಬ್ಬರು. ೧೦.೧೦.೧೯೦೭ರಲ್ಲಿ ತೌಡೂರು ತಾಂಡದಲ್ಲಿ ಜನನವಾಯಿತು. ತಂದೆ ಬಾಣವತ್ ಮೇಘನಾಯ್ಕ, ತಾಯಿ ಕೀಮಾವತ್ ಗಂಗ್ಲಿಬಾಯಿ. ಇವರು ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡಿರುವುದಕ್ಕೆ ಅನೇಕ ದಾಖಲೆಗಳಿದ್ದು ರಾಜ್ಯ ಮತ್ತು ಕೇಂದ್ರ ಸರ್ಕಾರಗಳೆರಡರಿಂದಲೂ ಪಿಂಚಣಿ ಪಡೆಯುತ್ತಿದ್ದಾರೆ. ಹೋರಾಟದಲ್ಲಿ ಭಾಗವಹಿಸಿದಾಗ ಚಿಕ್ಕ ವಯಸ್ಸಿನವರಾಗಿದ್ದು. ಜೈಲುವಾಸ ಅನುಭವಿಸಿದ್ದಾರೆ.

ನಾಯ್ಕ ೪ನೇ ತರಗತಿಯವರೆಗೆ ಸ್ವಗ್ರಾಮ ತೌಡೂರಿನಲ್ಲಿ ಗುರುಕುಲ ಶಿಕ್ಷಣ ವಿದ್ಯಾಭ್ಯಾಸ ಮಾಡಿದರು. ತದನಂತರ ಅರಸಿಕೆರೆ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ೫ ರಿಂದ ೭ನೇ ತರಗತಿವರೆಗೆ ವಿದ್ಯಾಭ್ಯಾಸ

ಮಾಡಿದರು. ೬ನೇ ತರಗತಿ ಮುನ್ಸಿಪಲ್ ಹೈಸ್ಕೂಲ್‌ನಲ್ಲಿ ಹರಪನಹಳ್ಳಿಯಲ್ಲಿ ಪ್ರವೇಶ ಪಡೆದರು. ಪ್ರೌಢ ಶಿಕ್ಷಣ ಮುಂದುವರಿಸಲಾಗಲಿಲ್ಲ. ಅರ್ಧಕ್ಕೆ ಬಿಟ್ಟರು. ೧೯೩೪ರಲ್ಲಿ ರಾಷ್ಟ್ರಪಿತ ಗಾಂಧಿಯವರು ಕೊಟ್ಟೂರಿಗೆ ಆಗಮಿಸಿದಾಗ ಕೊಟ್ಟೂರಿನ ತೇರುಬೈಲಿನಲ್ಲಿ ಅವರಿಗೆ ಭವ್ಯವಾದ ಸ್ವಾಗತ ದೊರೆಯಿತು. ಮಹಾತ್ಮ ಗಾಂಧಿರವರು ಕೊಟ್ಟೂರಿನ ವಿದ್ಯಾರ್ಥಿ ನಿಲಯಕ್ಕೆ ಭೇಟಿಯಿತ್ತರು. ಆನಂತರ ತಮ್ಮ ಅಮೃತ ಹಸ್ತದಿಂದ ದೀನಸೇವಾಶ್ರಮದ ಶಂಕುಸ್ಥಾಪನೆ ನೆರವೇರಿಸಿದರು. ಮಹಾತ್ಮಾ ಗಾಂಧಿಯವರ ಉಜ್ವಲ ಭಾಷಣ, ಹರಿಜನೋದ್ಧಾರ ಕಾರ್ಯಕ್ರಮ ಸರಳ ಜೀವನ ಮತ್ತು ಆದರ್ಶದಿಂದ ಬೋಜ್ಯನಾಯ್ಕರವರು ಪ್ರಭಾವಿತರಾದರು. ಹಾಗೂ ಖಾದಿ ಉಡುಪು ತೊಡಲು ಪ್ರಾರಂಭಿಸಿದರು.

ಅಂದಿನ ದಿವಸಗಳಲ್ಲಿ ಶ್ರೀಯುತ ಇಜಾರಿ ವಸುಪಾಲಪ್ಪನವರ ಮುಖಂಡತ್ವದಲ್ಲಿ ಬೆಳಗಿನ ಜಾವ ೫ ಗಂಟೆಗೆ ಶಾಲಾ ಬಾಲಕರೆಲ್ಲರೂ ಪ್ರಭಾತ್ ಭೇರಿಗೆ ಹೋಗುತ್ತಲಿದ್ದುದನ್ನು ಸ್ಮರಿಸಿಕೊಳ್ಳುತ್ತಾರೆ. ಪ್ರಭಾತ್ ಭೇರಿಯ ಹಾಡುಗಳಲ್ಲಿ ಕೆಲವನ್ನು ಉದ್ಧರಿಸುತ್ತಾರೆ.

''ಗಾಂಧಿ ಮಹಾತ್ಮರು ದಾಂಡಿಗೆ ಹೊರಟರು
ಹುರುಪಿನೊಳೆದ್ದರು ಹಿಂದುಗಳೆಲ್ಲರು
ಬೆದರಿ ಬೆದರಿ ನಡುಗಿತು ಲಂಡನ್''

ಪ್ರಭಾತ್ ಭೇರಿಯಲ್ಲಿ ಜನರನ್ನು ಸ್ವಾತಂತ್ರ ಸಂಗ್ರಾಮಕ್ಕೆ ಅಣಿಗೊಳಿಸುವ ಹಾಡುಗಳನ್ನು ಹಾಡುತ್ತಿದ್ದರು. ಹರಪನಹಳ್ಳಿ ಶಾಲೆಯಲ್ಲಿ ಮಾದಿಹಳ್ಳಿ ಗ್ರಾಮದ ಟಿ. ರೇವಣಸಿದ್ದನಗೌಡ ಇವರು ಸಹಪಾಠಿಯಾಗಿದ್ದರು. ಇಜಾರಿ ವಸುಪಾಲಪ್ಪನವರು ನಡೆಸುತ್ತಿದ್ದ ಸಾರ್ವಜನಿಕ ಸಭೆಗಳಿಗೆ ಹಾಜರಾಗುತ್ತಿದ್ದರು. ಪತ್ರಿಕೆಗಳನ್ನು ಓದಿ ದೇಶದ ಪರಿಸ್ಥಿತಿ ತಿಳಿದುಕೊಳ್ಳುತ್ತಿದ್ದರು.

೧೯೩೩ರಲ್ಲಿ ಹರ್ಡೇಕರ್ ಮಂಜಪ್ಪನವರ ಅಧ್ಯಕ್ಷತೆಯಲ್ಲಿ ಕೊಟ್ಟೂರಿನ ತೇರು ಬಯಲಿನಲ್ಲಿ ಇಜಾರಿ ವಸುಪಾಲಪ್ಪನವರ ನೇತೃತ್ವದಲ್ಲಿ ಜರುಗಿದ ಸ್ವಾತಂತ್ರ್ಯ ಯೋಧರ ತರಬೇತಿ ಶಿಬಿರವನ್ನು ನೆನೆಪಿಸಿಕೊಳ್ಳುತ್ತಾರೆ. ಈ ಶಿಬಿರದಲ್ಲಿ ಹರಪನಹಳ್ಳಿಯ ತೆಗ್ಗಿಮಠದ ಪಂಚಾಕ್ಷರಯ್ಯನವರು ಚಿಗಟೇರಿ ಮದೇನೂರು ಕೊಟ್ರಬಸಪ್ಪನವರು ಪಾಲ್ಗೊಂಡರು. ಕೊಟ್ಟೂರಿನ ಗೂರ್ಲಿ ಶರಣಪ್ಪನವರು ಚಿಕ್ಕಜೋಗಿಹಳ್ಳಿ ತಾಂಡದ ಎಂ. ಮುನಿಯನಾಯ್ಕ, ಸಕ್ರನಾಯ್ಕ, ಲೋಕ್ಯನಾಯ್ಕರವರು ಪಾಲ್ಗೊಂಡರು ಹಾಗೂ ಆ ಶಿಬಿರದಲ್ಲಿ ಭಾಗವಹಿಸಿದ ಬಳ್ಳಾರಿಯ ಹೆಸರಾಂತ ಸ್ವಾತಂತ್ರ್ಯ ಹೋರಾಟಗಾರರಾದ ಟೇಕೂರು ಸುಬ್ರಹ್ಮಣ್ಯಂ, ಟಿ.ಬಿ. ಕೇಶವರಾವ್ ಇತ್ಯಾದಿಯವರನ್ನು ಆಗ ತೆಗೆದಿದ್ದ ಒಂದು ಅಪೂರ್ವ ಫೋಟೋದಲ್ಲಿ ಕಾಣಬಹುದು. ಕೊಟ್ಟೂರಿನ ದೇವೇಂದ್ರಪ್ಪನವರು ಇವರಿಗೆ ಪರಿಚಯವಾದರು.

ಅಖಿಲ ಭಾರತ ಕಾಂಗ್ರೆಸ್ಸಿನವರು ೦೮.೦೮.೧೯೪೨ರಲ್ಲಿ 'ಆಂಗ್ಲರೇ ಭಾರತಬಿಟ್ಟು ತೊಲಗಿರಿ' ಎನ್ನುವ ಚಳವಳಿಯನ್ನು ಪೂಜ್ಯ ಮಹಾತ್ಮಾ ಗಾಂಧಿಯವರ ನೇತೃತ್ವದಲ್ಲಿ ಪ್ರಾರಂಭಿಸಿದರು. ಆ ಚಳವಳಿಯು ಭಾರತದಾದ್ಯಂತ ವ್ಯಾಪಿಸಿತು. ಈ ಚಳವಳಿಯಿಂದ ಪ್ರೇರಿತರಾಗಿ ತಮ್ಮ ಸ್ನೇಹಿತರ ಗುಂಪು ಮಾಡಿಕೊಂಡು ಆ

ಚಳವಳಿಯಲ್ಲಿ ಸಕ್ರಿಯ ಪಾತ್ರ ವಹಿಸಲು ನಿರ್ಧರಿಸಿದರು. ಆ ಸಮಯದಲ್ಲಿ ಇವರಿಗೆ ನೇತಾಜಿ ಸುಭಾಸ್ ಚಂದ್ರಬೋಸರು ಜಪಾನಿನಲ್ಲಿರುವರೆನ್ನುವ ಖಚಿತ ಮಾಹಿತಿ ದೊರೆತಿತ್ತು. ಇವರು ವಿದ್ಯಾರ್ಥಿ ದಿಸೆಯಲ್ಲಿ ಕ್ರಾಂತಿವೀರರಾದ ಭಗತ್‌ಸಿಂಗ್, ರಾಜಗುರು, ಸುಖದೇವರಾಯರು ಮೊದಲಾದವರಿಂದ ಪ್ರಭಾವಿತರಾಗಿದ್ದರು. ಕೇವಲ ಆ ಹಿಂಸಾ ಚಳವಳಿಯಿಂದ ಸ್ವಾತಂತ್ರ್ಯ ದೊರೆಯುವುದಿಲ್ಲ. ನೇತಾಜಿ ಸುಭಾಸ್ ಚಂದ್ರಬೋಸರು ಹೇಳಿದಂತೆ ರಕ್ತದರ್ಪಣ ಮಾಡದಿದ್ದರೆ ಸ್ವಾತಂತ್ರ್ಯ ದೊರೆಯುವುದಿಲ್ಲವೆನ್ನುವ ಭಾವನೆ ಈ ತರುಣಮಿತ್ರದಾಗಿತ್ತು. ನೇತಾಜಿ ಬೋಸರು ಜಪಾನಿನಿಂದ ವಿಮಾನಗಳಲ್ಲಿ ಭಾರತೀಯರಿಗೆ ಶಸ್ತ್ರಾಸ್ತ್ರಗಳನ್ನೊದಗಿಸುವರಂತಲೂ, ಅವುಗಳ ಉಪಯೋಗಕ್ಕೆ ಸಿದ್ಧರಿರಬೇಕೆಂತಲೂ ಈ ಯುವಕರು ಭಾವಿಸಿದರು. ೧೯೪೨ರಲ್ಲಿ ಹರಪನಹಳ್ಳಿ, ಕೊಟ್ಟೂರು ನಡುವೆ ಹರಪನಹಳ್ಳಿಯಿಂದ ಎರಡು ಮೈಲು ಅಂತರದಲ್ಲಿ ಟೆಲಿಗ್ರಾಮ್ ತಂತಿಯನ್ನು ಕತ್ತರಿಸಿದಾಗ ಹಿರಿಯ ವಿದ್ಯಾರ್ಥಿಯಾಗಿದ್ದ ಬೋಜಾನಾಯ್ಕರನ್ನು, ಮಾದಿಹಳ್ಳಿ ಗ್ರಾಮದ ಟಿ. ರೇವಣಸಿದ್ದನಗೌಡರನ್ನು ಹಾಗೂ ಹರಪನಹಳ್ಳಿಯ ಟಿ.ಎಂ. ಚಂದ್ರಯ್ಯ ಇವರನ್ನು ಸಹಿತ ಬಂಧಿಸಿ ಏಳುದಿನ ಹರಪನಹಳ್ಳಿ ಸಬ್ ಜೈಲಿನಲ್ಲಿ ಮತ್ತು ನಾಲ್ಕು ದಿವಸ ಹೊಸಪೇಟೆ ಸಬ್ ಜೈಲಿನಲ್ಲಿ ಇಟ್ಟಿದ್ದರು. ಹೊಸಪೇಟೆಯಿಂದ ೨೭.೦೮.೧೯೪೨ಕ್ಕೆ ವೆಲ್ಲೂರಿಗೆ ಸಾಗಿಸಿದರು. ಜೈಲಿನಲ್ಲಿ ಇದ್ದಾಗ ಸಿ.ಎಂ. ಪೂಣಚ್ಚ ಮತ್ತು ಟಿ. ಸುಬ್ರಹ್ಮಣ್ಯಂರವರ ಪರಿಚಯವಾಗಿತ್ತು.[೬೬]

೧೯೪೯ರಲ್ಲಿ ಇಜಾರಿ ಮಹಾಬಲಪ್ಪನವರ ಸಹಾಯದಿಂದ ಹರಪನಹಳ್ಳಿಯಲ್ಲಿ ಲಂಬಾಣಿ ಹಾಸ್ಟೆಲ್ ತೆರೆದರು. ತದನಂತರ ಕೊಟ್ಟೂರಿನಲ್ಲಿ ಸಹಿತ ಲಂಬಾಣಿ ಹಾಸ್ಟೆಲ್ ತೆರೆದರು. ಬಳ್ಳಾರಿ ಜಿಲ್ಲೆಯ ಲಂಬಾಣಿ ಸಂಘದ ಸದಸ್ಯರಾಗಿ ಲಂಬಾಣಿಗರ ಏಳಿಗೆಗೆ ಶ್ರಮಿಸಿದ್ದಾರೆ. ಸಹಕಾರ ರಂಗದಲ್ಲಿಯೂ ಇವರು ಸೇವೆ ಸಲ್ಲಿಸಿದ್ದಾರೆ. ಸರ್ಕಾರ ನೀಡಿರುವ ಕಂಚಿನ ಪದಕ ಇಂದಿಗೂ ಅವರ ಮನೆಯಲ್ಲಿದೆ. ಇದರಿಂದಾಗಿ ಲಂಬಾಣಿ ಬೋಜ್ಯನಾಯ್ಕರವರು ಒಬ್ಬ ಸ್ವಾತಂತ್ರ್ಯ ಹೋರಾಟಗಾರರಾಗಿದ್ದುದು ಸ್ಪಷ್ಟವಾಗುತ್ತದೆ.

೬. ಬ್ರಿಟಿಷರ ಆಳ್ವಿಕೆಯಲ್ಲಿ ಬಳ್ಳಾರಿ ಜಿಲ್ಲೆಯ ಲಂಬಾಣಿಗರು

ಭಾರತದಲ್ಲಿ ಬ್ರಿಟಿಷರ ಆಳ್ವಿಕೆಯ ಪರಿಣಾಮಗಳು ನಾನಾ ಬಗೆಯಲ್ಲಿ ಆಗಿರುವುದು ಸ್ಪಷ್ಟ. ಕರ್ನಾಟಕ ಮಟ್ಟಿಗೆ ನೋಡುವುದಾದರೆ ಭಾಷೆ, ಧರ್ಮ, ಸಂಸ್ಕೃತಿ, ಜನಾಂಗಗಳ ಮೇಲಾದ ದೌರ್ಜನ್ಯ, ಹಿಂಸೆ, ಶೋಷಣೆಗೆ ಮಿತಿಯಿರಲಿಲ್ಲ. ಈ ಹಿನ್ನೆಲೆಯಲ್ಲಿ ಮದ್ರಾಸ್ ಅಧಿಪತ್ಯದ ಬಳ್ಳಾರಿ ಜಿಲ್ಲೆಯಲ್ಲಿ ಲಂಬಾಣಿಗರನ್ನು ಕುರಿತು ಬ್ರಿಟಿಷರ ದೃಷ್ಟಿಕೋನವನ್ನು ಇಲ್ಲಿ ತಿಳಿಸಲಾಗಿದೆ. ಬೇರೆ ಸಮುದಾಯದವರಿದ್ದರು ಲಂಬಾಣಿಗರು ಬ್ರಿಟಿಷರ ಪೂರ್ವದಲ್ಲಿ ರಾಜರ ಪಾಳೆಗಾರ ಆಳ್ವಿಕೆಯಲ್ಲಿ ಸೈನಿಕರಿಗೆ ಆಹಾರ ಪದಾರ್ಥಗಳನ್ನು ಸರಬರಾಜು ಮಾಡುತ್ತಿದ್ದರು. ಅನಂತರ ಬ್ರಿಟಿಷರು ಅವರನ್ನು ಸ್ಥಾನ ಪಲ್ಲಟಗೊಳಿಸಿದರು. ಈ ಹಿನ್ನೆಲೆಯಲ್ಲಿ ಲಂಬಾಣಿಗರ ಸಂಕ್ಷಿಪ್ತ ಪರಿಚಯವನ್ನು ಇಲ್ಲಿ ಕೊಡಲಾಗಿದೆ. ಮಧ್ಯಕಾಲೀನ ಕರ್ನಾಟಕದ ತುಂಗಭದ್ರಾ ನದಿಯ ದಕ್ಷಿಣಕ್ಕೆ ಮತ್ತು ವೇದಾವತಿ ನದಿಯ ಪಶ್ಚಿಮಕ್ಕೆ ಲಂಬಾಣಿಗರು ವ್ಯಾಪಕವಾಗಿ ನೆಲೆಸಿದ್ದರಿಂದ ಈ ಪ್ರದೇಶಕ್ಕೆ 'ಬಂಜಾರ ನಾಡು' (ಲಂಬಾಣಿಗರ ನಾಡು)ಎಂದು ಕರೆಯಲಾಗಿತ್ತು. ವಿಜಯನಗರದ ಲಂಬಾಣಿಗರು ರಕ್ಕಸತಂಗಡಿಯ ಯುದ್ಧದ ನಂತರ ಪಾಳೇಗಾರರ ಆಳ್ವಿಕೆಯಲ್ಲಿ ಖಾದ್ಯಪದಾರ್ಥಗಳನ್ನು ಸರಬರಾಜು ಮಾಡುತ್ತಿದ್ದರು. ಬಹುಶಃ ಈ

ಭಾಗವಹಿಸುವ ಗುಣವುಳ್ಳದ್ದಾಗಿದೆ. ಆಗ ಅವರು ಒಕ್ಕಲುತನವನ್ನು ಕೈಗೊಂಡಿರುವವರು ಕೆಲವರು ಸರ್ಕಾರದಲ್ಲಿ ಪೋಲೀಸ್, ಸಿಪಾಯಿ, ಕಛೇರಿಯಲ್ಲಿಯೂ ಆಳು ಮುಂತಾದ ನೌಕರಿಯಲ್ಲಿದ್ದರು.

ಭಾರತದ ಬಹುತೇಕ ಘಟ್ಟಗಳಲ್ಲಿರುವ ಸೈನಿಕರಿಗೆ ಆಹಾರ ಸರಬರಾಜು ಮಾಡುತ್ತಿದ್ದರು. ಬ್ರಿಟಿಷ್ ಪ್ರವಾಸಿಗರು ಮತ್ತು ಅಧಿಕಾರಿಗಳು ಲಂಬಾಣಿಗರ ಪ್ರಾಮಾಣಿಕತೆ ಹಾಗೂ ಸಾಹಸಿಗುಣಗಳನ್ನು ಸರಕನ್ನು ಸಾಗಾಣಿಕೆ ಮಾಡುವುದರಲ್ಲಿ ಅವರಿಗಿದ್ದ ಚಾತುರ್ಯವನ್ನು ತುಂಬಾ ಶ್ಲಾಘಿಸಿದ್ದಾರೆ.[೬೦] ಲಂಬಾಣಿಗರು ಸಂಪರ್ಕದ ಮಾಧ್ಯಮವು ಕೇವಲ ಯುದ್ಧ ಕಾಲದಲ್ಲಿ ಮಾತ್ರವಲ್ಲದೆ ಶಾಂತಿ ಕಾಲದಲ್ಲಿಯೂ ಹೆಚ್ಚಿನ ಮಹತ್ವವನ್ನು ಪಡೆದಿತ್ತೆಂದು ಹೇಳಿದ್ದಾರೆ. ಇವರು ಸಾಮಾನ್ಯ ಜನರ ಜೊತೆಗೂ ವ್ಯವಹಾರಿಕ ಸಂಬಂಧವನ್ನು ಇಟ್ಟುಕೊಂಡಿದ್ದರು ಎಂದು ತಿಳಿದುಬರುತ್ತದೆ. ಲಂಬಾಣಿಗಳು ಧಾನ್ಯ ಉಪ್ಪು, ತೆಂಗಿನಕಾಯಿ ಸಾಂಬಾರ ಪದಾರ್ಥಗಳು, ಹತ್ತಿ, ಉಣ್ಣೆ ಇತ್ಯಾದಿಗಳನ್ನು ಶಾಂತಿಕಾಲದಲ್ಲಿ ಸಾಗಿಸುತ್ತಿದ್ದರು. ಉತ್ತರ ಭಾರತದಿಂದ ದಕ್ಷಿಣ ಭಾರತಕ್ಕೂ, ಕರಾವಳಿ ಪ್ರದೇಶದಿಂದ ಬಯಲು ಪ್ರದೇಶಕ್ಕೂ ಸರಕು ಸರಂಜಾಮುಗಳನ್ನು ಸಾಗಿಸುವ ಸಂಪರ್ಕ ಮಾಧ್ಯಮವಾಗಿ ಇವರು ತುಂಬಾ ಪ್ರಯೋಜನಕಾರಿಯಾಗಿ ಮಹತ್ವ ಪಾತ್ರ ನಿರ್ವಹಿಸುತ್ತಿದ್ದರು.[೬೧]

೧೮೭೧ರ ಜನಗಣತಿಯು ಲಂಬಾಣಿಗರು ಹೈದ್ರಾಬಾದ್, ಬಾಂಬೆ ಪ್ರದೇಶಗಳಲ್ಲಿ ಕೇಂದ್ರಿಕೃತವಾಗಿದ್ದರು ಎಂದು ತಿಳಿಸುತ್ತಾರೆ. ಅಲ್ಲದೆ ೧೩ ಬೇರೆ ಬೇರೆ ಪ್ರಾಂತ್ಯಗಳಲ್ಲಿ ಹಾಗೂ ರಾಜ್ಯಗಳಲ್ಲಿಯೂ ಇವರು ಕಂಡು ಬಂದಿದ್ದಾರೆ. ಹೀಗೆ ಇವರ ಜನಸಾಂದ್ರತೆಯು ೧೯ನೇ ಶತಮಾನದ ಕೊನೆಯ ಭಾಗದವರೆಗೂ ದಖನ್ ಪ್ರಾಂತ್ಯ ಮತ್ತು ದಕ್ಷಿಣ ಭಾರತದಲ್ಲಿ ಹೆಚ್ಚಾಗಿ ಕೇಂದ್ರಿಕೃತವಾಗಿತ್ತು. ಇದು ಇವರಿಗೆ ತಮ್ಮ ಸಾಂಪ್ರದಾಯಿಕ ಸ್ವಾಭಾವಿಕ ಆಚರಣೆಗಳು ಹಾಗೂ ಭಾಷೆಯನ್ನು ಭಿನ್ನವಾಗಿ ಹಿಡಿದಿಟ್ಟುಕೊಳ್ಳುವುದು ಸಹಕಾರಿಯಾಗಿತ್ತು.[೬೨]

ಬ್ರಿಟಿಷರು ನೇರ ಆಡಳಿತವನ್ನು ಭಾರತದಲ್ಲಿ ಪ್ರಾರಂಭಿಸಿ ಮೊದಲ ಹಂತದಲ್ಲಿ ಯಾಂತ್ರಿಕ ಸಾರಿಗೆ ಮತ್ತು ರೈಲ್ವೆಯನ್ನು ಪ್ರಾರಂಭಿಸುವ ಮೂಲಕ ರಸ್ತೆಗಳನ್ನು ಅಭಿವೃದ್ಧಿ ಪಡಿಸಿದರು. ಇದರಿಂದ ಲಂಬಾಣಿಗರು ಪಾರಂಪರಿಕವಾಗಿ ದನ ಮತ್ತು ಬಂಡಿಯ ಮೂಲಕ ನಡೆಸಿಕೊಂಡು ಬಂದಿದ್ದ ಸರಕು ಸಾಗಾಣಿಕೆಯನ್ನು ಕೈಬಿಡಬೇಕಾಯಿತು. ರಸ್ತೆಗಳಲ್ಲಿ ಸರಕುಗಳ ರಕ್ಷಣೆ ಮತ್ತು ಯಾತ್ರಿಕ ವಾಹನಗಳ ಬಳಕೆ ಹೆಚ್ಚಾಗಿದ್ದರಿಂದ ಲಂಬಾಣಿಗಳಿಗೆ ಒಳ ಪ್ರದೇಶಗಳಲ್ಲಿ ಸಿಗುತ್ತಿದ್ದ ಸಾಗಾಣಿಕೆಯ ಕೆಲಸ ಭಾಗಶಃ ನಿಂತು ಹೋಯಿತು. ಹೀಗಾಗಿ ಲಂಬಾಣಿಗರು ಜೀವನೋಪಾಯಕ್ಕಾಗಿ ಅರಣ್ಯಗಳತ್ತ ಗಮನ ನೀಡಿ ಬೇಟೆಯಾಡುವ, ಮರಗಳನ್ನು ಕಡಿಯುವ ಮತ್ತು ಅರಣ್ಯ ಉಪ-ಉತ್ಪನ್ನಗಳನ್ನು ಸಂಗ್ರಹಣೆ ಮಾಡುವ ಮೂಲಕ ಜೀವನ ನಿರ್ವಹಿಸತೊಡಗಿದರು. ಆದರೆ ಇದು ಅವರಿಗೆ ಜೀವನಕ್ಕೆ ಸಾಕಾಗುವಷ್ಟು ಆದಾಯವನ್ನು ನೀಡುವಲ್ಲಿ ವಿಫಲವಾಗಿತ್ತು. ಇವರು ಅನಕ್ಷರಸ್ಥರಾಗಿದ್ದರಿಂದ ಯಾವುದೇ ತರಬೇತಿ ಪಡೆದ ವೃತ್ತಿ ಕೌಶಲ್ಯತೆ ಅವರಿಗಿರಲಿಲ್ಲ. ಜೊತೆಗೆ ಆರ್ಥಿಕವಾಗಿ ಹಿಂದುಳಿದಿದ್ದು ಇವರು ಜೀವನೋಪಾಯಕ್ಕೆ ಬೇರೆ ಬೇರೆ ಉಪವೃತ್ತಿ ಅಥವಾ ಉದ್ಯೋಗಗಳು ಪಡೆದುಕೊಳ್ಳುವಲ್ಲಿ ಯಾವುದೇ ಅವಕಾಶಗಳು ದೊರಕದೆ ಇದ್ದದ್ದರಿಂದ ಕ್ರೂರ ಅಪಹರಣ ಮತ್ತು ಹೊಟ್ಟೆ ತುಂಬಿಸಿಕೊಳ್ಳಲು ದರೋಡೆಕೋರರಾಗಿ ೧೯ನೇ ಶತಮಾನದ ಮಧ್ಯಭಾಗದಲ್ಲಿ ಕಂಡು ಬರುತ್ತಾರೆ.[೬೩] ಸಾಮಾನ್ಯವಾಗಿ ಇವರು ಎತ್ತರದ ಸ್ಥಳಗಳಲ್ಲಿ ಶತ್ರುಗಳು ಸುಲಭವಾಗಿ ಪ್ರವೇಶಿಸಲಾಗದ ಆಯಕಟ್ಟುಗಳಲ್ಲಿ ವಾಸಿಸುವುದನ್ನು ನೋಡಬಹುದಾಗಿದೆ.

ಲಂಬಾಣಿಗರು ತಮ್ಮ ಮಕ್ಕಳ ಶಿಕ್ಷಣಕ್ಕೆ ಹೆಚ್ಚಿನ ಒತ್ತು ಕೊಡುವುದರ ಬಗ್ಗೆ ಆಸಕ್ತಿ ಹೊಂದಿರಲಿಲ್ಲ.[೭೪] ಇವರನ್ನೂ ಪ್ರೇರೇಪಿಸಿ ವಿದ್ಯಾವಂತರನ್ನಾಗಿ ಮಾಡಲು ಸಾಧ್ಯವೆಂದು ಬ್ರಿಟಿಷ್ ಆಡಳಿತಗಾರರು ಪರಿಗಣಿಸಿದ್ದರು. ಬ್ರಿಟಿಷ್ ನ್ಯಾಯಾಲಯಗಳು ಈ ಸಮುದಾಯಕ್ಕೆ ಅತ್ಯಂತ ಕಠೋರವಾದ ಶಿಕ್ಷೆಯನ್ನು ಕೃತಕವಾಗಿ ಜಾರಿಗೊಳಿಸಿದ್ದವು. ಕೊನೆಗೆ ಅಪರಾಧ ಅಥವಾ ದುಷ್ಕೃತ್ಯಗಳನ್ನು ಮಾಡುವ ಸಮುದಾಯಗಳ ಜೊತೆ ಲಂಬಾಣಿಗರನ್ನು ಅಪರಾಧಿ ಬುಡಕಟ್ಟು ಕಾಯ್ದೆ ೧೮೭೧ರಲ್ಲಿ ಸೇರಿಸಿ ಅಪರಾಧಿ ಬುಡಕಟ್ಟು ಎಂದು ಪರಿಗಣಿಸಿದರು. ಚಮನ್‌ಲಾಲ್‌ರವರ ಹೇಳಿಕೆ ''ನನ್ನ ಪ್ರಬಂಧವಾದ ಜಿಪ್ಸಿಗಳು ಭಾಗಶಃ ಘಜನಿ ಮಹಮ್ಮದ್‌ನು ದಂಡೆತ್ತಿ ಲೂಟಿ ಮಾಡಿದ ವಸ್ತುಗಳನ್ನು ಸಾಗಿಸುವ ಜೀತದಾಳುಗಳಾಗಿರಬೇಕು; ಇವರ ಸೈನ್ಯದ ಒಂದು ಭಾಗವಾಗಿ ಸೈನಿಕರಾಗಿ ಕೆಲಸ ಮಾಡುತ್ತಿದ್ದರು''.[೫]

ಈ ಎಲ್ಲಾ ಪರಿಣಾಮಗಳಿಂದ ಲಂಬಾಣಿಗರ ಸಾಂಪ್ರದಾಯಿಕ ಆದಾಯದ ಅಥವಾ ಆರ್ಥಿಕ ಮೂಲ ಕುಗ್ಗಿದ್ದರಿಂದ ಬೇರೆ ಆದಾಯದ ಮೂಲಗಳನ್ನು ಬಲವಂತವಾಗಿ ಹುಡುಕಿಕೊಳ್ಳಬೇಕಾಯ್ತು. ಅರಣ್ಯಗಳಲ್ಲಿ, ಹೊಲಗದ್ದೆಗಳಲ್ಲಿ ಕೂಲಿಗಳಾಗಿ ಅಥವಾ ಇತರೇ ಕೂಲಿ ಹಾಗೂ ಸೇವಾ ಕೆಲಸಗಳನ್ನು ತಮ್ಮ ಮನಸಾಕ್ಷಿಗೆ ವಿರುದ್ಧವಾಗಿ ಯಾವುದೇ ಸಾಂಪ್ರದಾಯಿಕ ಸಾಂಸ್ಕೃತಿಕ ಹಿನ್ನೆಲೆ ಇಲ್ಲದೆ ಮಾಡಬೇಕಾಯಿತು.

ಕ್ರಿ.ಶ. ೧೯ನೇ ಶತಮಾನದಲ್ಲಿ ಇವರನ್ನು ಸೈನಿಕರಲ್ಲಿ ಸೇರಿಸಿಕೊಳ್ಳಬಾರದೆಂದು ಸರ್ಕಾರಿ ಹುಕುಂ ಹೊರಡಿಸಿದ್ದರಿಂದ ಇವರು ತಮ್ಮ ಕ್ಷತ್ರಿಯ ವೃತ್ತಿಯ ಉಪಜೀವನ ಸಾಧನೆಯಿಂದ ಎರವಾದರು. ಆದಾಗ್ಯೂ ಇಂದಿನವರೆಗೆ ತಮ್ಮ ಗಂಡು ಸ್ವಭಾವವನ್ನು ಕಳೆದುಕೊಂಡಿಲ್ಲ. ಸೈನಿಕರಿಗೆ ಖಾದ್ಯ ಪದಾರ್ಥಗಳನ್ನು ಸರಬರಾಜು ಮಾಡುವುದರಲ್ಲಿ ಇವರು ಸುಪ್ರಸಿದ್ಧರು. ಗುಂಡಿನ ಗುರಿ ಹೊಡೆಯುವಲ್ಲಿ ಎತ್ತಿದ ಕೈ ಇವರದು. ಕಾಲ ಮಹಿಮೆಯಿಂದ ಇವರು ಹಿಂದುಳಿದವರಾಗಿದ್ದಾರೆ. ಎಂದು ಬಿ.ಟಿ. ಲಲಿತನಾಯ್ಕರವರು ಬಂಜಾರ ಹೆಜ್ಜೆಯ ಗುರುತು ಪುಸ್ತಕದಲ್ಲಿ ಅಭಿಪ್ರಾಯಪಟ್ಟಿದ್ದಾರೆ.

**ಟಿಪ್ಪಣಿಗಳು**

೧. ಕರ್ನಾಟಕ ವಿಕಾಸ ಜೂನ್, ೨೦೦೦, ಪು.೨೨

೨. ಅದೇ, ಪುಟ. ೯

೩. ಕರ್ನಾಟಕ ಪಂಚಾಯತ್ ಕಾಯ್ದೆಗಳು, ಶ್ರೀಧರ ಎ., ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೨, ಪುಟ.೨

೪. ಪಂಚಾಯತ್‌ರಾಜ್ ಮತ್ತು ಮಹಿಳೆ ಒಂದು ಅಧ್ಯಯನ, ಎರ್ರಿಸ್ವಾಮಿ ಎಂ., ಕನ್ನಡ ವಿಶ್ವವಿದ್ಯಾಲಯ, ಹಂಪಿ. ವಿದ್ಯಾರಣ್ಯ, ೧೯೯೭ ಪು. ೧೫ - ೧೬

೫. ಕರ್ನಾಟಕ ವಿಕಾಸ, ಜೂನ್ ೨೦೦೦, ಪುಟ. ೯

೬. ದೇಶಿಯತೆಯ ನೆರಳಲ್ಲಿ ವಿಕೇಂದ್ರೀಕರಣ, ಚಂದ್ರ ಪೂಜಾರಿ ಎಂ., ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ವಿದ್ಯಾರಣ್ಯ, ೨೦೦೧, ಪುಟ. ೭೭

೭. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ-೨, ೧೯೮೫, ಪುಟ. ೫೮೪.

೮. ಸಾಮಾಜಿಕ ಹಿನ್ನೆಲೆಯ ಮೈಸೂರು ರಾಜಕೀಯ, ಎಸ್.ಚಂದ್ರಶೇಖರ್, ೧೯೮೫, ಪುಟ. ೨೨.

೯. ಅದೇ, ಪುಟ.೩೯೨

೧೦. ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ದ್ವಿತಿಯ ಸಂಪುಟ, ಸೂರ್ಯನಾಥ ಕಾಮತ್, ಗೀತಾ ಬುಕ್ ಹೌಸ್, ಮೈಸೂರು, ೧೯೭೭, ಪುಟ. ೮

೧೧. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ-೨, ೧೯೮೫, ಪು. ೫೮೧

೧೨. ಅದೇ, ಪುಟ. ೫೮೧

೧೩. ಅದೇ, ಪುಟ. ೩೯೨

೧೪. ಪೂರ್ವೋಕ್ತ, ಚಂದ್ರಶೇಖರ್ ಎಸ್., ಪುಟ. ೫೯

೧೫. ಅದೇ, ಪುಟ. ೮೨.

೧೬. ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ದ್ವಿತೀಯ ಸಂಪುಟ, ಸೂರ್ಯನಾಥ ಕಾಮತ್, ಗೀತ ಬುಕ್ ಹೌಸ್, ಮೈಸೂರು, ೧೯೭೭, ಪುಟ. ೫೦೮

೧೭. ಅದೇ, ಪುಟ. ೪೭೯

೧೮. ಇತಿಹಾಸ ದರ್ಶನ ಸಂ.೯, ಕರ್ನಾಟಕ ಇತಿಹಾಸ ಅಕಾಡೆಮಿ, ಪು. ೨೩೦

೧೯. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೨, ೧೯೮೫, ಪುಟ. ೫೮೪

೨೦. ಪೂರ್ವೋಕ್ತ, ಚಂದ್ರಶೇಖರ್ ಎಸ್., ಪುಟ.೫೮-೫೯

೨೧. ಅದೇ, ಪುಟ. ೫೯

೨೨. ಅದೇ, ಪುಟ. ೪೧

೨೩. ಅದೇ, ಪುಟ. ೪೨

೨೪. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೨, ೧೯೮೫, ಪುಟ ೫೮೫

೨೫. ದೇಶಿಯತೆಯ ನೆರಳಲ್ಲಿ ವಿಕೇಂದ್ರೀಕರಣ, ಚಂದ್ರ ಪೂಜಾರಿ ಎಂ., ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ವಿದ್ಯಾರಣ್ಯ, ೨೦೦೧, ಪುಟ.೮೮

೨೬. ಕರ್ನಾಟಕ ವಿಕಾಸ, ಜನವರಿ, ೨೦೦೦, ಪು.೯

೨೭. ಅದೇ, ಪುಟ. ೯

೨೮. ಪೂರ್ವೋಕ್ತ, ಚಂದ್ರ ಪೂಜಾರಿ ಎಂ., ಪುಟ.೮೮

೨೯. ಕರ್ನಾಟಕ ವಿಕಾಸ, ಜನವರಿ, ೨೦೦೦, ಪು.೧೦

೩೦. ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆಗಳು, ಶ್ರೀಧರ ಎ., ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ವಿದ್ಯಾರಣ್ಯ, ೨೦೦೨ ಪುಟ.೪

೩೧. ಅದೇ, ಪುಟ. ೩

೩೨. ಅದೇ, ಪುಟ. ೪

೩೩. ಅದೇ, ಪುಟ. ೪

೩೪. ಅದೇ, ಪುಟ. ೬

೩೫. ಪೂರ್ವೋಕ್ತ, ಶ್ರೀಧರ ಎ., ಪುಟ.೮೮

೩೬. ಮುನ್ನಡೆಯ ಕೂಡ್ಲಿಗಿ, ಪುಟ.೧೧೧

೩೭. ಪೂರ್ವೋಕ್ತ, ಶ್ರೀಧರ ಎ., ಪುಟ. ೧೪

೩೮. ಅದೇ, ಪುಟ. ೧೪

೩೯. ಕರ್ನಾಟಕ ವಿಕಾಸ, ಜನವರಿ, ೨೦೦೦, ಪುಟ. ೧೧

೪೦. ಅದೇ, ಪುಟ. ೧೨

೪೧. ಪೂರ್ವೋಕ್ತ, ಶ್ರೀಧರ ಎ., ಪುಟ. ೧೯

೪೨. ಅದೇ, ಪುಟ. ೧೬

೪೩. ಅದೇ, ಪುಟ. ೨೮

೪೪. ಕರ್ನಾಟಕ ವಿಕಾಸ, ಜನವರಿ, ೨೦೦೦, ಪು.೧೨

೪೫. ಪೂರ್ವೋಕ್ತ, ಶ್ರೀಧರ ಎ., ಪುಟ. ೩೩-೩೪

೪೬. ಅದೇ, ಪುಟ. ೨೨

೪೭. ಮಾನಸ, ಏಪ್ರಿಲ್ ೬, ೨೦೦೦.

೪೮. ಪೂರ್ವೋಕ್ತ, ಶ್ರೀಧರ ಎ., ಪುಟ.೩೩

೪೯. ಕರ್ನಾಟಕ ವಿಕಾಸ, ಜನವರಿ, ೨೦೦೦, ಪುಟ. ೧೨

೫೦. ಭಗೀರಥ ಸಂಕಲ್ಪ, ೧೯೯೯, ಪು. ೧೦೨

೫೧. ಕರ್ನಾಟಕ ರಾಜ್ಯಪತ್ರ (ವಿಶೇಷ ಪತ್ರಿಕೆ) ಸೋಮವಾರ ಫೆಬ್ರವರಿ ೧೦, ೧೯೯೫, ಪುಟ. ೧೧. ೧೨

೫೨. ಅದೇ, ಪುಟ. ೧೩, ೧೪.

೫೩. ಕರ್ನಾಟಕ ರಾಜ್ಯ ಪತ್ರ (ವಿಶೇಷ ಪತ್ರಿಕೆ) ಮಂಗಳವಾರ, ಮಾರ್ಚ್ ೧೩, ೨೦೦೦, ಪುಟ. ೧೬

೫೪. ಕರ್ನಾಟಕ ರಾಜ್ಯ ಪತ್ರ (ವಿಶೇಷ ಪತ್ರಿಕೆ) ಮಂಗಳವಾರ, ಜನವರಿ ೮, ೨೦೦೬, ಪುಟ. ೯

೫೫. ಕರ್ನಾಟಕ ರಾಜ್ಯ ಪತ್ರ (ವಿಶೇಷ ಪತ್ರಿಕೆ) ಜನವರಿ ೧೮, ೨೦೧೧,

೫೬. ಅದೇ

೫೭. ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ, ಶೇಷಾದ್ರಿ ಮತ್ತು ಚಂದ್ರಶೇಖರ ಟಿ.ಆರ್., (ಸಂ), ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ., ೧೯೯೮, ಪುಟ.೨೦

೫೮. ಚಿತ್ರದುರ್ಗ ಜಿಲ್ಲೆಯ ಯೋಧರ ಸಮ್ಮೇಳನ ೧೯೯೬, ಸ್ಮರಣ ಸಂಚಿಕೆ, ಪುಟ. ೩೫

೫೯. ಪೂರ್ವೋಕ್ತ, ಶೇಷಾದ್ರಿ ಮತ್ತು ಚಂದ್ರಶೇಖರ ಟಿ.ಆರ್., (ಸಂ), ಪುಟ. ೪೩

೬೦. ಅದೇ, ಪುಟ. ೪೭

೬೧. ಬವಣೆಯ ಬದುಕು ಹೆಗಡೆ ವಿ.ಎನ್. ಮತ್ತು ನಾಯ್ಕ ಎಸ್.ಸಿ., ಬಂಜಾರ ಪ್ರಕಾಶನ ದಾವಣಗೆರೆ, ೨೦೦೪, ಪುಟ. ೩೫

೬೨. ಅದೇ, ಪುಟ. ೫

೬೩. ಅದೇ, ಪುಟ. ೬

೬೪. ಅದೇ, ಪುಟ. ೭

೬೫. ಅದೇ, ಪುಟ. ೩೪

೬೬. ಅದೇ, ಪುಟ. ೩೫

೬೭. ಹರಪನಹಳ್ಳಿ ತಾಲ್ಲೂಕು ಸ್ವಾತಂತ್ರ್ಯ ಹೋರಾಟಗಾರರು, ಹಿರೇಮಠ ವೀರಭದ್ರಯ್ಯ, ಶ್ರೀ ಜಗದ್ಗುರು ರೇಣುಕ ಪ್ರಕಾಶನ, ತೆಗ್ಗಿನಮಠ, ಹರಪನಹಳ್ಳಿ, ೧೯೯೮, ಪುಟ. ೫೭

೬೮. ಕನ್ನಡ ಪ್ರಭ, ೧೫.೧೨.೨೦೧೧, ಪುಟ. ೨

೬೯. ದಿ. ಸಿಕಾಲಿಗರ್ಸ ಆಫ್ ಪಂಜಾಬ್, ಶೇರ್‌ಸಿಂಗ್, ಪಂಜಾಬ್ ೧೮೮೩, ಪುಟ ೯, ೨೩.

೨೦. ಕ್ಯಾಂಪ್ ಬೆಲ್, ೧೮೮೪.

೨೧. ಕ್ರಫೋರ್ಡ್ ೧೭೪೨ Val-II : ೯೦, ಬುಚ್ಚನ್ ೧೮೦೨, Val-II ೧೪, ೧೮೨೧

೨೨. ಲಿಂಗ್ಯುಸ್ಟಿಕ್ ಸರ್ವೇ ಆಫ್ ಇಂಡಿಯಾ, ವ್ಯಾಲ್ಯುಂ - IX, ಗಿಯರಾಸನ್, ದೆಹಲಿ, ೧೯೬೮, ಪುಟ.೧೬೬

೨೩. ಬುಚ್ಚನ್ ೧೮೦೭ : Val II; ದುಬ್ಬಾಯಿಸ್ ೧೯೩೬

೨೪. ಕ್ಯಾಂಪ್‌ಬೆಲ್, ೧೮೮೩.

೨೫. ಚಮನ್‌ಲಾಲ್, ೧೯೬೨.

* * *

ಅಧ್ಯಾಯ ಐದು

# ಲಂಬಾಣಿ ಸಮುದಾಯದ ಸಾಮಾಜಿಕ ಜೀವನ

೫.೧. ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ

೫.೨. ಸಂಸ್ಕಾರಗಳು ಮತ್ತು ಸಂಪ್ರದಾಯಗಳು

# ಲಂಬಾಣಿ ಸಮುದಾಯದ ಸಾಮಾಜಿಕ ಜೀವನ

## ೫.೧. ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ

ವ್ಯಕ್ತಿಗಳ ನಡುವೆ ಪರಸ್ಪರ ಸಂಬಂಧ ಏರ್ಪಡುವ ಪ್ರಕ್ರಿಯೆಯೇ ಸಾಮಾಜಿಕ ವ್ಯವಸ್ಥೆಯಾಗಿದೆ. ಪ್ರತಿಯೊಂದು ಸಮುದಾಯವು ತನ್ನದೇ ಆದ ಸಂಪ್ರದಾಯ, ಲೋಕ-ರೂಢಿ, ವಿಧಿ-ನಿಷೇಧ, ಹಾಗೂ ಸಾಮಾಜಿಕ ನಿಯಂತ್ರಣವನ್ನೊಳಗೊಂಡ ಕ್ರಮಬದ್ಧವಾದ ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಹೊಂದಿರುತ್ತವೆ. ಈ ವ್ಯವಸ್ಥೆಯಲ್ಲಿ ಅನೇಕ ಉಪ ವ್ಯವಸ್ಥೆಗಳಿದ್ದು, ಅವು ತನ್ನದೇ ಆದ ವಿಶಿಷ್ಟ ಕಾರ್ಯಗಳನ್ನು ನಿರ್ವಹಿಸುತ್ತವೆ. ಅದೇ ರೀತಿ ಲಂಬಾಣಿಗರ ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ಅನೇಕ ರೂಢಿ, ಸಂಪ್ರದಾಯಗಳಿವೆ. ಪ್ರಸ್ತುತ ಪ್ರತಿಯೊಂದು ಸಮಾಜ ಆಧುನಿಕತೆಯ ಪ್ರಭಾವದಿಂದ ಹಾಗೂ ಬದುಕಿನಲ್ಲಾದ ಹಲವಾರು ಸ್ಥಿತ್ಯಂತರಗಳಿಂದಾಗಿ ತಮ್ಮ ಮೂಲ ಸ್ವರೂಪವನ್ನು ಬಹುಮಟ್ಟಿಗೆ ಕಳೆದುಕೊಂಡಿದೆ. ಪ್ರಸ್ತುತ ಅಧ್ಯಯನದಲ್ಲಿ ಲಂಬಾಣಿಗರ ಜಾತಿವ್ಯವಸ್ಥೆ, ಕುಲ-ಗೋತ್ರಗಳು, ಕುಟುಂಬ ಪದ್ಧತಿ, ಆಹಾರ-ಪಾನೀಯಗಳು, ಉಡುಗೆ-ತೊಡುಗೆ, ವಸತಿ ವ್ಯವಸ್ಥೆ, ನ್ಯಾಯ ಪದ್ಧತಿ, ವಿಧಿ-ನಿಷೇಧ ಮೊದಲಾದವುಗಳ ಕುರಿತು ಅಧ್ಯಯನವನ್ನು ಮಾಡಲಾಗಿದೆ.

### ೫.೧.೧. ಜಾತಿ ವ್ಯವಸ್ಥೆ

ಪ್ರಾಚೀನ ಕಾಲದಲ್ಲಿ ವರ್ಣಪದ್ಧತಿ ರೂಪುಗೊಳ್ಳುವುದಕ್ಕೆ ಮೊದಲು ಸಮಾಜವನ್ನು ವೃತ್ತಿಗನುಗುಣವಾಗಿ ವರ್ಗೀಕರಣ್ ಮಾಡಲಾಗಿತ್ತು. ಈ ವೃತ್ತಿಗಳು ವಂಶಪಾರಂಪರ್ಯವಾಗಿದ್ದವೆಂಬುದಕ್ಕೆ ಯಾವುದೇ ಆಧಾರಗಳಿಲ್ಲ. ವರ್ಣ ಎಂಬ ಶಬ್ದ ಜಾತಿಸೂಚಕವಾಗಿರಲಿಲ್ಲ. ಆದರೆ ಅದು ವಲಸೆ ಬಂದ ಆರ್ಯರ ಮತ್ತು ಇಲ್ಲಿನ ಮೂಲನಿವಾಸಿಗಳ ನಡುವಿನ ವ್ಯತ್ಯಾಸವನ್ನು ಸೂಚಿಸುವ ಪದವಾಗಿತ್ತು. ಈ ವರ್ಣ ವ್ಯವಸ್ಥೆಯನ್ನು ಸೃಷ್ಟಿಸಿದವರು ಆರ್ಯರು ಎನ್ನುವ ವಾದವಿದೆ.[೧] ವೇದಪೂರ್ವ ಕಾಲದಲ್ಲಿ ಪಶುಪಾಲಕರು ಹಾಗೂ ಕೃಷಿಕರು ಭಾರತದಲ್ಲಿ ಮೊದಲ ವರ್ಗಕ್ಕೆ ಸೇರಿದ್ದರು. ಆದರೆ ವರ್ಣಾಶ್ರಮ ಧರ್ಮ ರೂಢಿಗೆ ಬಂದ ಮೇಲೆ ನಾಲ್ಕನೆಯ ಸ್ಥಾನಕ್ಕೆ ದೂಡಲ್ಪಟ್ಟರು. ಋಗ್ವೇದದ ಅನೇಕ ಶ್ಲೋಕಗಳಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂದು ವಿಭಾಗಿಸಿರುವುದು ಕಂಡುಬರುತ್ತದೆ.[೨] ಹೀಗೆ ಜಾತಿ ಕರ್ಮಾನುಗುಣವಾಗಿ ನಿರ್ಮಿತವಾದುವೆಂದು ಕಂಡುಬಂದರೂ, ನಂತರದ ಕಾಲದಲ್ಲಿ ಜನ್ಮದ ಆಧಾರದ ಮೇಲೆ ಪರಿಗಣಿಸಲ್ಪಟ್ಟವು. ವರ್ಣ ವ್ಯವಸ್ಥೆಯಿಂದ ಕೂಡಿದ ಅಂದಿನ ಸಮಾಜದಲ್ಲಿ ಬ್ರಾಹ್ಮಣರಿಗೆ ಉಚ್ಚ ಸ್ಥಾನವಿದ್ದರೆ, ಗೌಡ, ಒಕ್ಕಲಿಗ, ಶೆಟ್ಟಿ, ತಂಬುಲಗ, ಬೇಡ, ಗಾಣಿಗ, ಅರಪ್ಪ, ಕಂಚಿ,

ಗೊರವ, ಕಂಚುಗಾರ, ಕಮ್ಮಾರ, ಕುಂಬಾರ, ಬಡಿಗ, ಕುರುಬ, ಲಂಬಾಣಿ ಮೊದಲಾದವರ ವೃತ್ತಿ ಗೌರವಕ್ಕನುಸರಿಸಿ ವಿವಿಧ ಸ್ಥಾನಗಳನ್ನು ಪಡೆದವು.[೬] ಹೀಗೆ ವರ್ಣ ವ್ಯವಸ್ಥೆಯಲ್ಲಿ ಅನೇಕ ಉಪಜಾತಿಗಳು ಹುಟ್ಟಿಕೊಂಡು ಪ್ರಬಲವಾದ ಜಾತಿ ವ್ಯವಸ್ಥೆಗೆ ಕಾರಣವಾದವು.

ಲಂಬಾಣಿಗರನ್ನು ಪ್ರಥಮ ಶೂದ್ರರೆಂದು ಕರೆಯಲಾಗಿದೆ. ಇದರಿಂದ ಲಂಬಾಣಿಗರು ವರ್ಣ ವ್ಯವಸ್ಥೆಯ ನಾಲ್ಕನೆಯ ವರ್ಗಕ್ಕೆ ಸಂಬಂಧಪಟ್ಟವರಾಗಿದ್ದರೆಂದು ತಿಳಿಯುತ್ತದೆ. ಲಂಬಾಣಿಗರಲ್ಲಿ ಥಾಡಿ, ಥಾಲ್ಯ, ಎಂಬ ಜಾತಿಯಿತ್ತು. ಕಾಲಾನಂತರ ಪ್ರತಿಯೊಂದು ಜಾತಿಯಲ್ಲೂ ಧರ್ಮ, ಭಾಷೆ, ಪ್ರದೇಶ ಹಾಗೂ ಬಳಕೆಗಳನ್ನು ಆಧರಿಸಿ ಹಲವು ಉಪಜಾತಿಗಳಾದವು. ಪ್ರತಿಯೊಂದು ಉಪಜಾತಿಗಳು ತಮ್ಮದೇ ಆದ ವಿಧಿ ವಿಧಾನ, ಸಂಪ್ರದಾಯಗಳನ್ನು ಹೊಂದಿದ್ದವು. ಒಂದೇ ಪಂಗಡದೊಳಗೆ ಅನೇಕ ಕುಲಗೋತ್ರ ಹಾಗೂ ಬೆಡಗುಗಳನ್ನು ಸೃಷ್ಟಿಸಿಕೊಂಡವು. ಅವುಗಳೊಂದಿಗೆ ಕೊಡುಕೊಳ್ಳುವಿಕೆ, ವಿವಾಹ ಸಂಬಂಧಗಳನ್ನು ನಡೆಸತೊಡಗಿದವು. ಹೀಗಾಗಿ ಪ್ರತಿಯೊಂದು ಉಪಜಾತಿಗಳು ತಾವು ಇನ್ನೊಂದು ಜಾತಿಗಿಂತ ಶ್ರೇಷ್ಠರೆಂದು ಭಾವಿಸಲಾರಂಭಿಸಿದವು.

''ಬ್ರಾಹ್ಮಣರಿಗಲ್ಲದೆ ಗೋರ್‌ಬಾಯ್‌ಗಳಿಗೆ ಸಲ್ಲದು ಬ್ರಾಹ್ಮಣ ಪೂಜೆ'' ಎಂದು ಹಿರಿಯರು ನಾಣ್ಣುಡಿ ಹೇಳುವರು[೯] ಇದರಿಂದ ಬ್ರಾಹ್ಮಣರು ಸಮಾಜದಲ್ಲಿ ಉನ್ನತ ಸ್ಥಾನದಲ್ಲಿದ್ದು, ಗೋರ್‌ಬಾಯ್ (ಲಂಬಾಣಿಗರು) ಕೆಳವರ್ಗ ಅಥವಾ ಶೂದ್ರರಾಗಿದ್ದರೆಂದು ತಿಳಿಯುತ್ತದೆ. ಕಾಲಾನಂತರ ಜಾತಿ ವ್ಯವಸ್ಥೆ ತನ್ನ ಕಠಿಣತೆಯನ್ನು ಉಳಿಸಿಕೊಳ್ಳಲಿಲ್ಲ. ಹೀಗಾಗಿ ಕೆಲವು ಜಾತಿಗಳು ಸಾಮಾಜಿಕ ಸ್ಥಾನಮಾನದಲ್ಲಿ ಮೇಲಕ್ಕೇರಲು ಪ್ರಯತ್ನಿಸಿದವು. ಅವುಗಳಲ್ಲಿ ಲಂಬಾಣಿ ಸಮುದಾಯವೂ ಒಂದಾಗಿತ್ತು. ಲಂಬಾಣಿಗರು ಅನೇಕ ರಾಜ್ಯಗಳನ್ನು ನಿರ್ಮಿಸಿ ಕ್ಷತ್ರಿಯ ಸ್ಥಾನವನ್ನು ಪಡೆದರು. ಅವರ ಜೀವನ ರೀತಿ ಸಂಪೂರ್ಣವಾಗಿ ಬದಲಾಯಿತು. ಇದಕ್ಕೆ ಪೂರಕವಾದ ಐತಿಹ್ಯವನ್ನು ಹಿಂದಿನ ಅಧ್ಯಾಯದಲ್ಲಿ ಗಮನಿಸಲಾಗಿದೆ. ಇದರ ಮೇರೆಗೆ ಭಾರತದಲ್ಲಿ ದೆಹಲಿ ಸುಲ್ತಾನರ ಆಳ್ವಿಕೆಯ ನಂತರ ಹಲವಾರು ಸಣ್ಣಸಣ್ಣ ರಾಜ್ಯಗಳು ತಲೆ ಎತ್ತಿದವು ಅವುಗಳಲ್ಲಿ ರಜಪೂತ ವಂಶವು ಒಂದಾಗಿದೆ. ಇವರಲ್ಲಿ ರಾಣಾ ಪ್ರತಾಪ್‌ನೆಂಬ ಅತ್ಯಂತ ಶಕ್ತಿಶಾಲಿಯೂ, ಪರಾಕ್ರಮಿಯೂ ಆಗಿದ್ದು, ಇವನಲ್ಲಿ ಹಲವಾರು ರಾಷ್ಟ್ರ ಭಕ್ತ ಜನಾಂಗಗಳು ಸೈನಿಕ ತರಬೇತಿ ಪಡೆದು ಸೇವೆ ಸಲ್ಲಿಸುತ್ತಿದ್ದವು. ೧೫೭೬ ರಲ್ಲಿ ಅಕ್ಬರನಿಗೂ ರಾಣಪ್ರತಾಪನಿಗೂ ನಡೆದ ''ಹಳದಿ ಘಾಟ್'' ಯುದ್ಧದಲ್ಲಿ ಸೋಲನ್ನು ಅನುಭವಿಸಿದನು. ವಿಜಯಿಯಾದ ಅಕ್ಬರನು ನೀನು ಶರಣಾಗತನಾಗಿ ಬಂದರೆ ನಿನ್ನ ರಾಜ್ಯವನ್ನು ಮರಳಿಕೊಡುವೆ ಎಂದು ಹೇಳಲಾಗಿ ವೀರಕ್ಷತ್ರೀಯ ಕುಲದವನಾದ ಪ್ರತಾಪನು, ಈ ಮಾತಿಗೆ ಒಪ್ಪದೇ ಸ್ವ ಸಾಮರ್ಥ್ಯದಿಂದ ರಾಜ್ಯವನ್ನು ಮರಳಿ ಪಡೆಯುವೆನೇ ವಿನಃ ಶರಣಾಗತನಾಗಲಾರೆ ಎಂದು ತನ್ನ ರಾಜ್ಯವನ್ನು ಪಡೆಯುವವರೆವಿಗೂ ಹುಲ್ಲು ಹಾಸಿಗೆಯ ಮೇಲೆ ಮಲಗಿ ಎಲೆಗಳಲ್ಲಿ ಆಹಾರ ಸೇವಿಸಿ ಅರಣ್ಯದಲ್ಲೆ ನೆಲಸುವೆನೆಂದು ಪ್ರತಿಜ್ಞಾಮಾಡಿ ಕಾಡುಸೇರಿದನು. ಆತನೊಂದಿಗೆ ಎಷ್ಟೋಜನ ಸೈನಿಕರು ಹೋದರು. ಇದೇ ಸಮಯದಲ್ಲಿ ರಜಪೂತರ ಮೇಲೆ ಮೊಘಲರ ಅತ್ಯಾಚಾರಗಳು ಹೆಚ್ಚಾಗಿ ಅನೇಕ ರಜಪೂತ ಕುಟುಂಬಗಳೂ ಸಹ ಕಾಡಿನಲ್ಲಿ ಸೇರಿಕೊಂಡವು. ಮುಂದೆ ರಾಣಪ್ರತಾಪನು ತನ್ನ ಪ್ರತಿಜ್ಞೆ ಕೈಗೊಂಡ ಕಾರಣ ಚಿಂತೆಯಲ್ಲಿ ಮುಳುಗಿ ಸಾವನ್ನಪಿದನು. ಮೊಗಲರು ಇಷ್ಟಕ್ಕೆ ತೃಪ್ತರಾಗದೇ ಈ

ವೀರವಂಶಜರನ್ನು ಅಡವಿಯಲ್ಲಿ ಹುಡುಕಲು ಪ್ರಾರಂಭಿಸಿದರು. ಈ ಸಂದರ್ಭದಲ್ಲಿ ಮೊಗಲರಿಂದ ಸಂರಕ್ಷಿಸಿಕೊಳ್ಳಲು ಬಹಳಷ್ಟು ಸಮಸ್ಯೆಗಳನ್ನು ಎದುರಿಸಬೇಕಾಯಿತು. ಕಷ್ಟವನ್ನು ಎದುರಿಸಲಾರದ ಮಾರ್ವಾಡಿಗಳು, ಗೂರ್ಜರು ಮುಂತಾದ ಜನರು ಕೂಡಿಕೊಂಡು ಪ್ರತಾಪನ ಪ್ರತಿಜ್ಞೆಯನ್ನು ಅನುಸರಿಸಿ ಸಂಚಾರಿಗಳಾಗಿ ಮಾರ್ಪಟ್ಟರು."

ಲಂಬಾಣಿ, ಗುರ್ಜರ, ಮಾರ್ವಾಡಿ ಹಾಗೂ ರಜಪೂತ ಸಮಾಜಗಳಲ್ಲಿ ಪರಸ್ಪರ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಬಂಧಗಳು ಕಂಡುಬರುವುದರಿಂದ ಈ ಸಮುದಾಯಗಳು ಒಂದೇ ಮೂಲದಿಂದ ಒಂದೇ ಗೋತ್ರದಿಂದ ಉಗಮವಾಗಿರಬಹುದೆಂದು ನಂಬಬಹುದು.

ಇಂದು ಈ ಮೂರು ಸಮಾಜಗಳಲ್ಲಿನ ಮೆದುವೆ, ರೀತಿ-ರೀವಾಜುಗಳನ್ನು ಗಮನಿಸಿದಾಗ ಹೆಚ್ಚಿನ ಸಾಮ್ಯತೆಗಳನ್ನು ಕಾಣುತ್ತೇವೆ. ಇವುಗಳ ಉಪಜಾತಿಗಳಲ್ಲಿಯೂ ಪರಸ್ಪರ ಹೋಲಿಕೆಗಳಿರುವುದರಿಂದ ರಜಪೂತರೊಡನೆ ಲಂಬಾಣಿಗಳ ಸಂಬಂಧವಿರುವುದು ಕಂಡುಬರುತ್ತದೆ. ರಜಪೂತರಲ್ಲಿ ಕಂಡುಬರುವ ರಾಥೋಡ್, ಚವ್ಹಾಣ್, ಪಮ್ಮಾರ, ಗುರ್ಜರ ಮುಂತಾದವರ ಆಚಾರ-ವಿಚಾರಗಳು ಲಂಬಾಣಿಗರಲ್ಲಿಯೂ ಸ್ಪಷ್ಟವಾಗಿ ಗೋಚರಿಸುವುದರಿಂದ ರಜಪೂತರ ಒಂದು ಶಾಖೆಯೇ ಲಂಬಾಣಿಗರು ಎನ್ನುವುದರಲ್ಲಿ ಸಂಶಯವಿಲ್ಲ. ಹೀಗಾಗಿ ಮಧ್ಯಯುಗದಲ್ಲಿ ಕ್ಷತ್ರಿಯರಾಗಿದ್ದವರು ಉತ್ತಮ ಸ್ಥಾನಹೊಂದಿದ್ದರೆ, ಲವಣಗಳ ವ್ಯಾಪಾರ, ಕೃಷಿಯನ್ನು ಅವಲಂಬಿಸಿದವರು ಕೆಳವರ್ಗವಾಗಿ ಜೀವನ ನಡೆಸಿದರು. ಲಂಬಾಣಿಗರು ಪ್ರತ್ಯೇಕವಾಗಿ ವಾಸಿಸುವ ಪ್ರದೇಶವನ್ನು ಇತ್ತೀಚೆಗೆ ''ತಾಂಡ'' ಎಂದು ಕರೆಯುತ್ತಿರುವುದು ಕಂಡುಬರುತ್ತದೆ. ಲಂಬಾಣಿಗರು ಉತ್ತಮವಾದ ಸಂಪ್ರದಾಯ ಹಾಗೂ ಸಂಸ್ಕಾರಗಳನ್ನು ಹೊಂದಿದ್ದಾರಲ್ಲದೆ, ಉತ್ತಮ ಜೀವನ ರೀತಿಯನ್ನು ಅಳವಡಿಸಿಕೊಂಡು ಬಂದಿದ್ದಾರೆ. ಕಾಲ ಕಾಲಕ್ಕೆ ಅನೇಕ ಉದ್ಯೋಗಗಳನ್ನು ನಿರ್ವಹಿಸಿದರು. ಪ್ರಸ್ತುತ ಜಾತಿ ವ್ಯವಸ್ಥೆಯಲ್ಲಿ ಬ್ರಾಹ್ಮಣ, ಲಿಂಗಾಯತ ಒಕ್ಕಲಿಗ, ಬೇಡ, ನಂತರ ಲಂಬಾಣಿಗರಿಗೆ ಗೌರವಯುತ ಸ್ಥಾನ ನೀಡಿರುವುದು ಕಂಡುಬರುತ್ತದೆ.

೫.೧.೨. ಕುಲಕೋತ್ರಗಳು

ಪ್ರಾಚೀನ ಕಾಲದಲ್ಲಿ ಮಾನವ ಗುಂಪುಗಳು ವಿವಿಧ ಭೌಗೋಳಿಕ ಪ್ರದೇಶಗಳಿಗೆ ವಲಸೆ ಹೋಗಿ ಅನೇಕ ವೃತ್ತಿಗಳನ್ನು ಕೈಗೊಂಡವು. ತಮ್ಮ ಗುಂಪುಗಳನ್ನು ಗುರುತಿಸುವ ಸಲುವಾಗಿ ಒಂದೊಂದು ಮರ, ಪಕ್ಷಿ, ಬಂಡೆ, ಪಶು ಮೊದಲಾದ ಸಂಕೇತಗಳ ಮೂಲಕ ಗುರುತಿಸಿಕೊಳ್ಳತೊಡಗಿದವು. ನಂತರ ಅವು ಕುಲಸಂಕೇತಗಳಾಗಿ ರೂಪುಗೊಂಡವು. ಅವುಗಳು ಕೇವಲ ಗುರುತಿನ ಕುರುಹುಗಳಾಗಿರದೆ ಅವರ ಪಾಲಿಗೆ ಆರಾಧಿಸುವ ಪವಿತ್ರ ವಸ್ತುಗಳಾದವು. ಇದು ಜನಪದ ದೃಷ್ಟಿಯಿಂದ ತುಂಬ ವಿಶಿಷ್ಟ ಪ್ರಕ್ರಿಯೆಯಾಗಿದ್ದು, ಇದನ್ನು ಕುಲ ಸಂಕೇತಾರಾಧನೆ ಎಂದು ಗುರುತಿಸಲಾಗಿದೆ.

ಬ್ರಾಹ್ಮಣ ವರ್ಗದಲ್ಲಿ ಗೋತ್ರಗಳು ಹುಟ್ಟಿಕೊಂಡು ನಂತರ ಇದು ಇತರ ಸಮುದಾಯಗಳಿಗೆ ಪಸರಿಸಿದವೆಂಬುದು ಮಾನವಶಾಸ್ತ್ರಜ್ಞರ ಅಭಿಪ್ರಾಯ. ಸ್ಪಷ್ಟವಾಗಿ ಗೋತ್ರಗಳ ನಾಮ ನಿವೇದಕ ಸೂಚಿಸುವಂತೆ

ಗೋತ್ರಗಳಲ್ಲಿ ಮದುವೆಯಾಗುವುದರ ಮೂಲಕ ಬಂದವುಗಳಲ್ಲಿ.[೬] ಬ್ರಾಹ್ಮಣೇತರ ಸಮಾಜಗಳಲ್ಲಿ ಗೋತ್ರಗಳ ಪ್ರವೇಶವನ್ನು ಕುರಿತು ಲೇಖಕರು ದಾಖಲಿಸಿರುವಂತೆ, ಮೊದಲು ಕುಟುಂಬದ ನಿಶ್ಚಯವಾಗುತ್ತಿದ್ದು ಕಾಲಕ್ರಮೇಣ ಭಿನ್ನ ಗೋತ್ರಗಳಲ್ಲಿ ಮದುವೆಯಾಗುವ ಪದ್ಧತಿ ರೂಢಿಗೆ ಬಂದಿತು.

ಲಂಬಾಣಿ ಗೋತ್ರವನ್ನು 'ಗೋತ್', 'ಪಾಡಾ', 'ಜಾತ್' ಎಂಬ ಹಲವಾರು ಹೆಸರುಗಳಿಂದ ಕರೆಯುತ್ತಾರೆ. ಸಂಸ್ಕೃತ ಭಾಷೆಯಲ್ಲಿ ಬರುವ ಗೋತ್ರ ಎಂಬ ಪದವು ಇದಕ್ಕೆ ಮೂಲವಾಗಿರಬೇಕು. ಲಂಬಾಣಿ ಭಾಷೆಯಲ್ಲಿ ಪಾಡಾ ಎಂದರೆ ಚಿಕ್ಕದು ಎಂದು ಅರ್ಥವಿದೆ. ಜಾತಿಯಲ್ಲಿ ಬರುವ ಚಿಕ್ಕದಾದ ಭಾಗ ಎಂಬರ್ಥದಲ್ಲಿ ಪಾಡಾ ಪದವನ್ನು ಬಳಸಿರಬಹುದು.[೭]

ವಿದ್ವಾಂಸರ ಅಭಿಪ್ರಾಯಗಳಂತೆ ಲಂಬಾಣಿ ಬುಡಕಟ್ಟು ಅನೇಕ ಹಂತಗಳಲ್ಲಿ ರಜಪೂತರಿಂದ ಪ್ರಭಾವಿತವಾಗಿದ್ದು. ಗೋತ್ರ ರಚನೆಯಲ್ಲೂ ರಜಪೂತ ಪ್ರಭಾವಕ್ಕೆ ಒಳಗಾಗಿರುವುದನ್ನು ಗುರ್ತಿಸಬಹುದಾಗಿದೆ. ಇದರ ರಚನೆಯನ್ನು ಈ ಕೆಳಗಿನಂತೆ ನೋಡಬಹುದಾಗಿದೆ.




ಲಂಬಾಣಿ ಜನಾಂಗದ ಮೂಲಪುರುಷರಾದ ದಾದಾಮೋಲ ಮತ್ತು ರಾಧಿದಾದಿಯರು ಮೂರು ಪ್ರದೇಶಗಳಿಂದ ಮೂರು ಮಕ್ಕಳನ್ನು ತಂದು ಸಾಕುತ್ತಾರೆ. ಅವುಗಳೆಂದರೆ ರಾವುಘಡದಿಂದ ರಾಠೋಡ, ಪಾವುಘಡದಿಂದ ಪಮ್ಮಾರ್, ಚೌಘಡದಿಂದ ಚೌವಾಣ್. ಇವರಲ್ಲಿ ರಾಠೋಡನು ಭುಕ್ಯಾ ಗೋತ್ರದ ಮೂಲ ಪುರುಷನಾದರೆ ಪಮ್ಮಾರ್ ಮತ್ತು ಚೌವಾಣರುಗಳು ಜಾತ್ ಗೋತ್ರದ ಮೂಲ ಪುರುಷರಾಗಿದ್ದಾರೆ. ವಡತಿಯ ಎಂಬುವರು ಕಾಲಾನುಕ್ರಮದಲ್ಲಿ ಸೇರಿಕೊಂಡರು. ಇವರ ಗೋತ್ರಗಳಲ್ಲಿ ರಕ್ತ ಸಂಬಂಧಕ್ಕಿಂತ ಹೆಚ್ಚಾಗಿ ಪ್ರಾದೇಶಿಕತೆಯನ್ನು ಪ್ರಧಾನವಾಗಿ ಕಾಣಬಹುದಾಗಿದೆ.

ವೈವಾಹಿಕ ದೃಷ್ಟಿಯಿಂದ ಜಾತ್ ಮತ್ತು ಭುಕ್ಯಾ ಗೋತ್ರಗಳು ಪ್ರಮುಖ ಗೋತ್ರಗಳಾಗಿದ್ದು, ಇವುಗಳ ಮಧ್ಯ ಹಲವಾರು ಒಳಗೋತ್ರಗಳನ್ನು ಕಾಣಬಹುದಾಗಿದೆ.

ಜಾತ್ ಗೋತ್ರದಲ್ಲಿ ಚೌವಾಣ್ ಉಪಗೋತ್ರ ಹೊಂದಿದ್ದು, ಇದರಲ್ಲಿ ಆರು ಉಪಗೋತ್ರಗಳಿವೆ. ಅವುಗಳೆಂದರೆ ೧. ಲಾವ್ಡ್ಯ ಚೌವಾಣ್ ೨. ಸಬಾವಟ್ ಚೌವಾಣ್ ೩. ಕೊರ್ರಾ ಚೌವಾಣ್ ೪. ಪಾಲ್ತ್ಯ ಚೌವಾಣ್

೫. ಮೂಡ ಚೌವಾಣ್ ೬. ಕೇಳೋತ ಚೌವಾಣ್.[೮] ಈ ಆರು ಗೋತ್ರಗಳಲ್ಲದೇ ಏಳನೇ ಗೋತ್ರ ಹೊಂದಿದ್ದು ಅದು ಉತ್ತರ ಭಾರತದಲ್ಲಿ ಅಸ್ತಿತ್ವದಲ್ಲಿದೆ ಎಂಬುದಾಗಿ ಹಿರಿಯರು ಹೇಳುತ್ತಾರೆ. ಪಮ್ಮಾರನಿಗೆ ೧೩ ಜನ ಮಕ್ಕಳಿದ್ದು ಅವರು ಒಬ್ಬೊಬ್ಬರೂ ಒಂದೊಂದು ಗೋತ್ರ ಪ್ರತಿನಿಧಿಸುತ್ತಾರೆ. ಅವುಗಳೆಂದರೆ ೧. ಐಯೇತ್ ೨. ಚೈಯೇತ್ ೩. ಲುಣಾವತ್ ೪. ಪಾಣಿ ೫.ತರ್ಪಾಣಿ ೬. ಈಸಳೋತ್ ೭.ಅಮ್‌ಗೋತ್ರ ೮. ಗೋರಾಮ್ ೯. ಝುರಪ್ಪಾ ೧೦. ಮೂಣವತ್ ೧೧. ವಾಂಕಡೋತ್ ೧೨. ಲುಕೌವತ್ ೧೩. ಮುಚ್ಚಳ್‌ವತ್

ಜಾತ್ ಗೋತ್ರದಲ್ಲಿ ಬರುವ ಮತ್ತೊಂದು ಉಪಗೋತ್ರವಾದ ವಡತಿಯ ಗೋತ್ರವು ದಾದಾಮೋಲನ ಕಾಲದಿಂದ ಬಂದಿರದೆ ನಂತರ ಉದ್ಭವಿಸಿರುವಂತೆ ಕಂಡುಬರುತ್ತದೆ. ಈ ಗೋತ್ರಕ್ಕೆ ಸಂಬಂಧಿಸಿದಂತೆ ಲಂಬಾಣಿಗರಲ್ಲಿ ಹಲವಾರು ದಂತಕತೆಗಳು ರೂಢಿಯಲ್ಲಿವೆ. ಅವುಗಳೆಂದರೆ,

**೧ನೇ ದಂತಕತೆ** : ಪಮ್ಮಾರ ಉಪಗೋತ್ರದ ಝುರಪ್ಪಾ ಒಳಗೋತ್ರಕ್ಕೆ ಸೇರಿದ ವ್ಯಕ್ತಿಯೋರ್ವನ ಮಗಳು ಬಹಳ ಸುಂದರಿಯಾಗಿರುತ್ತಾಳೆ. ಬ್ರಾಹ್ಮಣ ಯುವಕನೊಬ್ಬನ ಬಲಾತ್ಕಾರದಿಂದ ಗರ್ಭವತಿಯಾಗಿ ಮದುವೆಗೆ ಮುನ್ನ ಗಂಡು ಮಗುವಿಗೆ ಜನ್ಮ ನೀಡಿದ ಪರಿಣಾಮವಾಗಿ ಸಮಸ್ತ ಕುಲಬಾಂಧವರು ಸಭೆ ಸೇರಿ ವಿಚಾರ ಮಾಡಿ ಆ ಮಗುವಿಗೆ ವಡತಿಯ ಎಂದು ನಾಮಕರಣ ಮಾಡುತ್ತಾರೆ.[೯]

**೨ನೇ ದಂತಕತೆ** : ಲಂಬಾಣಿಗರು ತಮ್ಮ ವ್ಯಾಪಾರವನ್ನು ಪ್ರಾರಂಭಿಸಲು ಬಾಲಾಜಿ ಎನ್ನುವ ಗುರು ಒಬ್ಬನಿಂದ ೧೪ ಕಚ್ಚರ್ (ವರಹ) ರೂಪಾಯಿಗಳನ್ನು ಸಾಲವಾಗಿ ಪಡೆದರು. ಸಾಲ ನೀಡಿದ ಗುರು ತನ್ನ ಶಿಷ್ಯನೊಬ್ಬನನ್ನು ಸಾಲ ವಸೂಲಾತಿಗಾಗಿ ಕಳುಹಿಸಿಕೊಡುತ್ತಾನೆ. ಬ್ರಾಹ್ಮಣ ಯುವಕನಾದ ಇವನಿಗೂ ಝುರಪ್ಪಾ ಗೋತ್ರದ ಯುವತಿಯಾದ ಕಸ್ತೂರಿ ಬಾಯಿ ಎಂಬುವಳೊಂದಿಗೆ ಸಂಬಂಧ ಬೆಳೆದು ಅವಳು ಗರ್ಭವತಿಯಾಗಿ ಗಂಡು ಮಗುವಿಗೆ ಜನ್ಮ ನೀಡುತ್ತಾಳೆ. ಈ ರೀತಿ ಜನಿಸಿದ ಮಗುವಿಗೆ ಜನಾಂಗದ ೧೮ ಜನ ನಾಯಕರು ಸೇರಿ ಹೆಸರು ನೀಡಬೇಕೆಂದು ಯೋಚಿಸುತ್ತಾರೆ. 'ವಡೇರ್ ಝಾಡ್' ಎಂದರೆ ಲಂಬಾಣಿ ಭಾಷೆಯಲ್ಲಿ ಆಲದ ಮರ ಎಂದರ್ಥ. ಆಲದ ಮರದ ಕೆಳಗೆ ಕುಳಿತು ನ್ಯಾಯವನ್ನು ನಿರ್ಣಯಿಸಿದ್ದರಿಂದ ಈ ಮಗುವಿಗೆ ವಡತಿಯ ಎಂಬ ಹೆಸರಿನಿಂದ ಕರೆಯುತ್ತಾರೆ. ಮುಂದೆ ಈ ವಡತಿಯನಿಂದ ವಂಶ ಬೆಳೆದು ೧೨ ಜನರು ಜನಿಸಿದರು. ಈ ೧೨ ಜನರ ಸಂತತಿಯನ್ನು 'ಬಾರಾಪಾಡಾವಡತಿಯ' ಅಂದರೆ ಹನ್ನೆರಡು ಒಳಪಂಗಡ (ಗೋತ್ರ)ಗಳನ್ನು ಹೊಂದಿರುವ ವಡತಿಯ ಎಂದು ಕರೆಯುತ್ತಾರೆ. ಇವರುಗಳೆಂದರೆ ೧. ಬಾದಾವತ್ ೨. ಲಾಖಾವತ್ ೩. ಲೋಣವತ್ ೪. ತೇಜಾವತ್ ೫. ಧಾರವತ್ ೬. ಘಾಗಲೋತ್ ೭. ಹಾಲಾವತ್ ೮. ಕುಣಸಾದ್ ೯. ಮಾಳೋತ್ ೧೦. ಬೋಡ, ೧೧. ಜೇಟೋರ್ ೧೨. ಅಜಮೇರ.[೧೦]

ಈ ಮೇಲ್ಕಂಡ ದಂತಕಥೆಗಳಿಂದ ಬ್ರಾಹ್ಮಣ ಯುವಕನೊಬ್ಬನು ಲಂಬಾಣಿ ಯುವತಿಯೊಂದಿಗೆ ಬೆಳೆಸಿದ ಸಂಪರ್ಕದಿಂದ ವಡತಿಯ ಗೋತ್ರದ ಪ್ರತಿನಿಧಿಯು ಜನಿಸಿದನೆಂದು ತರ್ಕಿಸಬಹುದಾಗಿದೆ. ಬಹುತೇಕ ತಾಂಡದಲ್ಲಿ ಇವರು ಪೂಜಾರಿಗಳಾಗಿ ಹಾಗೂ ಸಾಂಪ್ರದಾಯಿಕ ಮದುವೆಗಳಲ್ಲಿ ಪುರೋಹಿತರೆಂದು ಭಾವಿಸಲಾಗುತ್ತದೆ.

ವಿಚಿತ್ರವೆಂದರೆ ಬಾರಪಾಡ ವಡತಿಯ ಪಂಗಡದವರು. ಮೋಲ ವಂಶಾವಳಿಯ ರಾಠೋಡ್, ಚೌವಾಣ್ ಹಾಗೂ ಪಮ್ಮಾರ ಪಂಗಡಗಳಲ್ಲಿಯೂ ಯಾವ ನಿರ್ಬಂಧವಿಲ್ಲದೇ ವೈವಾಹಿಕ ಸಂಬಂಧಗಳು ಬೆಳೆಯಲು

ಅನುಕೂಲವಿರುತ್ತದೆ. ಆದಕ್ಕಾಗಿಯೇ ೫೨ ಕುಲಗೋತ್ರಗಳೆಲ್ಲ ವೈವಾಹಿಕ ಸಂಬಂಧವನ್ನು ಬೆಳೆಸಬಹುದೆಂಬುದಾಗಿದೆ. ಚೌವಾಣ್ ಹಾಗೂ ಪಮ್ಮಾರ್ ಪಂಗಡದವರು ಕೇವಲ ರಾಠೋಡ್ ಪಂಗಡಗಳೊಂದಿಗೆ ಹಾಗೂ ರಾಠೋಡ್ ಪಂಗಡದವರು ಪಮ್ಮಾರ್ ಮತ್ತು ಚವ್ಹಾಣರೊಂದಿಗೆ ಮಾತ್ರ ವೈವಾಹಿಕ ಸಂಬಂಧಗಳನ್ನು ಬೆಳೆಸಲು ಅವಕಾಶವಿದೆ. ಆದುದರಿಂದ ಬಾರ್‌ಪಾಡ ವಡತಿಯಾದವರು ಲಂಬಾಣಿಗಳಲ್ಲೇ ತಾವು ಶ್ರೇಷ್ಠ ಗೋತ್ರದವರೆಂದು ಹೇಳಿಕೊಳ್ಳುತ್ತಾರೆ.

ಭುಕ್ಯಾ ಮುಖ್ಯಗೋತ್ರದಲ್ಲಿ ರಾಠೋಡ್ ಉಪಗೋತ್ರವಾಗಿದ್ದು ಇವರಲ್ಲಿ ಏಳು ಒಳಗೋತ್ರಗಳಿವೆ. ೧. ಕೆಮಾವತ್, ೨. ರಾಮಾವತ್, ೩. ಡುಂಗಾವತ್, ೪. ಉಡವತ್, ೫. ಕರ್ಮಾಟೋತ್, ೬. ಕೇತಾವತ್, ೭.ದೇವಸೂತ್, ಈ ಏಳು ಗೋತ್ರಗಳಲ್ಲದೇ ಇವರಲ್ಲಿ ಆಂತರಿಕವಾಗಿ ಎರಡು ಗುಂಪುಗಳಿದ್ದು ಅವುಗಳನ್ನು ಹದಿಮೂರು ಮತ್ತು ಹದಿನಾಲ್ಕು ಒಟ್ಟು ೨೭ ಗೋತ್ರಗಳು ಎನ್ನಲಾಗಿದೆ. ಅವರನ್ನು ಲಂಬಾಣಿಗರು 'ತೇರನ್ ಚೌದ್ ಸತ್ತಾಯಿಸ್ ತಾಡ ಭಗರಿಡಾಲ್ ಭುಕ್ಯಾ'ಗಳೆಂದು ಕರೆಯುತ್ತಾರೆ. ಈ ಎರಡು ಗುಂಪುಗಳನ್ನು ಜಂಗೀ ಭಂಗೀ ಗುಂಪುಗಳೆಂದೂ ಕರೆದಿರುವುದನ್ನು ಕಾಣಬಹುದು.[೧೫]

ಜಂಗೀ ಗುಂಪಿನ ಒಳಗೋತ್ರಗಳು ಇಂತಿವೆ. ೧. ಮಪಲಾವತ್ ೨. ಭೋಜವತ್ ೩. ಕೆತಾರೂತಾ ೪. ಜಾಟೋತ್ ೫. ಧನ್ನಾವತ್ ೬. ದಾಮಾವತ್ ೭. ವಿಳಾಸಿ ೮. ರತ್ನ ೯. ಅನಾವತ್ ೧೦. ರಣ್ಸೋತ್ ೧೧. ದರ್ಮಾನ, ೧೨ ಜಾಲಾವತ್ ೧೩. ಉದಾವತ್ ೧೪. ಮಳಾಸಿ

ಅದೇ ರೀತಿ ಭಂಗಿ ಗುಂಪಿನ ಒಳಗೋತ್ರಗಳು ಹೀಗಿವೆ. ೧. ಮೇಘವತ್ ೨, ಕಾಮಾವತ್ ೩. ಗಾಲಾವತ್ ೪. ಪಬ್ಯಾಹೋತ್ ೫. ಟುಮ್ಮಾವತ್ ೬. ದುದಾವತ್ ೭. ಕತ್ಮಟುತ್ ೮. ಡುಂಗವತ್ ೯. ರಾಮಾವತ್ ೧೦. ದೇಗಾವತ್ ೧೧. ಮೇರಾಜೂತ್ ೧೨. ರಾಜಾವತ್ ೧೩. ಕುಂಭಾವತ್.

ಇವರಲ್ಲಿರುವ ಒಂದು ದಂತಕಥೆಯಂತೆ, ಬುಡಕಟ್ಟಿನಲ್ಲಿ ವಾಂಕಡೋತ್, ಒಳಗೋತ್ರದವರು ಭಾರೀ ಬಲಿಷ್ಠರಾಗಿದ್ದು, ನಾಯಕ, ಡಾವ್ರೋ, ಕಾರಬಾರಿಗಳೆಂಬ ತಾಂಡದ ಮೂರು ಮುಖ್ಯ ಜವಾಬ್ದಾರಿಯುತ ಸ್ಥಾನಗಳನ್ನು ಅವರೇ ನಿರ್ವಹಿಸುತ್ತಿದ್ದರಂತೆ, ಇದನ್ನು ಸಹಿಸದ ಉಳಿದ ಗೋತ್ರಗಳು ಪ್ರತಿಭಟಿಸಿದರು. ಸಭೆ ಸೇರಿ ತಮಗೂ ಪ್ರಾಮುಖ್ಯತೆ ಬೇಕೆಂದು ಕೇಳಿದರು. ಆಗ ವಾಂಕಡೂಟ್ ಗೋತ್ರದವರು ಒಂದು ಕುಂಭದಲ್ಲಿ (ಮಡಿಕೆಯಲ್ಲಿ) ಮಿಡಿನಾಗರ ಹಾವನ್ನು ಹಾಕಿ ಕುಂಬದ ಬಾಯಿಯನ್ನು ಒಂದು ಬಟ್ಟೆಯಿಂದ ಕಟ್ಟಿ ಸಭೆಯ ಮಧ್ಯದಲ್ಲಿಟ್ಟು ಯಾರು ಕುಂಭದಲ್ಲಿರುವ ಹಾವನ್ನು ಕೈಯಿಂದ ಹಿಡಿದು ಎತ್ತಿ ತಲೆಗೆ ಸುತ್ತಿಕೊಳ್ಳುತ್ತಾನೋ ಅವನು ತಾಂಡ ನಾಯಕನಾಗಲಿ ಎಂದು ಹೇಳುತ್ತಾರೆ. ೧೨ ವರ್ಷಗಳಾದರೂ ಯಾರೂ ಈ ಕೆಲಸವನ್ನು ನಿರ್ವಹಿಸಲು ಮುಂದೆ ಬರುವುದಿಲ್ಲ. ಕೊನೆಗೆ ರಾಜಾವತ್ ಎಂಬುವನು ತನ್ನ ಸ್ನೇಹಿತರೊಂದಿಗೆ ಸಭೆಗೆ ಬಂದು ಮಿಡಿ ನಾಗರಹಾವನ್ನು ಕುಂಭದಿಂದ ಎತ್ತಿ ತಲೆಗೆ ಸುತ್ತಿಕೊಂಡನಂತೆ. ಈ ರಾಜಾವತ್‌ನೇ ಹದಿಮೂರು ಮತ್ತು ಹದಿನಾಲ್ಕು ಗೋತ್ರಗಳ ಮೂಲಪುರುಷ ಎಂಬುದಾಗಿ ಹೇಳುತ್ತಾರೆ. ಮುಂದೆ ಈತನ ಗೋತ್ರದವರೇ ತಾಂಡಾದಲ್ಲಿ ನಾಯಕರುಗಳಾಗಬೇಕೆಂದು ಸಭೆಯಲ್ಲಿ ನಿರ್ಣಯಿಸಲಾಯಿತು. ಎಂಬ ದಂತಕಥೆ ಇದರಲ್ಲಿ ಪ್ರಚಲಿತವಿದೆ. ಆದರೂ

ಪಡತಿಯ ಗೋತ್ರದವರೇ ಹೆಚ್ಚು ಬಲಿಷ್ಠರಾಗಿದ್ದು ಪಂಚಾಯಿತಿಗಳಲ್ಲಿ ಪ್ರಮುಖ ಸ್ಥಾನ ಪಡೆದಿರುವುದನ್ನು ಕಾಣಬಹುದು.[೨]

ಲಂಬಾಣಿಗರ ಗೋತ್ರ ರಚನೆ ಜಟಿಲವಾಗಿದ್ದು ಈ ಎಲ್ಲಾ ಗೋತ್ರಗಳೂ ಅಸ್ತಿತ್ವದಲ್ಲಿರುವುದರ ಬಗ್ಗೆ ಸಂಶಯವಿದೆ. ಮುಖ್ಯಗೋತ್ರಗಳನ್ನು ಹೊರತುಪಡಿಸಿ ಒಳಗೋತ್ರಗಳ ಹೆಸರುಗಳು ಗೊಂದಲಮಯವಾಗಿವೆ. ಆದ್ದರಿಂದ ಇವುಗಳ ಬಗ್ಗೆ ಇನ್ನೂ ಆಳವಾದ ಅಧ್ಯಯನ ಅತ್ಯಗತ್ಯ.

ಈ ಬೆಡಗುಗಳಲ್ಲದೆ ಇನ್ನೂ ಅನೇಕ ಬೆಡಗುಗಳಿವೆ. ಕುಲ ಅಥವಾ ಬೆಡಗುಗಳು ವ್ಯಕ್ತಿ ಪರಸ್ಪರವಾಗಿ ಕಾರ್ಯ ಮಾಡುವುದನ್ನು ಆಧರಿಸಿವೆ. ಇವುಗಳು ಲಂಬಾಣಿಗರ ವೈವಾಹಿಕ ಸಂಬಂಧ ಸ್ಥಾಪನೆಗೆ ನೆರವಾಗುವುದಲ್ಲದೆ, ಅವರ ಧರ್ಮಾಚರಣೆಯ ಜೀವನವನ್ನು ನಿಯಂತ್ರಿಸುತ್ತವೆ. ಒಟ್ಟಾರೆ ಬೆಡಗುಗಳು ಲಂಬಾಣಿಗರ ಸಾಮಾಜಿಕ ಜೀವನದಲ್ಲಿ ಪ್ರಮುಖ ಸ್ಥಾನ ಪಡೆದಿರುವುದು ಸ್ಪಷ್ಟ.

**೩. ಕುಟುಂಬ ಪದ್ಧತಿ**

ಕುಟುಂಬ ಪದ್ಧತಿ ಸಮಾಜದ ಒಂದು ಅವಿಭಾಜ್ಯ ಅಂಗ, ಮಾನವನ ಜೀವನ ಸುಗಮವಾಗಿ ನಡೆಯಲು ಕುಟುಂಬವು ಅನಿವಾರ್ಯ ಮತ್ತು ಅವಶ್ಯಕ. ಒಂದು ಕುಟುಂಬವು ಸಾಮಾಜಿಕವಾಗಿ, ಧಾರ್ಮಿಕವಾಗಿ ಬಹಳ ಪ್ರಮುಖವಾದ ಪಾತ್ರವಹಿಸುತ್ತದೆ. ಮಾನವನಿಗೆ ಸಮಾಜದಲ್ಲಿ ಗೌರವ ಹಾಗೂ ಹುಟ್ಟಿದ ಮಗುವಿಗೆ ಸಂಸ್ಕಾರ ದೊರೆಯುವುದು ಕುಟುಂಬದಿಂದಲೇ ಸಾಧ್ಯ. ಹೀಗಾಗಿ ನಾಗರಿಕತೆಗೆ ಸಮಾಜ ತಳಹದಿಯಾದರೆ ಸಮಾಜಕ್ಕೆ ಕುಟುಂಬವೇ ಮೂಲವಾಗಿದೆ. ಒಟ್ಟಾರೆ ಕುಟುಂಬದ ಅಸ್ತಿತ್ವವಿಲ್ಲದ ಸಮಾಜವನ್ನು ಊಹಿಸುವುದು ಕಷ್ಟ.

ಲಂಬಾಣಿ ಕುಟುಂಬ ಪದ್ಧತಿ ಬಗ್ಗೆ ಶಾಸನಗಳಲ್ಲಿ ಉಲ್ಲೇಖಗಳಿಲ್ಲ. ಲಂಬಾಣಿಗರದು ಮೂಲತಃ ವಿಭಕ್ತ ಕುಟುಂಬ ಪದ್ಧತಿಯೇ ಅಧಿಕವಾಗಿದ್ದು, ವಿರಳವಾಗಿ ಅವಿಭಕ್ತ ಕುಟುಂಬಗಳು ಕಂಡುಬರುತ್ತವೆ. ಗಂಡು ಮಕ್ಕಳು ಸಾಮಾನ್ಯವಾಗಿ ತಮ್ಮ ಮದುವೆಯಾಗುವವರೆಗೆ ಮಾತ್ರ ಕುಟುಂಬದಲ್ಲಿದ್ದು ಒಟ್ಟಾಗಿ ಜೀವಿಸಿ ಮದುವೆಯ ನಂತರ ಪ್ರತ್ಯೇಕವಾಗಿ ಬದುಕುವುದೇ ಹೆಚ್ಚು. ಇವರಲ್ಲಿ ಹೆಚ್ಚಾಗಿ ಪಿತೃಪ್ರಧಾನ ಕುಟುಂಬಗಳು ಇದ್ದರೂ ಅಲ್ಲಲ್ಲಿ ಮಾತೃಪ್ರಧಾನ ಕುಟುಂಬಗಳು ಕಂಡುಬರುತ್ತವೆ. ವಂಶದ ಕೀರ್ತಿಗೆ ಕುಟುಂಬದ ಹಿರಿಯ ಮಗನೇ ಹಕ್ಕುದಾರನಾಗಿದ್ದು ತಂದೆಯಿಂದ ಮಗನಿಗೆ ಹಸ್ತಾಂತರವಾಗುತ್ತದೆ. ಕುಟುಂಬದಲ್ಲಿ ತಂದೆಯ ನಂತರ ಹಿರಿಯ ಮಗನಿಗೆ ಹೆಚ್ಚಿನ ಜವಾಬ್ದಾರಿಯಿದ್ದು.[೩] ತಂದೆಯು ಅಸಮರ್ಥನಾಗಿದ್ದರೆ ಹಿರಿಯ ಮಗ ಕುಟುಂಬದ ಆಗುಹೋಗುಗಳನ್ನು ನೋಡಿಕೊಳ್ಳಬೇಕಾಗುತ್ತದೆ.

ಮನುಷ್ಯನ ಬದುಕಿನ ಆಗುಹೋಗುಗಳಿಗೆ ಸ್ತ್ರೀ ಪ್ರೇರಕ ಶಕ್ತಿಯೆಂದು ನಂಬಿದರಲ್ಲದೆ, ಹೆಣ್ಣನ್ನು ಶಕ್ತಿಯ ಮೂಲ, ಆದಿಶಕ್ತಿ ಜಗನ್ಮಾತೆ ಎಂದು ಭಾವಿಸಿದರು. ಭೀಮಿಸತ್ತಿ, ಸಾತೀಭವಾನಿ, ಸೀತ್ಲ, ಮರಿಯಮ್ಮ, ಹುಲಿಗಮ್ಮ, ಗಾಳೆಮ್ಮ, ದುರ್ಗಮ್ಮ ಮೊದಲಾದ ಮಾತೃ ದೇವತೆಗಳನ್ನು ಆರಾಧಿಸತೊಡಗಿದರು. ಈ ಗ್ರಾಮ ದೇವತೆಗಳ ಹೆಸರಿನ ಮುಂದೆ ಅವ್ವ ಅಥವಾ ಅಮ್ಮ ಎಂದಿರುತ್ತದೆ. ಈ ಪದಗಳು ಮಾತೃತ್ವವನ್ನು ಪ್ರಧಾನವಾಗಿ

ಸೂಚಿಸುತ್ತವೆ.[illegible] ಇಂದಿಗೂ ಲಂಬಾಣಿಗರು ಅನೇಕ ಸ್ತ್ರೀದೇವತೆಗಳನ್ನು ಆರಾಧಿಸುತ್ತಾರೆ. ಇದರಿಂದಾಗಿ ಮಾತೃಪ್ರಧಾನ ವ್ಯವಸ್ಥೆ ರೂಢಿಯಲ್ಲಿದೆ ಎಂದು ಹೇಳಬಹುದು.

ಪ್ರಾಚೀನ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಮಾತೃಪ್ರಧಾನ ವ್ಯವಸ್ಥೆ ಆರ್ಯರ ಆಕ್ರಮಣವಾದ ಮೇಲೆ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳತೊಡಗಿತು. ಪಿತೃಪ್ರಧಾನ ವ್ಯವಸ್ಥೆ ಅಸ್ತಿತ್ವಕ್ಕೆ ಬಂದಿತು. ಈ ವ್ಯವಸ್ಥೆಯಲ್ಲಿ ಅಧಿಕಾರವೆಲ್ಲವೂ ತಂದೆಯ ಮೂಲಕ ನೆರವೇರುತ್ತದೆ. 'ಲಂಬಾಣಿಗರಲ್ಲಿ ಹೆಚ್ಚಾಗಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಿತ್ತೆಂದು ತಿಳಿಯುತ್ತದೆ. ಕುಟುಂಬದಲ್ಲಿ ಈತನ ತೀರ್ಮಾನವೇ ಅಂತಿಮ. ವಂಶಪರಂಪರೆಯನ್ನು ತಂದೆಯಿಂದ ಮಗನಿಗೆ ವರ್ಗಾಯಿಸಲಾಗುತ್ತದೆ. ಸದಸ್ಯರುಗಳ ಸ್ಥಾನ ಮತ್ತು ಹೆಸರು ತಂದೆಯಿಂದಲೇ ನಿರ್ಧಾರವಾಗುತ್ತದೆ. ತಂದೆಯ ನಂತರ ಹಿರಿಯ ಮಗ ಕುಟುಂಬದ ಪ್ರಮುಖನಾಗುತ್ತಾನೆ.'[illegible] ಅವನ ಹೆಂಡತಿ ಒಡತಿಯಾಗುತ್ತಾಳೆ. ಕುಟುಂಬದ ಹೊರಗಿನ ಕೆಲಸಗಳನ್ನು ಹಿರಿಯ ಮಗ ನೋಡಿಕೊಂಡರೆ, ಕುಟುಂಬದ ಆಂತರಿಕ ಕೆಲಸಗಳನ್ನು ಹಿರಿಯ ಸೊಸೆ ನೋಡಿಕೊಳ್ಳುತ್ತಾಳೆ. ಕುಟುಂಬದ ಉಳಿದ ಸದಸ್ಯರೆಲ್ಲರೂ ಇವರಿಗೆ ವಿಧೇಯರಾಗಿರುತ್ತಾರೆ. ಜನನ, ಮರಣ, ಮದುವೆ, ಋತುಮತಿ ಮೊದಲಾದ ಕಾರ್ಯಗಳಲ್ಲಿ ಕುಟುಂಬದ ಯಜಮಾನನೇ ಪ್ರಮುಖನಾಗಿರುತ್ತಾನೆ. ಪ್ರಾಚೀನ ಕಾಲದಿಂದಲೂ ಪ್ರಸ್ತುತದವರೆಗೂ ಲಂಬಾಣಿಗರ ಸ್ತ್ರೀಯರು ಕಟ್ಟಿಗೆ ಮಾರುವುದು ಮತ್ತು ಕಸೂತಿ ಕಲೆ ಪ್ರಮುಖ ವೃತ್ತಿಯನ್ನಾಗಿಸಿಕೊಂಡಿದ್ದಾರೆ. ಇವರು ಬಣ್ಣದ ತುಂಡು ತುಂಡು ಬಟ್ಟೆಗಳನ್ನು ತೆಗೆದುಕೊಂಡು ಅದಕ್ಕೆ ವಿವಿಧ ಬಣ್ಣಗಳ ದಾರದಿಂದ ಅಲಂಕರಿಸುತ್ತಾರೆ. ಇದರಲ್ಲಿ ಮುಖ್ಯವಾಗಿ ಕೆಂಪು, ಕಾಚು, ನೀಲಿ ಹಾಗೂ ಕಪ್ಪುಗಳನ್ನು ಬಳಸಿ ಕುಶನ್, ಕುಪ್ಪಸ, ಬ್ಯಾಗ್, ಉಡುಪು ತಯಾರಿಸುತ್ತಾರೆ.

ಕೃಷಿ ಕೆಲಸಗಳಿಗೆ ಅಧಿಕ ಜನರ ಅವಶ್ಯಕತೆಯಿತ್ತು. ಹೀಗಾಗಿ ಲಂಬಾಣಿಗರಲ್ಲಿ ಅವಿಭಕ್ತ ಕುಟುಂಬಗಳು ಅಧಿಕವಾಗಿದ್ದವು.[illegible] ಅದರಲ್ಲೂ ಪಿತೃಪ್ರಧಾನ ಕುಟುಂಬವಿತ್ತು. ಒಂದು ಕುಟುಂಬದಲ್ಲಿ ಯಜಮಾನನ ತಂದೆ, ತಾಯಿ, ಅಜ್ಜ, ಅಜ್ಜಿ, ಮಕ್ಕಳು, ಸೊಸೆಯರು, ಮೊಮ್ಮಕ್ಕಳು, ಸೋದರರು, ಸಹೋದರಿಯರು, ಹತ್ತಿರದ ಸಂಬಂಧಿಗಳು ಹಾಗೂ ಬೀಗರು ಎಂದು ವಿಂಗಡಿಸಿದರು. ಕುಲ ಮತ್ತು ವಂಶದವರಲ್ಲಿ ರಕ್ತ ಸಂಬಂಧಿ (ದಾಯಾದಿ)ಗಳಾದರೆ, ಮದುವೆ ಮುಖಾಂತರ ಸಂಬಂಧ ಬೆಳೆಸಿದವರು ಬೀಗರೆಂದು ಕರೆಯಲ್ಪಟ್ಟರು. ಎಲ್ಲರಿಗೂ ಸಮಾನ ರೀತಿಯಲ್ಲಿ ಆಸ್ತಿಯ ಹಕ್ಕಿರುತ್ತದೆ. ಆದರೆ ಇವರು ಆಸ್ತಿಯಲ್ಲಿ ಭಾಗ ಕೇಳಲು ಅನುಮತಿ ಇರುವುದಿಲ್ಲ. ಹೀಗಾಗಿ ಕುಟುಂಬದಲ್ಲಿ ಪರಸ್ಪರ, ಒಗ್ಗಟ್ಟು, ರಕ್ಷಣೆ, ಐಕ್ಯತೆ, ನಮ್ಮವರು ಎಂಬ ಭಾವನೆಗಳು ಇಲ್ಲಿ ಪ್ರಧಾನವಾಗಿರುತ್ತವೆ.

ಅವಿಭಕ್ತ ಕುಟುಂಬದಲ್ಲಿ ಪುರುಷ ಸಂತಾನಕ್ಕೆ ಪ್ರಾಮುಖ್ಯತೆ ನೀಡುತ್ತಿದ್ದರೆಂದು ಸ್ಪಷ್ಟವಾಗಿದೆ. ಪುರುಷ ಪ್ರಧಾನ ಕುಟುಂಬದಲ್ಲಿ ಸ್ತ್ರೀಯರು ಕೆಲವು ಪ್ರಮುಖ ಕಾರ್ಯನಿರ್ವಹಿಸುತ್ತಿದ್ದರು. ಕುಟುಂಬವು ವಿವಾಹ ಮಾಡುವುದು, ಮಕ್ಕಳನ್ನು ಪಡೆಯುವುದು, ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಿ ಸಮಾಜದಲ್ಲಿ ಉತ್ತಮ ಪ್ರಜೆಯನ್ನಾಗಿ ಮಾಡುವುದು ಮೊದಲಾದ ಉನ್ನತಕಾರ್ಯಗಳನ್ನು ನಿರ್ವಹಿಸುತ್ತದೆ. ಆದರೆ ಅವಿಭಕ್ತ

ಕುಟುಂಬದಲ್ಲಿ ಸಹೋದರರು ಕಾಲಾನಂತರ ದಾಯಾದಿಗಳಾಗಿ ಆಸ್ತಿಯನ್ನು ಹಂಚಿಕೊಳ್ಳುವಲ್ಲಿ ಜಗಳಾಡುತ್ತಿರುವ ಪ್ರಕರಣಗಳು ಸಾಮಾನ್ಯವಾಗಿ ಕಂಡುಬರುತ್ತದೆ. ಇದರಿಂದ ಅವಿಭಕ್ತ ಕುಟುಂಬಗಳು ಆಂತರಿಕ ಕಲಹಗಳಿಂದ ಒಡೆದು ವಿಭಕ್ತ ಕುಟುಂಬಗಳಾದವೆಂದು ತಿಳಿಯುತ್ತದೆ.

ಆಧುನಿಕತೆಯ ಪ್ರಭಾವದಿಂದಾಗಿ ಲಂಬಾಣಿಗರು ಅವಿಭಕ್ತ ಕುಟುಂಬಗಳು ನಶಿಸಿಹೋದವು. ಈ ವಿಭಕ್ತ ಕುಟುಂಬಗಳು ಸಣ್ಣಪುಟ್ಟ ಕುಟುಂಬಗಳಾಗಿ ಹೋದವು. ಕೈಗಾರಿಕರಣ ಹಾಗೂ ನಗರೀಕರಣದ ಪ್ರಭಾವದಿಂದ ಅವಿಭಕ್ತ ಕುಟುಂಬಗಳು ನಶಿಸಿ ಹೋದವು. ಈ ವಿಭಕ್ತ ಕುಟುಂಬಗಳಲ್ಲಿ ತಂದೆ ತಾಯಿ ಮಕ್ಕಳು ಮಾತ್ರ ನೆಲೆಸಿರುತ್ತಾರೆ. ಆದರೂ ವಿಶೇಷ ಸಂದರ್ಭಗಳಲ್ಲಿ ವಿಭಕ್ತ ಕುಟುಂಬದವರೆಲ್ಲ ಒಂದೆಡೆ ಸೇರುವುದು ಕಂಡುಬರುತ್ತದೆ. ವಿವಾಹ, ಜನನ, ಮರಣ, ಮೊದಲಾದ ಸಂದರ್ಭಗಳಲ್ಲಿ ಒಂದೆಡೆ ಸೇರುವ ಕೂಡುವ ಅವಕಾಶವಿರುತ್ತದೆ. ಇಂದಿಗೂ ಕೆಲವು ತಾಂಡಗಳಲ್ಲಿ ಅವಿಭಕ್ತ ಕುಟುಂಬಗಳನ್ನು ಕಾಣಬಹುದಾಗಿದೆ. ಅವಿಭಕ್ತ ಕುಟುಂಬಗಳಾಗಿ ಪರಿವರ್ತನೆಗೊಂಡರೂ ಅವುಗಳ ನಡುವೆ ಸಾಮರಸ್ಯವಿರುವುದು ಕಂಡುಬರುತ್ತದೆ.

**೪. ಆಹಾರ ಮತ್ತು ಪಾನೀಯಗಳು**

ಆದಿಕಾಲದಿಂದಲೂ ಮಾನವನಿಗೆ ಜೀವಿಸಲು ಆಹಾರ ಮುಖ್ಯವಾಗಿದೆ. ಭಾರತದ ಪ್ರತಿಯೊಂದು ಬುಡಕಟ್ಟು ಸಮುದಾಯಗಳು ಮೂಲತಃ ಮಿಶ್ರಹಾರಿಗಳು. ಲಂಬಾಣಿಗರು ಮೂಲತಃ ಬೆಟ್ಟ-ಗುಡ್ಡ ಪ್ರದೇಶಗಳಲ್ಲಿ ವಾಸ ಮಾಡುವುದರಿಂದ ಆಹಾರ ಪದ್ಧತಿಯು ಆಯಾ ಭೌಗೋಳಿಕ ಪರಿಸರಕ್ಕೆ ಅನುಗುಣವಾಗಿರುತ್ತದೆ. ಹಿಂದೆ ಅಲೆಮಾರಿಯಾಗಿದ್ದ ಮಾನವನಿಗೆ ಕಾಡಿನ ಹಣ್ಣು-ಹಂಪಲು, ಗಡ್ಡೆ-ಗೆಣಸುಗಳೇ ಆಹಾರವಾಗಿದ್ದವು. ಕ್ರಮೇಣ ಬೌದ್ಧಿಕ ಬೆಳವಣಿಗೆಯಾದಂತೆ ಅವನು ಭೂ ಸಾಗುವಳಿ ಮಾಡುವುದನ್ನು ಕಲಿತು ಆಹಾರ ಧಾನ್ಯಗಳನ್ನು ಬೆಳೆಯುವುದರ ಜೊತೆಗೆ ಆಹಾರ ಪದ್ಧತಿಯಲ್ಲಿ ಬದಲಾವಣೆ ತಂದುಕೊಂಡನು.''[೨] ''ಮಾನವನು ತಾನು ಯಾವ ಭೌಗೋಳಿಕ ಪರಿಸರದಲ್ಲಿ ಬದುಕಿದ್ದಾನೋ ಆ ಹವಾಗುಣಕ್ಕೆ ಹೊಂದುವಂತಹ ಆಹಾರ ಧಾನ್ಯಗಳನ್ನು ಬೆಳೆಯುವುದು ಅನಿವಾರ್ಯ. ಆದ್ದರಿಂದ ಬುಡಕಟ್ಟು ಸಮುದಾಯಗಳು ಅವರು ನೆಲೆಸಿರುವ ಪ್ರದೇಶಕ್ಕೆ ಅನುಗುಣವಾಗಿ ಆಹಾರ ಪದ್ಧತಿಯಲ್ಲಿ ಬದಲಾವಣೆ ತಂದುಕೊಂಡವು. ಆದ್ದರಿಂದ ಬುಡಕಟ್ಟು ಸಮುದಾಯಗಳು ಅವರು ನೆಲೆಸಿರುವ ಪ್ರದೇಶಕ್ಕೆ ಅನುಗುಣವಾಗಿ ಆಹಾರ ಪದ್ಧತಿಯಲ್ಲಿ ವ್ಯತ್ಯಾಸ ಕಂಡುಬಂದರೂ ಸಹ ಮೂಲತಃ ಕಾಡುವಾಸಿಗಳಾಗಿದ್ದರಿಂದ ಬೇಟೆ ಮಾಡಿ ಮಾಂಸವನ್ನೇ ಮೂಲ ಆಹಾರವಾಗಿಸಿಕೊಂಡರು ಇಂದು ಸ್ವಲ್ಪ ಬದಲಾವಣೆಯನ್ನು ರೂಡಿಸಿಕೊಂಡಿದ್ದಾರೆ. ಇದಕ್ಕೆ ಲಂಬಾಣಿ ಸಮುದಾಯ ಹೊರತಾಗಿಲ್ಲ.

ಲಂಬಾಣಿಗರು ಮೂಲತಃ ಮಾಂಸಹಾರಿಗಳು. ಬೆಟ್ಟ-ಗುಡ್ಡ, ಕಣಿವೆ, ಅರಣ್ಯ ಪ್ರದೇಶದಲ್ಲಿ ವಾಸ ಮಾಡುವುದರಿಂದ ಅಲ್ಲಿ ಸಿಗುವ ತೆಂಗಿನಕಾಯಿ, ಹಲಸು, ಕಿತ್ತಳೆ, ಮಾವು, ದ್ರಾಕ್ಷಿ, ಖರ್ಜೂರ, ಬಾಳೆ, ನೇರಳೆ, ನಿಂಬೆ, ಹಣ್ಣು ಹಂಪಲುಗಳನ್ನು, ಪ್ರಾಣಿ-ಪಕ್ಷಿಗಳನ್ನು ಜಲಚರ ಜೀವಿಗಳನ್ನು ಬೇಟೆಯಾಡಿ ಅವುಗಳನ್ನು ಆಹಾರಕ್ಕಾಗಿ ಉಪಯಾಗಿಸುತ್ತಾರೆ. ಮಾಂಸಹಾರಿಗಳಾದರೂ ಎಲ್ಲಾ ಪ್ರಾಣಿಗಳ ಮಾಂಸಗಳನ್ನು ಸೇವಿಸದೇ ಕೆಲವು ವಿಶಿಷ್ಟ ಪ್ರಾಣಿಗಳ ಹಾಗೂ ಜಲಚರ ಜೀವಿಗಳ ಮಾಂಸವನ್ನು ಮಾತ್ರ ಉಪಯೋಗಿಸುತ್ತಾರೆ. ಪ್ರಾಣಿಗಳಲ್ಲಿ

ಆಡು, ಕುರಿ, ಕೋಳಿಗಳನ್ನು ಜಲಚರಗಳಲ್ಲಿ ಮೀನು, ಏಡಿ, ಆಮೆಗಳನ್ನು ಉಪಯೋಗಿಸುತ್ತಾರೆ. ಪಕ್ಷಿಗಳಲ್ಲಿ ಪಾರಿವಾಳ, ಭುರ್ಲಿ, ಕೌಜುಗ ಮುಂತಾದವುಗಳನ್ನು ಮಾತ್ರ ಉಪಯೋಗಿಸುತ್ತಾರೆ.[೨೮]

ಲಂಬಾಣಿಗರು ಆಹಾರ ಧಾನ್ಯಗಳಲ್ಲಿ ಪ್ರಾದೇಶಿಕವಾಗಿ ಬಳಕೆಯಲ್ಲಿರುವ ಜೋಳ, ಗೋದಿ, ಸಜ್ಜೆ, ರಾಗಿ, ನವಣೆ ಮೊದಲಾದವುಗಳನ್ನು ಉಪಯೋಗಿಸುತ್ತಾರೆ.[೨೯] 'ಬಾಟ ಖಾವತೊ ಮಾಟಿ' ಅಂದರೆ 'ರೊಟ್ಟಿ ತಿಂದರೆ ಗಟ್ಟಿ' ಎಂಬ ಗಾದೆ ಪ್ರಚಲಿತದಲ್ಲಿದೆ. ಇಂದು ಅವರು ರೊಟ್ಟಿಯನ್ನು ಹೆಚ್ಚಾಗಿ ಇಷ್ಟಪಡುವುದನ್ನು ಸೂಚಿಸುತ್ತದೆ. ಅಲ್ಲದೇ ಹುರುಳಿಯ ಹಿಟ್ಟಿನಿಂದ ತಯಾರಿಸುವ ಕಡತಿರ ಆಟೋ, ಹುರಿದು ತಯಾರಿಸಿದ ಗೋದಿರವೆಯ ಪಾಯಸವಾದ ಭೂಂಜಿ ಭಾಂಜಿ ಲಾಪಸಿ, ಕುರಿ ಮೇಕೆಗಳ ಕರಳು, ಹೃದಯ, ಶ್ವಾಸಕೋಶ ಇತ್ಯಾದಿಗಳನ್ನು ಬೆರೆಸಿ ಮಾಡುವ 'ಸಳೊಯ್' ಇವುಗಳನ್ನು ವಿಶೇಷವಾಗಿ ಆಹಾರ ಪದಾರ್ಥವಾಗಿ ಸೇವಿಸುತ್ತಾರೆ.[೩೦]

ಲಂಬಾಣಿಗರು ಗೋಪ್ರಿಯರಾಗಿದ್ದು ಹಸುಗಳನ್ನು ಹೇರಳವಾಗಿ ಸಾಕುತ್ತಾರೆ. ಆ ಮೂಲಕ ಹಾಲು, ಮೊಸರನ್ನು ಹೇರಳವಾಗಿ ಬಳಸುತ್ತಾರೆ. ತುಪ್ಪವನ್ನು ದಿನನಿತ್ಯದ ಊಟದ ಜೊತೆ ಹಾಗೂ ದೀಪಾವಳಿ ಹಬ್ಬದಲ್ಲಿ ಗೋಟಗಾಟ ಎಂದು ಕರೆಯುವ ಸಿಹಿಮುದ್ದೆಯ ಜೊತೆ ಹೇರಳವಾಗಿ ಸೇವಿಸುತ್ತಾರೆ.[೩೧]

ಲಂಬಾಣಿಗರು ಮದ್ಯಪಾನ ಪ್ರಿಯರು, ಸಾಂಸಾರಿಕ ಜವಾಬ್ದಾರಿಗಳ ಬಗ್ಗೆ ಎಚ್ಚರವಿದ್ದರೂ ಮದ್ಯಪಾನ ಚಟವನ್ನು ಬಿಡಲಾರದವರಾಗಿದ್ದಾರೆ. ಹಿಂದೆ ಈಚಲು, ತೆಂಗು, ಬೈನೆಮರದಿಂದ ಹೆಂಡವನ್ನು ಇಳಿಸಿ ಸೇವಿಸುತ್ತಿದ್ದರು. ಈಗ ಸಾರಾಯಿಯ ಮೊರೆ ಹೋಗಿದ್ದಾರೆ.[೩೨] ಕೆಲವರು ಕಳ್ಳಭಟ್ಟಿ ಸಾರಾಯಿಯನ್ನು ತಯಾರಿಸಿ ಕುಡಿದು ಪ್ರಾಣಾಪಾಯ ತಂದುಕೊಂಡಿರುವುದುಂಟು.

ಮದ್ಯಪಾನದಂತೆಯೇ ಬೀಡಿ ಸೇದುವುದು ಮತ್ತು ಮಹಿಳೆಯರು ಎಲೆ ಅಡಿಕೆಯ ಜೊತೆ ತಂಬಾಕು ಸೇವಿಸುತ್ತಾರೆ. ಗಂಡು ಹೆಣ್ಣೆಂಬ ಬೇಧ ಭಾವವಿಲ್ಲದೆ ಎಲ್ಲರೂ ಎಲೆ ಅಡಿಕೆಯ ಜೊತೆಗೆ ತಂಬಾಕು ಸೇವಿಸುತ್ತಾರೆ. ಗಂಡಸರು ವಿಶೇಷ ಹಬ್ಬ ಹರಿದಿನಗಳಲ್ಲಿ ಹುಕ್ಕಾ ಎಂದು ಕರೆಯುವ ಧೂಮಪಾನವನ್ನು ಸೇವನೆ ಮಾಡುತ್ತಾರೆ. ಆಧುನಿಕತೆಯ ಪ್ರಭಾವದಿಂದ ಲಂಬಾಣಿಗರು ಆಹಾರ ಪದ್ಧತಿ ಸ್ವಲ್ಪ ಬದಲಾವಣೆಯಾದರೂ, ಇಂದಿಗೂ ತಮ್ಮ ಹಳೆಯ ಸಂಪ್ರದಾಯವನ್ನು ಮುಂದುವರೆಸಿಕೊಂಡು ಬರುತ್ತಿದ್ದಾರೆ. ಒಟ್ಟಾರೆ ಲಂಬಾಣಿಗರ ಆಹಾರ ಪದ್ಧತಿ ಭೌಗೋಳಿಕವಾಗಿ ವಿಭಿನ್ನತೆಯನ್ನು ಹೊಂದಿರುವುದಲ್ಲದೆ ಸರಳ ಹಾಗೂ ಸಂಪ್ರದಾಯ ಬದ್ಧರಾಗಿರುವುದು ಸ್ಪಷ್ಟ.

**೫. ಉಡುಗೆ ತೊಡುಗೆ**

ಆದಿಕಾಲದಲ್ಲಿ ಆಹಾರ ಸಂಗ್ರಹಣೆ ಪ್ರಧಾನವಾಗಿದ್ದರಿಂದ ಉಡುಗೆ-ತೊಡುಗೆಗಳ ಬಗ್ಗೆ ಹೆಚ್ಚಿನ ಗಮನ ನೀಡಿರಲಿಲ್ಲ. ಮಾನವನು ತನ್ನ ದೇಹಕ್ಕೆ ಉಡುಗೆಯ ಅಗತ್ಯ ತಿಳಿದಿರಲಿಲ್ಲ. ನಿಸರ್ಗದತ್ತವಾಗಿ ಕಾಡಿನಲ್ಲಿ ದೊರೆಯುತ್ತಿರುವ ಮರದ ತೊಗಟೆ, ಮರದ ಸೊಪ್ಪು, ಎಲೆ ಮುಂತಾದವುಗಳಿಂದ ತನ್ನ ದೇಹವನ್ನು ರಕ್ಷಿಸಿಕೊಳ್ಳಲು ಪ್ರಾರಂಭಿಸಿದ ಅಲ್ಲದೇ ಕಾಡಿನಲ್ಲಿ ದೊರೆಯುತ್ತಿದ್ದ ಪ್ರಾಣಿಗಳ ಚರ್ಮ, ಪಕ್ಷಿಗಳ ರೆಕ್ಕೆಪುಕ್ಕಗಳೇ ಉಡುಗೆಯಾಗಿದ್ದವು. ದೇಹಕ್ಕೆ ರಕ್ಷಣೆಯನ್ನಿತ್ತ ಸಂದರ್ಭವೇ ಉಡುಗೆ ತೊಡುಗೆಯ ಆವಿಷ್ಕಾರದ ಆರಂಭದ

ಹಂತವೆನ್ನಬಹುದು. ನಂತರ ಬುದ್ಧಿ ವಿಕಾಸವಾದಂತೆ ತನ್ನ ಆಲೋಚನ ಕ್ರಮದಲ್ಲಿ ಹಾಗೂ ತಾನು ಬದುಕುವ ಜೀವನ ವಿಧಾನದಲ್ಲಿ ಹಲವಾರು ಬದಲಾವಣೆಗಳನ್ನು ಕಂಡುಕೊಂಡನು ಇಂತಹ ಬದಲಾವಣೆಯೇ ಬಟ್ಟೆಯ ಆವಿಷ್ಕಾರಕ್ಕೆ ಕಾರಣವಾಯಿತು.

ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ ಮೌಲ್ಯಗಳು ಬದಲಾವಣೆಯಾದಂತೆ ಜನರು ಸಾಮಾಜಿಕ ಪರಿವರ್ತನೆಗೆ ಒಳಗಾದಾಗ ಸಮೂಹದ ನೀತಿ ನಿಯಮಗಳಲ್ಲಿ ಬದಲಾವಣೆ ಉಂಟಾಗುತ್ತದೆ. ಉಡುಗೆ-ತೊಡುಗೆಗಳು ಪ್ರತಿಯೊಂದು ಬುಡಕಟ್ಟು ಸಮುದಾಯದಲ್ಲಿಯೂ ಅವರು ವಾಸಿಸುವ ಪರಿಸರಕ್ಕೆ ಅನುಗುಣವಾಗಿ ಬದಲಾಗುತ್ತದೆ. ಲಂಬಾಣಿಗರ ಉಡುಗೆ-ತೊಡುಗೆಗಳಿಗೆ ತಮ್ಮದೇ ಆದ ಮಹತ್ವವಿದೆ. ಇವು ಬಾಹ್ಯ ಪ್ರತ್ಯೇಕಗಳಾದರೂ ದೇಶದ ಭೌಗೋಳಿಕ ಪರಿಸರದ ಹಿನ್ನೆಲೆಯಲ್ಲಿ ಗುರುತಿಸುವುದು ಸುಲಭವಾಗುತ್ತದೆ. ಲಂಬಾಣಿಗರು ತಮ್ಮ ವೇಷ ಭೂಷಣಗಳಿಂದ ಗುರುತಿಸಲ್ಪಡುತ್ತಾರೆ. ಇವರು ಇಂದಿಗೂ ಉಡುಗೆ-ತೊಡುಗೆಯಲ್ಲಿ ಅನನ್ಯತೆಯನ್ನು ಉಳಿಸಿಕೊಂಡಿದ್ದಾರೆ.

ನಿಸರ್ಗ ಪ್ರಿಯರಾದ ಲಂಬಾಣಿಗರು ತುಂಬಾ ರಸಿಕರು. ಅವರ ಉಡುಗೆ-ತೊಡುಗೆಗಳು ಇದಕ್ಕೆ ಸಾಕ್ಷಿ ಒದಗಿಸುತ್ತವೆ. ಅವರ ಭಾಷೆಯಂತೆ ಅವರ ಸ್ತ್ರೀಯರು ಧರಿಸುವ ವೇಷ-ಭೂಷಣಗಳು ಭಾರತದ ತುಂಬೆಲ್ಲಾ ಪಸರಿಸಿರುವ ಅವರನ್ನು ಗುರುತಿಸುವುದು ಸುಲಭ. ಇವರು ಬಣ್ಣಬಣ್ಣದ ತುಂಡು ಅರಿವೆಯಿಂದ ಕಲಾತ್ಮಕವಾಗಿ ಕೈಯಿಂದ ಸಿದ್ಧಪಡಿಸಿದ ಸಾಂಪ್ರದಾಯಿಕ ಉಡುಗೆಯನ್ನು ಹೆಚ್ಚಾಗಿ ಧರಿಸುತ್ತಾರೆ. ಇವರು ಧರಿಸುವ ವಸ್ತುಗಳಲ್ಲಿ ಕೆಂಪು ಬಣ್ಣಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕಂಡುಬರುತ್ತದೆ. ಇದಕ್ಕೆ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆಯನ್ನು ಒದಗಿಸುವ ಐತಿಹ್ಯಗಳು ಇಂದಿಗೂ ಉಳಿದುಕೊಂಡು ಬಂದಿದೆ.

''ಶಹಾಬುದ್ದೀನ್ ಗೋರಿಯಾ ಕಾಲದಲ್ಲಿ ಲಂಬಾಣಿಗರು ಕ್ಷತ್ರಿಯ ವೀರರಾಗಿದ್ದು ಅನೇಕ ಸಣ್ಣ ಪುಟ್ಟ ಸಂಸ್ಥಾನಗಳನ್ನು ಆಳುತ್ತಿದ್ದರು. ಚಾಂದ್‌ಬರದಾಯಿಯ ಶಾಹಾಬುದ್ದೀನ ಗೋರಿಯ ತಲೆ ಕಡಿಯಲು ಆಜ್ಞೆ ಮಾಡಿದನು. ಆಗ ಗೋರಿಯಾ ಸಂಬಂಧಿಕರು ಲಂಬಾಣಿಗರ ತಲೆಕಡಿಯಲು ಆಜ್ಞೆಮಾಡಿದನು. ಹೆದರಿದ ಲಂಬಾಣಿಗರು ತಪ್ಪಿಸಿಕೊಳ್ಳಲು ಅರಣ್ಯಕ್ಕೆ ಓಡಿಹೋದರು. ತಮ್ಮ ಬಟ್ಟೆಬರೆಗಳನ್ನು ಕೆಂಪು ಮಣ್ಣಿನಲ್ಲಿ ಅಡಗಿಸಿಬಿಟ್ಟರು. ನಂತರ ಮಣ್ಣಿನಲ್ಲಿ ಹಾಕಿದ ಬಟ್ಟೆಗಳು ಕೆಂಪಾದವು, ಅವುಗಳನ್ನು ಅವರು ಉಡತೊಡಗಿದರು. ತಾವು ಬದುಕಿ ಉಳಿಯಲು ಕಾರಣವಾದ ಮಣ್ಣು ಕೆಂಪನ್ನು ಒದಗಿಸಿದ್ದರಿಂದ ಕೆಂಪು ಬಣ್ಣದ ಬಗ್ಗೆ ಪ್ರೀತಿ ಅವರಲ್ಲಿ ಸಹಜವಾಗಿ ಬೆಳೆಯಿತು.''[೨೩] ವೈಜ್ಞಾನಿಕವಾಗಿ ಮುಂದುವರೆದು ಹೇಳುವುದಾದರೆ ಈ ಸ್ತ್ರೀಯರು ಹಣೆಯ ಮೇಲೆ ಕುಂಕುಮ ಹಚ್ಚುವುದಿಲ್ಲ. ಹೀಗಾಗಿ ಕೆಂಪು ಬಣ್ಣವನ್ನು ಸುಮಂಗಲಿಯ ಸೂಚಕವೆಂದು ತಿಳಿದು ಇಂದಿಗೂ ಕೆಂಪು ಬಣ್ಣದ ವಸ್ತುಗಳನ್ನು ಸ್ತ್ರೀಯರು ಹೆಚ್ಚಾಗಿ ಪ್ರೀತಿಸುತ್ತಾರೆ. ಪುರುಷರ ಮತ್ತು ಸ್ತ್ರೀಯರ ವಯೋಮಾನಕ್ಕೆ ಅನುಗುಣವಾಗಿ ವೇಷ ಭೂಷಣಗಳು ಬದಲಾಗುತ್ತದೆ.

### ೧. ೧ ರಿಂದ ೧೦ ವರ್ಷದ ಹೆಣ್ಣು ಮಕ್ಕಳ ಉಡುಗೆ

ಪ್ರತಿಯೊಂದು ಬುಡಕಟ್ಟು ಸಮುದಾಯಗಳಲ್ಲಿ ಸಾಮಾನ್ಯವಾಗಿ ಒಂದರಿಂದ ಹತ್ತು ವರ್ಷದೊಳಗಿನ ಮಕ್ಕಳು ಬಟ್ಟೆ ಹಾಕಿಕೊಳ್ಳುವುದಿಲ್ಲ. ಇತ್ತೀಚಿನ ದಿನಗಳಲ್ಲಿ ನಾಗರೀಕತೆಯ ಪ್ರಭಾವದಿಂದ ಅಲ್ಪ ಸ್ವಲ್ಪ ಹುಡುಗಿಯರು ಬಟ್ಟೆ ಹಾಕಿಕೊಳ್ಳುವುದನ್ನು ನೋಡಬಹುದು.

೨. ೧೦ ರಿಂದ ೨೦ ವರ್ಷದ ಹೆಣ್ಣು ಮಕ್ಕಳ ಉಡುಗೆ

ಈ ವಯಸ್ಸು ಸಾಮಾನ್ಯವಾಗಿ ಪ್ರೌಢವಸ್ಥೆಯೆಂದು ತಿಳಿದು ತಂದೆ ತಾಯಿಯರು ಮಕ್ಕಳಿಗೆ ಬಟ್ಟೆಯನ್ನು ತಂದು ಕೊಡುತ್ತಾರೆ. ಇವರು ಹಾಕಿಕೊಳ್ಳುವಂತಹ ಬಟ್ಟೆಯೆಂದರೆ ಲಂಗ ಮತ್ತು ದಾವಣಿಯನ್ನು ಸಾಮಾನ್ಯವಾಗಿ ಹಾಕಿಕೊಳ್ಳುತ್ತಾರೆ. ಇತ್ತೀಚೆಗೆ ನಗರಗಳಲ್ಲಿ ಪ್ರಚಲಿತವಿರುವಂತಹ ನೈಟಿ, ಚೂಡಿಧಾರ, ಸೀರೆ, ಹಾಕಿಕೊಳ್ಳುವುದು ಸಹ ನಾವು ನೋಡಬಹುದು.

೩. ವಿವಾಹ ನಂತರದ ಉಡುಗೆ

ಲಂಬಾಣಿ ಸ್ತ್ರೀಯರು ವಿವಾಹದ ನಂತರ ಧರಿಸುವ ಉಡುಪುಗಳು ನೋಡುಗರಿಗೆ ಒಂದೇ ಆಗಿ ಕಂಡರೂ ಸ್ವಲ್ಪ ಸೂಕ್ಷ್ಮವಾಗಿ ಗಮನಿಸಿದಾಗ ಬದಲಾವಣೆ ಗುರುತಿಸಬಹುದು. ಹಿನ್ನೆಲೆಯನ್ನು ನೋಡುವವರಿಗೆ ಸ್ವಲ್ಪ ಉಚಿತವೆನಿಸಿದರೂ ಅವುಗಳ ಒಂದೊಂದು ಹಿನ್ನೆಲೆಯನ್ನು ಪಡೆದುಕೊಂಡಿದೆ. ಅವರು ಹಾಕಿಕೊಳ್ಳುವ ಉಡುಪುಗಳು ಅಪೂರ್ಣವಾಗಿವೆ. ಈ ಕುರಿತು ಅವರಲ್ಲಿ ಪ್ರಚಲಿತವಿರುವ ಒಂದು ಐತಿಹ್ಯ ಹೀಗಿದೆ, ''ಯುದ್ಧ ವೀರರಾದ ಲಂಬಾಣಿಗರ ಪೂರ್ವಜರಲ್ಲೊಬ್ಬರು ಯುದ್ಧಕ್ಕೆ ಹೋದನಂತೆ. ಹೋರಾಟದಲ್ಲಿ ಇದ್ದಕ್ಕಿದ್ದಂತೆ ಅಕಾಲ ಮರಣ ಹೊಂದಿದ. ಈ ಸುದ್ದಿಯನ್ನು ತಿಳಿದು ಅವನ ವೀರ ಶಿರೋಮಣಿ ತಾನು ತನ್ನ ಪೋಷಾಕುಗಳನ್ನು ಕಲಾತ್ಮಕವಾಗಿ ಕಸೂತಿ ಕೆಲಸದಿಂದ ಸಿದ್ಧಪಡಿಸಿಕೊಳ್ಳುತ್ತಿದ್ದ ಅವಳು ದಿಗ್ಭ್ರಮೆಗೊಂಡು ಕೈಯಲ್ಲಿಯ ಕೆಲಸವನ್ನು ಅರ್ಧಕ್ಕೆ ನಿಲ್ಲಿಸಿ ಪತಿಯ ಸಾವಿಗೆ ಪ್ರತಿಯಾಗಿ ಅವಳು 'ಚಿತೆ' ಏರಿದ ಸಂಗತಿ ಅತ್ಯಂತ ರೋಮಾಂಚಕವಾಗಿದೆ. ಅನಾಗರಿಕತೆಯಿಂದ ನಾಗರಿಕತೆಯ ಹೊಸ್ತಿಲಲ್ಲಿ ಕಾಲಿಡುತ್ತಿರುವ ಆ ಸಮಯದಲ್ಲಿ ವೀರ ಶಿರೋಮಣಿಯು ಬಿಟ್ಟುಹೋದ ಅಪೂರ್ಣ ಬಟ್ಟೆಗಳು ಮುಂದಿನ ಪೀಳಿಗೆ ಅವುಗಳನ್ನು ಕೈಗೆತ್ತಿಕೊಂಡು ಬಟ್ಟೆಗಳೆಂದರೆ ಧರಿಸಿಕೊಂಡರೆಂದು ನಂಬಲಾಗಿದೆ. ಈ ಹಿನ್ನೆಲೆಯಲ್ಲಿ ಇಂದು ಲಂಬಾಣಿಗರು ಧರಿಸುವ ''ಲಹಂಗ'' ''ಪೇಟಿಯಾ'' ಹಾಗೂ ''ಕುಪ್ಪಸ'' (ಕಾಂಚಳಿ) ಇವೆರಡೂ ಅಪೂರ್ಣ ಬಟ್ಟೆಗಳಾಗಿರಲು ಸಾಧ್ಯವಿದೆ. ಏಕೆಂದರೆ ಲಹಂಗದ ಎಡಗಡೆಗೆ ಇಂದಿಗೂ ಕಾಲು ಭಾಗ ಹೋಲಿಯದೇ ಹಾಗೆ ಬಿಟ್ಟಿರುತ್ತಾರೆ. ಕುಪ್ಪಸವೂ ಕೂಡ ಕೇವಲ ಎದೆ ಮುಚ್ಚುವ ಬೆನ್ನು ಸಂಪೂರ್ಣವಾಗಿ ಕಾಣುವ ಅಪೂರ್ಣ ಪೋಷಕ ಇನ್ನೂ ಥಾಂಟಿಯಾ ಎನ್ನುವ ಮೇಲ್ಮುಸುಕು ಪ್ರಾಯಶ, ಮೊದಮೊದಲು ಇದ್ದಂತಿಲ್ಲ. ಮೇಲಿನ ಎರಡು ಪೂರ್ಣ ಪೋಷಾಕುಗಳನ್ನು ಮುಚ್ಚಿಕೊಳ್ಳಲು ನಂತರದಲ್ಲಿ ಮಾಡಿಕೊಂಡಿರಬೇಕೆಂದು ಕಾಣಿಸುತ್ತದೆ.''[೨೯] ಮುಂದುವರೆದು ಹೇಳುವುದಾದರೆ ಇವರು ಮೂಲತಃ ರಾಜಸ್ಥಾನದವರು ಹೀಗಾಗಿ ಭೌಗೋಳಿಕ ಹವಾಗುಣವಾಗಿ ತುಂಬಾ ಉಷ್ಣಾಂಶವಿರುವುದರಿಂದ ಹಿಂಭಾಗವನ್ನು ಹೆಚ್ಚಾಗಿ ಹಾಗೇ ಬಿಟ್ಟಿರುತ್ತಾರೆಂದು ಭಾಸವಾಗುತ್ತದೆ.

೪ ಹೆಂಗಸರ ಆಭರಣಗಳು

ಸ್ತ್ರೀಯರು ಸಹಜವಾಗಿಯೇ ಶೃಂಗಾರ ಪ್ರೀಯರು ಅನೇಕ ಬಗೆಯ ಆಭರಣಗಳಿಂದ ಮಹಿಳೆಯರು ಶೃಂಗರಿಸಿಕೊಳ್ಳುತ್ತಾರೆ. ಬುಡಕಟ್ಟು ಮಹಿಳೆಯರ ಶೃಂಗಾರವು ಸ್ವಾರಸ್ಯಕರವಾಗಿರುತ್ತದೆ. ಲಂಬಾಣಿ ಹೆಂಗಸರು ಮೈಮೇಲೆ ಹಾಕಿಕೊಳ್ಳುವ ಆಭರಣಗಳನ್ನು ಗಮನಿಸಿದ ಎಡ್ವರ್ಡ್ ಥರ್ಸ್ಟನ್‌ರವರು ಆಶ್ಚರ್ಯವನ್ನು ವ್ಯಕ್ತಪಡಿಸುತ್ತಾರೆ. ''Their dress is peculiar and their ornaments are so singularly

choosen that we have we are cangident scen women. who had eight to ten pounds wight is metal or ivor round their orms and legs''[illegible] ಲಂಬಾಣಿ ಸ್ತ್ರೀಯರು ಹಾಕಿಕೊಳ್ಳುವ ಉಡುಗೆ-ತೊಡುಗೆಗಳು ಎಷ್ಟು ಆಕರ್ಷಣೀಯವೋ ಅಷ್ಟೇ ಕುತೂಹಲಕರವಾಗಿರುತ್ತದೆ. ಮತ್ತು ಅಷ್ಟೇ ಭಾರವಾದವುಗಳಾಗಿವೆ.

**೫. ಕಾಲಿಗೆ ಧರಿಸುವ ಆಭರಣ:** ಲಂಬಾಣಿ ಸ್ತ್ರೀಯರು ಕಾಲುಗಳಿಗೆ ಸೀಮೆ ಬಳ್ಳಿಯ 'ಕಾಲ್ಗಡಗ' ಹಿತ್ತಾಳೆಯ ವಾಂಕಡಿ ಕಸ್ಸೆ, ಬೆಳ್ಳಿಯ ಚೈನುಗಳು ಹಾಕಿಕೊಂಡಿರುತ್ತಾರೆ.[illegible]

**೬. ಬೆರಳುಗಳಿಗೆ ಧರಿಸುವ ಆಭರಣ:** ಲಂಬಾಣಿ ಮಹಿಳೆ ಬೆರಳುಗಳಿಗೆ ಹಾಕಿಕೊಳ್ಳುವ ಈ ಆಭರಣಗಳು ಸುಮಂಗಲಿಯರ ಸೂಚಕವಾಗಿರುತ್ತವೆ. ಬೆಳ್ಳಿಯ ಪಿಂಚುವಾ, ತಾಮ್ರದ ಚಟಕಿ, ಹಿತ್ತಾಳೆಯ 'ಅಂಗುತ್ಲ' ಶರಭರಿ ಹಾಕಿಕೊಂಡಿರುತ್ತಾರೆ.[illegible]

**೭. ಕೊರಳಿಗೆ ಧರಿಸುವ ಆಭರಣ:** ಲಂಬಾಣಿ ಸ್ತ್ರೀಯರು ಹಳೆನಾಣ್ಯದ ಸರ 'ರಪಿಯಾರ ಹಾರ' ಹಾಂಸಲಿ 'ವಾಂಕ್ಯ' ಇವುಗಳನ್ನು ಧರಿಸಿಕೊಳ್ಳುತ್ತಾರೆ. ಇದಲ್ಲದೆ ನಾಣ್ಯಗಳು ಹಾರಗಳ ರೂಪದಲ್ಲಿ ಕೊರಳಲ್ಲಿರುವುದರಿಂದ ಸುರಕ್ಷಿತವಾಗಿರುತ್ತಿದ್ದವು. ಕುಟುಂಬಗಳಿಗೆ ಆರ್ಥಿಕ ಅಡಚಣೆ ಉಂಟಾದಾಗ ಅವುಗಳನ್ನು ಚಲಾವಣೆಗೆ ಬಳಸಿಕೊಳ್ಳುತ್ತಿದ್ದರು.[illegible]

**೮. ಕೈಗಳಿಗೆ ಧರಿಸುವ ಆಭರಣ:** ಲಂಬಾಣಿ ಮಹಿಳೆಯರ ಕೈಗಳು ದಂತದ ಬಳೆಗಳಿಂದ ಶೃಂಗರಿಸಲ್ಪಟ್ಟಿರುತ್ತದೆ. ಪ್ರಾರಂಭದ ದಿನಗಳಲ್ಲಿ ದಂತಗಳನ್ನು ಬಳೆಗಳ ತಯಾರಿಕೆಯಲ್ಲಿ ಬಳಸುತ್ತಿದ್ದರು. ಇದನ್ನೂ 'ಬಲ್ಯ' ಎಂಬುದಾಗಿ ಕರೆಯುತ್ತಿದ್ದರು. ಇಂದಿನ ದಿನಗಳಲ್ಲಿ ದಂತವು ಅಲಭ್ಯವಾಗಿರುವುದರಿಂದ ಪ್ಲ್ಯಾಸ್ಟಿಕ್ ಬಳೆಗಳನ್ನು ದಂತದ ಬಳೆ ಆಕಾರದಲ್ಲಿಯೇ ಮಾಡಿಕೊಂಡು ಧರಿಸಿಕೊಳ್ಳುತ್ತಾರೆ. ನಾಲ್ಕು ಮೂಲೆಗಳಲ್ಲಿಯೂ ಗೆಜ್ಜೆಗಳಿರುವಂತಹ ಉಂಗುರವನ್ನು ಮಾಡಿಸಿ ಕೈಬೆರಳುಗಳಿಗೆ ಧರಿಸಿಕೊಳ್ಳುತ್ತಾರೆ.

**೯. ಕಿವಿಗೆ ಧರಿಸುವ ಆಭರಣ:** ಲಂಬಾಣಿ ಮಹಿಳೆ ಕಿವಿಗಳಿಗೆ 'ಕಡ್ನಿ' 'ಕನ್ಯಾ' ಅಡಿಸಾಂಕ್ಳಿಗಳನ್ನೂ ತಲೆ ಎರಡು ಕೆನ್ನೆಗಳ ಪಕ್ಕದಲ್ಲಿ ಕೂದಲುಗಳಿಗೆ ಹಣೆದು ಇಳಿಬಿಟ್ಟಿರುವ ಬೆಳ್ಳಿಯ ಇಲ್ಲದೆ ಲೋಹದ 'ಘುಗರಿ' ಹಾಕಿಕೊಳ್ಳುವುದು 'ಟೋಪಾಲಿ' ಕಡ್ನಿ ಹಾಕಿಕೊಂಡಿರುತ್ತಾರೆ.

**೧೦. ಮೂಗಿಗೆ ಧರಿಸುವ ಆಭರಣ:** ಮೂಗಿನಲ್ಲಿ ವೃತ್ತಾಕಾರವಾಗಿರುವ ಆಭರಣಕ್ಕೆ ಭುರಿಯಾ ಅಥವಾ ಮೇಸರಿ ಎಂದು ಕರೆಯುತ್ತಾರೆ. ಈ ಮೂಗುತಿ ಲಂಬಾಣಿ ಸ್ತ್ರೀಯರಿಗೆ ಮುಖದ ಸೊಗಸಿಗೆ ಇನ್ನಷ್ಟು ಕಳೆಯನ್ನುಂಟುಮಾಡುತ್ತದೆ. ಈ ರೀತಿಯಾಗಿ ಲಂಬಾಣಿ ಮಹಿಳೆಯರು ಈ ಹಿಂದೆ ಆಭರಣಗಳನ್ನು ಧರಿಸಿಕೊಳ್ಳುತ್ತಿದ್ದರು. ಆದರೆ ಇತ್ತೀಚೆಗೆ ಆಧುನಿಕ ನಾಗರಿಕತೆಯ ಪ್ರಭಾವದಿಂದ ಬದಲಾವಣೆಯಾಗಿದೆ.[illegible]

**೧೧. ಗಂಡಸರ ವೇಷಭೂಷಣ:** ಸಾಮಾನ್ಯವಾಗಿ ಗಂಡಸರ ವೇಷ ಭೂಷಣಗಳಲ್ಲಿ ಅಂಥ ಯಾವ ವಿಶೇಷ

ಬದಲಾವಣೆಗಳು ಕಂಡುಬರುವುದಿಲ್ಲ. ಇವರಲ್ಲಿ ಪ್ರಾದೇಶಿಕವಾಗಿ ಭಿನ್ನತೆ ಕಂಡುಬರುತ್ತದೆ. ಹೊರತು ಅವರು ಹಾಕಿಕೊಳ್ಳುವ ಉಡುಗೆಯಲ್ಲಿ ಯಾವ ವಿಶಿಷ್ಟತೆಯೂ ಇಲ್ಲ.

**೧೨. ೧ ರಿಂದ ೧೨ ವರ್ಷದ ಮಕ್ಕಳ ಉಡುಗೆ:** ಇವರು ಸಾಮಾನ್ಯವಾಗಿ ೧೨ ವರ್ಷದವರೆಗೆ ಬಟ್ಟೆಗಳನ್ನು ಹಾಕಿಕೊಳ್ಳದೆ ಇರುವುದನ್ನು ಕಾಡುವಾಸಿಯ ಸಂದರ್ಭದಲ್ಲಿ ಗಮನಿಸಿದ್ದೇವೆ. ಆದರೆ ಇತ್ತೀಚಿನ ದಿನಗಳಲ್ಲಿ ನಗರಗಳ ಪ್ರಭಾವದಿಂದ ಪ್ರತಿಯೊಂದು ಸಮುದಾಯಗಳಲ್ಲಿ ೨ ಅಥವಾ ೫ ತಿಂಗಳುಗಳಿಂದಲೇ ಬಟ್ಟೆಯನ್ನು ಹಾಕುವುದನ್ನು ಕಾಣಬಹುದು.

**೧೩. ೧೨ ರಿಂದ ೨೨ ವರ್ಷದ ಮಕ್ಕಳ ಉಡುಗೆ:** ಈ ವಯಸ್ಸಿನ ಮಕ್ಕಳು ಸಾಮಾನ್ಯವಾಗಿ ಪ್ರೌಢ ವ್ಯವಸ್ಥೆಯ ವಯಸ್ಸು ಎಂದು ತಿಳಿದು ಈ ಸಂದರ್ಭದಲ್ಲಿ ಪುರುಷರು ಲುಂಗಿ (ಲಾಪಾಟ) ಅಂಗಿ (ಶರ್ಟ್)ಗಳನ್ನು ಧರಿಸಿಕೊಂಡಿರುತ್ತಾರೆ.[೬೦]

**೧೪. ವಿವಾಹದ ನಂತರ:** ಇವರು ವಿವಾಹ ಮುಗಿದ ನಂತರ ಲುಂಗಿ ಅಥವಾ ಧೋತಿಯನ್ನು ಹಾಕಿಕೊಂಡು ಮೇಲೆ ಬನಿನ್ ಅಥವಾ ಅಂಗಿಯನ್ನು ಹಾಕಿಕೊಂಡಿರುತ್ತಾರೆ. ಆದರೆ ಇವರು ಹೆಚ್ಚಾಗಿ ಕೃಷಿ ಕೂಲಿಯವರು ಆದ್ದರಿಂದ ಹೆಚ್ಚಾಗಿ ಬನಿಯನ್ ಮತ್ತು ಲುಂಗಿಯನ್ನು ಉಪಯೋಗಿಸುತ್ತಾರೆ.

ವೃದ್ಧಾಪ್ಯ ವಯಸ್ಸೆಂದು ತಿಳಿದು ಸರಳವಾದ ಉಡುಗೆಯನ್ನು ಧರಿಸಿಕೊಂಡಿರುತ್ತಾರೆ. ಹೆಚ್ಚಾಗಿ ಕಚ್ಚೆ, ಪಂಚೆ, ಮತ್ತು ಅಂಗಿ ತಲೆಗೆ ರುಮಾಲು ಮಾತ್ರ ಹಾಕಿಕೊಂಡಿರುತ್ತಾರೆ.[೬೧]

**೧೬. ಗಂಡಸರು ಧರಿಸುವ ಆಭರಣಗಳು:** ಇವರು ಹಾಕಿದ ಆಭರಣಗಳಲ್ಲಿ ಅಷ್ಟೇನು ವಿಶೇಷತೆ ಕಂಡುಬರುವುದಿಲ್ಲ. ಸಣ್ಣಮಕ್ಕಳು ಇರುವಾಗ ಕಿವಿಗೆ ಬೆಳ್ಳಿಯ ಅಥವಾ ಬಂಗಾರದ ಓಲೆಯನ್ನು ಹಾಕಿಕೊಂಡಿರುತ್ತಾರೆ. ವಯಸ್ಸು ಆದವರು ಸಹ ಕಿವಿಯಲ್ಲಿ ಓಲೆ ಇರುತ್ತದೆ. ನಡಕ್ಕೆ ಒಂದು ಬಗೆಯ ವಿಶೇಷವಾದ ಬೆಳ್ಳಿಯ ಉಡುದಾರ ಇರುತ್ತದೆ. ಇದಕ್ಕೆ ಅವರು 'ಕಣದೊರೊ' ಎನ್ನುತ್ತಾರೆ. ಹೀಗೆ ಸ್ತ್ರೀ ಪುರುಷರು ಆಭರಣಗಳನ್ನು ಧರಿಸಿಕೊಂಡು ಇವತ್ತಿಗೂ ಅನನ್ಯತೆಯನ್ನು ಉಳಿಸಿಕೊಂಡು ಬಂದಿದ್ದಾರೆ.[೬೨]

**೬. ವಸತಿ ವ್ಯವಸ್ಥೆ**

ಪ್ರತಿಯೊಂದು ಬುಡಕಟ್ಟು ಸಮುದಾಯಗಳಿಗೆ ಆಹಾರ ಎಷ್ಟು ಮುಖ್ಯವೋ ವಸತಿಯು ಅಷ್ಟೇ ಮುಖ್ಯವಾಗಿದೆ. ವಸತಿ ಎಂದರೆ ಮನುಷ್ಯ ವಾಸಿಸಲು ನಿರ್ಮಿಸಿಕೊಂಡ ರಕ್ಷಣಾ ವ್ಯವಸ್ಥೆ ಎಂದು ಪುರುಷೋತ್ತಮ ಬಿಳಿಮಲೆಯವರು ಅಭಿಪ್ರಾಯ ಪಟ್ಟಿದ್ದಾರೆ. ಈ ವಸತಿ ವ್ಯವಸ್ಥೆಯ ರಚನೆಯು ಆರಂಭ ಹಂತದಲ್ಲಿ ನೈಸರ್ಗಿಕವಾಗಿ ದೊರೆಯುತ್ತಿದ್ದ ಸೊಪ್ಪು, ಕಟ್ಟಿಗೆ, ಹುಲ್ಲು, ಸೌದೆ ಇತ್ಯಾದಿಗಳಿಂದ ರಚಿಸಲ್ಪಟ್ಟಿತು. ತದನಂತರದಲ್ಲಿ ಕಲ್ಲು, ಮಣ್ಣು, ಕಬ್ಬಿಣ ಹೀಗೆ ಹಲವಾರು ರೀತಿಯ ಸಲಕರಣೆಗಳ ಆವಿಷ್ಕಾರದ ಬಳಕೆಯನ್ನು ಕಂಡುಕೊಂಡಿದ್ದು ಚಾಲ್ತಿಯಲ್ಲಿದೆ. ಬುಡಕಟ್ಟು ಸ್ಥಿತಿಯನ್ನು ಇನ್ನು ಕೆಲಮಟ್ಟಿಗೆ ಉಳಿಸಿಕೊಂಡಿರುವ ಪಶುಪಾಲಕರಾದ ಲಂಬಾಣಿಗರು ಕಾಡುಗೊಲ್ಲರು, ಕಾಡು ಕುರುಬರಂತೆ ಗ್ರಾಮದಿಂದ ಹೊರಗೆ ಸ್ವಲ್ಪ ದೂರದಲ್ಲಿ ತಾಂಡಾಗಳನ್ನು ಕಟ್ಟಿಕೊಳ್ಳುತ್ತಾರೆ.

ಇವರು ವಾಸಿಸುವ ಪ್ರದೇಶವನ್ನು 'ತಾಂಡಾ' ಎಂದು ಕರೆಯುತ್ತಾರೆ. ಲಂಬಾಣಿಗರು ವಾಸಿಸುವ ತಾಂಡಾಗಳನ್ನು ಊರಿನ ಮುಂದೆ ತಾಂಡಾವೆಂದು ಸೇರಿಸಿಕೊಳ್ಳುತ್ತಾರೆ. ಉದಾಹಣೆಗೆ, ಚಿಕ್ಕಜೋಗಿಹಳ್ಳಿ ತಾಂಡಾ, ಮರಿಯಮ್ಮನಹಳ್ಳಿ ತಾಂಡಾ ಹೀಗೆ ಇಂದಿಗೂ ಪ್ರತ್ಯೇಕವಾದ ಹೆಸರಿಲ್ಲದೆ ಪಕ್ಕದ ಊರಿನ ಹೆಸರನ್ನು ಸೇರಿಸಿ ಹೇಳುವುದು ವಾಡಿಕೆ. ಆದರೆ ಇತ್ತೀಚಿನ ದಿನಗಳಲ್ಲಿ ನಾಗರಿಕತೆ ಪ್ರಭಾವದಿಂದ ಕುಟುಂಬದ ಸಂಖ್ಯೆ ಹೆಚ್ಚು ಇರುವುದರಿಂದ ಕೆಲವು ತಾಂಡಾಗಳನ್ನು ಕಂದಾಯ ಗ್ರಾಮಗಳೆಂದು ಸರಕಾರ ನಾಮಕರಣ ಮಾಡಿದೆ. ಉದಾಹರಣೆಗೆ ಕೋಗಳಿ ತಾಂಡಾವನ್ನು ಶ್ರೀರಾಮನಗರವೆಂದು, ಬಾವಳ್ಳಿ ತಾಂಡಾವನ್ನು ಸುಶೀಲ ನಗರ ಎಂದು ನಾಮಕರಣ ಮಾಡಿದೆ.

**೧. ಸ್ಥಳ ಆಯ್ಕೆ**

ಲಂಬಾಣಿಗರು ಮೂಲತಃ ಉತ್ತರದಿಂದ ದಕ್ಷಿಣಕ್ಕೆ ವಲಸೆ ಬಂದವರು. ಇವರು ಊರುಗಳಿಂದ ಸ್ವಲ್ಪ ದೂರದ ಅರಣ್ಯ ಪ್ರದೇಶದಲ್ಲಿ ವಾಸಿಸುತ್ತಿರುವುದರಿಂದ ಕಾಡು ಪ್ರಾಣಿಗಳ ಹಾವಳಿಯಿಂದ ತಪ್ಪಿಸಿಕೊಳ್ಳುವ, ನೀರಿನ ಸೌಕರ್ಯವಿರುವ ಪ್ರದೇಶವನ್ನು ತಮ್ಮ ನೆಲೆಗಳಿಗಾಗಿ ಆಯ್ಕೆ ಮಾಡುವರು. ಸ್ಥಳದ ಆಯ್ಕೆಯ ನಂತರ ಮನೆಯ ಹಿರಿಯರೆಲ್ಲ ಸೇರಿ ಪುರೋಹಿತರಿಂದ ಪಂಚಾಂಗ ಕೇಳಿ ಅವರು ಹೇಳಿದ ದಿನದಂದು ಪೂಜೆ ಮಾಡುತ್ತಾರೆ. ಹೆಚ್ಚಾಗಿ ಸೋಮವಾರ ಅಥವಾ ಮಂಗಳವಾರ ದಿನಗಳನ್ನು ವಿಶೇಷ ದಿನಗಳೆಂದು ನಂಬುತ್ತಾರೆ. ಬುನಾದಿ ಪೂಜೆ ಎಂದು ಹೇಳುತ್ತಾರೆ.

**೨. ಬುನಾದಿ ಪೂಜೆ :** ಮನೆಯನ್ನು ಕಟ್ಟಲು ಸ್ಥಳ ಆಯ್ಕೆ ಮಾಡಿಕೊಂಡ ನಂತರ, ಪಂಚಾಂಗ ಕೇಳಿದ ದಿನ ಗಂಟೆ ನಿರ್ಧರಿಸಿಕೊಂಡು ಅವರು ದಿಕ್ಕನ್ನು ಸೂಚಿಸುತ್ತಾರೆ. ಆ ದಿಕ್ಕಿನಲ್ಲಿ ಹೆಚ್ಚಾಗಿ ಬಾಗಿಲು ಯಾವ ದಿಕ್ಕಿನಲ್ಲಿ ಇರುತ್ತದೋ ಅದರ ಬಲಕ್ಕೆ ಬುನಾದಿ ತೋಡಿ ಐದು ಕಲ್ಲುಗಳನ್ನಿಟ್ಟು ಮನೆಕಟ್ಟಲು ಬಳಸುವ ಸಲಕರಣೆಗಳನ್ನಿಟ್ಟು ಪೂಜೆ ಮಾಡುತ್ತಾರೆ. ಬಳಿಕ ಬುನಾದಿಯಲ್ಲಿ ಸ್ವಲ್ಪ ಬಂಗಾರ, ಬೆಳ್ಳಿಯ ಚೂರುಗಳನ್ನು ಹಾಕಿ ಗೋಮೂತ್ರ, ಹಾಲು, ತುಪ್ಪ ಹಾಕಿ ಕಾಯಿ ಒಡೆಯುವರು. ಬುನಾದಿ ಪೂಜೆ ದಿನ ಕೆಲವರು ಮನೆಕಟ್ಟುವ ಕೆಲಸಗಾರರಿಗೆ ಅಕ್ಕಿ, ಬೆಳೆ, ಮತ್ತು ಸ್ವಲ್ಪ ಹಣವನ್ನು ಇಟ್ಟು ಪೂಜೆ ಮಾಡುವರು ನಂತರ ಎಲ್ಲರಿಗೂ ಕೊಬ್ಬರಿ, ಮಂಡಕ್ಕಿ, ಬೆಲ್ಲ ಹಂಚುತ್ತಾರೆ. ಇದರಿಂದ ಮನೆ ಏಳಿಗೆ ಹೊಂದುತ್ತದೆ ಎಂಬುದು ಇವರ ನಂಬಿಕೆ.

**೩. ಗುಡಿಸಲು, ಮನೆಯ ನಿರ್ಮಾಣ :** ಪೂಜೆಯ ನಂತರ ನಾಲ್ಕು ದಿಕ್ಕಿನಲ್ಲಿ ಗೋಡೆಯನ್ನು ಸಮಾನವಾಗಿ ಕಟ್ಟುವರು. ಮಧ್ಯದ ಗೋಡೆಗಳು ಎಂಟೊಂಬತ್ತು ಅಡಿಗಳಿದ್ದರೆ ಕೊನೆಯ ಪಕ್ಕದ ಎರಡು ಗೊಡೆಗಳು ನಾಲ್ಕು ಅಥವಾ ಐದು ಅಡಿ ಎತ್ತರವಾಗಿರುತ್ತವೆ. ಗೋಡೆ ಕಟ್ಟಿದ ಗುಡಿಸಲು ಮಧ್ಯದಲ್ಲಿ ಒಂದು ಅಥವಾ ಎರಡು ಕಂಬಗಳು ನೆಟ್ಟು, ಗೋಡೆ ಮತ್ತು ಕಂಬಗಳ ಮೇಲೆ ದೊಡ್ಡದಾದ ಅಡ್ಡಕಂಬಗಳನ್ನು ಇಟ್ಟು ಈ ಅಡ್ಡಕಂಬಗಳ ಗೋಡೆಯ ಆಧಾರದ ಮೇಲೆ ಅಚ್ಚೆಗೆ ಬಿಗಿಯುವರು. ನಂತರ ತಾಳೆ ಅಥವಾ ತೆಂಗಿನಗರಿಗಳನ್ನು ಹಾಕಿ ಮೇಲೆ ಕಾಶಿಹುಲ್ಲು ಇಲ್ಲವೆ ಕಬ್ಬಿನ ಹೊಗಡನ್ನು ಹಾಕಿ ನಾರಿನಿಂದ ಬಿಗಿಯುವರು. ಬಳಿಕ ಸುತ್ತಲೂ ಕಟ್ಟಿದ ಹಜಾರದ ಮೇಲೆ ಕೆಂಪು ಮಣ್ಣನ್ನು ಕಲಿಸಿನೊರದು ಗೋಡೆಯನ್ನು ನಿರ್ಮಿಸುತ್ತಾರೆ. ಮನೆಯು ಒಂದು ಅಡುಗೆ ಮನೆ, ಪಡಸಾಲೆಯನ್ನು ಹೊಂದಿರುತ್ತದೆ. ಇದರಲ್ಲಿ ಒಂದು ಕಿಟಕಿ ಬಿಟ್ಟಿರುತ್ತಾರೆ. ಮೇಲೆ ಬಳಕೆಗಾಗಿ ಒಂದು ಕಿಂಡಿಯನ್ನು

ಬಿಟ್ಟಿರುವರು. ಈ ಮನೆಯಲ್ಲಿಯೇ ಇವರು ಒಂದು ದೇವರ ಮೂಲೆಯನ್ನು ಮಾಡಿಕೊಂಡು ಪೂಜಿಸುತ್ತಾರೆ. ಆದರೆ ನಾಗರಿಕತೆಯ ಪ್ರಭಾವದಿಂದ ಹಣವುಳ್ಳವರು ಇತ್ತೀಚೆಗೆ ಅಡುಗೆ ಮನೆ, ದೇವರ ಮನೆ, ಬೆಡ್‌ರೂಮ್, ಹಾಲ್ ಎಂದು ಮಾಡಿಕೊಳ್ಳುತ್ತಿದ್ದಾರೆ.

**೪. ಗೃಹ ಪ್ರವೇಶ :** ಹಿರಿಯರು ಸೇರಿ ಪುರೋಹಿತರಿಂದ ಪಂಚಾಂಗ ತೆಗೆಯಿಸಿ ಅವರು ಹೇಳಿದ ನಿಯಮವನ್ನು ಪಾಲಿಸಿಕೊಂಡು ಗೃಹಪ್ರವೇಶ ಮಾಡುತ್ತಾರೆ. ಇದಕ್ಕೆ ''ನವೇಘರೇನಜಾಯೇರೂ'' ಎಂದು ಹೇಳುತ್ತಾರೆ. ತಮ್ಮ ಸಂಬಂಧಿಕರನ್ನು ಆಹ್ವಾನಿಸಿರುತ್ತಾರೆ. ಮನೆಯನ್ನು ಸಾರಿಸಿ ಮಾವಿನ ಎಲೆಯಿಂದ ತೋರಣ ಕಟ್ಟಿ, ಬಣ್ಣದ ಹಾಳೆಯಿಂದ ಅಲಂಕರಿಸುತ್ತಾರೆ. ಆರಂಭದಲ್ಲಿ ಬಾಗಿಲು ಪೂಜೆ ನಡೆಯುತ್ತದೆ. ಮುತ್ತೈದೆಯರು ಒಂದು ಕೊಡ ನೀರು ತಂದು ದೇವರ ಮನೆಯಲ್ಲಿಟ್ಟು, ಕುಲದೈವದ ಪೂಜೆ ಮಾಡುವರು. ನಂತರ ಮಂತ್ರಿಸಿದ ತೆಂಗಿನ ಕಾಯಿಯನ್ನು ಬಿಳಿಬಟ್ಟೆಯಲ್ಲಿ ಸುತ್ತಿ ಬಾಗಿಲು ಎದುರಿಗೆ ಮೇಲೆ ಕಟ್ಟುತ್ತಾರೆ. ಗೋಮಾತೆಯನ್ನು ತಂದು ಗೃಹ ಪ್ರವೇಶ ಮಾಡಿಸಿ ಒಲೆಯ ಮೇಲೆ ಹಾಲನ್ನು ಉಕ್ಕಿಸುತ್ತಾರೆ. ಬಲಕ್ಕೆ ಹಾಲು ಉಕ್ಕಿದರೆ ಶುಭವೆಂದು ಈ ಸಮುದಾಯದ ನಂಬಿಕೆ. ನೆರೆದಂತಹ ಬಂಧುಬಳಗದವರಿಗೆ, ಅಥಿತಿಗಳಿಗೆ ಅನುಕೂಲಕ್ಕೆ ತಕ್ಕಂತೆ ಮನೆಯಲ್ಲಿ ಸಿಹಿ ಊಟ ಮಾಡಿಸುತ್ತಾರೆ.

**೫. ದನದ ಕೊಟ್ಟಿಗೆ ನಿರ್ಮಾಣ :** ಸಮ್ಮ ಪ್ರಾಣಿಯು ಪವಿತ್ರವೆಂದು ಭಾವಿಸಿ ಪಕ್ಕದಲ್ಲಿಯೇ ಒಂದು ಕೊಟ್ಟಿಗೆಯನ್ನು ಕಟ್ಟಿ ನಾಲ್ಕು ಮೂಲೆಯಲ್ಲಿ ಕಂಬಗಳನ್ನು ಹುಗಿದು ಅದರ ಮೇಲೆ ಕೋಲುಗಳನ್ನು ಕಟ್ಟಿ ತೆಂಗಿನ ಗರಿ ಅಥವಾ ಹುಲ್ಲು ಪಗಡೆಯ ಮೇಲೆ ಹೊದಿಸುತ್ತಾರೆ. ಹೀಗೆ ಬಿಸಿಲು ಮಳೆ ತಾಗದಂತೆ ರಕ್ಷಣೆ ಮಾಡುತ್ತಾರೆ. ಪಶುಗಳಿಗೆ ತಂಗಲು ಅನುಕೂಲವಾಗಲೆಂದು ಕೆಳಗೆ ಮಣ್ಣು ಹಾಕಿ ಗಟ್ಟಿ ಮಾಡಿರುತ್ತಾರೆ. ಪಶುಗಳಿಗೆ ದೆವ್ವ, ಭೂತಗಳು ತಾಗಬಾರದೆಂದು ಮಂತ್ರಿಸಿದ ನೀರು ಗೋದ್ನಿಯ ಮೇಲೆ ಕಟ್ಟಿರುತ್ತಾರೆ. ಇಂದು ಆಧುನಿಕರಣ ಮತ್ತು ಪಾಶ್ಚಾತ್ಯೀಕರಣದಿಂದಾಗಿ ವಸತಿ ವ್ಯವಸ್ಥೆ, ಪರಿವರ್ತನೆಗೊಂಡಿದೆ. ಮಣ್ಣಿನ, ಹಂಚಿನ ಮನೆಗಳು ಇಲ್ಲವಾಗಿದೆ. ಬದಲಿಗೆ ಕಲ್ಲಿನ ಮನೆಗಳು, ಆರ್.ಸಿ.ಸಿ. ಮನೆಗಳು ನಿರ್ಮಾಣಗೊಂಡಿವೆ. ವಿಭಕ್ತ ಕುಟುಂಬಗಳು ಅಧಿಕವಾಗಿರುವುದರಿಂದ ಮನೆಯ ನಿರ್ಮಾಣವು ಅದನ್ನು ಅವಲಂಬಿಸಿರುವುದು ಕಂಡುಬರುತ್ತದೆ. ಇಂದಿಗೂ ಅಲೆಮಾರಿ ಲಂಬಾಣಿಗರು ತಮಗಿಷ್ಟವಾದ ಪ್ರದೇಶದಲ್ಲಿ ತಾಂಡಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಒಟ್ಟಾರೆ ಲಂಬಾಣಿಗರ ವಸತಿ ವ್ಯವಸ್ಥೆ ಅವರ ಆರ್ಥಿಕ ಸ್ಥಿತಿಗತಿ ಕಾರಣವಾಗಿರುವುದು ಕಂಡುಬರುತ್ತದೆ.

**೨. ನ್ಯಾಯ ಪದ್ಧತಿ :** ಪ್ರತಿಯೊಂದು ಜನಾಂಗದಲ್ಲಿಯೂ ಶಾಂತಿ ಮತ್ತು ಸುವ್ಯವಸ್ಥೆಯನ್ನು ಕಾಯ್ದುಕೊಂಡು ಹೋಗಲು ಹಾಗೂ ಅದನ್ನು ಮುಂದುವರೆಸಿಕೊಂಡು ಹೋಗಲು ತಮ್ಮದೇ ಆದ ಪ್ರತ್ಯೇಕವಾದ ನ್ಯಾಯ ಪಂಚಾಯ್ತಿ ವ್ಯವಸ್ಥೆಯನ್ನು ಮಾಡಿಕೊಂಡಿರುತ್ತಾರೆ. ಅದಕ್ಕೆ ಜಾತಿ ಪಂಚಾಯ್ತಿ ವ್ಯವಸ್ಥೆ ಎಂದೂ ಹೆಸರು. ಇಂತಹ ನ್ಯಾಯ ಪದ್ಧತಿ ಸದಸ್ಯರನ್ನು ಸಮಾಜದ ಹಿರಿಯರೆಂದು ಕರೆಯುವ ವಾಡಿಕೆ ಇದೆ. ಸಮಯ ಸಂದರ್ಭಕ್ಕೆ ಅನುಗುಣವಾಗಿ

ನಿರ್ಣಯಗಳನ್ನು ಕೈಗೊಂಡು ಸಮಾಜದಲ್ಲಿ ಐಕ್ಯತೆಯನ್ನು ಕಾಪಾಡಿಕೊಂಡು ಬರುವುದೇ ಈ ಪಂಚಾಯ್ತಿಯ ಉದ್ದೇಶವಾಗಿರುತ್ತದೆ. ಜಾತಿಯ ನಿಯಮಗಳನ್ನು ಕಟ್ಟುಕಟ್ಟಳೆಗಳನ್ನು ಉಲ್ಲಂಘನೆ ಮಾಡಿದರೆ ಅಂತಹವರನ್ನು ಜಾತಿಯಿಂದ ಬಹಿಷ್ಕರಿಸುವ ಪದ್ಧತಿ ಪ್ರತಿಯೊಂದು ಬುಡಕಟ್ಟಿನಲ್ಲಿಯೂ ಸಾಮಾನ್ಯವಾಗಿ ಕಂಡುಬರುವ ಲಕ್ಷಣವಾಗಿದೆ.[೩೩]

ಪ್ರಾಚೀನ ಕಾಲದಿಂದಲೂ ತಮ್ಮ ಸಮುದಾಯದಲ್ಲಿ ಸಂಭವಿಸುವ ಯಾವುದೇ ಜಗಳ ಅತ್ಯಾಚಾರ, ಕಳ್ಳತನ, ಮುಂತಾದವುಗಳನ್ನು ತಮ್ಮ ಸಮುದಾಯದಲ್ಲಿಯೇ ಬಗೆಹರಿಸಿಕೊಳ್ಳುತ್ತಾ ಬಂದಿರುವ ಲಂಬಾಣಿಗರು ತಮ್ಮ ಜಾತಿ ನ್ಯಾಯ ಪದ್ಧತಿ ವ್ಯವಸ್ಥೆಯನ್ನು ''ಗೋರ್ ಪಂಚಾಯತ್'' ಎಂಬುದಾಗಿ ಕರೆಯುತ್ತಾರೆ.[೩೪] ತಾಂಡಾದ ಮೇಲಿರುವ ಅಭಿಮಾನ ಆತ್ಮಗೌರವಗಳನ್ನು ಕಾಪಾಡಿಕೊಳ್ಳುವ ಹಾಗೂ ಸಮುದಾಯದ ಹಿತದೃಷ್ಟಿಯಿಂದ ತಮ್ಮಲ್ಲಿ ಉದ್ಭವಿಸುವ ಯಾವುದೇ ಆಂತರಿಕ ಸಮಸ್ಯೆ ಇತ್ಯಾದಿಗಳನ್ನು ಎಂತಹ ಸಂದರ್ಭದಲ್ಲಿಯೂ ಅನ್ಯ ಸಮುದಾಯದವರಿಗೆ ತಿಳಿಯಪಡಿಸದೇ ತಮ್ಮ ಸಮುದಾಯದಲ್ಲಿಯೇ ಬಗೆಹರಿಸಿಕೊಂಡು ಇಂದಿಗೂ ಬೆಳೆಸಿಕೊಂಡು ಬಂದಿರುವುದು ಕಂಡುಬರುತ್ತದೆ.

ಲಂಬಾಣಿ ನ್ಯಾಯ ಪದ್ಧತಿಯನ್ನು ಒಂದು ಪವಿತ್ರವಾದ ದೇವಸ್ಥಾನ ಎಂದು ನಂಬಿರುವ ಲಂಬಾಣಿಗರು ಕೋರ್ಟ್-ಕಛೇರಿಗಳಿಗೆ ಹೋಗುವಂತಿರಲಿಲ್ಲ. ಒಂದು ವೇಳೆ ನ್ಯಾಯಪದ್ಧತಿಯ ಸದಸ್ಯರ ಮಾತುಗಳನ್ನು ಮೀರಿ ಕೋರ್ಟ್ ಕಛೇರಿಗಳಿಗೆ ಹೋದರೆ ಸಮುದಾಯದಿಂದ ಬಹಿಷ್ಕಾರಕ್ಕೆ ಒಳಪಡಬೇಕಾಗುತ್ತದೆ. ಲಂಬಾಣಿಗರಿಗೆ ನ್ಯಾಯಾಲಯ ಪಂಚರೇ ದೇವತಾಸಮಾನರು. 'ಲಂಬಾಣಿ ನ್ಯಾಯ ಸಂಘಟನೆಯನ್ನು ಈ ರೀತಿ ವಿಭಜಿಸಬಹುದು. ೧ ನಾಯಕ. ೨. ಕಾರಭಾರಿ. ೩. ಡಾವೊ. ೪. ಪಂಚರು. ಪ್ರತಿ ಮನೆಯ ಯಜಮಾನರು ಇದಕ್ಕೆ ಸದಸ್ಯರಾಗಿರುತ್ತಾರೆ.'[೩೫] ಅಲ್ಲದೇ ಇವರಿಗೆ ಸಹಾಯಕರಾಗಿ ಡಾಲಿಯಾ, ಥಾಡಿ, ಹಾಗೂ ನಾವಿಗಳಿರುತ್ತಾರೆ.

**ನಾಯಕ :**

ನಾಯಕ ಎಂಬ ಪದವು ಬೇರೆ ಬೇರೆ ಸಮಾಜಗಳಲ್ಲಿ ಬೇರೆ ಬೇರೆ ಅರ್ಥದಲ್ಲಿ ಕರೆಯುತ್ತಾರೆ. ಲಂಬಾಣಿಗರು ತಾಂಡಾದ ಮುಖಂಡನೊಬ್ಬನಿಗೆ ನಾಯಕ ಎಂಬ ಅರ್ಥದಲ್ಲಿ ಕರೆಯುತ್ತಾರೆ. ನಾಯಕ ಎಂಬ ಪದವು ಸಂಸ್ಕೃತ ಭಾಷೆಯ ಪದವಾಗಿದ್ದು ನಮತೇ ಪ್ರಾಪ್ತಿಯತೇ ಇತಿನಾಯಕ.[೩೬] ಯಾರು ನಿಮ್ಮನ್ನು ಮುನ್ನಡೆಸುತ್ತಾ ಗುರಿ ಮುಟ್ಟಿಸುವನೊ ಅವನೇ ನಾಯಕ, ಶ್ರೇಷ್ಠ, ಸೇನಾಪತಿ ಇತ್ಯಾದಿ ಅರ್ಥಗಳು ಈ ಪದಕ್ಕಿವೆ. ಸಾವಿರಾರು ಎತ್ತುಗಳ ಮೇಲೆ ದವಸಧಾನ್ಯಗಳನ್ನು ಹೇರಿಕೊಂಡು ಮುನ್ನೆಡೆಯುತ್ತಾ ನಿಶ್ಚಿತ ಸ್ಥಳಕ್ಕೆ ಮುಟ್ಟಿಸುವ ಜವಾಬ್ದಾರಿ ನಾಯಕನದ್ದಾಗಿರುತ್ತಿತ್ತು.

ವ್ಯಕ್ತಿಗತ ಹೆಚ್ಚುಗಾರಿಕೆಯ ಆಧಾರದ ಮೇಲೆ ನಾಯಕನ ಆಯ್ಕೆ ನಡೆಯುತ್ತಿತ್ತು. ಕಾಲಕ್ರಮೇಣ ಆ ಸ್ಥಾನವು ವಂಶಪಾರಂಪರ್ಯವಾಯಿತು. ಇದರಿಂದ ಆಯ್ಕೆಯ ದಿನಗಳಲ್ಲಿದ್ದ ದಕ್ಷತೆ, ಪ್ರಾಮಾಣಿಕತೆ ಸಂಪ್ರದಾಯಗಳು ಸಹಜವಾಗಿಯೇ ಕಡಿಮೆಯಾಗಿವೆ. ನಿಶ್ಚಿತ ದಿನದಂದು ತಾಂಡಾದ ಹಾಗೂ ಅಕ್ಕಪಕ್ಕ ಗೋತ್ರದವರನ್ನು ನಾಯಕನನ್ನಾಗಿ ಆಯ್ಕೆ ಮಾಡಿ ಮಾಂಸದ ಅಡುಗೆಯನ್ನು ಮಾಡಿ ಬಳಗದವರಿಗೆ ಮತ್ತು ಅಥಿತಿ ನಾಯಕರುಗಳಿಗೆ ಭೋಜನವನ್ನು ಕೊಟ್ಟು ತೃಪ್ತಿಪಡಿಸುತ್ತಾರೆ.

ತಾಂಡಾಗಳಲ್ಲಿ ನಾಯಕನಿಗೆ ಹೆಚ್ಚಿನ ಮಾನ್ಯತೆ ಇದ್ದು ತಾಂಡಾದ ಪ್ರತಿಯೊಂದು ವ್ಯವಹಾರವೂ ನಾಯಕನ ಮುಖಾಂತರವೇ ನಡೆಯುತ್ತದೆ. ಅಲ್ಲದೇ ನ್ಯಾಯ ಪಂಚಾಯ್ತಿಗಳೆಲ್ಲ ಇವನೇ ನ್ಯಾಯಾದೀಶನಾಗಿದ್ದು ಏನೇ ಸಮಸ್ಯೆ ಉದ್ಭವಿಸಿದರೂ ಬಗೆಹರಿಸುವ ಜವಾಬ್ದಾರಿ ಅವರದ್ದಾಗಿರುತ್ತದೆ. ತಾಂಡಾದಲ್ಲಿ ನಡೆಯುವ ಮದುವೆ, ಹಬ್ಬ, ಜನನ, ಮರಣ ಮೊದಲಾದ ಸಂಪ್ರದಾಯ-ಆಚರಣೆಗಳಲ್ಲಿ ಭಾಗಿಯಾಗಿ ಸೂಕ್ತ ಮಾರ್ಗದರ್ಶನವನ್ನು ನೀಡುತ್ತಾರೆ. ಮರಣ ಸಂಭವಿಸಿದರೆ ಸಂಸ್ಕಾರ ವಿಧಿಗಳನ್ನೂ ಪೂರೈಸುವ, ನೊಂದ ಕುಟುಂಬದವರಿಗೆ ಸಂತೈಸುವ, ಅವಶ್ಯಕತೆ ಇದ್ದಲ್ಲಿ ರಕ್ಷಣೆಯನ್ನು ಕೊಡುವ ಜವಾಬ್ದಾರಿ ನಾಯಕನದ್ದಾಗಿರುತ್ತದೆ. ಗೋರ್ ಪಂಚಾಯ್ತಿಯ ಸಂಘಟನೆಯ ಕಾರ್ಯವು ಸಾಮಾನ್ಯವಾಗಿ ನಾಯಕನಿಗೆ ಸೇರಿದ್ದು ನ್ಯಾಯ ಪಂಚಾಯ್ತಿಯ ಕಾರ್ಯವನ್ನು ನಿರ್ವಹಿಸುತ್ತಾರೆ. ಹೀಗೆ ತಾಂಡಾದ ಸಮಸ್ಯೆ ಆಗುಹೋಗುಗಳಿಗೆ ನಾಯಕನು ಹೊಣೆಯಾಗಿರುತ್ತಾರೆ. ಆದ್ದರಿಂದ ತಾಂಡಾದ ಹೆಸರುಗಳನ್ನು ನಾಯಕನ ಹೆಸರಿನಿಂದಲೇ ಗುರುತಿಸುವ ಪದ್ಧತಿ ಇವರಲ್ಲಿ ವಾಡಿಕೆಯಲ್ಲಿದೆ.[೩೯]

ಈ ಮೇಲ್ಕಂಡ ಎಲ್ಲಾ ಮಹತ್ತರವಾದ ಜವಾಬ್ದಾರಿಯನ್ನು ನಾಯಕನು ನಿರ್ವಹಿಸಿಕೊಂಡು ಹೋಗಬೇಕಾದಲ್ಲಿ ಆತನು ಅನುಭವಿಯೂ, ಪ್ರಾಮಾಣಿಕನೂ, ಪ್ರತಿಭಾವಂತನು, ನೀತಿಯುಳ್ಳವನು ಹಾಗೂ ಗಂಭೀರ ವ್ಯಕ್ತಿಯೂ ಆಗಿರಬೇಕು . ಆಗ ಮಾತ್ರ ಸುಲಲಿತವಾಗಿ ಸಕಲ ಕಾರ್ಯಗಳನ್ನು ವ್ಯವಹಾರಗಳನ್ನು ತಾಂಡಾದ ಶಾಂತಿ ಮತ್ತು ಸುವ್ಯವಸ್ಥೆಯನ್ನು ಕಾಪಾಡಿಕೊಂಡು ಹೋಗಲು ಸಾಧ್ಯವಾಗುತ್ತದೆ.

**ಕಾರಭಾರಿ (ಕಾರ್ಯದರ್ಶಿ) :** ನಾಯಕನಿಂದ ಆಯ್ಕೆಯಾದ ವ್ಯಕ್ತಿಗಳಲ್ಲಿ ಒಬ್ಬ. ಪ್ರತಿಯೊಂದು ಕಾರ್ಯಕಲಾಪದಲ್ಲಿಯೂ ನಾಯಕನಿಗೆ ಆತ್ಮೀಯವಾಗಿ ಸಹಾಯಕನಾಗಿ ಹಾಗೂ ಸಲಹೆಗಾರನಾಗಿ ತನ್ನ ಕಾರ್ಯರೂಪಗಳನ್ನು ನಡೆಸಿಕೊಂಡು ಹೋಗುವ ಕಾರಭಾರಿಯು ನಾಯಕನ ನಂತರದ ಜವಾಬ್ದಾರಿಯುತ ಸ್ಥಾನವನ್ನು ಪಡೆದಿದ್ದಾನೆ. ತಾಂಡಾದಲ್ಲಿ ಯಾವ ಗೋತ್ರದವರು ಹೆಚ್ಚಾಗಿ ಇರುತ್ತಾರೆಯೋ ಆ ಗೋತ್ರದಲ್ಲಿನ ಅನುಭವಿಯೂ, ಪ್ರಾಮಾಣಿಕನೂ, ನಿಪುಣನೂ ಪ್ರತಿಭಾವಂತನನ್ನು ಕಾರಭಾರಿ ಎಂದು ಆಯ್ಕೆ ಮಾಡುತ್ತಾರೆ. ಆದರೆ ಇಂದಿನ ದಿನಗಳಲ್ಲಿ ಇದೂ ಸಹ ವಂಶಪಾರಂಪರ್ಯವಾಗಿ ಮಾರ್ಪಟ್ಟಿದೆ.[೪೦]

ಕಾರಭಾರಿ ಸಭೆಯು ಶಿಸ್ತಿನಿಂದ ನಡೆದುಕೊಂಡು ಹೋಗಲು ನಾಯಕನಿಗೆ ಸಹಾಯಕನಾಗಿ ಕೆಲಸ ನಿರ್ವಹಿಸುತ್ತಾನೆ. ಹಲವಾರು ಜಟಿಲವಾಗಿರುವ ಸಮಸ್ಯೆಗಳಿಗೆ ನಾಯಕನಿಗೆ ಸಲಹೆ ಸೂಚನೆಗಳನ್ನು ನೀಡುತ್ತಾನೆ. ನ್ಯಾಯನಿರ್ಣಯ ಹಾಗೂ ಸಭಾ ಮಧ್ಯದಲ್ಲಿ ಆಗಾಗ ಗಾದೆ ಒಗಟುಗಳನ್ನು ಬಳಸಿ ಸಂದರ್ಭಕ್ಕೆ ತಕ್ಕಂತೆ ಕಥೆಗಳನ್ನು ಹೆಣೆದು, ವಾಕ್‌ಚಾತುರ್ಯದಿಂದ ಹಾಸ್ಯ ವ್ಯಂಗ್ಯಭರಿತವಾದ ಮಾತಿನ ಮೂಲಕ ಸಮಸ್ಯೆಗೆ ಪರಿಹಾರವನ್ನು ಕಂಡುಹಿಡಿಯಲು ಪ್ರಯತ್ನಿಸುತ್ತಾನೆ.

**ಡಾವೊ :** ಈತನು ತಾಂಡಾದ ಹಿರಿಯ ಮತ್ತು ಪ್ರತಿಷ್ಠಿತ ವ್ಯಕ್ತಿಯಾಗಿದ್ದು ಕಾರಭಾರಿ ನಂತರದ ಮೂರನೆಯ ಸ್ಥಾನವನ್ನು ಪಡೆದಿರುತ್ತಾನೆ. ನಾಯಕನ ಗೈರುಹಾಜರಿಯಲ್ಲಿ ಇವನು ನಾಯಕನ ಸ್ಥಾನವನ್ನಲಂಕರಿಸಿ ತಾತ್ಕಾಲಿಕ ನಾಯಕನಾಗಿ ಕಾರ್ಯನಿರ್ವಹಿಸುವನು. ಈ ಸ್ಥಾನವನ್ನು ವಂಶಪಾರಂಪರ್ಯವಾಗಿದ್ದು ಬಹುಪಾಲು ವಡತಿಯ ಗೋತ್ರದವರು ಈ ಸ್ಥಾನವನ್ನು ಅಲಂಕರಿಸುತ್ತಾರೆ. ಇವನೂ ಸಹ ನಾಯಕನಿಗೆ ಸಲಹೆಗಾರನಾಗಿಯೇ ಕಾರ್ಯನಿರ್ವಹಿಸುತ್ತಾನೆ.[೪೧]

ಪಂಚರು : ಇವರು ಲಂಬಾಣಿ ಜನಾಂಗದ ಯಾವುದೇ ಗೋತ್ರಕ್ಕೆ ಸೇರಿದವರಾಗಿರಬಹುದು. ಇವರಿಗೆ ಇಂತಹುದೇ ಅರ್ಹತೆಗಳಿರಬೇಕೆಂಬ ಯಾವುದೇ ನಿಯಮಗಳಿಲ್ಲ. ಇವರು ತಾಂಡಾದ ಪ್ರತಿ ಮನೆಯ ಯಜಮಾನರಾಗಿದ್ದು ಡಾವ್ರೋಗೆ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಾರೆ. ಇವರು ನ್ಯಾಯನಿರ್ಣಯ ಸಂದರ್ಭದಲ್ಲಿ ಸಾಮಾನ್ಯವಾಗಿ ತಮ್ಮ ತಮ್ಮ ಅಭಿಪ್ರಾಯಗಳನ್ನು ಸಲ್ಲಿಸುವುದರ ಮುಖೇನ ನಾಯಕನಿಗೆ ಸಹಾಯವನ್ನು ಮಾಡುತ್ತಾರೆ.

**ನ್ಯಾಯ ಪದ್ಧತಿಯ ಕಾರ್ಯವಿಧಾನ**

ಆಧುನಿಕ ಕಾಲದಲ್ಲಿಯೂ ಲಂಬಾಣಿಗರು ತಮ್ಮ ಹಳೆಯ ನ್ಯಾಯ ಪದ್ಧತಿಯನ್ನು ಅನುಸರಿಸುತ್ತಿರುವುದು ಕಂಡುಬರುತ್ತದೆ. ತಾಂಡಾದಲ್ಲಿರುವ ಢಾಡಿ, ಢಾಲಿಯಾ ಅಥವಾ ನಾವಿಗಳು ಪಂಚಾಯ್ತಿಯ ಪರವಾಗಿ ಪ್ರತಿಯೊಂದು ಮನೆಗೂ ಹೋಗಿ ಜನರಿಗೆ ಊರಿನ ದೇವಸ್ಥಾನದ ಮಠ ಸೇರಬೇಕೆಂದು ಹೇಳಿಬರುತ್ತಾರೆ. ಅಂತೆಯೆ ಎಲ್ಲರೂ ದೇವಸ್ಥಾನದ ಮಠಗೆ ಬಂದು ಸೇರುತ್ತಾರೆ. ತಾಂಡಾದ ನಾಯಕ, ಕಾರಭಾರಿ, ಡಾವ್ರೋ ಹಾಗೂ ಪಂಚರ ಸಮ್ಮುಖದಲ್ಲಿ ತಮ್ಮ ನ್ಯಾಯಗಳನ್ನು ಬಗೆಹರಿಸಿಕೊಳ್ಳುತ್ತಾರೆ. ಯಾವುದೇ ನ್ಯಾಯವಾಗಲಿ ತಾಂಡಾದಿಂದ ಹೊರ ಹೋಗುವಂತಿಲ್ಲ ಹಾಗೂ ತಾಂಡಾದಲ್ಲಿಯೇ ತೀರ್ಮಾನವಾಗಬೇಕೆಂದು ನಿಯಮವಿದೆ. ಈ ತಾಂಡಾದ ನಾಯಕನ ಮುಖಾಂತರ ಸಮುದಾಯದ ನ್ಯಾಯ ನಿರ್ಣಯಗಳನ್ನು ಬಗೆಹರಿಸಿಕೊಳ್ಳುತ್ತಾರೆ. ತಾಂಡಗಳಿಗೆ ಬರುವ ನ್ಯಾಯ ಈ ರೀತಿಯಾಗಿದೆ.[೮೮]

೧. ಆಸ್ತಿಯನ್ನು ಹಂಚಿಕೊಳ್ಳವಲ್ಲಿ ಅಣ್ಣ ತಮ್ಮಂದಿರ ನಡುವಿನ ಕಲಹ.

೨. ಗಂಡ ಹೆಂಡತಿಯರ ಮನಸ್ತಾಪ ಅಥವಾ ವಿವಾಹ ವಿಚ್ಛೇದನ.

೩. ಒಂದೇ ಕುಲ ಅಥವಾ ಪಂಗಡದಲ್ಲಿ ವಿವಾಹವಾದರೆ.

೪. ಸ್ತ್ರೀ ಅಥವಾ ಪುರುಷ ಅನೈತಿಕ ಸಂಬಂಧ ಹೊಂದಿದ್ದರೆ.

೫. ಕೊಲೆ ಸುಲಿಗೆ ಅಥವಾ ಸಾಮಾಜಿಕ ನಿಯಮ ಉಲ್ಲಂಘನೆ

೬. ಹಟ್ಟಿಯ ಯಜಮಾನ ಅಥವಾ ಕುಲಗುರುಗಳಿಗೆ ಅವಮಾನ ಮಾಡಿದರೆ.

ಅಪರಾಧಿಯಾಗಿರುವ ವ್ಯಕ್ತಿಯ ಬಗ್ಗೆ ನಿಷ್ಪಕ್ಷವಾದ ನ್ಯಾಯನಿರ್ಣಯ ಮಾಡಿ ದಂಡ ಅಥವಾ ಶಿಕ್ಷೆ ವಿಧಿಸುವ ಹಕ್ಕು ನಾಯಕನಿಗಿರುತ್ತದೆ. ಅಪರಾಧಕ್ಕೆ ತಕ್ಕಂತೆ ಶಿಕ್ಷೆ ವಿಧಿಸುತ್ತಾರೆ. ಹಣದ ರೂಪದಲ್ಲಿ ದಂಡ ವಿಧಿಸಿದರೆ, ಬಹಿಷ್ಕಾರ ರೂಪದಲ್ಲಿ ಕಠಿಣ ಶಿಕ್ಷೆ ನೀಡಲಾಗುತ್ತದೆ. ಈ ದಂಡ ಮತ್ತು ಬಹಿಷ್ಕಾರದಂಥ ಶಿಕ್ಷೆಗೆ ಹೆದರಿ ಸಾಮಾಜಿಕ ನಿಯಮಗಳನ್ನು ಪಾಲಿಸುತ್ತಾರೆ.

ಇಂದಿಗೂ ಬಳ್ಳಾರಿ ಜಿಲ್ಲೆಯಲ್ಲಿ ಲಂಬಾಣಿಗರು ತಮ್ಮಲ್ಲಿಯೇ ನ್ಯಾಯತೀರ್ಮಾನ ಮಾಡುವುದು ಕಂಡುಬರುತ್ತದೆ. ನಾಯಕ, ಕಾರಭಾರಿ, ಡಾವ್ರೊ, ಪಂಚರುಗಳು ನ್ಯಾಯ ತೀರ್ಮಾನ ಮಾಡುತ್ತಾರೆ. ಬಳ್ಳಾರಿ ಜಿಲ್ಲೆಯಾದ್ಯಂತ ಜಾತ್, ಭುಕ್ಯಾ ಎನ್ನುವ ಮನೆತನದವರಿದ್ದಾರೆ. ಅಲ್ಲದೆ ಅನೇಕ ಮನೆತನದವರು ದಳಪತಿಗಳಾಗಿ ಗ್ರಾಮದ ಆಗುಹೋಗುಗಳನ್ನು ನೋಡಿಕೊಳ್ಳುತ್ತಿದ್ದಾರೆ. ಅವರಲ್ಲಿ ಕೂಡ್ಲಿಗಿ ತಾಲೂಕಿನ ಚಿಕ್ಕಜೋಗಿಹಳ್ಳಿ ತಾಂಡಾ ದಳಪತಿಗಳಾದ ಬಾಬುನಾಯ್ಕ, ಹಿರ್ಯಾನಾಯ್ಕ, ಭಜನ್ಯಾನಾಯ್ಕ, ಹಾಲ್ಯಾನಾಯ್ಕ, ಮುನಿಯಾನಾಯ್ಕ,

ಭೀಮಾನಾಯ್ಕ ಅಜಿತ್‌ಕುಮಾರ್ (ನಾತು) ಕೃಷ್ಣನಾಯ್ಕ ಎಂ.ಎಸ್. ದಳಪತಿಯಾಗಿ ಕಾರ್ಯನಿರ್ವಹಿಸುತ್ತಾರೆ. ಗ್ರಾಮದಲ್ಲಿ ಯಾವುದೇ ಕಲಹಗಳಾದರೂ ಪ್ರಥಮವಾಗಿ ಇವರು ವಿಚಾರಣೆ ನಡೆಸುತ್ತಾರೆ. ಪೊಲೀಸರು ಇವರ ಬಳಿ ಬಂದು ರಿಜಿಸ್ಟಾರ್‌ನಲ್ಲಿ ಸಹಿ ಮಾಡಿ ಹೋಗಬೇಕಾಗುತ್ತದೆ. ಒಟ್ಟಾರೆ ಗ್ರಾಮದ ಜವಾಬ್ದಾರಿ ಇವರಿಗೆ ನೀಡಲಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಲಂಬಾಣಿಗರು ನ್ಯಾಯ ತೀರ್ಮಾನ ಮಾಡುತ್ತಿದ್ದರೆಂದು ತಿಳಿಯುತ್ತದೆ.

ಆದರೆ ಕೆಲವಡೆ ಕಟ್ಟೆಮನೆಗಳಿಂದ ತೀರ್ಮಾನವಾಗಿ ನ್ಯಾಯಗಳನ್ನು ನ್ಯಾಯಾಲಯದಲ್ಲಿ ತೀರ್ಮಾನಿಸಿಕೊಳ್ಳಲಾಗುತ್ತದೆ. ಆಧುನಿಕತೆ ಪ್ರಭಾವಕ್ಕೊಳಗಾದವರು ನಾಯಕ, ಕಾರಭಾರಿ, ಡಾವೋ, ಪಂಚರು ಗುರುಹಿರಿಯರು ತೀರ್ಪನ್ನು ತಿರಸ್ಕರಿಸಿ ನ್ಯಾಯಾಲಯದ ಮೊರೆಹೋಗುತ್ತಿರುವುದು ಕಂಡುಬರುತ್ತದೆ. ಇದು ನ್ಯಾಯ ಪದ್ಧತಿಯಲ್ಲಾದ ಬದಲಾವಣೆಯನ್ನು ಸ್ಪಷ್ಟಪಡಿಸುತ್ತದೆ.

**೫.೨ ಸಂಸ್ಕಾರಗಳು ಮತ್ತು ಸಂಪ್ರದಾಯಗಳು**

ಮಾನವನ ನಿತ್ಯ ವ್ಯವಹಾರದ ಪದ್ಧತಿಗಳು ಹಾಗೂ ಅವುಗಳ ಹಿನ್ನೆಲೆಯಲ್ಲಿರುವ ಕಲ್ಪನೆಗಳು, ಉದ್ದೇಶಗಳು ಕೂಡಿ ಸಂಪ್ರದಾಯವಾಗಿ ರೂಪುಗೊಂಡಿವೆ. ಸಂಸ್ಕಾರಗಳು ಮತ್ತು ಸಂಪ್ರದಾಯಗಳು ಮಾನವನ ಸಾಮಾಜಿಕ ಜೀವನವನ್ನು ನಿಯಂತ್ರಿಸುತ್ತವೆ ಅಲ್ಲದೆ ಸಾಮಾಜಿಕ ಸಾಮರಸ್ಯ ನೆಲೆಸುವಂತೆ ಮಾಡುತ್ತವೆ. ಹೀಗಾಗಿ ಮಾನವನ ಜೀವನ ಸಂಪೂರ್ಣವಾಗಿ ಸಂಪ್ರದಾಯ ಮತ್ತು ಸಂಸ್ಕಾರಗಳನ್ನು ಅವಲಂಬಿಸಿದೆ. ಪ್ರತಿಯೊಂದು ಸಮುದಾಯವು ತನ್ನದೇ ಆದ ಸಂಸ್ಕಾರ ಹಾಗೂ ಸಂಪ್ರದಾಯಗಳನ್ನು ಹೊಂದಿರುತ್ತದೆ. ಅದೇ ರೀತಿ ಲಂಬಾಣಿಗರಲ್ಲೂ ಅನೇಕ ಸಂಸ್ಕಾರ ಹಾಗೂ ಸಂಪ್ರದಾಯಗಳಿವೆ. ಅವರ ಸಾಮಾಜಿಕ ಜೀವನದಲ್ಲಿ ಜನನ, ಏಳಕ ಪೊಯೇರೂ, ಬಾಣಂತಿಯ ಸೂತಕ ತೆಗೆಯುವುದು ದಳವ ಧೋರಾಯರೂ, ನಾಮಕರಣ, ದತ್ತು ಸ್ವೀಕಾರ, ಜಾವುಳಕಾರ್ಯ, ಋತುಮತಿ, ವಿವಾಹ, ಬಹುಪತ್ನಿತ್ವ, ವಿಧವಾ ವಿವಾಹ, ಬಾಲ್ಯವಿವಾಹ, ಮೈದುನ ವಿವಾಹ, ಕೂಡಿಕೆಶಾಸ್ತ್ರ, ಶವಸಂಸ್ಕಾರ ಮೊದಲಾದವು ತನ್ನದೇ ಆದ ವಿಧಿ ವಿಧಾನಗಳನ್ನು ಹೊಂದಿದ್ದು ಅವುಗಳ ಬಗ್ಗೆ ಈ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗಿದೆ.

**೫.೨.೧ ಜನನ**

ಮಾನವ ಕಾಡಿನಿಂದ ನಾಡಿಗೆ ನಡೆಯುತ್ತಾ ನಾಗರಿಕನಾಗಿ ಬೆಳೆದಂತೆಲ್ಲಾ ಅನೇಕ ನಿಯಮಾವಳಿಗಳು ಬೆಳೆದು ಬಂದವು, ಇದಕ್ಕೆ ಆಯಾ ಕಾಲದ ಜನರ ನಂಬಿಕೆ ಮತ್ತು ಆಲೋಚನಾ ಕ್ರಮಗಳೇ ಮೂಲಕಾರಣ. ದುಷ್ಟಶಕ್ತಿಗಳು ಮಗುವಿನ ಜನನ ಸಂದರ್ಭದಲ್ಲಿ ತಾಯಿ ಹಾಗೂ ಮಗುವಿಗೆ ತೊಂದರೆ ಉಂಟುಮಾಡುತ್ತವೆ ಎಂದು ಅವುಗಳನ್ನು ತಡೆಗಟ್ಟಲು ಸಾತ್ವಿಕ ಶಕ್ತಿಯನ್ನು ಜಾಗೃತಗೊಳಿಸುವುದು ಅವಶ್ಯಕವೆಂದು ಭಾವಿಸಿದ ಮಾನವ ಹಲವಾರು ವಿಧಿ-ವಿಧಾನಗಳನ್ನು ಆಚರಣೆಗೆ ತಂದನು. ಅದೇ ರೀತಿ ತಂದೆ, ತಾಯಿ, ಕುಟುಂಬ ವರ್ಗದವರು ಹುಟ್ಟಿದ ಮಗುವಿನ ಜನನ ಸೂತಕವನ್ನು ಕಳೆದುಕೊಂಡು ಸಮಾಜದಲ್ಲಿ ಮತ್ತೆ ಮರುಪ್ರವೇಶ ಪಡೆದುಕೊಳ್ಳುವುದು ಇತ್ಯಾದಿಗಳಿಂದ ಜನನಕ್ಕೆ ಸಂಬಂಧಿಸಿದ ಆಚರಣೆಗಳು ರೂಢಿಗೆ ಬಂದಿರಬಹುದೆಂದು ಹೇಳಬಹುದು. ಈ ಸಂಸ್ಕಾರಗಳು ಪರಂಪರಾನುಗತವಾಗಿ ಬಂದ ಧಾರ್ಮಿಕ ವಿಧಿಗಳಾಗಿದ್ದು ಈ ವಿಧಿಗಳು ವ್ಯಕ್ತಿಯ ಬಾಹ್ಯ ಮತ್ತು

ಆಂತರಿಕ ಬೆಳವಣಿಗೆಯ ಮೇಲೆ ಪ್ರಭಾವ ಬೀರುತ್ತದೆ ಹಾಗೂ ಸಮಾಜದಲ್ಲಿ ಆತನ ವ್ಯಕ್ತಿತ್ವ ರೂಪುಗೊಳ್ಳಲು ಕಾರಣವಾಗುತ್ತದೆ.

ಲಂಬಾಣಿಗರು ಜನನದಿಂದ ಹಿಡಿದು ಮರಣದವರೆಗೂ ವಿವಿಧ ರೀತಿಯ ಸಂಸ್ಕಾರಗಳನ್ನು ಅನುಸರಿಸುತ್ತಾರೆ. ''ಮಕ್ಕಳಿಲ್ಲದ ಯಾತರ ಜನ್ಮ, ಮಕ್ಕಳೇ ಮಾನವನ ಮೋಕ್ಷಕ್ಕೆ ದಾರಿದೀಪ'' ಎಂಬ ನಂಬಿಕೆ ಲಂಬಾಣಿಗರಲ್ಲಿದೆ. ಹೀಗಾಗಿ ಜನನ ಸಂಸ್ಕಾರ ಅಧಿಕ ಮಹತ್ವ ಪಡೆದಿದೆ. ಜನನ ಸಂಸ್ಕಾರಗಳ ಕುರಿತು ಶಾಸನಗಳಲ್ಲಿ ಉಲ್ಲೇಖಗಳಿಲ್ಲ. ಅಲೆಮಾರಿಗಳಾದ ಲಂಬಾಣಿಗರು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವ್ಯಾಪಾರಕ್ಕಾಗಿ ಅಲೆಯುತ್ತಿದ್ದರೂ ಅವರು ತಮ್ಮ ಸತ್‌ಸಂಪ್ರದಾಯಗಳನ್ನು ಎಂದೂ ಮರೆತವರಲ್ಲ. ರಸಿಕಪ್ರಿಯರಾದ ಲಂಬಾಣಿಗರು ಸಾಮಾನ್ಯವಾಗಿ ಜನನದಂತಹ ಸಂತೋಷದಾಯಕ ಸಮಾರಂಭವನ್ನು ಸಂಭ್ರಮದಿಂದ ಆಚರಿಸುತ್ತಾರೆ ಜನನದ ವಿಧಿಗಳು ಒಂದು ಕಡೆ ಸಂತೋಷವನ್ನುಂಟುಮಾಡಿದರೆ ಮತ್ತೊಂದೆಡೆ ಸೂತಕವನ್ನು ಕಳೆಯುವ ಆಶೋತ್ತರಗಳನ್ನು ಈಡೇರಿಸುವ ದೇವರನ್ನು ಕೋರುವ ಪ್ರಾರ್ಥನೆಗಳಾಗಿವೆ.

ಲಂಬಾಣಿಗರಲ್ಲಿ ಸ್ತ್ರೀ ಗರ್ಭಿಣಿಯಾದ ದಿನದಿಂದಲೇ ಜನನ ಸಂಸ್ಕಾರಗಳು ಪ್ರಾರಂಭಗೊಳ್ಳುತ್ತವೆ. ಮದುವೆಯಾದ ಹೆಣ್ಣುಮಗಳು ಗರ್ಭಿಣಿಯಾದರೆ ಅವಳ ತಂದೆ-ತಾಯಿ ಸಹೋದರ ಕುಟುಂಬದ ಮತ್ತು ಸಮಾಜದ ಬಂಧು ಬಳಗದವರಿಗೆ ಅತೀವ ಸಂತೋಷದ ವಿಷಯವಾಗಿದ್ದು, ಆ ಆಚರಣೆಗಳನ್ನು ಅತಿ ಸಂತೋಷ, ಸಂಭ್ರಮ ಸಡಗರದಿಂದ ಆಚರಿಸುತ್ತಾರೆ. ತಾಯಿಯ ಗರ್ಭದಲ್ಲಿರುವ ಮಗುವಿನ ಬಗ್ಗೆ ಕುಟುಂಬದಲ್ಲಿ ನಿರೀಕ್ಷೆಯ ವಾತಾವರಣ ಮೂಡಿ, ಆಕೆ ಸ್ವೀಕರಿಸುವ ಆಹಾರದಿಂದ ಪ್ರಾರಂಭವಾಗಿ ಉಡುವ ಉಡುಪು ತೊಡುವ ಆಭರಣ ಮಾಡುವ ಕೆಲಸ ಮುಂತಾದ ಅಂಶಗಳ ಮೇಲೆ ಮನೆಯವರೆಲ್ಲರೂ ಎಚ್ಚರಿಕೆ ವಹಿಸುತ್ತಾ ಗರ್ಭಿಣಿಯನ್ನು ಸುಖ ಸಂತೋಷಗಳಿಂದ ನೋಡಿಕೊಳ್ಳುವರು. ಹೀಗೆ ಮಾಡಿದರೆ ಆಕೆಯ ಗರ್ಭದಲ್ಲಿರುವ ಮಗು ಆರೋಗ್ಯವಾಗಿರುತ್ತದೆ ಎಂದು ಹಿರಿಯರ ನಂಬಿಕೆ. ಈ ರೀತಿಯ ಸಂಪ್ರದಾಯ ಆಚಾರ-ವಿಚಾರದ ಮೂಲಕ ಆಕೆಯ ಮಾನಸಿಕ ಹಾಗೂ ದೈಹಿಕ ಆರೋಗ್ಯವನ್ನು ನೋಡಿಕೊಳ್ಳುವುದು.

ಚೊಚ್ಚಲ ಹೆರಿಗೆ ತವರು ಮನೆಯಲ್ಲಿಯೇ ಆಗಬೇಕೆಂದು ನಿಯಮವಿದೆ. ಒಂದು ವೇಳೆ ಗಂಡನ ಮನೆಯಲ್ಲಿಯೇ ಆದರೂ ದೋಷವಿಲ್ಲ. ಚೊಚ್ಚಲ ಹೆರಿಗೆ ಇದ್ದರೆ ಏಳು ತಿಂಗಳು ತುಂಬಿದ ಮೇಲೆ ತವರಿಗೆ ಬಂದು ಕರೆದುಕೊಂಡು ಹೋಗುವ ರೂಢಿಯಿದೆ. ಇವರು ಗರ್ಭಿಣಿಗೆ ಯಾವುದೇ 'ಸೀಮಂತ' ಇಲ್ಲವೇ ಉಡಿ ತುಂಬುವ ಕಾರ್ಯಕ್ರಮ ಮಾಡುವುದಿಲ್ಲ. ಇದಕ್ಕೆ ಅಲೆಮಾರಿ ಪ್ರವೃತ್ತಿಯೇ ಕಾರಣವಿರಬೇಕೆಂದು ಊಹಿಸಬಹುದು.[೯೧] ಗರ್ಭಿಣಿ ಇರುವಾಗ ಮುಂದೆ ಹುಟ್ಟುವ ಮಗು ಸುರಕ್ಷಿತವಾಗಿರಲೆಂದು ತಮ್ಮ ಮನೆದೇವರುಗಳಿಗೆ ಬೇಡಿಕೊಳ್ಳುತ್ತಾರೆ. ಆದರೆ ಇತ್ತೀಚೆಗೆ ಕೆಲವು ಕುಟುಂಬಗಳು ಸೀಮಂತ, ಉಡಿ ತುಂಬವ ಕಾರ್ಯಗಳನ್ನು ಮಾಡುತ್ತಿರುವುದು ಕಂಡುಬಂದಿದೆ. ಗರ್ಭಿಣಿಯರ ಆಶೋತ್ತರಗಳನ್ನು ಕುರಿತು ಲಂಬಾಣಿಗರ ಗೀತೆ ಇಂತಿದೆ.

ಎಕಮಿನಾ ಜಾವತು ತಾರ ಮನ್  ಜಾವ ದಾಡೇಪರ

ದೀ ಮಿನಾ ಜಾವತು ತಾರ ಮನ ಜಾವ - ಅಮಲೀಪರ

ತೀನ ಮಿನಾ ಜಾವತು ತಾರ ಜೇಬ್ ಜಾವ ಅಂಬಾಪರ

ಚಾರ ಮೀನಾ ಜಾವತು ತಾರ ಜೇಬ್ ಜಾವ ಖಾಟೆ ಮೀಟೆಪರ

ಅಂದಳಿ ಖಾನ್ ಖಾಟೂ ಹೋಟೊ ನಾಕೀಯೇ

ಪಾಂಚ್ ಮೀನಾ ಜಾವತು ತಾರ ಜೀವ ಜಾವ ನರಳೆ - ಪರ

ಛೋ ಮೀನಾ ಜಾವತು ತಾರ್ ಜೀವ ಜಾವ ಫೂಲಫಳೀಪರ ಸಾತ್ ಮೀನಾ ಜಾವತು ತಾರಜೀವ ಜಾವ ದೇಕಿಯ ಸಪನೇ ಬಾಳೋರ ಗೋ ದೇಮ.

ಆಟ್ ಮೀನಾ ಜಾವತು ತಾರ ಜೀವ ಡರಲಾಗೊ

ಛಟಿ ಮಾತಾ ಚಾಯಿಯೋ ತು ಸಾಯಿ ವೇ ಜೋ

ನೌ ಮೀನಾ ಜಾವತು ತಾರ ಜೀವ ತು ದೇವರ ಭಜನಕರ

ಸಾತೀಸೇ ಮನಯ ಯಾಡಿ ತಯಾರ ಮೇ ಲೋ

ನವ ದಾಡೇನಯ ಚಾಂದ ಜಲಮ

ಲೀದೂ ಚಳ ಚಳ ರೋವಯ ನಾನಕ್ಯಾ ಬಾಳ್

ಬಾಳ್ ರೋವತೂಯ ಸೇನ ವೇಗಿ ಹಂಸಿ ಖುಷಿ.”

ಮೊದಲ ತಿಂಗಳು ಕಳೆದರೆ ನಿನ್ನ ಮನಸ್ಸು ದಿನಗಳ ಮೇಲೆ. ಎರಡು ತಿಂಗಳು ಕಳೆದರೆ ನಿನ್ನ ಮನಸ್ಸು ಹುಣಸೆ ಮೇಲೆ. ಮೂರು ತಿಂಗಳು ಕಳೆದರೆ ನಿನ್ನ ಮನಸ್ಸು ಮಾವಿನ ಮೇಲೆ. ನಾಲ್ಕು ತಿಂಗಳು ಕಳೆದರೆ ನಿನ್ನ ಮನಸ್ಸು ಹುಳಿಸಿಹಿಗಳ ಮೇಲೆ, ತಲೆತಿರುಗುವುದು ಹುಳಿವಾಂತಿಯಾಗುವುದು, ಐದು ತಿಂಗಳು ಕಳೆದರೆ ನಿನ್ನ ಜೀವ ತೆಂಗಿನ ಮೇಲೆ. ಆರು ತಿಂಗಳು ಕಳೆದರೆ ನಿನ್ನ ಜೀವ ಹೂ-ಹಂಪಲುಗಳ ಮೇಲೆ, ಏಳು ತಿಂಗಳು ಕಳೆದರೆ ನಿನ್ನ ಜೀವ ಕನಸನ್ನು ಕಾಣುತ್ತೆ, ಕನಸಿನಲ್ಲಿ ತಾನೂ ಚಿಕ್ಕಂದಿನಲ್ಲಿ ತಂದೆಯ ತೋಳಿನಲ್ಲಿರುವಂತೆ. ಎಂಟು ತಿಂಗಳು ಕಳೆದರೆ ಭಯಗೊಳ್ಳುತ್ತಾ ಚಟಿದೇವತೆಯನ್ನು ಕುರಿತು ಪ್ರಾರ್ಥಿಸುವಳು. ಒಂಬತ್ತು ತಿಂಗಳು ಕಳೆದರೆ ದೇವರನ್ನು ಕುರಿತು ಸ್ತುತಿಸುವಳು; ಅವಶ್ಯ ವಸ್ತುಗಳನ್ನು ಸಿದ್ಧಪಡಿಸಿಕೊಳ್ಳುವಳು. ಒಂಬತ್ತನೆಯ ದಿನ ಚಂದಿರನಂತೆ ಮಗು ಜನಿಸುತ್ತದೆ. ಚಳ ಚಳನೆ ಅಳುತ್ತಾನೆ. ಚಿಕ್ಕಮಗು ಚಿಕ್ಕಮಗು ಅತ್ತರೆ ಎಲ್ಲರಿಗೂ ಆಯಿತು ಸಂತೋಷ.

ಈ ಗೀತೆಯು ಸಾಂಸ್ಕೃತಿಕ ಅಂಶಗಳಿಂದ ಕೂಡಿದ್ದು ಅರ್ಥಗರ್ಭಿತವಾಗಿದೆ. ಸ್ತ್ರೀಯ ಗರ್ಭ ಧರಿಸುವುದರಿಂದ ಮಗುವಿನ ಜನನದವರೆವಿಗೂ ಸ್ತ್ರೀಯಲ್ಲಿ ನಡೆಯುವ ಮಾನಸಿಕ ಬದಲಾವಣೆಗಳನ್ನು ಅದಕ್ಕನುಗುಣವಾಗಿ ಆಕೆಯ ಬೇಡಿಕೆಯಲ್ಲಿನ ಸೂಕ್ಷ್ಮಾತಿಸೂಕ್ಷ್ಮ ಸ್ಥಿತಿಗಳನ್ನು ಚಿತ್ರಿಸಲಾಗಿದೆ. ಅಲ್ಲದೇ ಅವಳ ಸ್ನೇಹಿತೆಯರು ಅವಳನ್ನು ಕಾಡಿಸುವ ಅನೇಕ ಅರ್ಥಗರ್ಭಿತ ಗೀತೆಗಳನ್ನು ಹಾಡುತ್ತಾರೆ.

ಈ ಸಮುದಾಯದಲ್ಲಿ ಗರ್ಭಿಣಿ ಸ್ತ್ರೀ ಹಲವಾರು ನಿಯಮಗಳಿಗೆ ಒಳಪಟ್ಟಿರುತ್ತಾಳೆ. ರಾತ್ರಿ ಸಮಯದಲ್ಲಿ ಗರ್ಭಿಣಿ ಮಹಿಳೆ ಏಕಾಂಗಿಯಾಗಿ ಓಡಾಡುವಂತಿಲ್ಲ. ಏಕಾಂಗಿಯಾಗಿ ಹೋದಲ್ಲಿ ಭೂತಪ್ರೇತಗಳು ಅವಳನ್ನು ಅಂಟಿಕೊಳ್ಳುತ್ತದೆ ಎಂಬುದು ಇವರ ನಂಬಿಕೆ. ಈಕೆ ಯಾವುದೇ ರೀತಿಯ ತೂಕವಾದ ವಸ್ತುಗಳನ್ನು ಎತ್ತುವಾಗಿಲ್ಲ, ಅರಣ್ಯ, ರುದ್ರಭೂಮಿ ನೋಡುವ ಹಾಗಿಲ್ಲ. ಗ್ರಹಣದ ಕಾಲದಲ್ಲಿ ಗರ್ಭಿಣಿ ಸ್ತ್ರೀಯರು ಮನೆಬಿಟ್ಟು ಹೊರಗೆ ಹೋಗುವಂತಿಲ್ಲ. ಮತ್ತು ರಕ್ತಪಾತ ನೋಡುವಂತಿಲ್ಲ. ಗರ್ಭಿಣಿ ಮಹಿಳೆ ಈ ರೀತಿಯ ನಿಯಮ ಪಾಲನೆ ಮಾಡದಿದ್ದರೆ ದೆವ್ವ-ಭೂತಗಳು ಅವಳ ಹಾಗೂ ಗರ್ಭದಲ್ಲಿರುವ ಮಗುವಿಗೆ ಕೆಟ್ಟ ಪರಿಣಾಮ ಉಂಟುಮಾಡುತ್ತವೆ ಎಂದು ನಂಬುತ್ತಾರೆ. ಗರ್ಭಿಣಿ ಸ್ತ್ರೀಯ ಗಂಡ ಪ್ರಾಣಿ ಪಕ್ಷಿಗಳನ್ನು ಕೊಲ್ಲುವ ಹಾಗಿಲ್ಲ. ಶವಸಂಸ್ಕಾರ ವಿಧಿವಿಧಾನದಲ್ಲಿ ಬಾಗವಹಿಸುವಂತಿಲ್ಲ. ಈ ಎಲ್ಲಾ ನಂಬಿಕೆ ಗರ್ಭದಲ್ಲಿರುವ ಕೂಸಿನ ಮೇಲೆ ಪರಿಣಾಮ ಉಂಟುಮಾಡಬಾರದು ಎಂಬ ದೃಷ್ಟಿಯಿಂದ ನಿಯಮಗಳು ಪಾಲನೆಮಾಡುತ್ತಾರೆ ಎಂದು ಹೇಳಬಹುದು.[೪೪]

ಸಾಮಾನ್ಯವಾಗಿ ಪ್ರತಿಯೊಬ್ಬ ಸ್ತ್ರೀಯರಿಗೂ ತಾಯ್ತನ ಎಂಬುವುದು ಮುಖ್ಯವಾದ ಅಂಶ. ಲಂಬಾಣಿ ಸ್ತ್ರೀಯರು ಇದಕ್ಕೆ ಹೊರತಾಗಿಲ್ಲ. ಸ್ತ್ರೀ ವಿವಾಹವಾದ ಮೊದಲೆರಡು ವರ್ಷಗಳಲ್ಲಿ ಗರ್ಭಿಣಿಯಾದರೆ ತಂದೆ, ತಾಯಿ, ಅಕ್ಕ, ಮಾವ, ಸಹೋದರ, ಸಹೋದರಿಯರು ಹಾಗೂ ಬಂಧು ಬಾಂಧವರಿಗೆ ಬಹಳ ಸಂತೋಷದ ಸಂಗತಿ. ಸಂತಾನ ಪ್ರಾಪ್ತಿಯು ತಮ್ಮ ಮನೆ ಬೆಳಗಲಿ ಎಂಬುದು ಎಲ್ಲರ ಆಶಯ ದುರ್ದೈವದಿಂದ ಯಾವುದೇ ಸ್ತ್ರೀಗೆ ತಾಯಿಯಾಗುವ ಭಾಗ್ಯ ಇಲ್ಲವಾದರೆ ಹೆಚ್ಚು ಚಿಂತೆಗೊಳಗಾಗುತ್ತಾಳೆ. ಇಂತಹವರು ಅನೇಕ ದೇವದೇವತೆಗಳಿಗೆ ಹರಕೆ ಹೋರುತ್ತಾರೆ. ವಿವಿಧ ಬಗೆಯ ಗಿಡಮೂಲಿಕೆಗಳನ್ನು ಸೇವಿಸುತ್ತಾರೆ. ತಮ್ಮ ಸಮುದಾಯದ ಹಲವಾರು ಸಾಧು ಸಂತರನ್ನು ಮತ್ತು ಭಗವಾನ್‌ರನ್ನು ಬೇಡಿಕೊಳ್ಳುತ್ತಾರೆ. 'ಬಂಜೆ' ಎಂಬ ಹೆಸರಿನಿಂದ ದೂರ ಉಳಿಯಲು ಏನೆಲ್ಲಾ ಆಚರಣೆಗಳನ್ನು ಮಾಡಬೇಕೋ ಅವೆಲ್ಲವನ್ನೂ ಮಾಡುತ್ತಾರೆ. ಮತ್ತು ಆಕೆ ಬಂಜೆಯಾಗಿಯೇ ಉಳಿದಲ್ಲಿ ಆಕೆ ಬದುಕು ಬದುಕಲ್ಲ. ಇಂತಹ ಮಹಿಳೆಯರು ಯಾವುದೇ ಶುಭಕಾರ್ಯಗಳಲ್ಲಿ ಪಾಲ್ಗೊಳ್ಳುವಂತಿಲ್ಲ. ಸೌಭಾಗ್ಯವತಿ ಮಹಿಳೆಯರೊಡನೆ ಕುಳಿತು ಯಾವುದೇ ವಿಧದ ಸನ್ಮಾನಗಳನ್ನು ಸ್ವೀಕರಿಸುವಂತಿಲ್ಲ. ಜೊತೆಗೆ ಕುಟುಂಬದಲ್ಲಾಗಲಿ, ಸಮುದಾಯದಲ್ಲಾಗಲಿ ಯಾವುದೇ ರೀತಿಯ ಘನತೆ ದೊರೆಯದೇ, ಅಂತಿಮವಾಗಿ ತನ್ನ ಗಂಡ, ಅತ್ತೆ ಮಾವಂದಿರಿಗೆ ತಿರಸ್ಕೃತಳಾಗುತ್ತಾಳೆ.[೪೫]

ಲಂಬಾಣಿಗರು ಮೂಲತಃ ಅಲೆಮಾರಿ ಜನಾಂಗಗಳಾಗಿದ್ದರಿಂದ ಹೆರಿಗೆ ಗಂಡನ ಮನೆಯಲ್ಲೆ ನಡೆಯುತ್ತದೆ. ಆದರೆ ಪ್ರಸ್ತುತ ದಿನಗಳಲ್ಲಿ ಆಧುನಿಕತೆಯ ಪ್ರಭಾವಕ್ಕೊಳಗಾಗಿ ತಾಯಿಮನೆಯಲ್ಲಿ ಹೆರಿಗೆ ಕಾರ್ಯ ಮುಗಿಸಿ ಹಾಗೂ ಬಾಣಂತಿ ಸ್ತ್ರೀಯನ್ನು ನಾಲ್ಕು ಇಲ್ಲವೆ ಆರು ತಿಂಗಳೊಳಗೆ ಗಂಡನ ಮನೆಗೆ ಕಳುಹಿಸುವ ನಿಯಮಗಳಿವೆ.[೪೬]

''ಎಲ್ಲ ಬುಡಕಟ್ಟುಗಳಂತೆ ಲಂಬಾಣಿಗರಿಗೂ ಮಗುವಿನ ಜನನ ಸೂತಕವೇ ಆದ್ದರಿಂದ ಹೆರಿಗೆಗಾಗಿ ಒಂದು ಪ್ರತ್ಯೇಕವಾದ ವಸತಿ ವ್ಯವಸ್ಥೆಯನ್ನು ಮಾಡುತ್ತಾರೆ. ಇದು ಸಾಮಾನ್ಯವಾಗಿ ದನದ ಕೊಟ್ಟಿಗೆಯಾಗಿರುತ್ತದೆ''.[೪೭] ಪ್ರಸೂತಿ ಸಂದರ್ಭದಲ್ಲಿ ಸ್ತ್ರೀಗೆ ನೋವು ಪ್ರಾರಂಭವಾದಾಗ ಆ ನೋವವನ್ನು ಮರೆಯುವುದಕ್ಕಾಗಿ ತಾಂಡಾದ ಅನುಭವಿ ಸ್ತ್ರೀಯರೆಲ್ಲರೂ ಸೇರಿಕೊಂಡು ಗೀತೆಯನ್ನು ಹಾಡುತ್ತಾರೆ. ಹೆರಿಗೆಗೆ

ಆಸ್ಪತ್ರೆಗೆ ಕರೆದುಕೊಂಡು ಹೋಗುವುದಿಲ್ಲ. ಇತ್ತೀಚಿಗೆ ಆಸ್ಪತ್ರೆಗೆ ಕರೆದುಕೊಂಡು ಹೋಗುವರು. ಗ್ರಾಮದ ಅನುಭವಿ ಸ್ತ್ರೀಯರು ಪ್ರಸೂತಿಯನ್ನು ಮಾಡಿಸುತ್ತಾರೆ. ಪ್ರಸೂತಿ ಕಷ್ಟವಾದಾಗ ಸ್ವಚ್ಛ ಹಾಗೂ ಹರಿತವಾದ ಶ್ವೇತ ಕಲ್ಲು ಚೂರಿನಿಂದ ಗರ್ಭದ್ವಾರವನ್ನು ಸೀಳಿ ಹೆರಿಗೆ ಮಾಡಿಸುವ ನೈಪುಣ್ಯತೆ ಇವರಿಗಿದೆ.

ಸುರಕ್ಷಿತವಾಗಿ ಯಾವುದೇ ತೊಂದರೆಯಾಗದಂತೆ ಪ್ರಸೂತಿ ನಡೆಯಲೆಂದು ಮನೆಯ ಹಿರಿಯರು ಮನೆ ದೇವರಿಗೆ ಹರಕೆ ಕಟ್ಟಿಕೊಳ್ಳುವ ನಿಯಮ ರೂಢಿಯಲ್ಲಿದೆ. ಪ್ರಸೂತಿ ಸಂದರ್ಭದಲ್ಲಿ ಸಹಾಯಕರಾದ ಹಿರಿಯ ಅನುಭವಿ ಸ್ತ್ರೀಯರಿಗೆ ಅಂದು ಸಾರಾಯಿ ಮತ್ತು ಮಾಂಸದ ಊಟವನ್ನು ಉಣಬಡಿಸುತ್ತಾರೆ. ಬಾಣಂತಿಯನ್ನು ಪ್ರತ್ಯೇಕವಾದ ಸ್ಥಳದಲ್ಲಿ ಸ್ನಾನ ಮಾಡಿಸುತ್ತಾರೆ. ಕೂಸು ಮತ್ತು ಬಾಣಂತಿ ಸ್ನಾನ ಮಾಡಿದ ನೀರು ಹರಿದು ಹೋಗದಂತೆ ಗುಂಡಿ ತೆಗೆದು ಅಲ್ಲಿಯೇ ಇಂಗುವಂತೆ ಮಾಡುತ್ತಾರೆ. ಆ ನೀರನ್ನು ಯಾರಾದರೂ ದಾಟಿದರೆ ಸ್ತ್ರೀಯ ಎದೆ ಹಾಲು ಬತ್ತಿ ಹೋಗುವುದೆಂದು ನಂಬುತ್ತಾರೆ. ಹೊಕ್ಕಳು ಬಳ್ಳಿಯನ್ನು ಸುರಕ್ಷಿತವಾದ ಸ್ಥಳದಲ್ಲಿ ಮನೆಯ ಬಾಗಿಲಿನ ಹತ್ತಿರ ಗುಂಡಿಯನ್ನು ತೆಗೆದು ಹೂಳುತ್ತಾರೆ. ಅದರೊಂದಿಗೆ ಬೆಳ್ಳಿಯ ನಾಣ್ಯ, ಲೋಹದ ನಾಣ್ಯ, ಗೇರುಕಾಯಿ ಮತ್ತು ಸ್ವಲ್ಪ ಹಿಟ್ಟನ್ನು ಹಾಕಿ ಮುಚ್ಚುತ್ತಾರೆ. ಹೊಕ್ಕಳು ಬಳ್ಳಿಯನ್ನು ನಾಯಿ, ಕಾಗೆ ಇತ್ಯಾದಿ ಪ್ರಾಣಿಗಳು ತಿಂದರೆ ಸ್ತ್ರೀಯ ಎದೆಹಾಲು ಬತ್ತಿಹೋಗುವುದೆಂದು ನಂಬಿಕೆ ಇವರಲ್ಲಿದೆ. ಅಲ್ಲದೇ ಬಾಣಂತಿ ಮತ್ತು ಕೂಸಿಗೆ ದೋಷ ತಟ್ಟುವುದೆಂದು ಭಯಪಡುತ್ತಾರೆ. ಕೂಸಿನ ಹೊಕ್ಕಳು ಒಣಗಿ ಕೆಳಗೆ ಬಿದ್ದಾಗ ಅದನ್ನು ಕೆಂಪು ವಸ್ತ್ರದಲ್ಲಿ ಸುತ್ತಿ ಕೂಸಿನ ಕೊರಳಿಗೆ ಹಾರ ಮಾಡಿ ಹಾಕುತ್ತಾರೆ. ಹಾರ ಹಾಕುವುದರಿಂದ ಮಗುವಿಗೆ ದೋಷ ಬರುವುದಿಲ್ಲವೆಂದು ನಂಬುತ್ತಾರೆ.[೨೫]

ಪ್ರಸವದ ನಂತರ ತಾಯಿ-ಮಗುವಿನ ಆರೈಕೆಯ ಕಡೆಗೆ ಹೆಚ್ಚು ಗಮನ ನೀಡುತ್ತಾರೆ. ಬಾಣಂತಿ ಸ್ತ್ರೀಗೆ ಮೊದಲ ತಿಂಗಳು ಸಪ್ಪೆ ಆಹಾರವನ್ನು ನೀಡುವುದು ವಾಡಿಕೆ. ಅನ್ನ, ತುಪ್ಪ, ಮೊಟ್ಟೆ, ಹಾಲು, ಮೆಂತ್ಯ ಇತ್ಯಾದಿ ಪೌಷ್ಟಿಕ ಆಹಾರವನ್ನು ನೀಡುವರು. ಆದರೆ ಖಾರ ಮತ್ತು ಉಪ್ಪು ಪದಾರ್ಥ ನೀಡುವುದಿಲ್ಲ. ಮೊದಲ ಮಾಹೆ(ತಿಂಗಳು)ವರೆವಿಗೂ ಕಂಚಿನ ಗಂಗಳದಲ್ಲಿ ಊಟಮಾಡುವಂತಿಲ್ಲ. ಬೇರೆ ಯಾರನ್ನೂ ಮುಟ್ಟಿಸಿಕೊಳ್ಳುವುದಿಲ್ಲ. ತಾಯಿ-ಮಗುವಿಗೆ ಅನಾರೋಗ್ಯ ಸ್ಥಿತಿ ಉಂಟಾಗದ ಹಾಗೆ ಜಾಗೃತಿ ವಹಿಸುತ್ತಾರೆ. ಪ್ರಾರಂಭದಲ್ಲಿ ಮಗುವಿಗೆ ತಾಯಿಯ ಎದೆಹಾಲು ಪ್ರಮುಖ ಆಹಾರವಾಗಿರುತ್ತದೆ. ಕೆಲವು ಸಂದರ್ಭದಲ್ಲಿ ಎದೆ ಹಾಲಿನ ಕೊರತೆ ಕಂಡರೆ ಆಕಳ ಹಾಲನ್ನು ಕುಡಿಸುತ್ತಾರೆ.

ಇವರಲ್ಲಿ ಹೆರಿಗೆಯಾದ ಸ್ತ್ರೀಯನ್ನು ಒಂದು ತಿಂಗಳವರೆಗೆ ಜಾಗರೂಕತೆಯಿಂದ ನೋಡಿಕೊಳ್ಳುತ್ತಾರೆ. ಪ್ರತಿ ದಿನ ಬಿಸಿನೀರಿನಿಂದ ಸ್ನಾನ ಮಾಡಿಸಿ ಕುಡಿಯಲು ಬಿಸಿ ನೀರನ್ನು ಕೊಡುವರು. ಶ್ಯಾವಿಗೆ ಮತ್ತು ಗೋಧಿಯಿಂದ ಮಾಡಿದ ಪದಾರ್ಥಗಳನ್ನು ಹೆಚ್ಚಾಗಿ ಕೊಡುವರು. ಬಾಣಂತಿಗೆ ಶೀತವಾಗದಿರಲೆಂದು ಉಷ್ಣವನ್ನು ಹೆಚ್ಚಿಸುವ ಗುಣವುಳ್ಳ ಕಾಡೊ, (ಕರಿಮೆಣಸು, ಸುಂಠಿ, ಕೊಬ್ಬರಿಗಳ ಮಿಶ್ರಣಕ್ಕೆ ಒಗ್ಗರಣೆಯನ್ನು ಕೊಟ್ಟು ತಯಾರಿಸಿದ ಪದಾರ್ಥ),''[೬೯] ಮತ್ತು ಮಾಂಸಹಾರ ಕುಡಿಯಲು ಸಾರಾಯಿ ಕೊಡುತ್ತಾರೆ. ಹಾಗೂ ಮಗುವಿಗೆ ಹಾಲು ಸಮೃದ್ಧಿಯಾಗಿ ದೊರೆಯಲಿ ಎಂಬ ಕಾರಣಕ್ಕಾಗಿ ಕೊಬ್ಬರಿ ಮತ್ತು ಉತ್ತತ್ತಿಗಳನ್ನು ಪುಡಿಮಾಡಿ ತುಪ್ಪದಲ್ಲಿ

ಬೆರೆಸಿ ತಿನ್ನಿಸುವರು. ಹೀಗೆ ಆಯಾ ಪ್ರದೇಶದ ಹಾಗೂ ಅವರವರ ಅನುಕೂಲಗಳಿಗೆ ತಕ್ಕಂತೆ ಬಾಣಂತಿಯರಿಗೆ ಆರೈಕೆಯನ್ನು ಮಾಡುವರು.

ಮಗು ಎಳೆಯದರಲ್ಲಿ ಹೆಚ್ಚು ರಚ್ಚೆಮಾಡುತ್ತಿದ್ದರೆ ಒಲೆಯಲ್ಲಿರುವ ಕೆಂಡವನ್ನು ಒಂದು ತಟ್ಟೆಯಲ್ಲಿ ಹಾಕಿ ನೀರನ್ನು ಹೊಯ್ದು ಆ ತಟ್ಟೆಯಲ್ಲಿನ ನೀರು ಹಾಗೂ ಕೆಂಡವನ್ನು ಏಳು ಬಾರಿ ಮೇಲಿನಿಂದ ಕೆಳಗೆ ನೀವಾಳಿಸಿ ತಟ್ಟೆಯಲ್ಲಿ ಕೆಂಡ ಮತ್ತು ನೀರನ್ನು ನಾಲ್ಕಾರು ಜನ ಓಡಾಡುವ ದಾರಿಯಲ್ಲಿ ಚೆಲ್ಲುತ್ತಾರೆ ಇಲ್ಲವೇ ತಮ್ಮ ಮನೆಯ ದೇವರಿಗೆ ತಲೆ ಕೂದಲನ್ನು ಕೊಡುವುದಾಗಿ ಹರಕೆ ಹೊತ್ತುಕೊಳ್ಳುತ್ತಾರೆ.[೫೦]

ಕೂಸಿಗೆ ಜ್ವರ, ವಾಂತಿ, ಭೇದಿ ಇತ್ಯಾದಿ ಕಾಯಿಲೆಗಳು ಬಂದರೆ ಎರಡು ಗೊಂಬೆ ಹೊಂದಿರುವ ಬಂಗಾರದ ನಾಣ್ಯವನ್ನು ಪೂಜೆ ಮಾಡಿ ಹರಳೆಣ್ಣೆ ದೀಪದಲ್ಲಿ ನಾಣ್ಯವನ್ನು ಕಾಯಿಸಿ ಕೂಸಿನ ನೆತ್ತಿ ಮುಂತಾದ ಭಾಗಗಳಿಗೆ ನಾಣ್ಯದ ಮುದ್ರೆ (ಬಾಗ್) ಹಾಕುತ್ತಾರೆ. ಹಾಗೂ ಅಮವಾಸ್ಯೆಯ ದಿನ ಸಾಯಂಕಾಲ ಕಪ್ಪುಮಣ್ಣಿನ ಹಂಚಿನ ಮೇಲೆ ಸ್ವಸ್ತಿಕ್ ಗುರ್ತನ್ನು ಬರೆದು ಅದಕ್ಕೆ ಅನ್ನಹಾಕಿ, ಕುಂಕುಮ ಹಚ್ಚಿ, ಎಣ್ಣೆ ದೀಪವಿಟ್ಟು ಪೂಜೆ ಮಾಡಿ ಬೇವಿನ ಎಲೆಯನ್ನು ನೀರಿನಲ್ಲಿ ನೆನೆಸಿ ಕೂಸಿನ ಮೈಗೆ ಬೇವಿನ ಎಲೆಯಿಂದ ಜೋರಾಗಿ ಹೊಡೆಯುತ್ತಾರೆ. ಇದರಿಂದ ಕೂಸೂ ಬೆಚ್ಚಿಬಿದ್ದಂತೆ ಹೆದರುತ್ತದೆ. ನಂತರ ಆ ಅನ್ನವನ್ನು ಊರಿನಿಂದ ದೂರದಲ್ಲಿರುವ ರಸ್ತೆಯ ಪಕ್ಕದ ಮರದ ಕೆಳಗೆ ಇಟ್ಟುಬರುತ್ತಾರೆ. ಇದಕ್ಕೆ 'ಧಾನ್ ಕಾಡನ್ ನಾಕೆರೂ' (ಅನ್ನ ತಗೆಯುವುದು) ಎಂಬುದಾಗಿ ಕರೆಯುತ್ತಾರೆ. ಹಾಗೆಯೇ ಈ ಸಮುದಾಯದಲ್ಲಿ ನಾಟಿ ಔಷಧಿ ಕೊಡುವ ಪದ್ಧತಿ ರೂಢಿಯಲ್ಲಿದೆ.[೫೧]

ಇತ್ತೀಚಿನ ದಿನಗಳಲ್ಲಿ ಆಸ್ಪತ್ರೆಗಳಲ್ಲಿ ಹೆರಿಗೆ ಮಾಡಿಸುವುದರಿಂದ ಐದು ದಿನಗಳವರೆಗೆ ಆಸ್ಪತ್ರೆಯಲ್ಲಿದ್ದು ಆರನೇ ದಿವಸಕ್ಕೆ ಮನೆಯ ಹೊರಗಿನ ಕೋಣೆಯ ಮೂಲೆಯಲ್ಲಿ ಈ ಮೇಲೆ ತಿಳಿಸಿದ ಕ್ರಮಗಳನ್ನು ನಾಲ್ಕು ತಿಂಗಳವರೆಗೆ ಪಾಲಿಸಿಕೊಂಡು ಹೆರಿಗೆ ಸೂತಕ ತೀರಿಸಿ ತಾನು ವಾಸವಾಗಿದ್ದ ಕೋಣೆಯನ್ನು ಸ್ವಚ್ಛಗೊಳಿಸಿ ತನ್ನ ದಿನಚರಿಯಲ್ಲಿ ಭಾಗವಹಿಸುತ್ತಾಳೆ.

**೫.೨.೨ ಏಳಕಪೊಯೇರೊ (ಸಂತೋಷ ಕೂಟ)**

ಗಂಡು ಮಗುವಿನ ಜನನವಾದ ಸಂದರ್ಭದಲ್ಲಿ ಮಾಡುವ ಶಾಸ್ತ್ರಕ್ಕೆ 'ಏಳಕಪೊಯೇರೋ' (ಸಂತೋಷಕೂಟ) ಎನ್ನುತ್ತಾರೆ. ಹೆಚ್ಚಾಗಿ ಗಂಡು ಮಗು ಅಪೇಕ್ಷಿಸುವ ಇವರು ಗಂಡು ಮಗುವಿನ ಜನನವಾದರೆ ನಗಾರಿ ಬಾರಿಸಿ ತಾಂಡಾದ ಹಿರಿಯರೆಲ್ಲರಿಗೂ ಆ ವಿಷಯ ತಿಳಿಸುತ್ತಾರೆ. ಇದು ತಂದೆ ತಾಯಿ ಮಾತ್ರವಲ್ಲದೇ ತಾಂಡಾದ ಎಲ್ಲಾ ಜನರಿಗೂ ಸಂತೋಷದ ವಿಷಯವಾಗಿರುತ್ತದೆ. 'ಕೊಡವರು'[೫೨] ಈ ಸಂದರ್ಭದಲ್ಲಿ ಬಂದೂಕಿನ ಎರಡು ಗುಂಡುಗಳನ್ನು ಹಾರಿಸುವುದನ್ನು ಸ್ಮರಿಸಬಹುದು. ಹಾಗೇ ಹೆಣ್ಣು ಮಗುವಿನ ಜನನವಾದಾಗ ಕಂಚಿನ ತಟ್ಟೆಯನ್ನು ಭಾರಿಸುತ್ತಾರೆ.[೫೩] ನೈಸರ್ಗಿಕವಾಗಿ ಹಾಡುವುದು, ಕುಣಿಯುವುದು, ಬಾರಿಸುವುದು, ಸಾರಾಯಿ ಕುಡಿಯುವುದಕ್ಕೆ ರಾತ್ರಿವೇಳೆ ಸೂಕ್ತವೆಂದು ತಿಳಿದಿರುವ ಇವರು ಪ್ರತಿಯೊಂದು ಶಾಸ್ತ್ರವನ್ನು ಹಗಲಿನ ಸಮಯದಲ್ಲಿ ಮಾಡುವುದಿಲ್ಲ. ಸಾಯಂಕಾಲ ಪ್ರಶಾಂತವಾದ ವಾತಾವರಣದಲ್ಲಿ ಈ ಶಾಸ್ತ್ರ ಮಾಡುತ್ತಾರೆ.

ಜನಿಸಿದ ಮಗು ಗಂಡೆಂದು ತಿಳಿದಾಗ ಮನೆಯವರು ತಮ್ಮ ತಾಂಡದ ಹಿರಿಯ ಸ್ತ್ರೀ ಮತ್ತು ಪುರುಷರೊಂದಿಗೆ ಜೋತಿಷ್ಯರ ಬಳಿಗೆ ಹೋಗಿ ಶುಭ-ಲಾಭ. ಮಗುವಿನ ಹೆಸರು ಜನನ ಮೂಹೂರ್ತವನ್ನು ಅವಲಂಬಿಸಿರುತ್ತದೆ. ಹಾಗೆಯೇ ಬರುವಾಗ ಬಾಣಂತಿಗೆ ಬೇಕಾದ ತಿನಿಸುಗಳನ್ನು ಮಂತ್ರಿಸಿದ ಕೊಬ್ಬರಿ ಹೋಳೊಂದನ್ನು ತರುತ್ತಾರೆ. ಮನೆಯನ್ನು ಶುದ್ಧಗೊಳಿಸಿ, ಸಗಣಿಯಿಂದ ನೆಲಸಾರಿಸಿ ರಂಗೋಲಿ ಹಾಕುತ್ತಾರೆ. ಮಗುವಿನ ಸ್ನಾನ ಮಾಡಿಸಿ ಮನೆಯ ದೇವತೆಗಳಿಗೆ ಧೂಪ ಹಾಕುತ್ತಾರೆ. ಪೂರ್ವಜರಿಗೆ ಸಾರಾಯಿ ಇಟ್ಟು ಎಡೆ ಹಾಕುತ್ತಾರೆ. ಇದೇ ಸಂದರ್ಭದಲ್ಲಿ ಹಿರಿಯ ಅನುಭವಿ ಸ್ತ್ರೀಯರು ಮನೆಯ ಮಧ್ಯ ಸಾಲಾಗಿ ನಿಂತು 'ವಳಂಗ್' ಎಂಬ ಹಾಡಿನ ರೂಪದ ಪ್ರಾರ್ಥನೆಯನ್ನು ಹಾಡುತ್ತಾರೆ. ಪ್ರಾರ್ಥನೆ, ಪೂಜೆ, ಶಾಸ್ತ್ರಗಳೆಲ್ಲವೂ ಮುಗಿದ ಮೇಲೆ ಮಕ್ಕಳಿಲ್ಲದ ಇಬ್ಬರು ಮುತ್ತೈದೆಯರಿಗೆ 'ಖಂಡ್'ನ್ನು ಮಡಿಲಲ್ಲಿ ಹಾಕುತ್ತಾರೆ. ಈ ಖಂಡ್ ಪಡೆದ ಮುತ್ತೈದೆಯರಿಗೆ ತಪ್ಪದೇ ಮಕ್ಕಳಾಗುತ್ತವೆ ಎಂಬ ನಂಬಿಕೆ ಇವರದು. ನಂತರ ಅಲ್ಲಿ ಸೇರಿರುವ ಕುಲಸ್ಥರಿಗೆ ಕೊಬ್ಬರಿ ಹಾಗೂ ಬೆಲ್ಲವನ್ನು ಹಂಚಿ ಬಳಗದವರಿಗೆ ಊಟ ಹಾಕುತ್ತಾರೆ. ಮಗುವಿನ ತಂದೆ ತಾಂಡಾದ ಹಿರಿಯರಿಗೆ ಧಾರಾಳವಾಗಿ ಸಾರಾಯಿಯನ್ನು ಕುಡಿಸುತ್ತಾನೆ.

ಗಂಡು ಮಗು ಜನಿಸಿದರೆ "ಒಂದು ಮಳಭೂಮಿ ಬೆಳೆಯಿತು" ಎಂಬ ಮಾತು ಈ ಸಮುದಾಯದಲ್ಲಿ ಪ್ರಚಲಿತವಿದೆ. ಗಂಡು ಮಗುವಿನ ಜನನದಿಂದಲೇ ತಮ್ಮ ವಂಶ ವೃದ್ಧಿಯಾಗುತ್ತದೆ ಎಂಬ ನಂಬಿಕೆ ಈ ಜನಾಂಗದ್ದು. ಎಂದಿನಿಂದ ಗಂಡು ಮಗುವಿನ ಜನನಕ್ಕೆ ಪ್ರಾಶಸ್ತ್ಯ ನೀಡಿದರು ಎಂಬುದು ಖಚಿತವಾಗಿ ತಿಳಿದು ಬರುವುದಿಲ್ಲ. ಹೆಣ್ಣು ಮಗುವಿನ ಜನನವಾದರೆ ವಿಶೇಷವೇನೂ ಇರುವುದಿಲ್ಲ.

**೫.೨.೩. ದಳವಾ ಧೋಕಾಯೇರೊ (ಬಾಣಂತಿಯ ಸೂತಕ ತೆಗೆಯುವುದು)**

ಮಗುವಿನ ಹುಟ್ಟಿನ ನಂತರ ಅನುಸರಿಸುವ ವಿಧಿ-ವಿಧಾನಗಳಲ್ಲಿ ಬಾಣಂತಿಯ ಸೂತಕ ತೆಗೆಯುವ ಶಾಸ್ತ್ರವೂ ಒಂದು. ಸೂತಕವೆಂದರೆ ಮೈಲಿಗೆ, ಮುಟ್ಟಬಾರದು ಎಂದರ್ಥ. ಇವು ಪ್ರಾಚೀನ ಮಾನವನು ಅನಾಗರಿಕ ವ್ಯವಸ್ಥೆಯಿಂದ ನಾಗರಿಕ ವ್ಯವಸ್ಥೆಯನ್ನು ಮೆಟ್ಟಿ ಸಂಸ್ಕೃತಿಕರಣಗೊಂಡ ಸಂದರ್ಭದಲ್ಲಿ ಮೂಡಿಬಂದ ಆಚಾರವಾಗಿರಬಹುದು. ಇವುಗಳಲ್ಲಿ ಬಾಣಂತಿಯ ಸೂತಕವೂ ಮಾನವನ ಜನನಕ್ಕೆ ಸಂಬಂಧಿಸಿದ ಮೊದಲ ಸೂತಕವೆನ್ನಬಹುದು. ತಾಯಿ ಮಗುವಿಗೆ ಜನ್ಮ ನೀಡುವುದು ಸೃಷ್ಟಿಯ ಮಹತ್ತರ ಕೆಲಸವಾದರೂ ತಾಯಿಗೆ ಅದು ಗಂಡಾಂತರಕಾರಿ. ಈ ಶಾಸ್ತ್ರವನ್ನು ಬೇರೆ ಬೇರೆ ಬುಡಕಟ್ಟುಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಆಚರಿಸುತ್ತಾರೆ. ಲಂಬಾಣಿಗರಲ್ಲಿ ಈ ಶಾಸ್ತ್ರವನ್ನು ಮಗು ಜನಿಸಿದ ಐದನೇ ದಿನ ಅಥವಾ ಏಳನೇ ದಿನದಲ್ಲಿ ಆಚರಿಸುತ್ತಾರೆ. ಇದಕ್ಕೆ 'ದಳವಾ ಧೋಕಾಯೇರೋ 'ಜಲವಾದೋಕಾಯೇರೂ' ಎಂದರೆ ನಮಸ್ಕಾರ ಮಾಡುವುದು; ಅಂದರೆ ಜಲದ ಪೂಜೆ ಎಂಬುದಾಗಿ ಅರ್ಥೈಸಬಹುದು.

ಆ ದಿನ ಸಂಜೆ ಮನೆಯ ಮುಂದೆ ಒಂದು ಗುಂಡಿಯನ್ನು ತೆಗೆದು ಅದರ ಸುತ್ತ ಸಗಣಿ ಸಾರಿಸುತ್ತಾರೆ. ಗುಂಡಿಯ ಸುತ್ತ ಗೋಮೂತ್ರ ಮತ್ತು ಹಿಟ್ಟಿನಿಂದ ಮಾಡಿದ ನಾಲ್ಕು ದೀಪಗಳನ್ನು ಹಚ್ಚುತ್ತಾರೆ. ವಿವಿಧ ಬಗೆಯ ತೊಗರಿ, ಭತ್ತ ಮುಂತಾದವುಗಳ ಕಡ್ಡಿಗಳನ್ನು ಗುಂಡಿಗೆ ಹಾಕಿ ಬೆಂಕಿ ಹತ್ತಿಸುತ್ತಾರೆ. ಊರಿನ ಹಿರಿಯ ಸ್ತ್ರೀಯರು

ಬಾಣಂತಿಯ ಉಡಿಯಲ್ಲಿ ಅಕ್ಕಿ ಹಾಗೂ ಮಗುವಿಗಾಗಿ ಸಿದ್ಧಪಡಿಸಿದ ಬಟ್ಟೆಯನ್ನು ಹಾಕಿ ಉಡಿ ತುಂಬಿದ ಮೇಲೆ ಐದು ಜನ ಬಾಲಕರು ಬಾಣಂತಿಯ ತಲೆಯ ಮೇಲೆ ಒಂದು ವಿಶೇಷ ಬಗೆಯ ಸಾಂಪ್ರದಾಯಿಕ ಕಸೂತಿ ಹಾಕಿರುವ ಸಿಂಬೆಯನ್ನು ಇಟ್ಟು ಕಪ್ಪು ಮತ್ತು ಬಿಳಿಯ ಮಸಿಗಳಿಂದ ಸಿಂಗರಿಸಿದ ಜೋಡಿ ಕಳಸವನ್ನು ತಲೆಯ ಮೇಲಿನ ಸಿಂಬೆಯ ಮೇಲೆ ಹೊರಿಸುತ್ತಾರೆ. ಬಾಣಂತಿಯು ಈ ಕಳಸವನ್ನು ಹೊತ್ತು ಉಡಿಯಲ್ಲಿರುವ ಅಕ್ಕಿಯನ್ನು ಸ್ವಲ್ಪಸ್ವಲ್ಪವೇ ಚೆಲ್ಲುತ್ತಾ ಗುಂಡಿಯ ಬಳಿಗೆ ಬರುತ್ತಾಳೆ. ಬಾಲಕರು ಗುಂಡಿಯ ಬಳಿ ಬಾಣಂತಿಯ ತಲೆಯ ಮೇಲಿನ ಕಳಸವನ್ನು ಇಳಿಸುತ್ತಾರೆ. ಬಾಣಂತಿಯ ಗೋಮೂತ್ರವನ್ನು ಬಲಗಾಲಿನ ಹೆಬ್ಬೆರಳಿನಿಂದ ಏಳು ಬಾರಿ ಮುಟ್ಟಿ ಗುಂಡಿಯನ್ನು ನಮಸ್ಕರಿಸುತ್ತಾಳೆ ಮತ್ತು ಬೆಂಕಿ ಇರುವ ಗುಂಡಿಯನ್ನು ಪ್ರದಕ್ಷಿಣೆ ಹಾಕಿ ಕಳಸದ ನೀರಿನಿಂದ ಐದು ಮಕ್ಕಳ ಪಾದವನ್ನು ತೊಳೆದು ಪ್ರಾರ್ಥನೆ ಮಾಡುತ್ತಾಳೆ.

ನಮಸ್ಕಾರ ಮುಗಿದ ಮೇಲೆ ಗೋಮೂತ್ರ ದೀಪವನ್ನು ಬೆಂಕಿಯ ಗುಂಡಿಯಲ್ಲಿ ಹಾಕಿ ನೀರು ಸುರಿದು ಮುಚ್ಚುವರು. ಮಕ್ಕಳು ಬಾಣಂತಿಯ ತಲೆಯ ಮೇಲೆ ಕಳಸ ಹೊರಿಸುತ್ತಾರೆ. ಬಾಣಂತಿಯು ಗುಂಡಿಯನ್ನು ಪ್ರದಕ್ಷಿಣೆ ಮಾಡಿ ಮತ್ತೆ ಹಿಂದಿನಂತೆ ಅಕ್ಕಿಯನ್ನು ಚೆಲ್ಲುತ್ತಾ ಮನೆಯನ್ನು ಪ್ರವೇಶಿಸುತ್ತಾಳೆ. ಸೇರಿದ ಮಕ್ಕಳಿಗೆಲ್ಲಾ ಬೆಲ್ಲ ಹಾಗೂ ತುಪ್ಪ ಬೆರೆಸಿ ತಯಾರಿಸಿದ ಪದಾರ್ಥವಾದ 'ಕುಲ್ಲರ್' ಎನ್ನುವ ಪ್ರಸಾದವನ್ನು ಹಂಚುತ್ತಾರೆ. ಈ ಶಾಸ್ತ್ರವಾದ ಮೇಲೆಯೇ ಬಾಣಂತಿಯ ಬೇರೆಯವರ ಮಕ್ಕಳನ್ನು ಮುಟ್ಟಲು ಹಾಗೂ ಒಲೆ ಮುಟ್ಟಲು ಅರ್ಹಳಾಗುತ್ತಾಳೆ. ಈ ಶಾಸ್ತ್ರವು ಕರ್ನಾಟಕದ ಎಲ್ಲಾ ಭಾಗಗಳಲ್ಲಿ ಆಚರಣೆಯಲ್ಲಿರುವುದು ಕಂಡುಬರುತ್ತದೆ. ಹಾಗೆಯೇ ಈ ಶಾಸ್ತ್ರವನ್ನು ಭಿನ್ನ ಬಗೆಯಲ್ಲಿ ಆಚರಿಸುವ ವಿಧಾನವು ಸಹ ಈ ಸಮುದಾಯದಲ್ಲಿ ಇರುವುದು ತಿಳಿದುಬರುತ್ತದೆ. ಈ ವಿಧಿ ವಿಧಾನದ ಸಂದರ್ಭದಲ್ಲಿ ಬಾಣಂತಿಯ ಜೊತೆಗೆ ಇರುವ ಮಹಿಳೆಯರು ಒಂದು ನಮಸ್ಕಾರ ಗೀತೆಯನ್ನು ಹಾಡುತ್ತಾರೆ.

ವೇ ಮಾತಾ ಹಂಸತಿ ಹಂಸತಿ ಆಯಿಸೆ ರೋತಿ ರೋತಿ ಜಾಯಿಸ್

ಲೇವೂ ಲಾವಣ ಲೇನ್ ಪರ ಜಾಯಿಸೆ

ಸೂವೊ ಸುಂತಳಿ ಲೇನ್ ಆಯಿಸೆ

ವೇ ಮಾತ ಹಾಲನ ಪೂಲನ ರಕಾಡೇಸ

ಸಣೇರ್ ಡೋರ್ ಲೇನ್ ಆಯಿಸ

ಸೂಯಿ ದೊರಲೇನ ಪರಜಾಯಿಸ್

ಸುತಳಿ ಸೂವ್ರೊಲೇನ ಆಯಿಸ್

ಹೇ ತಾಯಿ ನಗುತ ನಗುತ ಬಾ, ಅಳುತ್ತಾ ಅಳುತ್ತಾ ಹೋಗು ಲೇವೂ ಲವಣ, ತೆಗೆದುಕೊಂಡು ಹೋಗು ಎಂದರೆ ಲಂಬಾಣಿ ಸ್ತ್ರೀಯರು ಧರಿಸುವ ಬಟ್ಟೆಯಾಗಿದೆ. ಈ ಬಟ್ಟೆಯನ್ನು ಲಂಬಾಣಿ ಮಹಿಳೆಯರು ಸೂಜಿ ದಾರಗಳನ್ನು ಬಳಸಿ ತಾವೇ ಸಿದ್ಧಪಡಿಸಿಕೊಂಡಿರುತ್ತಾರೆ. ಅಂತಹ ಬಟ್ಟೆ ದಾರಗಳನ್ನು ಅತ್ತಕಡೆ ತೆಗೆದುಕೊಂಡು

ಹೋಗು. ಅಂದರೆ, ಹೆಣ್ಣು ಸಂತಾನವನ್ನು ಕೊಡಬೇಡ ಎಂದು ಅರ್ಥವಾಗುತ್ತದೆ. 'ಸೂವೊ ಸುಂತಳಿ ಲೇನ್ ಆಯಿಸೆ' ಎಂದರೆ ಡಬ್ಬಳ ಹಾಗೂ ಹುರಿಯನ್ನು ಇತ್ತ ಕಡೆ ತೆಗೆದುಕೊಂಡು ಬಾ ಎಂದರ್ಥ. ಅಂದರೆ ಡಬ್ಬಳ ಹುರಿಯನ್ನು ಬಳಸಿ ಕೆಲಸ ಮಾಡುವ ಗಂಡು ಸಂತಾನವನ್ನು ಕೊಡು ಎಂಬುದಾಗಿ ಹುಟ್ಟು ಸಾವಿನ ಆದಿದೇವತೆಯನ್ನು ಕುರಿತು ಪ್ರಾರ್ಥಿಸಿಕೊಳ್ಳುವುದನ್ನು ಈ ಹಾಡಿನಲ್ಲಿ ಕಾಣಬಹುದು. ಇದರಿಂದ ಲಂಬಾಣಿ ಸಮುದಾಯವು ಪುರುಷ ಸಂತಾನವನ್ನು ಹೆಚ್ಚಾಗಿ ಬಯಸುವರು ಎಂಬುದಾಗಿ ಹೇಳಬಹುದು. ಈ ರೀತಿಯ ಗಂಡು ಸಂತಾನದ ಅಭಿಲಾಷೆ ಕೇವಲ ಈ ಸಮುದಾಯದ್ದೇ ಮಾತ್ರವಲ್ಲದೆ, ಕರ್ನಾಟಕದ ಬುಡಕಟ್ಟು ಸಮುದಾಯದಲ್ಲಿ ಕಂಡುಬರುವ ಅಂಶವಾಗಿದೆ.

ಬಾಣಂತಿ ಲಂಬಾಣಿ ಸ್ತ್ರೀಯರಿಗೆ ವಿಶ್ರಾಂತಿ ದೊರಕುವುದು ಬಹಳ ಅಪರೂಪದ ವಿಷಯ. ಆರ್ಥಿಕ ದುಸ್ಥಿತಿಯಲ್ಲಿ ಜೀವನವನ್ನು ಸಾಗಿಸುವ ಇವರು ಅನೇಕ ವೇಳೆ ಬಾಣಂತಿಯಾದರೂ ಬೆಟ್ಟಗುಡ್ಡಗಳಿಂದ ಸೌದೆ ಕಡಿದು ನಗರಗಳಿಗೆ ತೆಗೆದುಕೊಂಡು ಹೋಗಿ ಮಾರಾಟ ಮಾಡಿ ಸಂಸಾರ ಸಾಗಿಸುತ್ತಿರುವ ಪರಿಸ್ಥಿತಿ ಇದೆ. ಕೆಲವೊಮ್ಮೆ ಊರಿನಿಂದ ಊರಿಗೆ ಹೋಗಿ ಜಮೀನುದಾರರ ಮನೆಗಳಲ್ಲಿ ಕೂಲಿ ಮಾಡಿ ಅತೀ ಹೀನಾಯವಾದ ರೀತಿಯಲ್ಲಿ ಜೀವನ ಸಾಗಿಸುತ್ತಿರುವುದನ್ನು ಕಾಣಬಹುದು. ಗರ್ಭಿಣಿಯಾದ ದಿನದಿಂದ ಹೆರಿಗೆಯವರೆಗೆ ನಿರಂತರವಾಗಿ ದುಡಿಯುವುದನ್ನು ನಾವು ಕಾಣಬಹುದಾಗಿದೆ. ಈ ಮಹಿಳೆಯರು ದೈಹಿಕವಾಗಿ ಹೆಚ್ಚು ಸಾಮರ್ಥ್ಯ ಪಡೆಯದಿರುವುದರಿಂದ ಇವರಿಗೆ ಹೆರಿಗೆ ಅಷ್ಟು ಕಷ್ಟದ ಕೆಲಸವಲ್ಲ. ಸೂತಕದ ನಿವಾರಣೆಯ ಸಂದರ್ಭದಲ್ಲಿ ಆಚರಿಸುವ ಶಾಸ್ತ್ರಗಳು, ಪ್ರಸವ ಸಮಯದಲ್ಲಿ ತೋರುವ ಜಾಣ್ಮೆ, ಬಾಣಂತಿ ಮಗುವಿನ ಬಗೆಗೆ ತೋರುವ ಕಾಳಜಿ ಇವುಗಳಲ್ಲಿ ಇವರು ಹಲವಾರು ವರ್ಷಗಳಿಂದ ನಡೆದುಕೊಂಡು ಬಂದ ಸಂಪ್ರದಾಯಗಳ ಚರಿತ್ರೆಯನ್ನು ನಾವು ಗುರುತಿಸಬಹುದು. ಈ ರೀತಿ ಅನೇಕ ವಿಧಿ-ವಿಧಾನಗಳನ್ನು ಅನುಸರಿಸಿ ಸೂತಕವನ್ನು ಕಳೆಯುತ್ತಾರೆ.

**೫.೨.೪. ನಾಮಕರಣ**

ಹುಟ್ಟಿದ ಮಗುವನ್ನು ಗುರುತಿಸಲು ವ್ಯವಹಾರಿಕವಾದ ಒಂದು ಹೆಸರು ಅವಶ್ಯಕ. ಈ ಹೆಸರನ್ನಿಡುವ ಕಾರ್ಯಕ್ರಮವನ್ನು ನಾಮಕರಣ ಶಾಸ್ತ್ರವೆಂದು ಕರೆಯುವರು. ನಾಮಕರಣ ಸಮಾರಂಭವು ಈ ಜನಾಂಗದಲ್ಲಿ ಹೆಚ್ಚು ಪ್ರಾಮುಖ್ಯತೆ ಪಡೆದಿಲ್ಲವಾದರೂ ಒಂದು ಶುಭ ಮೂಹೂರ್ತದಲ್ಲಿ ಮಗುವನ್ನು ತೊಟ್ಟಿಲಿಗೆ ಹಾಕುತ್ತಾರೆ. ಮಗು ಜನಿಸಿದ ಎರಡು ಅಥವಾ ಮೂರು ತಿಂಗಳಾದ ಮೇಲೆ ಇಲ್ಲವೇ ಮನೆಯಲ್ಲಿ ಯಾವುದಾದರೂ ಶುಭಕಾರ್ಯ ನಡೆದಾಗ ನಾಮಕರಣ ಶಾಸ್ತ್ರ ಮಾಡುವರು.

ನಾಮಕರಣಕ್ಕಿಂತ ಪೂರ್ವದಲ್ಲಿ ಮನೆಯ ಯಜಮಾನ ಪುರೋಹಿತರ ಅಥವಾ ಕುಲಗುರುಗಳ ಹತ್ತಿರ ಮಗುವಿನ ಜನ್ಮಕುಂಡಲಿ ತೋರಿಸುತ್ತಾರೆ. ಗುರುಗಳು ಸೂಚಿಸಿದ ಹೆಸರನ್ನು ನಾಮಕರಣ ಮಾಡಲಾಗುತ್ತದೆ. ತಮ್ಮ ಪೂರ್ವಿಕರ ಅಂದರೆ ತಾತ, ಮುತ್ತಾತಂದಿರ ಹೆಸರಿಡುವುದು ಸಂಪ್ರದಾಯ.[೭೦] ಲಂಬಾಣಿಗರು ತಮ್ಮ ಹಿರಿಯರ ಅಥವಾ ಕುಲದೇವರುಗಳ ಹೆಸರನ್ನು ನಾಮಕರಣ ಮಾಡುವುದು ಕಂಡುಬರುತ್ತದೆ. ಗಂಡು ಮಗುವಾದರೆ ಭೀಮನಾಯ್ಕ, ಸೇವಾಲಾಲ್, ರಾಮ್‌ರಾವ್, ಕೃಷ್ಣನಾಯ್ಕ ವೆಂಕಟೇಶನಾಯ್ಕ ಮೊದಲಾದ ಹೆಸರುಗಳನ್ನಿಡುತ್ತಾರೆ.

ಹೆಣ್ಣು ಮಗುವಾದರೆ ಭೀಮಬಾಯಿ, ಲಕ್ಷ್ಮಿಬಾಯಿ, ದುರ್ಗಿಬಾಯಿ, ಕಿಮಣಬಾಯಿ, ಲಕ್ಷ್ಮೀಬಾಯಿ ಮೊದಲಾದ ಹೆಸರುಗಳನ್ನಿಡುತ್ತಾರೆ.

ಆಧುನಿಕ ಕಾಲದಲ್ಲಿ ನಾಮಕರಣದ ವಿಧಿ ವಿಧಾನಗಳು ಬದಲಾಗಿವೆ. ಕನ್ನಡಿಗರ ಪ್ರಭಾವಕ್ಕೆ ಒಳಗಾಗಿ ಅವರ ನಾಮಕರಣದ ಮಾದರಿಯನ್ನು ಆರ್ಥಿಕ ಸಬಲವುಳ್ಳವರು ಮಾಡುತ್ತಿದ್ದಾರೆ. ಹೆಸರುಗಳು ಆಧುನಿಕ ರೂಪ ಪಡೆದಿವೆ. ದೇವರ ಹೆಸರುಗಳ ಬದಲಿಗೆ ರಾಜೇಂದ್ರ, ರಾಘುವೇಂದ್ರ, ರಮೇಶ, ಮಂಜುನಾಥ, ಬಸವರಾಜ, ಶ್ರೀನಿವಾಸ, ಪ್ರಕಾಶ್, ಶಂಕರ, ಡೇನಿಲ್, ಧ್ಯಾನ್ ಮೊದಲಾದ ಹೆಸರುಗಳನ್ನಿಡಲಾಗುತ್ತಿದೆ. ನಗರಿಕರಣ ಹಾಗೂ ಪಾಶ್ಚಾತ್ಯಿಕರಣದಿಂದಾಗಿ ನಾಮಕರಣ ಶಾಸ್ತ್ರ ತನ್ನ ಹಳೆಯ ಸಂಪ್ರದಾಯವನ್ನು ಕಳೆದುಕೊಂಡಿದೆ ಎಂದು ಹೇಳಬಹುದಾಗಿದೆ.

**೫.೨.೫ ದತ್ತು ಸ್ವೀಕಾರ**

ಮನುಷ್ಯ ಪ್ರಾಣಿ ಜೀವನದಿಂದ ನಾಗರಿಕ ಜೀವನದೆಡೆಗೆ ನಡೆದು ಬಂದಂತೆಲ್ಲಾ ತನ್ನ ಸಾಮಾಜಿಕ ಜೀವನವನ್ನು ವ್ಯವಸ್ಥೆಗೊಳಿಸಲು ಹಲವು ನೀತಿ ನಿಬಂಧನೆಗಳನ್ನು ರೂಪಿಸಿಕೊಂಡು ಬಂದಿದ್ದಾನೆ. ಕೌಟುಂಬಿಕ ಜೀವನವನ್ನು ವ್ಯವಸ್ಥಿತವಾಗಿ ನಡೆಸಿಕೊಂಡು ಹೋಗಲು ಧಾರ್ಮಿಕ ವಿಧಿ ಆಚರಣೆಗಳನ್ನು ಪೂರ್ಣಗೊಳಿಸಲು ತನ್ನ ವಂಶವೃಕ್ಷ ಬೆಳೆಸಿಕೊಂಡು ಹೋಗಲು ವಂಶೋದ್ಧಾರಕನಿರಬೇಕೆಂಬ ಹಲವು ಸಾಮಾಜಿಕ ವ್ಯವಸ್ಥೆಗಳನ್ನು ರೂಪಿಸಿಕೊಂಡು ಬಂದಿದ್ದಾನೆ. ಪ್ರಕೃತಿದತ್ತವಾದ ಸಂತಾನೋತ್ಪತ್ತಿ ರೂಪಿಸಿಕೊಂಡು ಬಂದಿದ್ದಾನೆ. ಪ್ರಕೃತಿದತ್ತವಾದ ಸಂತಾನೋತ್ಪತ್ತಿ ಇಲ್ಲದಿದ್ದಾಗ ಬೇರೊಂದು ಕುಟುಂಬದ ಮಗುವನ್ನು ದತ್ತು ಪಡೆದು ಆ ಮೂಲಕ ತನ್ನ ವಂಶವನ್ನು ವೃದ್ಧಿ ಪಡಿಸಿಕೊಳ್ಳುವುದನ್ನು ದತ್ತು ಸ್ವೀಕಾರ ಎನ್ನಬಹುದು.

ಲಂಬಾಣಿಗರ ಸಮುದಾಯದಲ್ಲಿ ದತ್ತು ಸ್ವೀಕಾರವು ಮೂಲದಿಂದಲೂ ರೂಢಿಯಲ್ಲಿತ್ತೆಂದು ತಿಳಿದುಬರುತ್ತದೆ. ಈ ಸಮುದಾಯದ ಮೂಲಪುರುಷನಾದ ಮೋಲನು ನಾಲ್ಕು ಮಕ್ಕಳನ್ನು ದತ್ತು ಪಡೆದು ಸಮುದಾಯವನ್ನು ಬೆಳೆಸಿದನೆಂಬುದಾಗಿ ಐತಿಹ್ಯವೊಂದು ಈ ಜನಾಂಗದಲ್ಲಿ ಪ್ರಚಲಿತದಲ್ಲಿದೆ. ದತ್ತು ಸ್ವೀಕಾರವನ್ನು ಇವರು ತಮ್ಮ ಭಾಷೆಯಲ್ಲಿ 'ಖೋಳ್ ಘಾಲೇರೋ' ಮಡಿಲಿಗೆ ಹಾಕುವುದು ಎಂದು ಕರೆಯುತ್ತಾರೆ. ದತ್ತು ಸ್ವೀಕಾರದ ಸಂದರ್ಭದಲ್ಲಿ ಹೆತ್ತ ತಂದೆ-ತಾಯಿ ತಮ್ಮ ಮಗುವನ್ನು ಶಾಸ್ತ್ರೋಕ್ತವಾಗಿ ಸಾಕು ತಂದೆ-ತಾಯಿಯ ಮಡಿಲಿಗೆ ಹಾಕುವುದರಿಂದ ಈ ಕ್ರಿಯೆಗೆ ಖೋಳ್ ಘಾಲೇರೋ ಎಂದು ಕರೆದಿರುವುದು ಅರ್ಥಪೂರ್ಣವಾಗಿದೆ. ದತ್ತು ಸ್ವೀಕಾರದ ಸಂದರ್ಭದಲ್ಲಿ ಮಗುವನ್ನು ಹೆತ್ತ ತಂದೆ-ತಾಯಿಯರು ದತ್ತು ಪಡೆದ ತಂದೆ-ತಾಯಿಗಳಿಗೆ ಎಲ್ಲಾ ಜವಾಬ್ದಾರಿಗಳೊಂದಿಗೆ ವರ್ಗಾಯಿಸುತ್ತಾರೆ. ಆ ಮಗುವು ಹುಟ್ಟಿದ ಮನೆಯ ಎಲ್ಲಾ ಹಕ್ಕುಗಳನ್ನು ಕಳೆದುಕೊಂಡು ಸ್ವೀಕಾರ ಪಡೆದ ತಂದೆ ತಾಯಿಗಳ ರಕ್ತ ಸಂಬಂಧವನ್ನು ಅವರ ಭಾವನಾತ್ಮಕತೆಯನ್ನು ಕಾಯ್ದುಕೊಳ್ಳುವುದು. ಆ ಮೂಲಕ ಆ ವಂಶದ ಎಲ್ಲಾ ಚರಾಚರ ಆಸ್ತಿಗಳಿಗೆ ಹಕ್ಕುದಾರನಾಗುವುದೇ ಆಗಿದೆ.

ಲಂಬಾಣಿಗರು ಹಲವು ಕಾರಣಗಳಿಗಾಗಿ ಗಂಡು ಸಂತಾನವನ್ನು ಹಂಬಲಿಸುತ್ತಾರೆ. ಧಾರ್ಮಿಕ ಆಚರಣೆಗಳ ಪೂರೈಕೆಗಾಗಿ ಮತ್ತು ಹಲವು ಮೂಢನಂಬಿಕೆಗಳಿಂದಾಗಿ ಗಂಡು ಸಂತಾನವನ್ನು ಬಯಸುತ್ತಾರೆ. ಗಂಡು

ಸಂತಾನವಿಲ್ಲದಿದ್ದರೆ ಸತ್ತವೇಲೆ (ಹೆಣದ) ತಲೆಗೆ ಕೋಲಿನಿಂದ ಏಳು ಬಾರಿ ಮುಟ್ಟಿಸುವ ಶಾಸ್ತ್ರವಿಲ್ಲದಂತಾಗುತ್ತದೆ.[೬೨] ಈ ಶಾಸ್ತ್ರ ಮಾಡಿಸದಿದ್ದರೆ ಮೃತರಿಗೆ ಮೋಕ್ಷ ಸಿಗುವುದಿಲ್ಲವೆಂಬುದು ಅವರ ನಂಬಿಕೆಯಾಗಿದೆ. ಅಲ್ಲದೆ ತಂದೆಯ ಚಿತೆಗೆ ಹಿರಿಯ ಮಗ ಬೆಂಕಿ ಇಡಬೇಕೆಂಬ ನಂಬಿಕೆಯೂ ಇದೆ.

ಲಂಬಾಣಿ ಸಮುದಾಯದಲ್ಲಿ ಗಂಡು ಸಂತಾನವಿಲ್ಲದ ಮನೆಯುವರು ಗಂಡು ಮಗುವನ್ನು ದತ್ತು ತೆಗೆದುಕೊಳ್ಳಲು ಅವಕಾಶವಿದೆ. ಹೀಗೆ ಬೇರೆ ಜಾತಿ ಸಮುದಾಯದ ಮಗುವನ್ನು ದತ್ತು ತೆಗೆದುಕೊಂಡರೆ ಅಂತಹ ಮಗುವನ್ನು 'ಜಾಂಗಡ್' ಎಂದು ಕರೆಯುತ್ತಾರೆ. ಇಂತಹ ಮಗುವನ್ನು ದತ್ತು ತೆಗೆದುಕೊಳ್ಳುವ ಮೊದಲು ಶಾಸ್ತ್ರೋಕ್ತವಾಗಿ ತಮ್ಮ ಸಮುದಾಯಕ್ಕೆ ಸೇರಿಸಿಕೊಂಡು ನಂತರ ದತ್ತು ತೆಗೆದುಕೊಳ್ಳುತ್ತಾರೆ. ತಮ್ಮದೇ ಸಮುದಾಯದ ಮಗುವಾಗಿದ್ದರೆ ಇಂತಹ ಯಾವುದೇ ಶಾಸ್ತ್ರಗಳು ಇರುವುದಿಲ್ಲ.

ಮಕ್ಕಳಿಲ್ಲದ ದಂಪತಿಗಳು ಮಗುವನ್ನು ದತ್ತು ತೆಗೆದುಕೊಳ್ಳುವಾಗ ತಾಂಡಾದ ನಾಯಕನನ್ನು ಸಂದರ್ಶಿಸಿ ಸೂಕ್ತ ಸಲಹೆಯನ್ನು ಪಡೆಯುತ್ತಾರೆ. ಕೊಡುವ ಹಾಗೂ ಪಡೆವ ದಂಪತಿಗಳು ಪರಸ್ಪರ ಒಪ್ಪಿಕೊಂಡ ಮೇಲೆ ನಾಯಕನ ಅಪ್ಪಣೆಯ ಮೇರೆಗೆ ಒಂದು ಶುಭದಿನ ದತ್ತು ತೆಗೆದುಕೊಳ್ಳುವ ಶಾಸ್ತ್ರಕ್ಕಾಗಿ ತಾಂಡಾದ ಹಿರಿಯರನ್ನು ದತ್ತು ಪಡೆಯುವ ದಂಪತಿಗಳು ತಮ್ಮ ಮನೆಗೆ ಆಹ್ವಾನಿಸುತ್ತಾರೆ. ಆ ದಿನ ಅವರು ಮನೆಯನ್ನು ಶುಚಿಗೊಳಿಸಿ ಹೊಸ ಬಟ್ಟೆಯನ್ನು ಧರಿಸಿಕೊಂಡಿರುತ್ತಾರೆ. ಇಲ್ಲಿ ದತ್ತು ಪಡೆಯುವ ತಂದೆಯ ಕಡೆಯವರಿಗೆ ಹೆಚ್ಚಿನ ಪ್ರಾಶಸ್ತ್ಯವಿರುತ್ತದೆ. ಸಂಜೆ ತಾಂಡಾದ ನಾಯಕ ಮತ್ತು ಹಿರಿಯರು ದತ್ತು ಪಡೆದ ಮನೆಗೆ ಬರುತ್ತಾರೆ. ನಾಯಕನು ಕೆಂಡದಲ್ಲಿ ವಂಶದ ಹಿರಿಯರಿಗೆ ಧೂಪಹಾಕಿ ಪ್ರಾರ್ಥನೆ ಮಾಡುತ್ತಾನೆ. ಹಿರಿಯ ಹೆಂಗಸರು ಮನೆಯ ಮಧ್ಯಭಾಗದಲ್ಲಿ ಸಾಲಾಗಿ ನಿಂತು ತಮ್ಮ ಪವಿತ್ರ ಸ್ತುತಿಗೀತೆಗಳನ್ನು ಹಾಡುತ್ತಾರೆ. ಅಂದು ಗಂಡು ಮಗುವಿನ ಜನನದ ವಾತಾವರಣ ಮೂಡಿರುತ್ತದೆ. ಅದೇ ಸಮಯದಲ್ಲಿ ಮನೆಯ ಮಧ್ಯಭಾಗದಲ್ಲಿ ಕುಳಿತಿರುವ ದತ್ತು ಪಡೆಯುವ ತಂದೆ-ತಾಯಿಗಳ ಮಡಿಲಿಗೆ ಹೆತ್ತ ತಂದೆ-ತಾಯಿಗಳು ಮಗುವನ್ನು ಹಾಕುತ್ತಾರೆ. ಮಗುವನ್ನು ಮಡಿಲಿನಿಂದ ಮಡಿಲಿಗೆ ಹಾಕುವುದು ಗರ್ಭದಿಂದ ಗರ್ಭಕ್ಕೆ ವರ್ಗಾಯಿಸಿದಂತಾಗಿ ಮಗು ಪುನರ್ಜನ್ಮ ಪಡೆದ ಭಾವನೆಯನ್ನು ಮೂಡಿಸುತ್ತದೆ. ತಮ್ಮ ಮಡಿಲಿಗೆ ಬಂದ ಮಗುವಿಗೆ ಹಳೆಯ ಬಟ್ಟೆ ಉಡುದಾರವನ್ನು ತೆಗೆದು ಹೊಸ ಬಟ್ಟೆ ಉಡುದಾರವನ್ನು ತೊಡಿಸುತ್ತಾರೆ. ದತ್ತು ಪಡೆದ ತಂದೆ ತನ್ನ ತಲೆಯ ಮೇಲಿನ ಪೇಟವನ್ನು ತೆಗೆದು ತನ್ನ ದತ್ತು ಮಗುವಿನ ತಲೆಗೆ ಕಟ್ಟುತ್ತಾನೆ. ದತ್ತು ಪಡೆದ ತಂದೆ ಮಗುವಿಗೆ ಕಟ್ಟುವ ಪೇಟ ಮತ್ತು ಉಡುದಾರ ಆ ವಂಶದ ಪ್ರತಿನಿಧಿತ್ವವನ್ನು ಸಾಬೀತುಪಡಿಸುತ್ತದೆ. ಆ ಕುಟುಂಬದ ಎಲ್ಲಾ ಜವಾಬ್ದಾರಿ ಮತ್ತು ಹಕ್ಕುಗಳನ್ನು ಆ ಮಗುವಿಗೆ ಹಸ್ತಾಂತರಿಸುವುದನ್ನು ಸೂಚಿಸುತ್ತದೆ. ಅಂದಿನಿಂದ ಮಗುವು ದತ್ತು ಪಡೆದ ಕುಟುಂಬದ ರಕ್ತ ಸಂಬಂಧಿಗಳೊಡನೆ ಭಾವನಾತ್ಮಕ ಸಂಬಂಧವನ್ನು ಪಡೆಯುತ್ತಾನೆ. ತಾಂಡಾದ ಹಿರಿಯರಿಗೆಲ್ಲಾ ಮದ್ಯ ಕುಡಿಯಲು ನೀಡಿ ಊಟೋಪಚಾರಗಳು ನಡೆಯುತ್ತವೆ.[೬೩]

ಲಂಬಾಣಿಗರಲ್ಲಿ ದತ್ತು ಸ್ವೀಕಾರದ ಸಂದರ್ಭದಲ್ಲಿ ನಡೆಯುವ ವಿಧಿ-ವಿಧಾನಗಳು ಧಾರ್ಮಿಕ ಅಂಶಗಳಿಂದ ಕೂಡಿದ್ದು ಸಮಾಜದ ಒಪ್ಪಿಗೆಯ ಮೇರೆಗೆ ನಡೆಯುತ್ತವೆ. ಅವುಗಳ ಉಲ್ಲಂಘನೆ ಮಹಾಪಾಪವೆಂಬುದಾಗಿ

ನಂಬುತ್ತಾರೆ. ಎರಡೂ ಕಡೆಯ ದಂಪತಿಗಳನ್ನು ಶಾಸ್ತ್ರಗಳು ಮಾನಸಿಕ ಬಂಧನಕ್ಕೆ ಒಳಪಡಿಸುತ್ತದೆ. ಈ ನಂಬಿಕೆ ಶಾಸ್ತ್ರಗಳು ಆಧುನಿಕ ನ್ಯಾಯಾಲಯ, ಕಛೇರಿಗಳಿಗಿಂತಲೂ ಪ್ರಬಲವಾಗಿರುತ್ತವೆ ಎಂಬುದಾಗಿ ಹೇಳಬಹುದು.

**೫.೨.೬. ಜವುಳ ಕಾರ್ಯ**

ಮಗುವಿನ ಹುಟ್ಟು ಕೂದಲನ್ನು ತೆಗೆಸುವ ಕಾರ್ಯಕ್ರಮವೇ ಜಾಲ ಅಥವಾ ಜವುಳ ಕಾರ್ಯವಾಗಿದೆ. ಲಂಬಾಣಿಗರಲ್ಲಿ ಗಂಡು ಮತ್ತು ಹೆಣ್ಣು ಮಕ್ಕಳಿಬ್ಬರಿಗೂ ಜವುಳ ಕಾರ್ಯ ಮಾಡುವ ಪದ್ಧತಿ ರೂಢಿಯಲ್ಲಿದೆ. ಲಂಬಾಣಿಗರಲ್ಲಿ ಒಂದು ಸಮಾರಂಭದ ರೂಪದಲ್ಲಿ ಹಾಗೂ ಶಾಸ್ತ್ರೋಕ್ತವಾಗಿ ಆಚರಿಸುವುದನ್ನು ನಾವು ನೋಡಬಹುದಾಗಿದೆ. ಮಗುವಿನ ತಲೆ ಕೂದಲನ್ನು ಕತ್ತರಿಸುವಂತಿಲ್ಲವೆಂಬ ನಿಷೇಧವಿದೆ. ಈ ತಲೆ ಕೂದಲನ್ನು ಶಾಸ್ತ್ರೋಕ್ತವಾಗಿ ತೆಗೆಯಬೇಕು. ಇಲ್ಲದೇ ಹೋದರೆ ಮಕ್ಕಳು ಅತಿಯಾದ ಮುಂಗೋಪಿಗಳಾಗುತ್ತಾರೆ. ದೈಹಿಕವಾಗಿ ದೃಢಕಾಯರಾಗುವುದಿಲ್ಲ. ಮಕ್ಕಳಿಗೂ ಮನೆತನಕ್ಕೂ ಅನಿಷ್ಟ ಪ್ರಾಪ್ತವಾಗುತ್ತದೆ ಎಂಬ ನಂಬಿಕೆಗಳು ಈ ಸಮುದಾಯದಲ್ಲಿದೆ.

ಜವುಳ ಕಾರ್ಯ ಎಂಬುದಕ್ಕೆ ಲಂಬಾಣಿ ಭಾಷೆಯಲ್ಲಿ 'ಬಾಳೆರ್ ಲಟ್ ಕಡಾಯೇರೋ' ಅಥವಾ 'ಜವಳಾಕಡಾಯೇರೋ' ಎಂಬುದಾಗಿ ಕರೆಯುತ್ತಾರೆ. ಈ ವಿಧಿ-ವಿಧಾನ ಮಾಡುವಾಗ ಮಗುವಿಗೆ ಇಂತಿಷ್ಟೇ ವರ್ಷವಿರಬೇಕೆಂಬ ನಿಯಮವಿಲ್ಲ. ಆದರೂ ಸಾಮಾನ್ಯವಾಗಿ ಎರಡು, ಮೂರು ಅಥವಾ ಐದನೇ ವಯಸ್ಸಿನಲ್ಲಿ ಆಚರಿಸುತ್ತಾರೆ. ಈ ಕಾರ್ಯವು ಹೆಚ್ಚು ವೆಚ್ಚದಾಯಕವಾಗಿದ್ದು, ಬೇರೆ ಬೇರೆ ಗೋತ್ರದವರು ಬೇರೆ ಬೇರೆ ರೀತಿಯಲ್ಲಿ ಆಚರಿಸುತ್ತಾರೆ. ಕೆಲವು ಗೋತ್ರದವರು ಜವಳ ಕಾರ್ಯಕ್ರಮದಲ್ಲಿ ಕುರಿ ಬಲಿಯನ್ನು ಕೊಡುತ್ತಾರೆ. ಕೆಲವು ಗೋತ್ರದವರು ಸಿಹಿ ಅಡುಗೆಯ ನೈವೇದ್ಯ ಮಾಡಿ ಕುಲದೇವರುಗಳಿಗೆ ಜಾವಳ ಒಪ್ಪಿಸುತ್ತಾರೆ.[೬೪]

ಭೀಮಸತ್ತಿ ಕುಲದೇವತೆಯನ್ನು ಆರಾಧಿಸುವ ಗೋತ್ರದವರು ಕುರಿ ಬಲಿಕೊಡುವುದರೊಂದಿಗೆ ಜವಳ ಕೊಡುವ ಸಂಪ್ರದಾಯ ರೂಢಿಸಿಕೊಂಡಿದ್ದಾರೆ. ಮುಡಿ ತೆಗೆಸುವ ದಿನ ತಮ್ಮ ಕುಲದೇವತೆಯ ವಿಗ್ರಹವಿರುವ ಮನೆಯ ಮತ್ತು ತಾವು ವಾಸಿಸುವ ಮನೆಯನ್ನು ಸಾರಿಸಿ ಸ್ವಚ್ಛಮಾಡುತ್ತಾರೆ. ದೇವತೆ ಇರುವ ಮನೆಯ ಮಧ್ಯದಲ್ಲಿ ಒಂದು ಮಂಟಪವನ್ನು ನಿರ್ಮಿಸಿ ಇದಕ್ಕೆ ಲಂಬಾಣಿ ಸ್ತ್ರೀಯರು ಹೊದ್ದುಕೊಳ್ಳುವ ದೊಡ್ಡ ದಾವಣಿಯನ್ನು ಮಂಟಪದ ಮೇಲ್ಭಾಗಕ್ಕೆ ಹೊದಿಸುತ್ತಾರೆ. ಮಂಟಪದ ಮುಂದೆ ರಂಗೋಲಿಯನ್ನು ಹಾಕಿ ಅದರ ಮೇಲೆ ಮಡಿಬಿಟ್ಟ ಗೋಣಿ ಚೀಲವನ್ನು ಇಡುತ್ತಾರೆ. ಈ ಮಂಟಪದಲ್ಲಿ ದೇವತೆಯನ್ನು ಸ್ಥಾಪಿಸುತ್ತಾರೆ.[೬೫]

ಲಂಬಾಣಿಗರಲ್ಲಿ ಒಂದು ಕುಟುಂಬದ ಮಕ್ಕಳೆಲ್ಲರ ಜವಳ ಕಾರ್ಯವನ್ನು ಒಟ್ಟಿಗೆ ತೆಗೆಸುವುದು ಪದ್ಧತಿ. ಮುಡಿ ತೆಗೆಸಬೇಕಾಗಿರುವ ಮಕ್ಕಳಿಗೆ ಹೊಸ ಬಟ್ಟೆಯನ್ನು ತೊಡಿಸಿ ಈ ಮಕ್ಕಳ ಕೈಯಲ್ಲಿ ಕೆಂಪು ನಿಶಾನೆಗಳನ್ನು ಹಿಡಿದುಕೊಂಡು ದೇವತೆಯ ಪವಾಡಗೀತೆಗಳನ್ನು ಹಾಡುತ್ತಾ ಗುಂಪುಗೂಡಿ ದೇವರ ವಿಗ್ರಹವಿರುವ ಮನೆಗೆ ಬರುತ್ತಾರೆ. ನಂತರ ದೇವರಿಗೆ ಧೂಪಹಾಕಿ ಜವಳ ತೆಗೆಸುವ ಮಕ್ಕಳಿಗೆ ಎರಡರಂತೆ ಬಲಿ ಕೊಡುತ್ತಾರೆ. ಮಕ್ಕಳನ್ನು ದೇವರ ಮುಂದೆ ಸಾಲಾಗಿ ಕುಳ್ಳಿರಿಸಿ ಲಂಬಾಣಿ ವೃತ್ತಿ ಕ್ಷೌರಿಕನಿಂದ ತಲೆ ಬೋಳಿಸುತ್ತಾರೆ. ಈ ಸಮುದಾಯದಲ್ಲಿ ವೃತ್ತಿ ಕ್ಷೌರಿಕರ ಸಂಖ್ಯೆ ತೀರಾ ಕಡಿಮೆ ಇರುವುದರಿಂದ ಅವರಿಲ್ಲದ ತಾಂಡಾಗಳಲ್ಲಿ ಮಕ್ಕಳ ಸೋದರಮಾವನಿಂದ

ತಲೆ ಬೋಳಿಸುತ್ತಾರೆ.[೬೬] ಸಂಜೆ ಮಾಂಸಾಹಾರದ ನೈವೇದ್ಯ ಮಾಡಿ ಮೂರು ಜೋಳದ ರೊಟ್ಟಿಗಳಲ್ಲಿ ಹಾಕಿ ದೇವರಿಗೆ ಎಡೆ ಮಾಡುತ್ತಾರೆ. ಹಿರಿಯರೆಲ್ಲರೂ ದೇವರ ಮುಂದೆ ನಿಂತು ಪ್ರಾರ್ಥನೆ ಮಾಡಿದ ಮೇಲೆ ಎಲ್ಲರಿಗೂ ಮಾಂಸದ ತಿನಿಸನ್ನು ಪ್ರಸಾದವಾಗಿ ಹಂಚುತ್ತಾರೆ. ಗೋತ್ರದವರೆಲ್ಲಾ ಸೇರಿ ಕಂಚಿನ ಗಂಗಾಳ, ತಾಳ, ನಗಾರಿ, ಬಾರಿಸುತ್ತಾ ದೇವರ ಲಾವಣಿಗಳನ್ನು ಹಾಡುತ್ತಾ ರಾತ್ರಿ ಇಡೀ ಜಾಗರಣೆ ಮಾಡುತ್ತಾರೆ. ಬೆಳಗ್ಗೆ ಮತ್ತೆ ಹಿರಿಯರೆಲ್ಲರೂ ಸೇರಿ ಮಂಗಳಾರತಿ, ಪಾರ್ಥನೆ ಮಾಡಿ ಪ್ರಸಾದವನ್ನು ಹಂಚುತ್ತಾರೆ.

'ತುಳಜ ಮಾತ' ಕುಲದೇವರ ಆರಾಧಕರು ಸಿಹಿ ಅಡುಗೆಯ ನೈವೇದ್ಯ ಮಾಡಿ ಜವುಳ ತೆಗೆಯುವ ವಿಧಿ-ವಿಧಾನ ಆಚರಿಸುತ್ತಾರೆ. ಇವರು ದಸರಾ ಅಥವಾ ಯುಗಾದಿ ಹಬ್ಬಗಳಲ್ಲಿ ಮಾಡಿ ಪೂರೈಸುತ್ತಾರೆ. ಮುಡಿ ತೆಗೆಯುವ ಮನೆಯ ಮಧ್ಯದಲ್ಲಿ ಮಂಟಪ ನಿರ್ಮಿಸಿ ಅದರಲ್ಲಿ ದೇವರ ಪ್ರತಿಷ್ಠಾಪಿಸುತ್ತಾರೆ. ಅಂದು ಮುಡಿಯ ವಿಶೇಷ ಅಡುಗೆಯಾದ 'ಹುಗ್ಗಿ' ಮಾಡಿ ದೇವರ ಮುಂದೆ ಧೂಪವನ್ನು ಹಾಕಿ ಮಕ್ಕಳನ್ನು ದೇವರ ಮುಂದೆ ಸಾಲಾಗಿ ಕುಳ್ಳಿರಿಸಿ ವೃತ್ತಿ ಕ್ಷೌರಿಕ ಅಥವಾ ಸೋದರಮಾವನಿಂದ ಅವರ ತಲೆಯನ್ನು ಬೋಳಿಸುತ್ತಾರೆ. ಹುಗ್ಗಿಯ ಪ್ರಸಾದವನ್ನು ನೆರೆದವರೆಲ್ಲರಿಗೂ ಹಂಚುತ್ತಾರೆ. ಇಬ್ಬರು ಮುತ್ತೈದೆಯರಿಗೆ 'ಖಂಡ್' ಹಾಕುತ್ತಾರೆ. ಈ ಸಂದರ್ಭದಲ್ಲಿ ಸೋದರಮಾವನಿಗೆ ತಮ್ಮ ಶಕ್ತ್ಯಾನುಸಾರ ಒಂದರಿಂದ ಐದುನೂರು ರೂಪಾಯಿಗಳವರೆಗೆ ಅಥವಾ ಒಂದು ಜೊತೆ ಬಟ್ಟೆಯನ್ನು ಕಾಣಿಕೆಯಾಗಿ ಕೊಡುತ್ತಾರೆ. ಹಾಗೆಯೇ ಎಲೆ, ಅಡಿಕೆ ಇನ್ನೂ ಮುಂತಾದವುಗಳನ್ನು ಕೊಡುತ್ತಾರೆ.[೬೭] ತೆಗೆದ ಕೂದಲನ್ನು ನದಿ, ಜಲಾಶಯದಲ್ಲಿ ಪೂಜೆ ಮಾಡಿ ತೇಲಿ ಬಿಡುತ್ತಾರೆ. ಕಾರಣ ದುಷ್ಟಶಕ್ತಿಗಳಿಂದ ಮಗುವಿಗೆ ಸೋಂಕು ಬಾರದೆಂದು, ಪವಿತ್ರವಾದ ಗಂಗಮ್ಮ ತಾಯಿ ನಮ್ಮ ಮಗುವನ್ನು ಕಾಪಾಡುತ್ತಾಳೆ ಎಂದು ನಂಬುತ್ತಾರೆ.

**೫.೨.೭ ಋತುಮತಿ ಅಥವಾ ಬಿರೆಂಬಳಿಗಿ**

ಬುಡಕಟ್ಟುಗಳ ಸಮುದಾಯದಲ್ಲಿ ಬದುಕಿನ ಎಲ್ಲಾ ಕಾಲಘಟ್ಟಗಳಲ್ಲಿ ಒಂದೊಂದು ಆಚರಣೆಯನ್ನು ರೂಢಿಸಿಕೊಂಡಿರುವುದು ಕಂಡುಬರುತ್ತದೆ. ಮಗುವಿಗೆ ಮೊದಲು ಹಲ್ಲು ಹುಟ್ಟಿದಾಗ, ಮಗು ಮತ್ತು ಹೊಸಲು ದಾಟಿದಾಗ, ಮಗುವಿನ ಮೊದಲ ತಲೆಕ್ಷೌರ ಮಾಡಿಸಿದಾಗ ಮತ್ತು ಹೆಣ್ಣು ಮಗಳು ಋತುಮತಿಯಾದಾಗ ಆಚರಣೆಗಳನ್ನು ಕಡ್ಡಾಯವಾಗಿ ಆಚರಿಸುವುದನ್ನು ಕಾಣಬಹುದು.[೬೮]

ಲಂಬಾಣಿಗರಲ್ಲಿ ಹೆಣ್ಣು ಋತುಮತಿಯಾದರೆ ಅದನ್ನು 'ಬಿರೆಂಬಳಿಗಿ' ಎಂಬುದಾಗಿ ಕರೆಯುತ್ತಾರೆ. 'ಸ್ತ್ರೀಯರಲ್ಲಿ ಬೆರೆತು ಹೋದಳು' ಎಂಬುದಾಗಿ ಲಂಬಾಣಿ ಭಾಷೆಯಲ್ಲಿ ಕರೆದುಕೊಳ್ಳುತ್ತಾರೆ. ಇವರ ಮೂಲದಲ್ಲಿ ಯಾವುದೇ ವಿಶೇಷ ಆಚರಣೆಗಳನ್ನು ಆಚರಿಸುವಂತಿಲ್ಲ. ಆಕೆಯನ್ನು ಹಿರಿಯ ಸ್ತ್ರೀಯೊಬ್ಬಳ ವಿಚಕ್ಷಣೆಯಲ್ಲಿ ಏಳು ದಿನಗಳ ಕಾಲ ಹೊರಜಗಲಿಯ ಮೇಲೆ ಇರಲು ಅವಕಾಶ ಮಾಡಿಕೊಡುತ್ತಾರೆ. ಋತುಮತಿಯಾದವಳಿಗೆ ಸಂಬಂಧಿಕರು, ಬಂಧು ಬಳಗದವರು ಒಣ ಕೊಬ್ಬರಿ, ಉತ್ತುತ್ತಿ, ಗೋಡಂಬಿ, ದ್ರಾಕ್ಷಿ, ಇತ್ಯಾದಿ ಪುಷ್ಟಿದಾಯಕ ಆಹಾರ ನೀಡುವರು. ಒಂಬತ್ತು ದಿನಗಳ ನಂತರ ಅವಳ ತಲೆಗೆ ಎಣ್ಣೆಹಾಕಿ, ಅರಿಶಿಣ ಹಚ್ಚಿ, ಬಿಸಿನೀರಿನಿಂದ ಸ್ನಾನ ಮಾಡಿಸುತ್ತಾರೆ. ನಂತರ ಮನೆಯೊಳಗೆ ಪ್ರವೇಶ ಮಾಡಿಕೊಡುತ್ತಾರೆ.[೬೯]

### ೫.೨.೮ ವಿವಾಹ

ಪ್ರಾಚೀನ ಕಾಲದಿಂದಲೂ ವಿವಾಹ ಒಂದು ಪವಿತ್ರ ಬಂಧನ ಹಾಗೂ ಸಂಸ್ಕಾರವೆಂಬ ನಂಬಿಕೆ. ಪ್ರತಿಯೊಂದು ಆಚಾರ ನೇಮಗಳು ಯಜ್ಞ-ಯಾಗಗಳು ಗೃಹಸ್ಥನನ್ನೇ ಅವಲಂಬಿಸಿರುವುದರಿಂದ ವಿವಾಹವು ಎಲ್ಲಾ ಸಂಸ್ಕಾರಗಳಿಗೂ ಮೂಲ ಎಂದು ಗೃಹಸೂತ್ರವು ವಿವರಿಸುತ್ತದೆ. ಹೀಗಾಗಿ ಮಾನವನ ಎಲ್ಲ ಸಂಸ್ಕಾರಗಳಿಗೂ ವಿವಾಹ ಮೂಲವಾಗಿರುವುದು ಸ್ಪಷ್ಟ.[೬೦] ಪ್ರತಿಯೊಂದು ಧರ್ಮಗಳಲ್ಲೂ ವ್ಯಭಿಚಾರವನ್ನು ಪಾಪವೆಂದು ಪರಿಗಣಿಸಲಾಗಿತ್ತು ಇದರಿಂದಾಗಿ ಶುದ್ಧವೂ ಧಾರ್ಮಿಕವೂ ಆದ ದಾಂಪತ್ಯ ಜೀವನವನ್ನು ನಡೆಸಲು ವಿವಾಹವು ಪ್ರಮುಖ ಸಾಧನವಾಯಿತು. ಅಲ್ಲದೇ ಗಂಡು ಹೆಣ್ಣು ಒಂದುಗೂಡಲು ಅನುಮತಿಯ ಮುದ್ರೆಯನ್ನು, ಶಾಸನಬದ್ಧತೆಯನ್ನು ಒದಗಿಸಿತು. ಹೀಗಾಗಿ ಮದುವೆ  ಎಲ್ಲಾ ಧರ್ಮಗಳಿಗೆ ಒಂದು ಸಾಮಾಜಿಕ ಕಾರ್ಯವಾಗಿದೆ. ಅದೆ ರೀತಿ ಲಂಬಾಣಿಗರಲ್ಲೂ ವಿವಾಹ ವಿಶಿಷ್ಟ ಸ್ಥಾನ ಪಡೆದಿದೆ.

**೧. ವಿವಾಹ (ಶಾಸ್ತ್ರಗಳು) :**

ಮಾನವನ ಸಂಸ್ಕೃತಿಯಲ್ಲಿ ಮದುವೆಯೆಂಬುದು ಅತ್ಯಂತ ಪ್ರಾಚೀನವಾದ ಸಂಸ್ಥೆ. ಕುಟುಂಬ ವ್ಯವಸ್ಥೆಯಲ್ಲಿ ವಿಶಿಷ್ಟವಾದ ಸ್ಥಾನವಿದೆ. ಮದುವೆ ಮನುಷ್ಯನ ಸಹಜ ಬಯಕೆ, ಲೈಂಗಿಕ ಅಗತ್ಯಗಳ ಪೂರೈಕೆಗಳು ಸಾಕಾರಗೊಳ್ಳುವಲ್ಲಿ ಮಹತ್ವವಾದ ಪಾತ್ರ ವಹಿಸುತ್ತದೆ. ಇದರ ಮೂಲ ಉದ್ದೇಶ ಸಂತಾನೋತ್ಪತ್ತಿಯಾಗಿರುತ್ತದೆ. ನಂಜಮ್ಮಣ್ಣಯವರ ಪ್ರಕಾರ ''ವಿವಾಹ ಸಂಸ್ಥೆ ಮನುಷ್ಯನಷ್ಟೇ ಪ್ರಾಚೀನವಾದುದು. ಭಾರತದಲ್ಲಿ ವಿವಾಹವು ಧಾರ್ಮಿಕ ರೀತಿ - ನೀತಿ ನಡಾವಳಿಗೆ ಅನುಸಾರವಾಗಿ ಸಂಪ್ರದಾಯಬದ್ಧವಾಗಿ ನಡೆಯುತ್ತವೆ. ವ್ಯಕ್ತಿ ಜೀವನದಲ್ಲಿ ವಿವಾಹವು ಅತಿಮುಖ್ಯವಾದ ಸಂಸ್ಕಾರ, ಇದು ದೇವರಿಂದ ಕಟ್ಟಲ್ಪಟ್ಟ ಒಂದು ಪವಿತ್ರ ಬಂಧನವೆಂಬ ನಂಬಿಕೆಯಿದೆ. ಮದುವೆಯಿಲ್ಲದೇ ಮೋಕ್ಷವಿಲ್ಲವೆಂಬ ನಂಬಿಕೆಯಿರುವುದರಿಂದ ಹಿಂದೂಗಳಲ್ಲಿ ವಿವಾಹ ಅನಿವಾರ್ಯ''[೬೧] ಇಲ್ಲಿ ಪರಸ್ಪರ ಗಂಡು ಹೆಣ್ಣುಗಳ ಲೈಂಗಿಕತೆಯಿಂದ ಒಂದಾಗುವುದರ ಜೊತೆಗೆ ಒಂದು ಕುಟುಂಬ ಇನ್ನೊಂದು ಕುಟುಂಬದೊಡನೆ ಸಂಬಂಧ ಬೆಳೆಸುವುದಾಗಿರುತ್ತದೆ. ವಿವಾಹವಾಗುವುದು ತಮ್ಮ ಅನುಕೂಲಕ್ಕಾಗಿ ಅಲ್ಲ ಇದರ ಮೂಲ ಉದ್ದೇಶ ಸಂತಾನೋತ್ಪತ್ತಿಯಾಗಿರುತ್ತದೆ.

ವಿವಾಹ ವಿಧಿ ವಿಧಾನಗಳನ್ನು ಆಯಾ ಜಾತಿ, ಜನಾಂಗಗಳ ಆಶೋತ್ತರಗಳ, ಸಾಂಸ್ಕೃತಿಕ ನಡುವಳಿಕೆಗಳ, ಅನುಭವಗಳ ಹಿನ್ನೆಲೆಯಲ್ಲಿ ರೂಪುಗೊಂಡಿರುತ್ತವೆ. ಹೀಗಾಗಿ ಈ ಶಾಸ್ತ್ರಗಳು ಜಾತಿಯಿಂದ ಜಾತಿಗೆ, ಜನಾಂಗದಿಂದ ಜನಾಂಗಕ್ಕೆ ಬೇರೆ ಬೇರೆ ರೀತಿ ಇರುವುದನ್ನು ಕಾಣುತ್ತೇವೆ. ಇದೇ ರೀತಿ ಲಂಬಾಣಿಗರಲ್ಲೂ ಇತರೇ ಬುಡಕಟ್ಟು ವಿವಾಹ ಶಾಸ್ತ್ರಗಳಿಗಿಂತ ಭಿನ್ನವಾಗಿರುವುದನ್ನು ಕಾಣಬಹುದು.

**೨. ವಿವಾಹ ಸಂಪ್ರದಾಯಗಳು**

ಲಂಬಾಣಿಗರಲ್ಲಿ ಅನೇಕ ಪಂಗಡಗಳಿವೆ. ಅವುಗಳನ್ನು ತಮ್ಮದೇ ಆದ ಸಂಸ್ಕಾರ-ವಿಧಿಗಳನ್ನು ಅನುಸರಿಸುತ್ತೇವೆ. ಹೀಗಾಗಿ ಅವುಗಳ ನಡುವೆ ಪರಸ್ಪರ ಕೊಡು-ಕೊಳ್ಳುವಿಕೆ ನಡೆಯುವುದಿಲ್ಲ. ಸಗೋತ್ರದವರಲ್ಲಿ ರಕ್ತ ಸಂಬಂಧ ಬೆಳೆಸುವುದಿಲ್ಲ. ಸಗೋತ್ರದವರು ಸಹೋದರರಾಗುತ್ತಾರೆ ಎಂಬ ನಂಬಿಕೆಯಿದೆ. ತಮ್ಮ

ಪಂಗಡಗಳಲ್ಲಿ ಬೇರೆ ಬೇರೆ ಗೋತ್ರ ಹೊಂದಿರುವವರೊಂದಿಗೆ ಸಂಬಂಧ ಬೆಳೆಸುತ್ತಾರೆ. ಉದಾ: ಲಂಬಾಣಿಗರಲ್ಲಿ ಎರಡು ಮುಖ್ಯವಾದ ಗೋತ್ರಗಳಾದ ಬುಕ್ಯ ಮತ್ತು ಜಾತ್ ಗೋತ್ರಗಳ ನಡುವೆ ಸಂಬಂಧಗಳು ನಡೆಯುತ್ತದೆ. ಆದರೆ ಜಾತ್ ಗೋತ್ರದವರಾಗಲಿ, ಬುಕ್ಯ ಗೋತ್ರದವರಾಗಲಿ ತಮ್ಮ ಒಳಗೋತ್ರಗಳೊಂದಿಗೆ ವೈವಾಹಿಕ ಸಂಬಂಧ ಬೆಳೆಸುವಂತಿಲ್ಲ. ಕುಟುಂಬದಲ್ಲಿ ಪುರುಷ ಜೀವನಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವಿಲ್ಲ.[೬೧] ಆದರೆ ಪ್ರಸ್ತುತ ದಿನಗಳಲ್ಲಿ ತನ್ನ ಹಳೆಯ ಸಂಪ್ರದಾಯ ಕಡಿಮೆಯಾಗಿ, ನಾಗರಿಕತೆಯ ಪ್ರಭಾವದಿಂದ ವಧು-ವರರ ಒಪ್ಪಿಗೆಯೇ ಎಲ್ಲರ ಒಪ್ಪಿಗೆಯಾಗಿದೆ.

ಲಂಬಾಣಿಗರಲ್ಲಿ 'ತೆರ' ಪದ್ಧತಿಯು ಮೊದಲಿನಿಂದಲೂ ರೂಢಿಯಲ್ಲಿದ್ದು ಹಣ ಅಥವಾ ಗೋವಿನ ರೂಪದಲ್ಲಿರುತ್ತಿತ್ತು. ಆದರೆ ಪ್ರಸ್ತುತ ದಿನಗಳಲ್ಲಿ ಕೇವಲ ಹಣದ ರೂಪದಲ್ಲಿ ಮಾತ್ರ 'ತೇರ' ಕೊಡುವ ಪದ್ಧತಿ ರೂಢಿಯಲ್ಲಿದೆ. ಲಂಬಾಣಿಗರು ಈ ತೆರವನ್ನು ಕರಾರು ಒಪ್ಪಂದ ಎಂಬುದಾಗಿ ಕರೆಯುತ್ತಾರೆ. ಇದು ಗಂಡಿನ ಕಡೆಯವರು ಹೆಣ್ಣಿನ ಕಡೆಯವರಿಗೆ ನೀಡುವ ಕನ್ಯಾಶುಲ್ಕವಾಗಿದೆ. ಜಾತ್ ಗೋತ್ರದ ಕನ್ಯೆಗೆ ೭೦೦ ರೂಪಾಯಿ ಬುಕ್ಯಾಗೋತ್ರದ ಹೆಣ್ಣಿಗೆ ೧೫೦ ರೂಪಾಯಿಗಳಾಗಿರುತ್ತದೆ. ಈ ಕರಾರು ಒಪ್ಪಿದ ನಂತರವೇ ಉಳಿದ ಕಾರ್ಯಗಳು ನಡೆಯುತ್ತವೆ. ಇದು ಬಹಳ ಕಡ್ಡಾಯವಾಗಿ ಪಾಲಿಸಿಕೊಂಡು ಬಂದ ಸಂಪ್ರದಾಯವಾಗಿದೆ.[೬೨]

**೩. ವಿವಾಹದ ವಯಸ್ಸು.**

ಹಿಂದೂಗಳು ಚಿಕ್ಕವಯಸ್ಸಿನಲ್ಲಿಯೇ ಮದುವೆ ಮಾಡಿಕೊಳ್ಳುತ್ತಾರೆ ಎಂದು ಅಲ್ಬೆರೂನಿ ಅಭಿಪ್ರಾಯ ಪಟ್ಟಿದ್ದಾನೆ.[೬೩] ಹಿಂದೂ ಪದ್ಧತಿಯನ್ನೇ ಪಾಲಿಸುವ ಲಂಬಾಣಿಗರಲ್ಲಿ ಸಹ ಬಾಲ್ಯವಿವಾಹ ಪದ್ಧತಿ ರೂಢಿಯಲ್ಲಿತ್ತೆಂದು ತಿಳಿಯುತ್ತದೆ. ಕೆಲವು ಶಾಸನಗಳಲ್ಲಿ ಕಂಡು ಬರುವ ಹಸಿಗೂಸಿನ ಮದುವೆ ಎಂಬ ಉಲ್ಲೇಖ ಈ ಬಾಲ್ಯ ವಿವಾಹ ಪದ್ಧತಿಯನ್ನು ಸೂಚಿಸುತ್ತದೆ.[೬೪] ಲಂಬಾಣಿಗರಲ್ಲಿ ಸೋದರ ಗೋತ್ರ ಅಥವಾ ಅಜ್ಜಿಯ ಗೋತ್ರಕ್ಕೆ ಸಂಬಂಧಿಸಿದ ಕನ್ಯೆಯೊಂದಿಗೆ ವಿವಾಹವಾಗುವುದು ಸಾಮಾನ್ಯ. ಹೀಗಾಗಿ ಒಂದೇ ಕುಟುಂಬದಲ್ಲಿಯೇ ಸಂಬಂಧಗಳು ನೆರವೇರುವುದರಿಂದ ಹೆಚ್ಚಾಗಿ ಬಾಲ್ಯವಿವಾಹಗಳು ನಡೆಯುತ್ತವೆ. ಆದರೂ ಹೆಣ್ಣಿನ ವಯಸ್ಸು ಗಂಡಿನ ವಯಸ್ಸಿಗಿಂತಲೂ ಕಡಿಮೆಯಿರಬೇಕೆಂದು ನಿಯಮವಿದೆ. ಇಂದಿನ ಆಧುನಿಕಯುಗದಲ್ಲಿ ಬಾಲ್ಯವಿವಾಹ ಪದ್ಧತಿ ನಿಷೇಧಿಸಿದೆ. ಆದರೆ ಇತ್ತೀಚೆಗೆ ಕೂಡ್ಲಿಗಿ ತಾಲೂಕಿನ ಚಿಕ್ಕಜೋಗಿಹಳ್ಳಿ ತಾಂಡದಲ್ಲಿ ಬಾಲ್ಯ ವಿವಾಹವು ನಡೆಯಿತು. ಆದರೂ ಹೆಚ್ಚಾಗಿ ಈ ರೂಢಿಯಲ್ಲಿ ಇಲ್ಲವೆಂದೇ ಹೇಳಬಹುದು.

**೪. ವಧುವಿನ ಆಯ್ಕೆ**

ಲಂಬಾಣಿಗರಲ್ಲಿ ಸೋದರಮಾವನ ಮಗಳೊಂದಿಗೆ ಅಥವಾ ಅಜ್ಜಿಯ ಗೋತ್ರಕ್ಕೆ ಸಂಬಂಧಿಸಿದ ಕನ್ಯೆಯೊಂದಿಗೆ ವಿವಾಹವಾಗುವುದು ರೂಢಿಯಲ್ಲಿದೆ. ಅಕ್ಕನ ಅಥವಾ ತಂಗಿಯ ಮಗಳನ್ನು ವಿವಾಹವಾಗಬಹುದಾಗಿದೆ. ಲಂಬಾಣಿಗರಲ್ಲಿ ಸೋದರ ಸಂಬಂಧಗಳಿಗೆ ಅಧಿಕ ಮಹತ್ವವಿದೆ. ಹೀಗಾಗಿ ವಧುವಿನ ಆಯ್ಕೆ ಸುಲಭವಾಗಿದೆ. ಆದರೆ ಕೆಲವೆಡೆ ಹೊರ ಸಂಬಂಧವನ್ನು ಬಯಸುವವರು ಕನ್ನೆಯ ಬೆಡಗು, ದೇವರು, ಸ್ವಭಾವ, ಮನೆತನದ ಹಿನ್ನೆಲೆ, ಆರ್ಥಿಕ ಸ್ಥಿತಿ ಮೊದಲಾದವುಗಳ ಬಗ್ಗೆ ತಿಳಿದುಕೊಳ್ಳುತ್ತಾರೆ. ಎಲ್ಲಾ ರೀತಿಯಿಂದಲೂ ತಮಗೆ ಸಮಾನವಾದ ಸಂಬಂಧವೆಂದು ತಿಳಿದರೆ ಮಾತ್ರ ಅವರೊಂದಿಗೆ ಸಂಬಂಧ ಬೆಳೆಸಲು ಮುಂದಾಗುತ್ತಾರೆ.

ಇಂತಹ ಸಂದರ್ಭದಲ್ಲಿ ಲಂಬಾಣಿ ವೃತ್ತಿಗಾಯಕರಾದ 'ಢಾಡಿ'ಗಳು ಈ ಸಂಚಾರಿ ಜನಾಂಗದ ಮಧ್ಯ ಪುರುಷ-ಸ್ತ್ರೀಯ ಸಂಬಂಧ ಬೆಸೆಯುವಲ್ಲಿ ಮಹತ್ವದ ಪಾತ್ರ ವಹಿಸುತ್ತಿದ್ದರು. ಆದರೆ ಈಗ ಆ ವ್ಯವಸ್ಥೆ ಇಲ್ಲ.

**೫. ಕನ್ಯ ಪರೀಕ್ಷೆ**

ಒಂದು ಶುಭದಿನದಂದು ಕನ್ನೆಯನ್ನು ನೋಡಲು ಗಂಡಿನ ತಂದೆ, ತಾಯಿ, ಗುರು ಹಿರಿಯರು ಹೋಗುತ್ತಾರೆ. ಆಗ ಕೆಲವು ಶುಭ, ಅಶುಭ ಸೂಚನೆಗಳನ್ನು ನೋಡುತ್ತಾರೆ. ಮನೆಯಿಂದ ಹೊರಡುವಾಗ ಎದುರಿಗೆ ಖಾಲಿ ಕೊಡ ಬಂದರೆ, ಬೆಕ್ಕು ಎಡಕ್ಕೆ ಹೋದರೆ, ಕಾಗೆ ಎಡಕ್ಕೆ ಹಾರಿದರೆ, ಹಾವು, ಕತ್ತೆಯು ಬೆನ್ನಹಿಂದೆ ಕಿರುಚಿದರೆ, ವಿಧವೆ ಎದುರಿಗೆ ಬಂದರೆ, ಹೆಣ್ಣಿನವರ ಮನೆಯಲ್ಲಿ ಕಸಗುಡಿಸುತ್ತಿದ್ದರೆ, ಮನೆಯ ಬಾಗಿಲು ಹಾಕಿದ್ದರೆ ಮೊದಲಾದವುಗಳನ್ನು ಅಶುಭ ಸೂಚನೆಗಳೆಂದು ನಂಬುತ್ತಾರೆ.[೭೫] ಕನ್ಯೆ ನೋಡಲು ಹೊರಟ ಸಂದರ್ಭದಲ್ಲಿ ಇವುಗಳಲ್ಲಿ ಯಾವುದಾದರೂ ನಡೆದರೆ ಆ ಕಾರ್ಯವನ್ನು ಮುಂದೂಡುವ ಸಾಧ್ಯತೆಯಿದೆ. ಮನೆಯಿಂದ ಹೊರಡುವಾಗ ಜೋಡು ಸೀನಿದರೆ, ಕಾಗೆಯು ಬಲಕ್ಕೆ ಹಾರಿದರೆ, ಬೆಕ್ಕು ಎಡದಿಂದ ಬಲಕ್ಕೆ ಹೋದರೆ, ಮುತ್ತೈದೆಯರು ತುಂಬಿದ ಕೊಡಗಳು ಬಂದರೆ, ದಾರಿಯಲ್ಲಿ ಹೆಣ ಒಯ್ಯುವುದು ಕಂಡರೆ ಶುಭ ಸೂಚಕ ಎಂಬ ನಂಬಿಕೆಯಿದೆ.[೭೬] ಶುಭ ಸೂಚನೆಗಳು ಅಧಿಕವಾದರೆ ಮಾತ್ರ ಹೆಣ್ಣು ನೋಡಲು ಹೊರಡುತ್ತಾರೆ. ಕನ್ಯೆ ಒಪ್ಪಿಗೆಯಾಗಿದೆ ಅಥವಾ ಒಪ್ಪಿಗೆಯಾಗಿಲ್ಲ ಎಂಬುದುವುದರ ಬಗ್ಗೆ ಆಮೇಲೆ ತಿಳಿಸುವುದಾಗಿ ಹೇಳಿ ಹೋಗುತ್ತಾರೆ.

ಹೆಣ್ಣು ಒಪ್ಪಿಗೆಯಾದ ನಂತರ ಮನೆಯ ಯಜಮಾನ ಕೊಡುಕೊಳ್ಳುವಿಕೆಯ ಬಗ್ಗೆ ಮಾತುಕತೆ ನಡೆಸುತ್ತಾನೆ. ಗಂಡಿನ ಕಡೆಯವರು ಹಿರಿಯರ ಸಮ್ಮುಖದಲ್ಲಿ ಕೊಡು-ಕೊಳ್ಳುವ ಮಾತುಗಳನ್ನಾಡುತ್ತಾರೆ. ಇಬ್ಬರಿಗೂ ಒಪ್ಪಿಗೆಯಾದರೆ ವೀಳ್ಯದೆಲೆಯನ್ನು ವಿನಿಮಯಿಸಿಕೊಳ್ಳುವರು. ಇದಕ್ಕೆ ಸಾಕ್ಷಿ ವೀಳ್ಯ ಎಂದು ಕರೆಯುವರು. ಆಗಮಿಸಿದವರೆಲ್ಲರಿಗೂ ಊಟದ ವ್ಯವಸ್ಥೆ ಮಾಡುವರು.

**೬. ನಿಶ್ಚಿತಾರ್ಥ - ಪಾನ್ ಫೆರೇರೊ**

ಈ ಕಾರ್ಯವು ಸಾಮಾನ್ಯವಾಗಿ ಹೆಣ್ಣಿನವರ ಮನೆಯಲ್ಲಿ ನಡೆಯುತ್ತದೆ. ಒಂದು ಶುಭದಿನ ನೋಡಿಕೊಂಡು ಅಂದು ಸಂಜೆ ನಿಶ್ಚಿತಾರ್ಥ ಮಾಡುತ್ತಾರೆ. ನಿಶ್ಚಿತಾರ್ಥ ಕಾರ್ಯವನ್ನು ಲಂಬಾಣಿ ಭಾಷೆಯಲ್ಲಿ 'ಸಗಾಯಿ' ಎಂಬುದಾಗಿ ಕರೆಯುತ್ತಾರೆ. ಈ ಪದವೂ ಸಾಗೋ ಎಂಬ ಪದದಿಂದ ಬಂದಿದೆ. ಉರ್ದು ಹಾಗೂ ಸಂಸ್ಕೃತ ಭಾಷೆಯಲ್ಲಿ ಸಗಾಯಿ ಎಂಬ ಪದವು ನಿಶ್ಚಯ ಎಂಬ ಅರ್ಥದಲ್ಲಿ ಬಳಕೆಯಲ್ಲಿದೆ.[೭೭]

ನಿಶ್ಚಿತಾರ್ಥಕ್ಕಾಗಿ ಈ ಮೊದಲೇ ನಿರ್ಧರಿಸಿದ ಹೆಣ್ಣಿನವರ ಮನೆಗೆ ಗಂಡಿನ ಕಡೆಯವರು ತಮ್ಮ ಬಂಧು ಬಳಗದವರೊಡನೆ ಊರಿನ ನಾಯಕ ಹಾಗೂ ನಾಲ್ಕಾರು ಜನ ಹಿರಿಯರೊಂದಿಗೆ ಹೋಗುತ್ತಾರೆ. ಅಲ್ಲಿ ಎರಡು ತಾಂಡಾದ ನಾಯಕರ ಸಮಕ್ಷಮದಲ್ಲಿ ನಿಶ್ಚಯಕ್ಕೆ ಸಂಬಂಧಿಸಿದ ಮಾತುಗಳು ನಡೆಯುತ್ತವೆ. ತಾಂಡಾದ ನಾಯಕ ಹಾಗೂ ಹಿರಿಯರು ಸೇರಿ ಗಂಡಿನವರ ಜೊತೆ ನಿಶ್ಚಯವನ್ನು ಖಚಿತಪಡಿಸಿಕೊಳ್ಳುತ್ತಾರೆ.

**೭. ಲಗ್ನ ಪತ್ರ ಕಟ್ಟಿಸುವ ಶಾಸ್ತ್ರ**

ವಿವಾಹ ಪೂರ್ವದ ಹತ್ತು ಅಥವಾ ಹದಿನೈದು ದಿನದಂದು ಗುರುಹಿರಿಯರ ಸಮ್ಮುಖದಲ್ಲಿ ಲಗ್ನಪತ್ರಿಕೆ ಬರೆಸುತ್ತಾರೆ. ಮೊದಲ ಆಮಂತ್ರಣ ಪತ್ರಿಕೆಯನ್ನು ಮನೆದೇವರ ಹೆಸರಿಗೆ ಬರೆಯುವ ಪದ್ಧತಿಯಿದೆ. ಪ್ರತಿಯೊಂದು

ಆಮಂತ್ರಣ ಪತ್ರಿಕೆಯ ನಾಲ್ಕು ಮೂಲೆಗೂ ಅರಿಷಿಣ, ಕುಂಕುಮ ಲೇಪಿಸುತ್ತಾರೆ. ತಮ್ಮ ಬಂಧು ಬಳಗ, ಹಾಗೂ ಆಪ್ತರಿಗೆ ಪತ್ರಿಕೆಯನ್ನು ಹಂಚುತ್ತಾರೆ. ಅಂದು ಹೊಸ ವಸ್ತ್ರದಲ್ಲಿ ಧಾನ್ಯ, ಕೊಬ್ಬರಿ, ಉತ್ತತ್ತಿ, ಅರಿಷಿಣ, ಎಲೆ, ಅಡಿಕೆ, ಕಣಗಳನ್ನು ಹಾಕಿ ಗಂಟುಕಟ್ಟುವರು.[೭೮] ನಂತರ ಬೆಲ್ಲದ ಕಾರ್ಯ, ಹಂದರ ಹಾಕುವ ಕಾರ್ಯ ಮದುವೆಯ ಶಾಸ್ತ್ರ ಮೊದಲಾದ ಕಾರ್ಯಗಳು ನಡೆಯುತ್ತವೆ.

**೮. ಬೆಲ್ಲದ ಕಾರ್ಯ ('ಗೋಳ ಖಾಯೇರೋ') :**

ಬೆಲ್ಲ ತಿನ್ನುವ ಈ ಶಾಸ್ತ್ರವನ್ನು ವೀಳ್ಯಶಾಸ್ತ್ರ, ಸಕ್ರಿ ಕಾರ್ಯವೆಂದೂ ಕರೆಯುತ್ತಾರೆ. ಇದು ಬಹಳ ಗಂಭೀರದಿಂದ ಕೂಡಿದ ಶಾಸ್ತ್ರವಾಗಿದೆ. ಇದರಲ್ಲಿ ಹೆಣ್ಣಿನ ತಾಂಡಾದಲ್ಲಿ ಸೇರಿದವರಿಗೆಲ್ಲಾ ಬೆಲ್ಲ ಹಂಚುವುದು ಪ್ರಮುಖ ಉದ್ದೇಶವಾಗಿರುವುದರಿಂದ ಗೋಳ ಖಾಯೋರೋ ಎಂಬ ಹೆಸರು ಬಂದಿದೆ.[೭೯]

ಸೋಮವಾರ ಅಥವಾ ಶನಿವಾರ ಶುಭ ಕಾರ್ಯಗಳಿಗೆ ಒಳ್ಳೆಯ ದಿನ ಎಂದು ನಂಬಿರುವ ಲಂಬಾಣಿಗರು ಪೂರ್ವಭಾವಿಯಾಗಿ ಗಂಡಿನ ಕಡೆಯವರು ಹೆಣ್ಣಿನ ಮನೆಗೆ ಬರುವ ವಿಚಾರ ತಿಳಿಸುತ್ತಾರೆ. ಹಾಗೆಯೇ ವರನ ತಂದೆ-ತಾಯಿ ಮತ್ತು ತಾಂಡಾದ ನಾಯಕ, ಡಾವ್ಹ, ಕಾರ್‌ಬಾರಿ ಹಾಗೂ ಕೆಲವು ಹಿರಿಯ ವ್ಯಕ್ತಿಗಳೊಡನೆ ವಧುವಿನ ತಾಂಡಕ್ಕೆ ಹೋಗುತ್ತಾರೆ. ಅವರೆಲ್ಲಾ ತಾಂಡಾದ ನಾಯಕನ ಮನೆ ಮುಂದೆ ಅಥವಾ ದೇವಸ್ಥಾನ ಅಥವಾ ಹೆಣ್ಣಿನ ಮನೆ ಮುಂದೆ ಸೇರುತ್ತಾರೆ. ಗೋಳ್‌ಖಾಯೇರೋ ಶಾಸ್ತ್ರ ಮಾಡುತ್ತಾರೆ. ಇದಕ್ಕೆ ತಾಂಡಾದ ಎಲ್ಲ ಜನರನ್ನೂ ಆಹ್ವಾನಿಸುತ್ತಾರೆ. ಈ ಸಂದರ್ಭದಲ್ಲಿ ಅನುಭವಿ ನಾಯಕರು ಬೆಲ್ಲದಕಾರ್ಯಕ್ಕೆ ಸಂಬಂಧಿಸಿದಂತೆ ಕೆಲವು ನುಡಿಮುತ್ತುಗಳನ್ನು ಹೇಳುತ್ತಾರೆ.

''ಪಂಚ್ ಪಂಚಾತ್
ರಾಜಭೋಜೇರ್ ಸಭಾ
ಪಚಾರಿಲಾಖ್
ಅನ್ ಪಚಾರಿ ಸಲ್ಯಾಲಾಖ್
ಬ್ರಹ್ಮೇರ್ ಬಣಿಯಾರ್ ಪೋತಿ
ಲಕಿವಲಿವತ್
ಝೂಡಿ ಭರ ನಾಯಕ್'' (ಹಾವ್ ನಾಯ್ಕ್)[೮೦]
ಥಾಕಣಿ ಪಾಡಿ ವಾಪರ್ ನಾಯಕ್,
ನಾಯಕ್, ಗಡೇಗಡೇರ್ ಭೀರುರನಾಯಕ್,
ದಳಮಳೇರ್ ಪಾಮಣ್‌ರ ನಾಯಕ್,
ಸಗೇನ್ ಪರಕೋತೊ, ಹೀರಾಮಾಯೀರೊಲಾಲ್ ನಾಯ್ಕ (ಹಾವ್‌ರ ನಾಯಕ್)
ನಾಯಕ್, ಮೋತಿಹೇಟ್‌ತುಭೆನೀ,
ತೋತಿ ಹೇಟ್ ಮ ಭೇನಿ,

ಜಾಗಾದೇಕನ್ ಪಾಗಾ ಬಾಂದೆ,

ಸಾತ್ ಸಾತ್ ಪೀಡೀರ್ ನಾತಾಕೀದ

ರಕಾಡತೊ ನಾತಾ,ನ ರಕಾಡತೊತಾಗಾತಾರ್ ನಾಯೇಕ್[೮೮] (ಹಾವರ್ ನಾಯಕ್)

ನಾಯ್ಕರೇ, ಬ್ರಹ್ಮನು ಅವರ ದೈವದಲ್ಲಿ ಬರದಂತೆ ವಧು-ವರರ ನಿಶ್ಚಯವಾಗಿದೆ. ಇಬ್ಬರ ಮನೆಯಲ್ಲೂ ಊಟೋಪಚಾರಗಳು ಮುಗಿದು ಈರ್ವರೂ ಸಮೀಪವರ್ತಿಗಳಾಗಿದ್ದೇವೆ. ಸಂಬಂಧಿಕರುಗಳು ಎಲ್ಲೆಲ್ಲಿಂದಲೋ ಇಲ್ಲಿಗೆ ಬಂದು ಸೇರಿದ್ದಾರೆ. ನಾನು ನಿನಗಿಂತಲೂ, ನೀನು ನನಗಿಂತಲೂ ಯಾವುದರಲ್ಲಿಯೂ ಹೆಚ್ಚು ಕಡಿಮೆ ಇಲ್ಲ. ಇಬ್ಬರೂ ಸರಿಸಮಾನರಾಗಿದ್ದೇವೆ. ಒಳ್ಳೆಯ ಮನೆತನಗಳು ಕೂಡಿದಾಗಲೇ ಈ ನಿಶ್ಚಯವಾಯಿತು. ಈ ಬಗೆಯ ಸಂಬಂಧವು ಇನ್ನು ಮುಂದೆ ಏಳೇಳು ತಲೆಮಾರುಗಳವರೆಗೂ ಹೋಗುವುದಾಗಿದೆ. ಇಂಥ ಸಂಬಂಧವನ್ನು ಮುರಿದು ಹೋಗದಂತೆ ನೋಡಿಕೊಳ್ಳಬೇಕು. ಇಲ್ಲದೆ ಹೋದರೆ ಕೊನೆಗೆ ಸಂಕಟವನ್ನು ಅನುಭವಿಸಬೇಕಾಗುತ್ತದೆ.

ಹೀಗೆ ಪರಸ್ಪರ ಮಾತುಕತೆಗಳಾದ ಮೇಲೆ ಅಲ್ಲಿಗೆ ಬೆಲ್ಲ, ವೀಳ್ಯದೆಲೆ, ಅಡಿಕೆ ವರನ ಮನೆಯಿಂದ ತಂದ ಎರಡು 'ಕೊಠಿ' (ಇವು ಬಟ್ಟೆಯಿಂದ ಮಾಡಲ್ಪಟ್ಟ ಚೀಲಗಳಾಗಿರುತ್ತವೆ) ಗಳಲ್ಲಿ ಒಂದರಲ್ಲಿ ಒಂದು ರೂಪಾಯಿ, ಮತ್ತೊಂದರಲ್ಲಿ ಕೊಬ್ಬರಿ ಗಿಟುಕು ಮತ್ತು ವಧುವಿನ ಮನೆಯಿಂದ ಎರಡು ಸಣ್ಣಚೀಲಗಳನ್ನು ತಂದು ಪಂಚಾಯಿತಿಯ ಮುಂದೆ ಇಡುತ್ತಾರೆ. ಗಂಡಿನವರು ಚೀಲದಲ್ಲಿ ಹಣ ಎಷ್ಟು ಇದೆ ಎಂಬುದನ್ನು ಸಭೆಯ ಮುಂದೆ ಸಾರಿ ಹೇಳುತ್ತಾರೆ. ಗಂಡಿನ ಮನೆಯ ಚೀಲವನ್ನು ಹೆಣ್ಣಿನ ಮನೆಯ ಕಡೆಯ ಆತ್ಮೀಯರಿಗೆ ಹೆಣ್ಣಿನ ಮನೆಯ ಚೀಲವನ್ನು ಗಂಡಿನ ಕಡೆಯ ಆತ್ಮೀಯರಿಗೆ ಕೊಡಿಸುತ್ತಾರೆ. ಇದರಲ್ಲಿದ್ದ ಕೊಬ್ಬರಿ ಗಿಟುಕಗಳನ್ನು ಆಯಾ ತಾಂಡಾದವರು ಹಂಚಿಕೊಳ್ಳುತ್ತಾರೆ.

ಇದಾದ ನಂತರ 'ಸಾಕ್' ಹಂಚುವ ಶಾಸ್ತ್ರವಿರುತ್ತದೆ. 'ಸಾಕ್'ಎಂದರೆ ಒಂದು ರೂಪಾಯಿ ನಾಣ್ಯ. ಹೆಣ್ಣಿನ ತಾಂಡಾದ ನಾಯಕನು ಗಂಡಿನ ತಾಂಡಾದ ನಾಯಕನಿಂದ ಈ ನಾಣ್ಯವನ್ನು ಕೇಳಿ ಪಡೆಯುತ್ತಾನೆ. ಈ ನಾಣ್ಯ ಕೊನೆಯಲ್ಲಿ ಹೆಣ್ಣಿನ ತಾಂಡಾದ ನಾಯಕನ ಬಳಿ ಉಳಿಯುತ್ತದೆ. ಈ ನಾಣ್ಯವು ಹೆಣ್ಣಿನ ತಾಂಡಾದ ನಾಯಕನ ಕೈಸೇರಿದ ಮೇಲೆ ಹಿರಿಯರೆಲ್ಲರೂ ಹೆಣ್ಣು ಮತ್ತು ಗಂಡಿನ ಕಡೆಯವರಿಗೆ ಸಂಬಂಧ ಉಳಿಸಿಕೊಳ್ಳುವಂತೆ ಹಿತೋಪದೇಶ ನೀಡುತ್ತಾರೆ. ಈ ಕಾರ್ಯ ಮುಗಿದ ಮೇಲೆ ಹೆಣ್ಣಿನ ಮನೆಯವರು ರಂಗು ಕೊಡುವುದಕ್ಕೆ ತಂದಿರುವ ಬಣ್ಣವನ್ನು ಗಂಡಿನ ಕಡೆಯವರಿಗೆ ಹಂಚುತ್ತಾರೆ. ವರನು ಈ ಬೆಲ್ಲದ ಶಾಸ್ತ್ರಕ್ಕೆ ಬಂದಿದ್ದರೆ ಮೊದಲು ಅವನಿಗೆ ರಂಗನ್ನು ಹಚ್ಚಿದ ನಂತರ ಉಳಿದವರಿಗೆ ರಂಗು ಕೊಡುವುದು ವಾಡಿಕೆ. ಈ ಶಾಸ್ತ್ರಕ್ಕೆ ವರನು ಬರದಿದ್ದರೂ ಆಗುತ್ತದೆ. ಇಲ್ಲಿಗೆ ಬೆಲ್ಲದ ಕಾರ್ಯವು ಮುಕ್ತಾಯವಾಗುತ್ತದೆ. ಇದು ಅಲೆಮಾರಿಗಳಾದ ಎರಡು ತಾಂಡಾದ ಜನರನ್ನು ಪರಸ್ಪರ ಹತ್ತಿರಕ್ಕೆ ತರುವ ಶಾಸ್ತ್ರವಾಗಿದೆ.[೮೨]

ಮದುವೆಯನ್ನು ತಿಂಗಳಗಟ್ಟಲೆ ಮಾಡುವ ಪರಿಪಾಠವುಳ್ಳ ಲಂಬಾಣಿಗರು, ಮದುವೆಯನ್ನು 'ವಾಯ', 'ವೀಯ', ಮುಂತಾದ ಹೆಸರುಗಳಿಂದ ಕರೆದುಕೊಳ್ಳುತ್ತಾರೆ. ಕೆಲವು ವಿದ್ವಾಂಸರು 'ಸಾಡಿತಾಣೆರೊ', 'ತೊಂಭೋತಾಣೆರೋ' ಎಂಬುದಾಗಿಯೂ ಕರೆಯುತ್ತಾರೆ. ಆದರೆ ಇವುಗಳು ವಿವಾಹದಲ್ಲಿ ಬರುವ

ಕಾರ್ಯಗಳಾಗಿವೆಯೇ ಹೊರತು ವಿವಾಹಕ್ಕೆ ಈ ಹೆಸರಿನಿಂದ ಕರೆಯುವುದಿಲ್ಲ. ವಿವಾಹ ಪ್ರಾರಂಭವಾಗುವ ಮೊದಲು ವರನ ಮನೆಯಲ್ಲಿ ಊರಿನ ಹಿರಿಯರು, ಗಂಡಿನ ಸಂಬಂಧಿಕರು, ಸ್ನೇಹಿತರು ಹಾಗೆಯೇ ಹಿರಿಯ ಮಹಿಳೆಯರು ದಾರಿಯುದ್ದಕ್ಕೂ ಹಾಡು ಹೇಳಿಕೊಂಡು ಗಂಗೆಯ ಪೂಜೆಗೆ ಬರುತ್ತಾರೆ. ಗಂಗೆಯ ಪೂಜೆಯೊಂದಿಗೆ ವಿವಾಹಕಾರ್ಯ ವಿಧಿಗಳು ಶಾಸ್ತ್ರೋಕ್ತವಾಗಿ ನಡೆಯುತ್ತದೆ. ಈ ಸಮುದಾಯದ ವಿವಾಹಕಾರ್ಯದಲ್ಲಿ 'ವಧಾಯಿ', ಘೋಟಾತಯಾರಿ, ಮದುಮಗನನ್ನು ಬೀಳ್ಕೊಡುವುದು, ವಧುವಿನ ಮನೆಯಲ್ಲಿ ನಡೆಯುವ ಶಾಸ್ತ್ರ, ವರನ ಕಡೆಯವರ ಊಟ, (ವೆತಡೊರಟೇಳೂ), ಪಾನಕ ತಯಾರಿಕೆ ಮತ್ತು ತಿಲಕ ಹಚ್ಚುವ ಕಾರ್ಯ, ವಿಯಾಬಾಂದೇರೂ, ಡೋರಣೋಬಾಂದರೋ, ಮಾಂಡ್‌ರಮಾಂಡೇರೋ, ವೆಕಡು ನವಲೆರಿರ್ ಅಂಗೋಳಿ, ಚೂಡೋ ಮತ್ತು ಘುಗರಿ ಧರಿಸುವಿಕೆ, ಗೋಟಕಾರ್ಯ, ಭಾರ್‌ಕಾಡೇರೋ, ಹವೇಲಿಶಾಸ್ತ್ರ, ಇವೆಲ್ಲವೂ ತನ್ನದೆ ಆದ ವಿಧಿ-ವಿಧಾನಗಳನ್ನು ಹೊಂದಿವೆ.

೯. **ಹಂದರ ಹಾಕುವ ಕಾರ್ಯ :** ಗಂಡು ಮತ್ತು ಹೆಣ್ಣಿನ ಮನೆಯ ಮುಂದೆ ಕಟ್ಟಿಗೆ ಮತ್ತು ತೆಂಗಿನ ಗರಿಗಳಿಂದ ಹಂದರ ಹಾಕಬೇಕೆಂಬ ನಿಯಮವಿದೆ. ಹಂದರದ ಮೇಲೆ ಜೋಳದ ಕಣಿಕೆಯನ್ನು ಹಾಕಿ ಒಳಗಡೆ ಅಲ್ಲಲ್ಲಿ ಮಾವಿನ ತಳಿರು ಇಳಿಬಿಟ್ಟಿರುತ್ತಾರೆ. ಕಂಬಗಳಿಗೆ ತೆಂಗಿನ ಗರಿ ಕಟ್ಟಿ ಹಂದರವನ್ನು ಶೃಂಗರಿಸಿರುತ್ತಾರೆ.

**೧೦. ವಧಾಯಿ**

ವಿವಾಹದ ದಿನ ನಿಗದಿಯಾದ ಮೇಲೆ ಒಂದು ಒಳ್ಳೆಯ ದಿನ ಗಂಡಿನ ತಂದೆ-ತಾಯಿಗಳು ತಾಂಡ ನಾಯಕ, ಕಾರಭಾರಿ, ಡಾವೋ ಹಾಗೂ ಊರಿನ ಹಿರಿಯರನ್ನು ತಮ್ಮ ಮನೆಗೆ ಆಹ್ವಾನ ಮಾಡಿಕೊಳ್ಳುತ್ತಾರೆ. ಸಾಯಂಕಾಲ ಜೋಡಿ ಕಂಬಳಿ ಹೊದಿಸಿ ಒಂದು ಮರದ ಕಂಬವನ್ನು ನಿಲ್ಲಿಸಿ ಲೋಟದ ಕಳಸ ಕಟ್ಟಿ ಹಾಗೆ ನಿಲ್ಲಿಸುತ್ತಾರೆ. ಇದನ್ನು ಮುಂಡೇಡೊ ಎಂಬುದಾಗಿ ಕರೆಯುತ್ತಾರೆ. ಇದು ಲಗ್ನಪೂರ್ವದಲ್ಲಿ ವಿವಾಹದ ಗಂಡು ಹಾಗೂ ಆತನ ತಮ್ಮನಿಗೆ ಕೊಡುವ ಧರ್ಮ ದೀಕ್ಷೆ. ಗುರು ಗೋಸಾಯಿ ಬಾವಾರ ಸ್ಮೃತಿಗಾಗಿ ಲಗ್ನಪೂರ್ವದಲ್ಲಿ ಮದುಮಗನನ್ನು ಸ್ನಾನ ಮಾಡಿಸಿ ಬಲಭುಜಕ್ಕೆ ಹಾಕುವ ಧಾರ್ಮಿಕ ಮುದ್ರೆಗೆ 'ವದಾಯಿರ್ ದಾಗ್' ಅಥವಾ 'ಗರೂರ್‌ದಾಗ್' ಎನ್ನುತ್ತಾರೆ. ಈ ವದಾಯಿ ಸಂದರ್ಭದಲ್ಲಿ ಗಂಡಸರು ಗಾಯತ್ರಿ ಮಂತ್ರಕ್ಕೆ ಸಮಾನವಾದ ಈ ಕೆಳಗಿನ ಮಂತ್ರವನ್ನು ಹೇಳುತ್ತಾರೆ. ತಾಂಡಾ ನಾಯಕನು ಅಥವಾ ಹಿರಿಯರೊಬ್ಬರು ಸೂಜಿಯೊಂದನ್ನು ಹರಳೆಣ್ಣೆ ದೀಪಕ್ಕೆ ಹಿಡಿದು ಕಾಯಿಸಿ ಗಂಡಿನ ಬಲಭುಜಕ್ಕೆ ಬರೆ ಹಾಕುತ್ತಾರೆ. ಸಂಬಂಧಿಸಿದ ಮಂತ್ರ ಈ ಕೆಳಗಿನಂತೆ ಹೇಳುತ್ತಾರೆ.[೮೬]

''ಕೋಳಿ ಆವ್, ಕೋಳೀ ಚಾವ್
ಕೋಳಿಮಾಯಿ ಜೋಗ್ ಸಮಾಳ
ಮುಂಗೇ ಅವಡಾ ಮೊಗರಾ
ತಲ್ಲೀ ಅವಡಾಕಬಾಣ್ ಛೆ
ದೋಳೋ ಘೋಡೊ ಹಾಂಸಲೊ
ಪಾತಳಿಯಾ ಸವಾರ ಛ
ಗುರು ಗೋಸಾಯಿಬಾ ಸದಾಸದಾ''[೮೮]

ಹೆಸರುಕಾಳಿನ ಗಾತ್ರದ ಬರೆಯನ್ನು ಎಳ್ಳುಕಾಳಿನ ಚಿಕ್ಕ ಗಾತ್ರದ ಸೂಜಿಯೆಂಬ ಜಾಣದಿಂದ ಬರೆ ಎಳೆಯಲಾಗಿದೆ. ಬಡಕಲು ದೇಹದವನೆ ಇನ್ನು ಬಿಳಿಕುದುರೆ ಏರಿ ಸವಾರಿ ಮಾಡಲು ಯಾವ ತೊಂದರೆಯೂ ಇಲ್ಲ. ಗುರು ಗೋಸಾಯಿ ಬಾವಾ ಸದಾ ನಿನ್ನನ್ನು ರಕ್ಷಿಸಲೆಂದು ಪ್ರಾರ್ಥಿಸುತ್ತಾರೆ.'' ಈ ಮಂತ್ರವು ಕುಲಕ್ಕೆ ಸೇರಲು ಪವಿತ್ರನಾದೆ ಎಂಬ ಅರ್ಥವನ್ನು ಹೊಂದಿದೆ.

**೧೧. ಘೋಟಾ ತಯಾರಿ :**

ವಿವಾಹದ ಪೂರ್ವದಿನವೇ ಚಪ್ಪರದ ಬಾಗಿಲು ಪೂರ್ವದಿಕ್ಕಿಗೆ ಇರುವಂತೆ ಚಪ್ಪರವನ್ನು ನಿರ್ಮಿಸಿರುತ್ತಾರೆ. ತಾಂಡಾದ ಹಿರಿಯರು ಒಂದು ಪಾತ್ರೆಯಲ್ಲಿ ನೀರು ಬೆಲ್ಲವನ್ನು ಬೆರೆಸಿ ಗಸಗಸೆಯನ್ನು ಚೆನ್ನಾಗಿ ಅರೆದು ಬೆಲ್ಲದ ನೀರಿಗೆ ಬೆರೆಸುತ್ತಾರೆ. ಇದನ್ನು 'ಘೋಟಾ' (ಪಾನಕ) ಎಂಬುದಾಗಿ ಕರೆಯುತ್ತಾರೆ. ಮೆಣಸಿನ ಪುಡಿಯನ್ನು ಬೆರೆಸಿದ ಪಾನಕ ಹಾಗೂ ಮೆಣಸಿನ ಪುಡಿ ಬೆರೆಸದ ಪಾನಕ ಎಂಬ ಎರಡು ಬಗೆಗಳಿವೆ. ಇದರಲ್ಲಿ ಮೆಣಸಿನ ಪುಡಿ ಹಾಕಿದ ಪಾನಕವನ್ನು 'ಒಕೋ ಘೋಟ' ಎಂಬುದಾಗಿ ಕರೆಯುತ್ತಾರೆ. ಅಂದರೆ ಸಪ್ಪೆಪಾನಕ ಎಂದರ್ಥ. ಇದನ್ನು ಗರ್ಭಿಣಿ ಸ್ತ್ರೀಗೆ ಮೀಸಲಾಗಿರಿಸಿಟ್ಟಿರುತ್ತಾರೆ. ಕಾರ್ಯಕ್ಕಾಗಿ ಹೊಸದಾದ ಗಡಿಗೆಯಲ್ಲಿ ಪಾನಕವನ್ನು ತುಂಬಿ ಅದರೊಳಗೆ ಒಂದು ರೂಪಾಯಿ ನಾಣ್ಯವನ್ನು ಹಾಕಿ ಒಂದು ಬಿಳಿ ಬಟ್ಟೆಯಿಂದ ಮುಚ್ಚಿರುತ್ತಾರೆ.

ಮದುಮಗನನ್ನು ಸ್ನಾನ ಮಾಡಿಸಿ ಹೊಸ ಉಡುಗೆ ತೊಡುಗೆಗಳಿಂದ ಶೃಂಗರಿಸುವರು. ತಲೆಗೆ ಒಂದು ರುಮಾಲು ಕಟ್ಟಿ ಅದರ ಮೇಲೆ ಒಂದು ಶಾಲನ್ನು ಹೊದಿಸುತ್ತಾರೆ. ಆಗ ತಾಯಿಯು ತನ್ನ ದುಃಖದ ನಿವೇದನೆಯನ್ನು ವರನ ಕೊರಳು ತಬ್ಬಿ ಹಾಡಿನ ಮೂಲಕ ವ್ಯಕ್ತಪಡಿಸುತ್ತಾಳೆ. ಹೀಗೆ ಅಲಂಕೃತವಾದ ಮದುಮಗನನ್ನು ಕುಲದೇವತೆ ಪೂಜೆ ಮಾಡಿಸಿ ಬಲಗೈಯಲ್ಲಿ ಕಠಾರಿ, ಎಡಗೈಯಲ್ಲಿ ನಿಂಬೆಹಣ್ಣು, ಬಗಲಿಗೆ ಎಲೆ, ಅಡಿಕೆ ಸಾಮಾಗ್ರಿಗಳನ್ನು ಇಡುವ ಚೀಲವನ್ನು (ಯೋಲಣಾ ಕೊಥ್ಳಿ) ಹಾಕಿಕೊಂಡಿರುತ್ತಾನೆ.[೨೫]

ಮದುಮಗನ ಜೊತೆಯಲ್ಲಿ 'ಲೇರಿಯಾ' ಎಂಬ ಸಹಾಯಕ ವರನ ಸಾಮಗ್ರಿಗಳನ್ನು ಇಡುವ ಏಳು ಪದರಗಳಿಂದ ಕೂಡಿದ ಚೀಲದಲ್ಲಿ ಒಂದೊಂದು ಪದರಿನಲ್ಲಿ ಒಂದೊಂದು ಬಗೆಯ ಮದುವೆಯ ಸಂದರ್ಭದಲ್ಲಿ ಉಪಯೋಗಿಸಲ್ಪಡುವ ವಸ್ತುಗಳನ್ನು ಹಾಕಿಕೊಂಡು ಮದುವೆಗೆ ಹೋಗುತ್ತಾನೆ. ಇವನನ್ನು ಲೇರಿಯಾ ಅಥವಾ ಸಹಾಯಕ ಎಂಬುದಾಗಿಯೂ ಕರೆಯುತ್ತಾರೆ. ಇವನು ಬುದ್ಧಿವಂತನೂ ಸೂಕ್ಷ್ಮ, ಚಾಣಾಕ್ಷನೂ, ಮುತ್ಸದ್ದಿಯೂ ಹಾಗೂ ಅನುಭವಿಯೂ ಆಗಿರಬೇಕಾಗುತ್ತದೆ. ಏಕೆಂದರೆ ವಿವಾಹ ಮುಕ್ತಾಯದವರೆಗೂ ಮದುಮಗನ ಜೊತೆಯಲ್ಲಿ ಪ್ರತಿಯೊಂದು ಕಾರ್ಯಕಲಾಪಗಳಲ್ಲಿ ವರನ ಸಹಾಯಕನಾಗಿ ಕಾರ್ಯ ನಿರ್ವಹಿಸಬೇಕಾಗುತ್ತದೆ. ಅಲ್ಲದೇ ವಧುವಿನ ಮನೆಯವರು ಕೇಳಿದ ಪ್ರಶ್ನೆಗಳಿಗೆ ನಿರರ್ಗಳವಾಗಿ ಉತ್ತರ ನೀಡುವಷ್ಟು ಸಮರ್ಥನಿರಬೇಕಾಗುತ್ತದೆ. ಮನೆಯೊಳಗಿನಿಂದ ಮೊದಲು ಲೇರಿಯಾನ ಹಿಂದೆ ಬಲಗೈಯಲ್ಲಿ ನಿಂಬೆಹಣ್ಣು ಸಿಕ್ಕಿಸಿದ ಕಠಾರಿಯನ್ನು ಹಿಡಿದು ವರನು ಬರುತ್ತಾನೆ. ಬಾಗಿಲಲ್ಲಿ ವರನ ಕಡೆಯ ಇಬ್ಬರು ವಧುವಿಗೆ ಕೊಡುವುದಕ್ಕೋಸ್ಕರ ತಂದಿರುವ ಸೀರೆಯನ್ನು ವರನ ಮೇಲೆ ಹಿಡಿಯುತ್ತಾರೆ. ಅದರ ಕೆಳಗಿನಿಂದ ವರನು ಹೊರಗೆ ಬರುತ್ತಾನೆ. ಇದನ್ನು 'ಸಾಡಿತಾಣೆರೊ' ಅಂದರೆ ಮದುಮಗನನ್ನು ಹೊರತೆಗೆಯುವುದು ಎಂಬುದಾಗಿ ಕರೆಯುತ್ತಾರೆ.

ಈ ರೀತಿಯ ವರನಿಗೆ ಮನೆಯಿಂದ ಹೊರ ಬಂದು ಚಪ್ಪರದ ಮಧ್ಯದಲ್ಲಿರುವ ಕಂಬಕ್ಕೆ ಪೂಜೆ ಸಲ್ಲಿಸಿ ಕುಂಬದಲ್ಲಿ ಹಾಕಿದ್ದ ರೂಪಾಯಿ ನಾಣ್ಯವನ್ನು ರುಮಾಲಿಗೆ ಕಟ್ಟಿಕೊಂಡು ಗುರುಹಿರಿಯರ ಅನುಮತಿಯ ಮೇರೆಗೆ ತಾಂಡಾದ ನಾಯಕನಿಗೆ ಮೊದಲು ಪಾನಕ ನೀಡುತ್ತಾನೆ.[೮೬] ನಂತರ ಅಲ್ಲಿ ಸೇರಿದವರಿಗೆಲ್ಲಾ ಪಾನಕ ಹಂಚುವ ಕಾರ್ಯ ನಡೆಯುವುದು. ಈ ಸಂದರ್ಭದಲ್ಲಿ ನಾಯಕನು ಪಾನಕಕ್ಕೆ ಸಂಬಂಧಿಸಿದ ಶ್ಲೋಕಗಳನ್ನು ಈ ಕೆಳಗಿನಂತೆ ಹೇಳುತ್ತಾನೆ.

''ಕಸ್ ಮಸ್‌ಕಸೆ ಕಸ್ತೂರಿ
ಘಸನ್ ಕಾಡೆ ಘೋಟಾ
ಸಾಂದಾ ಸಾಂದಾ ಲೋಟಾಮಾರ
ಲೋ ಸಗನ್ ಭಾಯಿ ಘೋಟಾ''[೮೭]

ಕಸಕಸಿ ಕಸ್ತೂರಿ ಮುಂತಾದವುಗಳನ್ನು ಅರೆದು ಪಾನಕವನ್ನು ತಯಾರಿಸಿದೆ. ಈ ಪಾನಕ ತುಂಬಿದ ಲೋಟಾಗಳಿಂದ ಸಂದುಸಂದುಗಳಿಗೆ ಹೊಡೆಯಲಾಗಿದ. ಆದ್ದರಿಂದ ನೆರೆದಂಥ ಬಂಧು ಬಾಂಧವರೇ ಈ ಪಾನಕವನ್ನು (ಘೋಟಾ) ಸ್ವೀಕರಿಸಿರಿ.

ಘೋಟಾ ಕಾರ್ಯದ ಜೊತೆಗೆ ಕಿಚಡಿ ಹಾಗೂ ಹುಗ್ಗಿ ಎರಡನ್ನೂ ಸೇರಿಸಿ ತಯಾರಿಸಿರುವ ಟೆಳೋ ಎಂದು ಕರೆಯಲ್ಪಡುವ ಸಿಹಿ ಪದಾರ್ಥಗಳನ್ನು ದೇವರಿಗೆ ನೈವೇದ್ಯ ಮಾಡಿದ ನಂತರ ಮದುವೆ ಚಪ್ಪರದಲ್ಲಿ ಸೇರಿದವರಿಗೆಲ್ಲಾ ಹಂಚುತ್ತಾರೆ. ಪಾನಕ ಹಂಚುವುದು ಗಂಡಸರ ಕಾರ್ಯವಾದರೆ ಟೇಳೋ ಹಂಚುವುದು ಮಹಿಳೆಯ ಕಾರ್ಯವಾಗಿದೆ. ಈ ಸಂದರ್ಭದಲ್ಲಿ ಟೇಳೋ ಸಂಬಂಧಿಸಿದ ಶ್ಲೋಕಗಳನ್ನು ಈ ಕೆಳಗಿನಂತೆ ಹೇಳುತ್ತಾನೆ.

ಪಂಚ್ ಪಂಚಾತ್ ಸಗಳ ಕಛೇರಿ ರಾಮೇರಿ
ಚಡೆ ಧಾನೇರ್‌ಮೊಟ್, ಅಂಗಬೇಟೋ ಮಳಾಯೇರ್ ಧಾಟ್
ಕಿಚಡಿ ಪಾಡಿವಾಟ್, ಚಳಕತಿ ಮೂಂಗ್
ವಾಪರ್ ಘಾಲಿ ಘೇ, ಕೇರಿವಾತೆ ದೀ
ಲೋ ಸಗನ್‌ಭಾಯಿ ಕಿಚಡಿ[೮೮]

ಶ್ರೀರಾಮನ ಸಭೆಯ ಈ ವಿಶಾಲವಾದ ಕಛೇರಿಯಲ್ಲಿ ಧಾನ್ಯದ (ಕಿಚಡಿ) ಹಂಡೆಯನ್ನು ಇಡಲಾಗಿದೆ. ಮುಂದುಗಡೆ ಪಂಚಾಯಿತಿಯ ಜನರೆಲ್ಲಾ ಸೇರಿದ್ದಾರೆ. ಚಮಚದಿಂದ ಕಿಚಡಿ ತೆಗೆದು ಹೆಂಡದಲ್ಲಿ ದಾರಿಮಾಡಿದೆ. ಕಿಚಡಿ ಮೇಲೆ ತುಪ್ಪವನ್ನು ಸುರಿಯಲಾಗಿದೆ. ಈ ಸಂದರ್ಭದಲ್ಲಿ ಹೇಳುವುದು ಇವೆರೆಡೇ ಮಾತು. ಆದ್ದರಿಂದ ಬಂಧು ಬಾಂಧವರೇ ಈ ಪವಿತ್ರವಾದ ಕಿಚಡಿಯನ್ನು ಸ್ವೀಕರಿಸಿ.

ಈ ಶ್ಲೋಕದಲ್ಲಿಯೂ ಟೇಳೂವನ್ನು ಯಾವ ರೀತಿ ಸಿದ್ಧಪಡಿಸುತ್ತಾರೆ ಎಂಬುದರ ಬಗ್ಗೆ ಹೇಳಲಾಗಿದ್ದು ನೆರೆದಿರುವ ಜನರನ್ನು ಕುರಿತು ನಾಯಕನು ಮನಃ ಪೂರ್ವಕವಾಗಿ ಟೇಳೋವನ್ನು ಸ್ವೀಕರಿಸಿ ಎಂಬುದಾಗಿ ತಿಳಿಸುತ್ತಾನೆ. ನಂತರ ಟೇಳೋವನ್ನು ಸ್ವೀಕರಿಸುತ್ತಾರೆ.

ಸ್ತ್ರೀಯರು ಟೇಳೋವನ್ನು ಹಂಚುವ ಸಂಪ್ರದಾಯ ರೂಢಿಯಲ್ಲಿರುವುದು. ಅಂದರೆ ಗಂಡಸರು ಬೆಲ್ಲದ ಪಾನಕವನ್ನು ವಿತರಿಸಿದರೆ ಸ್ತ್ರೀಯರು ಟೇಳೋ ಹಂಚುವ ಮೂಲಕ ಸಮಾನರು ಎಂಬ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಹಂಚುವ ಸಂಪ್ರದಾಯ ರೂಢಿಗೆ ಬಂದಿರುತ್ತದೆ.

**೧೨. ವರನಿಗೆ ಬೀಳ್ಕೊಡುವುದು**

ಇವರು ವರನನ್ನು ಬೀಳ್ಕೊಡುವುದಕ್ಕೆ ವೆತಾಡುನವಾಳಯೇರೋ ಎಂದು ಹೇಳುತ್ತಾರೆ. ಮದು-ಮಗನನ್ನು 'ವೆತಡು' ಎಂಬುದಾಗಿ ಕರೆಯುತ್ತಾರೆ. ಒಮ್ಮೆ ಮನೆಯಿಂದ ಹೊರ ಕಳುಹಿಸಿದ ವರನಿಗೆ ವಿವಾಹ ಮುಗಿದು ವಧುವನ್ನು ಮನೆತುಂಬಿಕೊಳ್ಳುವರೆಗೂ ಆತನಿಗೆ ಮನೆಯಲ್ಲಾಗಲಿ ಅಥವಾ ಹಂದರಕ್ಕೆ ಪ್ರವೇಶವಿಲ್ಲ. ನಂತರ ಇವನು ತಾಂಡಾದ ದೇವಸ್ಥಾನಕ್ಕೆ ಹೊರಡಲು ಸಿದ್ಧನಾಗುತ್ತಾನೆ. ಈ ಸಂದರ್ಭದಲ್ಲಿ ಹೆಂಗಸರು ಮದುಮಗನ ಕೊರಳು ತಬ್ಬಿಕೊಂಡು ಅಳುತ್ತಾರೆ. ವಧುವಿನ ಮನೆಗೆ ಕಳುಹಿಸುವ ಪೂರ್ವದಲ್ಲಿ ಮದುಮಗನನ್ನು ತಾಂಡದವರು ಅವರವರ ಅನುಕೂಲಕ್ಕೆ ತಕ್ಕಂತೆ ಕಾಣಿಕೆಯನ್ನು ಕೊಟ್ಟು ಬೀಳ್ಕೊಡುವರು. ಸಾಯಂಕಾಲ ಊರಿನ ಪಂಚರು ಮತ್ತು ಡಾವಿಸಾಣಿಯವರು ವರನನ್ನು ಮತ್ತು ಲೇರಿಯಾ ಸಹಾಯಕನನ್ನು ಹಾಡು ಹೇಳುತ್ತಾ ಹೆಣ್ಣಿನ ಮನೆಗೆ ಬೀಳ್ಕೊಡುತ್ತಾರೆ.

''ಸ್ವಲ್ಪ ಮುಂದೆ ಹೋಗಿ ವರನ ಬಿಳಿ ದೋತ್ರವನ್ನು ಕೆಳಗೆ ಹಾಸಿ ವರನ ರುಮಾಲಿಗೆ ಕಟ್ಟಿದ ರೂಪಾಯಿ ನಾಣ್ಯವನ್ನು ಬಟ್ಟೆಯ ಮೇಲಿರಿಸಿ ಗುರು ಈ ವರನನ್ನು ನಿನ್ನ ಮಡಿಲಿಗೆ ಹಾಕಿದ್ದೇವೆ. ಈತನ ರಕ್ಷಣೆಯ ಪೂರ್ಣ ಜವಾಬ್ದಾರಿ ನಿನ್ನದು ಎಂದು ವಿನಂತಿಸಿ ಮತ್ತೆ ನಾಣ್ಯವನ್ನು ಯಥಾಪ್ರಕಾರ ವರನ ರುಮಾಲಿನ ತುದಿಗೆ ಕಟ್ಟಿ ಕಳಿಸಿಕೊಡುತ್ತಾರೆ.'' ಇದಕ್ಕೆ (ಸಾಕೇರೋ ರಬಿಯಾ) ಎಂದು ಕರೆಯುತ್ತಾರೆ. ಸ್ತ್ರೀಯರು ಹಾಡಿನೊಂದಿಗೆ ವರನಿಗೆ ಮತ್ತು ಅವನ ಜೊತೆಗಾರನನ್ನು ಊರಿನ ಗಡಿ ದಾಟಿಸಿ ಬರುತ್ತಾರೆ.

**೧೩. ವರನಿಗೆ ವಧುವಿನ ಮನೆಯವರಿಂದ ಸ್ವಾಗತ :** ಮದುಮಗ ಮತ್ತು ಲೇರಿಯಾ ಇಬ್ಬರು ವಧುವಿನ ತಾಂಡವನ್ನು ತಲುಪಿದ ನಂತರ ಮರದ ನೆರಳಿನಲ್ಲಿ ಅಥವಾ ಶಾಲೆಯಲ್ಲಿ ಅಥವಾ ದೇವಸ್ಥಾನದಲ್ಲಿ ಕುಳಿತುಕೊಳ್ಳುತ್ತಾರೆ. ಆಗ ಹೆಣ್ಣಿನ ಮನೆಯವರಿಗೆ ವರನ ಕಡೆಯವರು ಆಗಮಿಸಿರುವ ವಿಷಯ ತಿಳಿಸಿದ ತಕ್ಷಣ ಎಲ್ಲರೂ ಉಡಿಯಲ್ಲಿ ಜೋಳ, ಕೈಯಲ್ಲಿ ಆರತಿ ತಟ್ಟೆಯನ್ನು ಹಿಡಿದುಕೊಂಡು ಬಂದು ಸ್ವಾಗತಿಸುತ್ತಾರೆ. ಈ ಸಂದರ್ಭದಲ್ಲಿ ಇಬ್ಬರು ಸಂಬಂಧಿಕರು ಎದುರುಬದುರು ಜೋಳವನ್ನು ಉಗ್ಗುತ್ತಾ ಮನೆಗೆ ಕರೆದುಕೊಂಡು ಹೋಗುತ್ತಾರೆ. ಆವಾಗ ಇವರಲ್ಲಿ ನಿಶ್ಚಿತಾರ್ಥ ಕಾರ್ಯ ನಡೆಯುತ್ತದೆ.

**೧೪. ತಿಲಕ ಕಾರ್ಯ (ಟಿಕೋ ಲಗಾಡೇರೂ) :** ತಿಲಕ ಹಚ್ಚುವ ಕಾರ್ಯ ಎಲ್ಲ ಹಿರಿಯರ ಸಮ್ಮುಖದಲ್ಲಿ ನಡೆಯುತ್ತದೆ. ಇದಕ್ಕೆ ಇವರು (ಟಿಕೋ ಡೇರೂ) ಎನ್ನುತ್ತಾರೆ. ವಧುವಿನ ಹಿರಿಯಣ್ಣನು ತಿಲಕ ಹಚ್ಚುವ ಕಾರ್ಯವನ್ನು ನೆರವೇರಿಸಿ ಕೊಡುತ್ತಾನೆ. ವಧುವಿನ ಅಣ್ಣ ತಮ್ಮ ಸಹೋದರಿಯ ಹಣೆಗೆ ಅರಿಶಿಣ ಕುಂಕುಮ ಹಚ್ಚುವುದರಿಂದ ಅವಳು ಬೇರೊಬ್ಬರ ವಶವಾದಳೆಂಬ ಗ್ರಹಿಕೆ. ಒಂದು ಕಂಚಿನ ತಟ್ಟೆಯಲ್ಲಿ ಸ್ವಲ್ಪ ಅಕ್ಷತೆ ಅರಿಶಿಣ, ಅಕ್ಕಿ, ವೀಳ್ಯದೆಲೆ, ಅಡಿಕೆ, ಕುಪ್ಪಸ, ಮದುಮಗನ ಕಡೆಯವರು ತಂದಿರುವ ಕೈಗಡಗ ಇಟ್ಟುಕೊಂಡು

ಎಲ್ಲರಿಗೂ ಮುಟ್ಟಿಸಿ ಸೋದರ ವಧುವಿನ ಕೈಯಲ್ಲಿ ಕಡಗ ಇಟ್ಟು ತಿಲಕ ಹಚ್ಚುತ್ತಾನೆ. ವಧು ಅಣ್ಣನ ಕೊರಳು ತಬ್ಬಿಕೊಂಡು ದುಃಖದ ವ್ಯಥೆಯನ್ನು ಹಾಡಿನ ಮೂಲಕ ತೋರ್ಪಡಿಸುತ್ತಾಳೆ. ಈ ಪ್ರಸಂಗದ ಹಾಡುವ ಗೀತೆಗೆ 'ಧಾವಲೂ' ಎಂದು ಕರೆಯುತ್ತಾರೆ. ಹಾಡುವ ಹಾಡು ಅರ್ಥ ಗರ್ಭಿತವಾಗಿರುತ್ತದೆ.

''ವರಾಣೀ ಘರೇರೋ ವರಾಣೀ ಟಿಕೋ
ಮತ್ತ್ರಜ ಲಗಾಡೋ ವಿರೇಣಾ ಅಹಿಂಯಾ''
''ತಮಜು ಲಗಾಡಿಯೋತೋ
ತಮಾರಿ ಭೇನಜ ವರಾಣಿ ದೀಸು ವಿರೇಣಾ ಅಯಾ''
''ತಮಾರಿ ಲಾಡೇ ಪೋಡೇರಿ ಭೇನಜ
ವರಾಣಿ ದೀಸು ವಿರೇಣಾ ಆ ಹಿಂಯಾ''
ಕನ್ನಡದ ಅರ್ಥ: ಬೇರೆಯವರ ಮನೆಯ ಕುಂಕುಮ
ಹಚ್ಚಲು ಬೇಡ ಸೋದರ,
ನೀವೆ ಹಚ್ಚಿ ಬಿಟ್ಟರೆ
ನಿಮ್ಮ ಸೋದರಿ ಬೇರೆಯವಳಾಗಿ ಕಾಣಿಸುತ್ತೀನಿ
ಸೋದರ
ನಿಮ್ಮ ಪ್ರೀತಿಯ ಮುದ್ದಿನ ಸೋದರಿ
ಬೇರೆಯವಳಾಗಿ ಬಿಡುತ್ತಾಳೆ. ಸೋದರ

ಎಂದು ಹಾಡಿನ ಮೂಲಕ ತಮ್ಮ ಆತ್ಮ ನಿವೇದನೆಯನ್ನು ವ್ಯಕ್ತಪಡಿಸುತ್ತಾಳೆ. ಇದೇ ರೀತಿ ವರನಿಗೆ ಸೋದರಳಿಯ ತಿಲಕ ಹಚ್ಚುತ್ತಾನೆ. ನಂತರ ವರನನ್ನು ಒಳಗೆ ಸ್ವಾಗತಿಸಿಕೊಳ್ಳುವ ಪದ್ಧತಿ ರೂಢಿಯಲ್ಲಿದೆ.

**೧೫. ವಿವಾಹ ಬಂಧನ (ವಾಯಾ ಬಾಂದೇರೂ) :**

ನಿರಂತರವಾಗಿ ಸಾಗಿ ಬಂದ ವಿವಾಹ ಕಾರ್ಯದ ವಿವಿಧ ವಿಧಿಗಳು ಕೊನೆಗೊಂಡು ಪ್ರಮುಖವಾದ ವಿವಾಹ ಬಂಧನ ಕಾರ್ಯಕ್ರಮ ಏರ್ಪಡಿಸಲಾಗುತ್ತದೆ. ತಾಂಡಾದ ಅವಿವಾಹಿತ ಯುವತಿಯರು ಕುಂಬಾರರ ಮನೆಗೆ ಹೋಗಿ ಹೊಸ ಮಡಿಕೆಗಳನ್ನು ತಂದು ರಾತ್ರಿ ಊಟದ ನಂತರ ಮದುವೆ ಮನೆಯ ಮುಂದಿನ ಅಂಗಳವನ್ನು ಸ್ವಚ್ಛಗೊಳಿಸಿ ಮಂಡಲ ಹಾಕಿ ನಾಲ್ಕು ದಿಕ್ಕುಗಳಿಗೆ ಒಂದೊಂದು ಮೂಲೆಗೆ ಏಳೇಳು ಮಡಿಕೆಗಳಂತೆ ನಾಲ್ಕು ಸಾಲುಗಳನ್ನು ಜೋಡಿಸುವರು. ಬಿಳಿ ಎಕ್ಕದ ಕಡ್ಡಿ ಮತ್ತು ಕೋಲು ಕಳ್ಳಿಯ ರಂಬೆಯನ್ನು ಮಡಿಕೆ ಸಾಲುಗಳಿಗೆ ಕಟ್ಟುತ್ತಾರೆ. ಇವುಗಳ ಮಧ್ಯದಲ್ಲಿ ಪೂರ್ವ ಮತ್ತು ಪಶ್ಚಿಮ ಭಾಗಗಳಿಗೆ ಎರಡು ಒನಕೆಗಳನ್ನು ಅಲಂಕರಿಸಿ ನಿಲ್ಲಿಸುವರು. ಈ ರೀತಿಯಾಗಿ ಅಲಂಕರಿಸಿದ ಸಾಲುಗಳಿಗೆ ಆವಾಗಳೆಂದು ಕರೆಯುವರು. ಮತ್ತು ಅಲ್ಲಿಗೆ ಅನ್ಯರ ಪ್ರದೇಶವನ್ನು ನಿಷೇಧಿಸಿರುತ್ತಾರೆ. ಕಾರಣ ಭೂತಪ್ರೇತಗಳಲ್ಲಿ ನಂಬಿಕೆ ಇಟ್ಟ ಲಂಬಾಣಿಗರು ಮಡಿವಂತಿಕೆ ಇಲ್ಲದ ಜನತೆ ಈ ಪ್ರದೇಶದಲ್ಲಿ ಪ್ರವೇಶ ಮಾಡಿದರೆ ಮಡಿಯು ಮೈಲಿಗೆಯಾಗಿ ಅಗೋಚರ ದುಷ್ಟಶಕ್ತಿಗಳು ಪ್ರವೇಶ ಮಾಡಿ ಶುಭಕಾರ್ಯಕ್ಕೆ ತೊಂದರೆ ನೀಡಿಯಾವು ಎಂಬ ನಂಬಿಕೆ.

ಸ್ತ್ರೀಯ ಬಾಲ್ಯದ ಉಡುಪನ್ನು ಬದಲಾಯಿಸಿ ತಾತ್ಕಾಲಿಕವಾಗಿ ಬಿಳಿಯ ಉಡುಪುಗಳನ್ನು ಧರಿಸಿ ಮದುಮಗನಿಗೂ ಸಹ ಈ ಸಮಯದಲ್ಲಿ ಶ್ವೇತ ಉಡುಪುಗಳನ್ನು ತೊಡಿಸಿ ವರನನ್ನು ಸುಮಂಗಲಿಯರು ಮನೆಯ ಮುಂಬಾಗಿಲಿನ ಮೂಲಕ ಹೊರಗೆ ಕರೆತರುತ್ತಾರೆ. ಮದುಮಕ್ಕಳೀರ್ವರಿಗೂ ಬಲಗೈ ಮತ್ತು ಎಡಗಾಲುಗಳಿಗೆ ಹಾಗೂ ಇಟ್ಟಿರುವ ಒನಕೆಗಳಿಗೆ ಕಾರೆ ಬೀಜಗಳನ್ನು ಕಟ್ಟುವರು. ಈ ಕಾರೇ ಬೀಜವನ್ನು 'ಮೆಂಡಲ್' ಎನ್ನುವರು. ಕಾರೇ ಬೀಜಗಳನ್ನು ಕಟ್ಟುವ ಉದ್ದೇಶವೆಂದರೆ ತಮ್ಮ ಜನಾಂಗದ ಮೂಲ ಪುರುಷನಾದ 'ದಾದಾಮೋಲ' ತನ್ನ ಸಾಕು ಮಕ್ಕಳಿಗೆ ಮದುವೆ ಮಾಡಿಸುವಾಗ ದುಷ್ಟಶಕ್ತಿಗಳನ್ನು ನಿಗ್ರಹಿಸಲು ಕಾರೇ ಬೀಜಗಳನ್ನು ಮಂತ್ರಿಸಿ ಕಟ್ಟಿದನೆಂಬುದು ಇವರ ನಂಬಿಕೆ. ಈ ವೇಳೆಗೆ ಜಾತ್ ಮತ್ತು ಭುಕ್ಯಾ ಗೋತ್ರದ ಇಬ್ಬರು ಅವಿವಾಹಿತ ಗಂಡು ಮಕ್ಕಳನ್ನು ಕರೆಸಿ ಒಂದು ಜೊತೆ ಹೆಣ್ಣು ಗಂಡುಗಳಿಂದ ಅಕ್ಷತೆಯನ್ನು ಮತ್ತೊಂದು ಜೊತೆ ಹೆಣ್ಣು ಗಂಡುಗಳಿಂದ ಜೀರಿಗೆ ಮತ್ತು ಬೆಲ್ಲದ ತುಣುಕುಗಳನ್ನು ತರಿಸಿ ವಧುವರರ ತಲೆಯ ಮೇಲೆ ಏಕಕಾಲದಲ್ಲಿ ಅಕ್ಷತೆ ಮತ್ತು ಜೀರಿಗೆಯನ್ನು ಅಭಿಷೇಕ ಮಾಡುವರು. ಇದಾದ ಮೇಲೆ ಸಮೀಪದ ತಿಪ್ಪೆಯ ಸ್ಥಳಕ್ಕೆ ಕರೆತಂದು ಗುದ್ದಲಿಯಿಂದ ವಧುವರರು ಏಳು ಬಾರಿ ತಿಪ್ಪೆಯನ್ನು ಅಗೆಸುವರು ಹಿಂದಿರುಗುವಾಗ ಖರ್ಜೂರ, ಬೆಲ್ಲ, ಕೊಬ್ಬರಿ ತುಂಬಿರುವ ಮಣ್ಣಿನ ಮುಚ್ಚಳವನ್ನು ವಧು ವರನಿಗೆ ನೀವಳಿಸುವಳು.

ಈ ಶಾಸ್ತ್ರ ಮುಕ್ತಾಯವಾದ ನಂತರ ವಧು-ವರರನ್ನು ಮನೆಗೆ ಕರೆತಂದು ಇಬ್ಬರಿಗೂ ಅರಿಷಿನ ಮತ್ತು ಮೆಹಂದಿಯನ್ನು ಹಚ್ಚುವರು; ಇದನ್ನು 'ಮೆಹಂದಿಲಗಾಡೆರೊ' ಎಂದು ಕರೆಯುವರು. ಇದಾದ ನಂತರ ನೆಟ್ಟಿರುವ ಒನಕೆಯ ಬಳಿ ಮರದ ಪೀಠದ ಮೇಲೆ ಮೊದಲು ವಧುವನ್ನು ಕೂರಿಸಿ ಹೊಸ ಮಡಿಕೆಗಳಲ್ಲಿ ತುಂಬಿರುವ ತಣ್ಣೀರಿನಿಂದ ಮಂಗಳ ಸ್ನಾನ ಮಾಡಿಸುವರು. ಈ ಸಂದರ್ಭದಲ್ಲಿ ಸ್ತ್ರೀಯರು ಶೃಂಗಾರ ಗೀತೆಗಳನ್ನು ಹಾಡುವರು. ಇದಾದ ಮೇಲೆ ವರನನ್ನು ಕರೆತಂದು 'ಕಾಟೋಟಿ ಪೀಠ' (ನೆಟ್ಟಿರುವ ಒನಕೆಯ ಬಳಿ ಇರುವ ಪೀಠ) ಮೇಲೆ ಕುಳ್ಳಿರಿಸಿ ಸ್ನಾನಕ್ಕೆ ಸಿದ್ಧಗೊಳಿಸುವರು. ವಧುವಿನ ತಾಯಿ ವರನ ತಲೆಗೆ ಎಣ್ಣೆ ಹಚ್ಚಿ ತಲೆಯನ್ನು ಬಾಚುವಳು. ತಲೆಯಿಂದ ತೊಟ್ಟಿಕ್ಕುವ ನೀರನ್ನು ಬೊಗಸೆಯಿಂದ ಹಿಡಿದು ಕುಡಿಯುವಳು. ಇದನ್ನು 'ಚೋಟಿರ್ ಪಾಣಿ ಪಿಯೋರೋ' ಎನ್ನುವರು.[೧]

**೧೬. ಡೋರಣೋ ಭಾಂದೆರೋ :** ವಿವಾಹ ಕಾರ್ಯಗಳಲ್ಲೆಲ್ಲಾ ಈ ಕಾರ್ಯಕ್ಕೆ ಪವಿತ್ರವಾದ ಸ್ಥಾನವನ್ನು ನೀಡಿದ್ದಾರೆ. ಈ ಕಾರ್ಯದಲ್ಲಿ ಯಾವುದೇ ಬಗೆಯ ಅಡೆ-ತಡೆಗಳು ಉಂಟಾದರೆ ಮುಂದೆ ಸಂಸಾರದಲ್ಲಿ ಕಷ್ಟ ಒದಗುವುದೆಂದು ಭಾವಿಸುತ್ತಾರೆ. 'ಡೋರಣೋ ಭಾಂದೆರೊ' ಎಂದರೆ ದಾರ ಕಟ್ಟುವುದು ಎಂದರ್ಥ. ಅಂದರೆ ವಧು ವರರಿಬ್ಬರಿಗೂ ಅಲ್ಲಿ ಸೇರಿರುವ ಜನರಲ್ಲಿ ಊರಿನ ನಾಯಕ, ಡಾವ್ೋ, ವಧುವಿನ ತಂದೆ, ತಾಯಿ, ಅಣ್ಣ ಚಿಕ್ಕಪ್ಪ, ದೊಡ್ಡಪ್ಪ ಇನ್ನು ಮುಂತಾದವರು ಒಂದೊಂದು ಗಂಟುಗಳಂತೆ ಏಳು ಗಂಟುಗಳನ್ನು ಕಟ್ಟುತ್ತಾರೆ.[೨]

ಮಣೆಯ ಮೇಲೆ ಒಂದಾದ ನಂತರ ಒಬ್ಬೊಬ್ಬರನ್ನು ಕೂರಿಸಿ ಸುತ್ತಲೂ ಚೌಕಾಕಾರದಲ್ಲಿ ನಾಲ್ಕು ಮೂಲೆಗಳಿಗೂ ನಾಲ್ಕು ಮಣ್ಣಿನ ಕುಡಿಕೆಗಳನ್ನಿಟ್ಟು ಇವುಗಳನ್ನು ಸಿಹಿ ಪದಾರ್ಥಗಳಿಂದ ತುಂಬುತ್ತಾರೆ. ಹಾಡು ಹಾಡುತ್ತಾ ಎಲ್ಲಾ ಹಿರಿಯರೂ ಏಳು ಸುತ್ತುಗಳನ್ನು ಹಸಿ ದಾರಗಳಿಂದ ಕುಡಿಕೆಗಳಿಗೆ ಸುತ್ತುತ್ತಾರೆ. ನಂತರ ಆ

ದಾರವನ್ನು ಕುಡಿಕೆಯ ಕಂಠದಿಂದ ತೆಗೆದು ವಧು-ವರರಿಬ್ಬರಿಗೂ ಕೊರಳಿಗೆ ಹಾರದಂತೆ ಸುತ್ತಿ ಅದಕ್ಕೆ ತಂದೆ, ತಾಯಿ, ಅಣ್ಣ, ತಮ್ಮಂದಿರು ಹಾಗೂ ಊರಿನ ಹಿರಿಯರುಗಳಿಂದ ಏಳು ಗಂಟು ಬಿಗಿಸುತ್ತಾರೆ. ಅದೇ ರೀತಿ ಬಲಗೈಗೂ ಸುತ್ತಿ ಏಳು ಗಂಟುಗಳನ್ನು ಹಾಕುತ್ತಾರೆ. ನಂತರ ಇಬ್ಬರಿಗೂ ಸ್ನಾನ ಮಾಡಿಸುತ್ತಾರೆ. ವಧುವಿಗೆ ಸ್ನಾನ ಮಾಡಿಸುವಾಗ ಯುವತಿಯರು ಹಾಗೂ ಹಿರಿಯ ಹೆಂಗಸು ಅವಳ ಸೌಂದರ್ಯವನ್ನು ವರ್ಣಿಸುತ್ತಾ ಹಾಡುತ್ತಾರೆ. ಮಧುಮಗಳು ಭಯ, ನೋವು, ಅರ್ಥ ರಹಿತವೆಂದು ತಂದೆ-ತಾಯಿ, ಬಂದು-ಬಳಗದವರೆಲ್ಲಾ ಸಂದರ್ಭಾನುಸಾರ ಸಹಕರಿಸುವುದಾಗಿ ಹಾಡಿನ ರೂಪದಲ್ಲಿ ಧೈರ್ಯವನ್ನು ತುಂಬುತ್ತಾರೆ. ಸ್ನಾನ ಮುಗಿದ ಮೇಲೆ ಅವರಿಬ್ಬರನ್ನೂ ಪೂರ್ವಾಭಿಮುಖವಾಗಿ ಒತ್ತೊತ್ತಾಗಿ ಕುಳ್ಳಿರಿಸಿ ಮಧುಮಗನ ಸಹೋದರನು ವಧು-ವರನು ಧರಿಸುವ ಬೆನ್ನ ಮೇಲಿನ ಬಟ್ಟೆಯ ಮೇಲೆ ಅರಿಷಿಣವನ್ನು ಕಲೆಸಿ ಸ್ವಸ್ತಿಕ್ ಚಿನ್ಹೆ ಬರೆಯುತ್ತಾರೆ. ಇದನ್ನು 'ಸಾಂಖ್ಯಾಪೂರೇರೋ' ಎನ್ನುತ್ತಾರೆ. ಈ ಕಾರ್ಯದ ನಂತರ ಕೆಲವು ಆಟವನ್ನು ಆಡುವ ರೂಢಿ ಇವರಲ್ಲಿದೆ. ಥಾಲ್ಯ ಗೋತ್ರದ ವ್ಯಕ್ತಿ ಬ್ರಾಹ್ಮಣನಂತೆ ಬಟ್ಟೆಗಳನ್ನು ಧರಿಸಿಕೊಂಡು ಈ ಆಟವನ್ನು ಆಡುತ್ತಾರೆ.

ತದ ನಂತರ ಕೊರಳಿಗೆ ರಾತ್ರಿ ಕಟ್ಟಿದ ಹಸಿ ದಾರದ ಏಳು ಗಂಟುಗಳನ್ನು ಬಲಗೈಗೆ ಕಟ್ಟಿದ ದಾರದ ಏಳು ಗಂಟುಗಳನ್ನು ಗಂಡು ಹೆಣ್ಣಿಗೆ ಕಟ್ಟಿರುವ ಗಂಟುಗಳನ್ನು ಹಾಗೂ ಹೆಣ್ಣು ಗಂಡಿಗೆ ಕಟ್ಟಿರುವ ಗಂಟುಗಳನ್ನು ಪರಸ್ಪರ ಬಿಚ್ಚುತ್ತಾರೆ. ಇದನ್ನು 'ಡೋರಣ ಛೋಡೇರೋ' ಎಂದು ಕರೆಯುತ್ತಾರೆ. ನಂತರ ಒನಕೆಯ ಬಳಿಗೆ ಮದು ಮಕ್ಕಳನ್ನು ಕರೆದುಕೊಂಡು ಹೋಗಿ ಮದುಮಗನ ಹಿಂದೆ ಮದುಮಗಳನ್ನು ಒಟ್ಟಾಗಿ ನಿಲ್ಲಿಸಿ ಅವಳ ಎರಡೂ ಕೈಗಳನ್ನು ಮದುಮಗನ ಕಂಕುಳಲ್ಲಿ ಭದ್ರಪಡಿಸಿ ಮಂಡಲಾಕಾರದಲ್ಲಿರುವ ಒನಕೆಯ ಸುತ್ತ ಏಳು ಬಾರಿ ಸುತ್ತಿಸುತ್ತಾರೆ. ಏಳು ಬಾರಿ ಸುತ್ತಿದ ನಂತರ ಒನಕೆಗಳ ಪಕ್ಕದಲ್ಲಿ ನೆಲ ಸಾರಿಸಿ ಅಕ್ಕಿ ಹಿಟ್ಟಿನಿಂದ ರಂಗೋಲೆ ಹಾಕುತ್ತಾರೆ. ಇದನ್ನು 'ಚೋಕೋ ಪೂರೇರೋ' ಎಂದು ಕರೆಯುತ್ತಾರೆ.

ಒಳಗೆ ಸ್ವಲ್ಪ ನೆಲ ಸಾರಿಸಿ ಸ್ವಸ್ತಿಕ ಮಾದರಿ ರಂಗೋಲಿ ಹಾಕಿ ಅದರ ಮೇಲೆ ಒಂದು ಕರಿಯ ಕಂಬಳಿ ಹಾಸಿ ವಧು-ವರರನ್ನು ಕೂರಿಸುವರು. ವಧುವಿನ ಅತ್ತಿಗೆಯು ಇಬ್ಬರ ಮೇಲೆ ಒಂದು ಕಂಬಳಿಯನ್ನು ಹೊದಿಸಿ ಇಬ್ಬರಿಗೆ ಗಂಡಿನ ಎಂಜಲು ಹೆಣ್ಣಿಗೆ, ಹೆಣ್ಣಿನ ಎಂಜಲು ಗಂಡಿಗೆ ಸಿಹಿ ತಿನ್ನಿಸುವರು. ಹೀಗೆ ತಿನ್ನಿಸಿದರೆ ಗಂಡ ಹೆಂಡಿರ ಪ್ರೀತಿಯು ಕೊನೆಯವರೆಗೆ ಇರುತ್ತದೆ ಎಂಬ ನಂಬಿಕೆ. ಇದಕ್ಕೆ ಕೋಳಿಯಾ ಖರಾಯೇರೋ ಎಂದು ಹೇಳುವರು.[೧]

**೧೭. ಅಕ್ಕಿಗಂಜಿ ಆಟ ಆಡಿಸುವುದು (ಮಾಂಡ ರಮಾ ಡೇರೋ) :** ರೊಟ್ಟಿ ಮಾಡುವ ಮರದ ರೊಟ್ಟಿ ಬಂಡಿಯಲ್ಲಿ ಅಕ್ಕಿ ಗಂಜಿಯನ್ನು ತುಂಬಿ ವಧು-ವರರನ್ನು ಪರಸ್ಪರ ಅಭಿಮುಖವಾಗಿ ಕುಳ್ಳಿರಿಸಿ ಅದನ್ನು ಮಧ್ಯದಲ್ಲಿಟ್ಟು ಅದರ ಒಳಗೆ ಗಂಡು-ಹೆಣ್ಣಿನ ಬಲಗೈಗಳನ್ನಿರಿಸಿ ಒಂದು ತಾಮ್ರದ ನಾಣ್ಯ, ಒಂದು ರೂಪಾಯಿ ನಾಣ್ಯ, ಒಂದು ಅಡಿಕೆ, ಒಂದು ಕವಡೆ ಎಲ್ಲವನ್ನು ಒಟ್ಟಿಗೆ ಇಬ್ಬರ ಕೈಯ ಮಧ್ಯೆ ಏಳು ಸಾರಿ ಹಾಕುತ್ತಾರೆ. ಯಾರು ಹೆಚ್ಚು ಬಾರಿ ರೂಪಾಯಿ ನಾಣ್ಯಗಳನ್ನು ಎತ್ತಿಕೊಳ್ಳುತ್ತಾರೋ ಅವರು ಗೆದ್ದಂತೆ. ಈ ಸಂದರ್ಭದಲ್ಲಿ ವಧುವಿಗೆ ಯುವತಿಯರೆಲ್ಲಾ ಪ್ರೋತ್ಸಾಹಿಸಿದರೆ ಯುವಕರೆಲ್ಲಾ ವರನಿಗೆ ಪ್ರೋತ್ಸಾಹಿಸಿ ಹುರಿದುಂಬಿಸುತ್ತಾರೆ. ಈ ಆಟದ ಮೂಲಕ ಗಂಡು-

ಹೆಣ್ಣಿನ ಚಾಕಚಕ್ಯತೆ ಜಾಣತನವನ್ನು ಆಟದಿಂದ ಪರೀಕ್ಷಿಸಿ ತಾವೂ ಆನಂದಿಸುತ್ತಾ ವಧು-ವರರ ಮನಸ್ಸಿಗೂ ಆನಂದವನ್ನು ಉಂಟುಮಾಡುತ್ತಾರೆ. ಈ ಆಟದ ನಂತರ ಮಧುಮಗನಿಗೆ ಮಣ್ಣಿನ ಮುಚ್ಚಳ (ಚಿಪ್ಪ)ವನ್ನು ಮದುಮಗನ ನಾದಿನಿಯು ಅಥವಾ ಅಳಿಯನೂ ವರನ ಬಲಗಾಲಿಗೆ ತಾಗಿಸಲು ಒಂದೇ ಸಮನೆ ಮಿಂಚಿನಂತೆ ಆಡಿಸುತ್ತಾರೆ. ಗಂಡು ಕಾಲು ನೆಲಕ್ಕೆ ತಾಗದಂತೆ ಅದನ್ನು ಹೊದ್ದು ಒಂದೇ ಸಾರಿಗೆ ಒಡೆದು ಹಾಕಬೇಕು. ಇದನ್ನು ಡೊಸ್ಕ್ಯ ಪೂಡೇರೋ ಎಂದು ಹೇಳುವರು.[೧೪] ಇದರೊಂದಿಗೆ ಅಂದಿನ ಕಾರ್ಯಕ್ರಮ ಮುಗಿಯುತ್ತದೆ.

**೧೮. ಮಂಗಳ ಸ್ನಾನ (ನವಲೆರಿ ವೆತಡುರ್ ಅಂಗೊಳಿ) :** ಮಂಗಳ ಸ್ನಾನವನ್ನು ಇವರು ನವಲೆರಿ ವೆತಡರ್ ಅಂಗೊಳಿ ಎಂದು ಹೇಳುವರು. ಈ ಸಮಯದಲ್ಲಿ ವರನ ಬಲಿಷ್ಠತೆ ಮತ್ತು ಧೈರ್ಯವನ್ನು ಪರೀಕ್ಷಿಸಲಾಗುತ್ತದೆ. ವರನಿಗೆ ಮೈತುಂಬಾ ಎಣ್ಣೆಯನ್ನು ಹಚ್ಚಿ ಮಂಡಲದ ಬಳಿ ಇರುವ ಒನಕೆಯ ಹತ್ತಿರ ಸ್ನಾನಕ್ಕೆಂದು ಸಿದ್ಧಪಡಿಸಿದ ಮಣೆಯ ಮೇಲೆ ಕುಳ್ಳಿರಿಸುತ್ತಾರೆ. ಯೌವನಾವಸ್ಥೆಯ ಸ್ತ್ರೀಯರು ಸ್ನಾನ ಮಾಡಿಸುವ ನೆಪದಲ್ಲಿ ಅವನ ಸೊಂಟಕ್ಕೆ ಕೈ ಹಾಕಿ ಹಿಂದಕ್ಕೆ ಎಳೆದು ಬೀಳಿಸಲು ಪ್ರಯತ್ನಿಸುತ್ತಾರೆ. ಈ ಸಮಯದಲ್ಲಿ ಲೇರಿಯಾನು ವರನಿಗೆ ಸಹಾಯಕನಾಗಿ ನಿಲ್ಲುತ್ತಾನೆ. ಜೊತೆಗಾರನನ್ನು ಬಿಟ್ಟು, ಬೇರೆ ಯಾರು ಇವನ ಸಹಾಯಕ್ಕೆ ಬರುವಂತಿಲ್ಲ. ಈ ಎಳೆದಾಟದಲ್ಲಿ ಮದುಮಗನು ಬಿದ್ದುಬಿಟ್ಟರೆ ಅವನು ಶಕ್ತಿಹೀನನೆಂದು ಹೆಂಡತಿಯನ್ನು ಆಳಲಾರ; ಹೇಡಿ ಎಂದು ಬಹಳಷ್ಟು ಅಪಹಾಸ್ಯಕ್ಕೆ ಒಳಪಡಿಸಲಾಗುವುದು. ಈ ಸಂದರ್ಭದಲ್ಲಿ ಮದುಮಗಳ ಸ್ನಾನದಲ್ಲಿ ಯಾವ ವಿಶೇಷವು ಇರುವುದಿಲ್ಲ.[೧೫]

**೧೯. ತಾಳಿಕಾರ್ಯ :** ವಧುವಿಗೆ ಮಾಂಗಲ್ಯಧಾರಣೆ ಸಂಪ್ರದಾಯ, ಹಿಂದೂ ಸಮಾಜದ ಇತರೇ ಬುಡಕಟ್ಟು ಸಮುದಾಯದಂತೆ ಮಾಂಗಲ್ಯ ಧಾರಣೆಯು ಈ ಸಮುದಾಯದಲ್ಲಿ ಕಂಡುಬರುವುದಿಲ್ಲ. ತನ್ನ ತವರಿನ ಉಡುಗೊರೆಯನ್ನು ಬಿಟ್ಟ, ವರನ ಕಡೆಯವರು ತಂದಂತಹ ಉಡುಗೊರೆ ಚೊಡೋ, ಮತ್ತು ಘುಂಗರಿಗಳು ಕರಿಮಣಿಸರ, ಸಿಮಿಯ ಬೆಳ್ಳಿ ಕಡಗಗಳು, ಕಾಲುಂಗುರ ಇವರ ಮಂಗಳ ಸೂತ್ರಗಳಾಗಿರುತ್ತವೆ. ಚೊಡೋಧಾರಣಾ ಸಮಯದಲ್ಲಿ ವರನ ಕೈಯಿಂದಲೇ ಶಾಸ್ತ್ರೋಕ್ತವಾಗಿ ವಧುವಿನ ತೋಳುಗಳಿಗೆ 'ಚೊಡೋ' (ದಂತದ ಬಳೆಗಳು) ತೊಡಿಸಲಾಗುತ್ತದೆ. ಇತರ ಹಿಂದೂ ಮಹಿಳೆಯರು ಧರಿಸುವ ಮಾಂಗಲ್ಯದಷ್ಟು ಪಾವಿತ್ರತೆಯನ್ನು ಲಂಬಾಣಿಗರ ಸ್ತ್ರೀಯರು ಅಕ್ಕಪಕ್ಕ ಕಿವಿಯ ಮೇಲೆ ಬರುವಂತೆ ಕೂದಲೊಂದಿಗೆ ಹೆಣೆದು ಕಟ್ಟಿಕೊಂಡಿರುವ ಘುಂಗರಿಗಳೂ ಸಹ ಪಡೆದುಕೊಂಡಿದೆ. ಈ ಚೊಡೋ ಮತ್ತು ಘುಂಗರಿಗಳು ಮುತ್ತೈದೆತನದ ಪ್ರತಿರೂಪವಾಗಿರುತ್ತದೆ. ಹೀಗೆ ಸಾಂಪ್ರದಾಯಿಕ ಉಡುಗೊರೆಯಿಂದ ತಾಳಿ ಕಾರ್ಯ ಮಾಡುತ್ತಾರೆ.[೧೬]

ಆದರೆ ಇತ್ತೀಚಿನ ದಿನಗಳಲ್ಲಿ ಲಂಬಾಣಿಗರು ಆಧುನಿಕತೆಯ ಪ್ರಭಾವದಿಂದ ಇತರರು ಅನುಸರಿಸುವಂತಹ ಎಲ್ಲವುಗಳನ್ನು ಅನುಸರಿಸುತ್ತಿದ್ದಾರೆ.

**೨೦. ಗೋಟ್ ಕಾರ್ಯಕ್ರಮ :** ವಧುವಿನ ಕಡೆಯವರು ಒಂದು ಕುರಿಯನ್ನು ಬಲಿಕೊಟ್ಟು ಅಡುಗೆ ಮಾಡಿ ಗತಿಸಿದ ಹಿರಿಯರಿಗೆ ಶಾಂತಿ ಮಾಡಿದ ಮೇಲೆ ಹೆಣ್ಣಿನ ಮನೆಯವರಿಗೆ ಮತ್ತು ಊರಿನ ಮುಖ್ಯಸ್ಥರಿಗೆ ಬಂಧು-

ಬಳಗದವರನ್ನು ಕರೆದು ಸಾರಾಯಿ ಕೊಟ್ಟು ಊಟ ಮಾಡಿಸುತ್ತಾರೆ. ಇದಕ್ಕೆ ಇವರು ಗೋಟ್ ಕಾರ್ಯಕ್ರಮ ಎಂದು ಹೇಳುವರು. ಈ ಗೋಟ್ ಸಂಪ್ರದಾಯವನ್ನು ಕುರಿತಂತೆ ಇವರಲ್ಲಿ ಪ್ರಚಲಿತವಿರುವ ಒಂದು ಐತಿಹ್ಯ ಈ ರೀತಿ ಇದೆ. ''ಪೂರ್ವದಲ್ಲಿ ಅಲೆಮಾರಿಗಳಾದ ಲಂಬಾಣಿಗರು ಯಾವುದೋ ಸ್ಥಳದಲ್ಲಿ ಇದ್ದಕ್ಕಿದ್ದಂತೆ ವಿವಾಹ ಏರ್ಪಾಡು ಮಾಡಿ ಪದ್ಧತಿಯಂತೆ ಎಲ್ಲ ವಿಧಿ-ವಿಧಾನಗಳನ್ನು ಕಟ್ಟುನಿಟ್ಟಾಗಿ ಮಾಡಿ ಮುಗಿಸಿದ ಮೇಲೆ ಇನ್ನೇನು ದಿಬ್ಬಣ ಹೊರಡಬೇಕೆನ್ನುವಷ್ಟರಲ್ಲಿ ಮೂತ್ರ ವಿಸರ್ಜನೆಗೆಂದು ಹೋದ ಮದುಮಗನು ಮೂರ್ಛೆ ಹೋದನು. ದಿಗ್ಭ್ರಮೆಗೊಂಡು ಬಲ್ಲವರನ್ನು ವಿಚಾರಿಸಲಾಗಿ ಸ್ಥಳದೋಷ (ಜಮೀರ ಝುಬೇಟೊ)ವೆಂದು ತಿಳಿಯಿತು. ಈ ದೋಷ ನಿವಾರಣೆಗಾಗಿ ಮಣ್ಣಿನ ಎರಡು ಚಿಪ್ಪ, ಸೂಜಿ, ಉಪ್ಪು ಪಂಚಪದಾರ್ಥಗಳಿಂದ ಕೂಡಿದ ಹಸಿಬಿಸಿ ಪದಾರ್ಥ, ಎಕ್ಕೆ ಎಲೆ ಇತ್ಯಾದಿಗಳನ್ನು ಸೇರಿಸಿ ಮೂರ್ಛೆ ಹೋದ ಮದುಮಗನಿಗೆ ನೀವಾಳಿಸಿ ಮೂರು ದಾರಿಗಳು ಸೇರಿರುವಲ್ಲಿ ಇಟ್ಟು ಬಂದರು. ಇದಕ್ಕೆ ಅವರು 'ಅವಡ-ಚವಡ' ಎನ್ನುತ್ತಾರೆ. ಸಾಲದ್ದಕ್ಕೆ ಸ್ಥಳದೋಷ ನಿವಾರಣೆಗಾಗಿ ಮರಿಬಲಿಯನ್ನು ಕೊಟ್ಟು, ಭೂಮಿಗೆ ರಕ್ತ ತರ್ಪಣ ಮಾಡಿದರು; ಇದಕ್ಕೆ 'ಜಮೀರ್ ಗೋಟ್' ಎಂದು ಕರೆಯುತ್ತಾರೆ. ಹೀಗೆ ಮಾಡುವುದರಿಂದ ಭೂಮಿಯು ಶಾಂತಳಾದಳೆಂದೂ, ದೋಷ ನಿವಾರಣೆಯಾಯಿತೆಂದೂ ಭಾವಿಸುವರು.''[೬]

ಲಂಬಾಣಿಗರ ಈ ಗೋಟ್ ಕಾರ್ಯಕ್ರಮ ಇತ್ತೀಚಿನ ದಿನಗಳಲ್ಲಿ ಆಧುನಿಕತೆಯ ಪ್ರಭಾವದಿಂದ ಬೇರೆ ಸ್ವರೂಪವನ್ನು ತಾಳಿದೆ. ಗತಿಸಿದ ಹಿರಿಯರಿಗೆ ಶಾಂತಿಮಾಡುವ ರೂಪದಲ್ಲಿ ಗೋಟ್ ಕಾರ್ಯಕ್ರಮ ಮಾಡುವುದು ಎಂದು ಇವರಲ್ಲಿ ನಂಬಿಕೆ ಇದೆ.

**೨೧. ವಧುವನ್ನು ಮನೆಯಿಂದ ಹೊರ ಕರೆತರುವಿಕೆ (ಬಾರ್ ಕಾಡೇರೊ) :** ವಧುವಿಗೆ ಸಾಂಪ್ರದಾಯಿಕ ಉಡುಪುಗಳಿಂದ ಶೃಂಗರಿಸಿ ಇತ್ತ ಅಂಗಳದಲ್ಲಿ ಅತಿಥಿಗಳು ತಾಂಡಾದ ಎಲ್ಲಾ ಜನರು ಗುಂಪು ಗುಂಪಾಗಿ ಸೇರುತ್ತಾರೆ. ಮದುಮಗಳನ್ನು ಮನೆಯಿಂದ ಹೊರಗೆ ಕಳುಹಿಸುವ ಸಮಯದಲ್ಲಿ ತಾಂಡಾದ ಸ್ತ್ರೀಯರು ವಧುವಿನ ಸುತ್ತ ನೆರೆದಿರುತ್ತಾರೆ. ವಧುವಿನ ತಾಯಿ ಮಗಳನ್ನು ಅಪ್ಪಿಕೊಂಡು 'ಢಾವ್ಲೋ' (ವೇದನೆ ಗೀತೆ) ಮೂಲಕ ಇನ್ನು ಮುಂದೆ ಅತ್ತೆ ಮಾವಂದಿರು ಇರುವ ಮೈದುನ ನಾದಿನಿಯರೊಂದಿಗೆ, ವಾಸಮಾಡಲು ಹೋಗುತ್ತಿರುವ ಪರಿಸರ ತಾಯಿಯ ಮಡಿಲು ಎಂದು ತಿಳಿ. ಜೀವನದಲ್ಲಿ ಬರುವ ಕಷ್ಟ ಸುಖಗಳು ಕ್ಷಣಿಕವಾದರೂ ಆನಂದದಿಂದ ಎದುರಿಸಬೇಕು. ಇನ್ನು ಮುಂತಾದ ನೀತಿ ಪಾಠ ಹೇಳುವ ಮೂಲಕ ಸಂತೈಸುತ್ತಾಳೆ. ಮುತ್ತೈದೆ ಸ್ತ್ರೀಯರು ವಧುವಿನ ಎರಡು ತೋಳುಗಳನ್ನು ತಮ್ಮ ಭುಜದ ಮೇಲೆ ಇಟ್ಟು ಬೆನ್ನಿಗೆ ಕೈಗಳನ್ನು ಕೊಟ್ಟು ತಮ್ಮದೇ ಆದ ಧಾಟಿಯಲ್ಲಿ ಢಾವ್ಲೋ ಮೂಲಕ ವಧುವನ್ನು ಹೊರಗೆ ಕರೆತಂದು ನಿಲ್ಲಿಸುವರು.''[೦]

**೨೨. ತವರುಮನೆಯ ಉಡುಗೊರೆ :** ಹೆಣ್ಣಿನ ಮನೆಯವರ ಕುಟುಂಬದ ಆರ್ಥಿಕ ಸ್ಥಿತಿಗತಿಗಳ ಅನುಗುಣವಾಗಿ ಲಂಬಾಣಿಗರ ಸಂಪ್ರದಾಯದಂತೆ ವಧುವಿನ ತವರುಮನೆಯಿಂದ ಉಡುಗೊರೆಗಳನ್ನು ನೀಡಲಾಗುತ್ತದೆ. ಈ ಉಡುಗೊರೆಗಳನ್ನು ತಾಂಗಡಿ ಎಂದು ಹೇಳುವರು. ಉಡುಗೊರೆಯು ಹಾಸಿಗೆ, ಕಂಬಳಿ, ಉಡುವ ವಸ್ತ್ರ, ತೊಡುವ ಆಭರಣ ಅಡಿಗೆ ಮಾಡುವ ವಸ್ತುಗಳ ರೂಪದಲ್ಲಿರುತ್ತದೆ. ಈ ಉಡುಗೊರೆಗಳೊಂದಿಗೆ ನತ್ತು, ಕಡಗ, ಚೈನು,

ತೋಳಬಂದಿ, ಕಂಚಿನ ಗಂಗಳ, ಹಿತ್ತಾಳೆ ಚೊಂಬು, ಒಂದು ಕುಡಗೋಲು ಇತ್ಯಾದಿ ವಸ್ತುಗಳನ್ನು ತಾಂಗಡಿ ಎಂದು ಕರೆಯಲ್ಪಡುವ ಪೆಟ್ಟಿಗೆಯಲ್ಲಿ ತುಂಬಿಡುತ್ತಾರೆ. ತವರುಮನೆ ಉಡುಗೊರೆ ಎಂದೆಂದಿಗೂ ಅವಳ ಸೊತ್ತಾಗಿದ್ದು, ಕುಟುಂಬ ವಿಭಜನೆಯ ಸಮಯದಲ್ಲಿ ಯಾವ ಅಡೆ-ತಡೆ ಇಲ್ಲದಂತೆ ಹಿರಿಯರು ಅವುಗಳನ್ನು ಅವಳಿಗೆ ಒಪ್ಪಿಸುತ್ತಾರೆ. ತವರುಮನೆಯ ಕುರುಹಾಗಿ ಭಾವನಾತ್ಮಕ ಬೆಸುಗೆಯಾಗಿ ಜೀವನವಿಡೀ ಉಳಿಯುವ ಇವು ಅವಳ ಪಾಲಿಗೆ ಪವಿತ್ರವಾಗಿರುತ್ತದೆ.''

**೨೩. ಹಾವೇಲಿ ಶಾಸ್ತ್ರ :**

ಸಾಯಂಕಾಲ ಬೀಳ್ಕೊಡುವಾಗ ಮನೆಯವರು, ಬಂಧುಬಳಗದವರು ದುಃಖಿತರಾಗಿರುತ್ತಾರೆ. ವಧು ತನ್ನ ತಾಂಡದವರನ್ನು ಮತ್ತು ತಂದೆ ತಾಯಿಯವರನ್ನು ಕುರಿತು ಅಳುತ್ತಾಳೆ; ಇದನ್ನು ಇವರು ಹಾವೇಲಿ ಶಾಸ್ತ್ರ ಎಂದು ಹೇಳುವರು. ಮದುವೆಯ ಕಾರ್ಯ ಮುಗಿದು ಮದುಮಗಳನ್ನು ಬೀಳ್ಕೊಡುವ ಕೊನೆಗಳಿಗೆಯಲ್ಲಿ ಈ ಮೊದಲೇ ಶೃಂಗರಿಸಿದ ಮದುಮಗಳನ್ನು ಅಲಂಕರಿಸಿದ ಹೋರಿಯ ಅಥವಾ ಹಸುವಿನ ಮೇಲೆ ನಿಲ್ಲಿಸಿ, ಎರಡು ಕೈಗಳಲ್ಲಿ ಕೆಂಪು ಬಟ್ಟೆ ಹಿಡಿದು, ಎರಡೂ ಕೈಗಳನ್ನೂ ಬಾನಿನತ್ತ ತೋರಿಸುತ್ತಾ ಮದುಮಗಳನ್ನು ಧಾವ್ಲೋ ಮೂಲಕ ತನ್ನ ಅಗಲಿಕೆಯ ದುಃಖದ ಸಂದೇಶವನ್ನು ಹಾವೇಲಿ ಸಮಯದಲ್ಲಿ ಭಾವನೆಯನ್ನು ವ್ಯಕ್ತಪಡಿಸುವಳು. ಈ ಸಂದರ್ಭದಲ್ಲಿ ಹಾವೇಲಿ ಹಾಡು ಹಾಡುತ್ತಾರೆ.

ಧೂಟಮತ ಜಾಯೇಸ ಹವೇಲಿ
ಮರೇಜ ನಾಯಕ ಬಾಪೂರಿ ಹವೇಲಿ
ತಾರೇ ರಾಜೇಮಾ ಆಚೋಜ ಖಾದಿ, ಆಚೋಜ ಪೀದಿ
ಹವೇಲಿ ಅಹಿಂಯಾ|
ತಾರೆ ರಾಜೀಮಾ ಆಚೋವೋಡಿ ಆಚೋ ಪೇರಿ ಹವೇಲಿ
ಆ ಹೀಂಯಾ|
ಕಡಿಯಾದೇಖಾ ಪೇರಿ ಉಬನಾ ದೇಖಾ ಓಡಿ ಹವೇಲಿ
ಆ ಹೀಂಯಾ
ಕತ ಹಾತ ಘಾಲೂವತ ಭರೋಜ ಭರೋ ಹವೇಲಿ
ಮಾರೇಜ ನಾಯಕ ಬಾಪೂರಿ ಹವೇಲಿ[೨೦೦]

''ನನ್ನಿಂದ ಎಂದೂ ಅಗಲದಿರಲಿ
ನನ್ನ ನಾಯಕ ತಂದೆಯ ಸಮೃದ್ಧ ಸಂಪತ್ತು''
''ನಿನ್ನ ಆಶ್ರಯದಲ್ಲಿ ಒಳ್ಳೆಯದನ್ನೇ ತಿಂದೆ, ಒಳ್ಳೆಯದನ್ನೇ
ಕುಡಿದೆ''

''ನಿನ್ನ ಆಶ್ರಯದಲ್ಲಿ ಒಳ್ಳೆಯ ವಸ್ತ್ರಾಭರಣಗಳನ್ನು
ಧರಿಸಿಕೊಂಡು ಸಂತೋಷಪಟ್ಟೆ
''ನಿನ್ನ ಮನೆಯಲ್ಲಿ ಕೈಹಾಕಿದ್ದಲ್ಲೆಲ್ಲಾ ಸಂಪತ್ತೇ ಸಂಪತ್ತು
ತುಂಬಿಕೊಂಡಿದೆ ಹೀಗಿರುವ ತಂದೆಯ ಊರು ಮತ್ತು
ಮನೆ ನಾನು ಬರುವಾಗಲೆಲ್ಲಾ ಸಂಪತ್ತು ಸಂಪತ್ತು
ಸಮೃದ್ಧಿಯಿಂದ ತುಂಬಿಕೊಂಡಿರಲಿ",

ನಮ್ಮ ಸಂಸ್ಕೃತಿಯ ಪ್ರಕಾರ ಹೆಣ್ಣು ಹುಟ್ಟಿ ಬೆಳೆದ ಮನೆಯನ್ನು ಬಿಟ್ಟು ವಿವಾಹದ ನಂತರ ಗಂಡನ ಮನೆಯನ್ನು ಸೇರುವುದು ಸರ್ವೇಸಾಮಾನ್ಯ. ಅದರಂತೆಯೇ ಲಂಬಾಣಿ ಸಮುದಾಯದಲ್ಲಿಯೂ ಸಹ ತಂದೆಯ ಮನೆಯನ್ನು ತೊರೆದು ಗಂಡನ ಮನೆಗೆ ಹೊರಟು ನಿಂತ ಹೆಣ್ಣೊಂದು ತಾನು ಹುಟ್ಟಿ ಬೆಳೆದ ಮನೆಯ ಸಂಬಂಧ ಕಡಿದು ಹೋಗುವ ಸಂದರ್ಭದಲ್ಲಿ ಮಾನಸಿಕ ಯಾತನೆಯನ್ನು ಅನುಭವಿಸುತ್ತಾಳೆ.

**೨೪. ವಧು-ವರರ ಬೀಳ್ಕೊಡುಗೆ :** ಮದುವೆಯ ಸಂದರ್ಭದಲ್ಲಿ ವಧು-ವರರ ಬೀಳ್ಕೊಡುವ ಸಂದರ್ಭಕ್ಕೆ 'ನವಲೇರಿ ವೆತಡುನ ಬಾರ ಕಾಡೇರೋ' ಎನ್ನುತ್ತಾರೆ. ಸಂಪ್ರದಾಯದ ಉಡುಪುಗಳಿಂದ ಶೃಂಗರಿಸಿ ಬಾಗಿಲಲ್ಲಿ ಒಂದು ಹಗ್ಗವನ್ನು ಕಟ್ಟಿರುತ್ತಾರೆ. ಅದಕ್ಕೆ ವಧು ಗಟ್ಟಿಯಾಗಿ ಹಿಡಿದುಕೊಂಡಾಗ ಸೋದರಮಾವ ಅಥವಾ ಹಿರಿಯಣ್ಣ ಹೊಸಿಲು ದಾಟಿಸುತ್ತಾರೆ. ಅಂದಿನಿಂದ ವಧು ಬೇರೆಯವರ ವಶವಾದಳೆಂದು ನಂಬುತ್ತಾರೆ. ಸಾಯಂಕಾಲ ವಧು-ವರರನ್ನು ಬೀಳ್ಕೊಡುವಾಗ ಮನೆಯವರು ಬಂಧು ಬಳಗದವರು ದುಃಖಿತರಾಗಿರುತ್ತಾರೆ. ತಾಂಡಾದ ಎಲ್ಲ ಸ್ತ್ರೀಯರು ಸೇರುತ್ತಾರೆ. ವಧು ತನ್ನ ತಾಂಡದವರಿಗೆ ತಂದೆ ತಾಯಿಯವರನ್ನು ಕುರಿತು ಅಳುತ್ತಾಳೆ. ತಮ್ಮ ದುಃಖವನ್ನು ತೋಡಿಕೊಳ್ಳುವಾಗ ಈ ಸಂದರ್ಭಕ್ಕೆ ಸೇರಿಕೊಂಡ ಎಲ್ಲಾ ಮಹಿಳೆಯರು ಕಣ್ಣೀರು ಹಾಕುತ್ತಾರೆ. ವಧುವನ್ನು ವರನ ಮನೆಗೆ ಬೀಳ್ಕೊಡುವಾಗ ಮದುಮಗಳು ತನ್ನ ತಂದೆ ತಾಯಿಯವರನ್ನು ಕುರಿತು ತನ್ನ ದುಃಖ ನಿವೇದನೆಯನ್ನು ಹಾಡಿನ ಮೂಲಕ ವ್ಯಕ್ತಪಡಿಸುತ್ತಾಳೆ. ನೆರೆದಂತಹ ಎಲ್ಲರೂ ವಧುವನ್ನು ಬೀಳ್ಕೊಡುತ್ತಾರೆ.[೧೦೧]

**೨೫. ಮನೆ ತುಂಬಿಸಿಕೊಳ್ಳುವುದು :** ವಧು-ವರರನ್ನು ಮನೆ ತುಂಬಿಸಿಕೊಳ್ಳುವುದಕ್ಕೆ ತಾಂಗಡಿ ಘರೇಮ್ ಲೇರೋಗಳೆಂದು ಕರೆಯುತ್ತಾರೆ. ವಧು-ವರರನ್ನು ಮನೆಯ ಬಾಗಿಲ ಬಳಿಗೆ ಕರೆತಂದು ಮದುಮಗಳು ಬಲಗಾಲನ್ನು ಮನೆಯ ಮುಂಬಾಗಿಲಿನ ಹೊಸ್ತಿಲ ಮುಂದಿರಿಸಿ ಬೆರಳುಗಳ ಸಂದಿಯಿಂದ ಕಬ್ಬಿಣದ ಮೊಳೆಗಳನ್ನು ಹೊಡೆಸುತ್ತಾರೆ. ನವ ವಧು-ವರರು ದಾರಿಯಲ್ಲಿ ನಡೆದು ಬರುವ ಸಂದರ್ಭದಲ್ಲಿ ದುಷ್ಟಶಕ್ತಿಗಳು ಹಿಂಬಾಲಿಸಿರುವವು ಎಂಬ ನಂಬಿಕೆಯಿಂದ ಭೂತಪ್ರೇತಗಳನ್ನು ಬಾಗಿಲಲ್ಲೇ ತಡೆದು ನಿಲ್ಲಿಸುವ ಸಲುವಾಗಿ ಕಬ್ಬಿಣದ ಮೊಳೆಯನ್ನು ಬಾಗಿಲಲ್ಲಿ ಹೊಡೆಯುವರು.[೧೦೨] ಅದರಂತೆಯೇ ವಧು ಗೃಹಲಕ್ಷ್ಮಿ ಇದ್ದಂತೆ ಎಂಬ ಹಿನ್ನೆಲೆಯಲ್ಲಿ ಗೃಹಲಕ್ಷ್ಮಿಯು ಎಂದೆಂದಿಗೂ ಮನೆಯಲ್ಲಿಯೇ ಸ್ಥಿರವಾಗಿ ನೆಲೆಸಲಿ ಎಂಬ ಆಶಯದೊಂದಿಗೆ ತಾಮ್ರದ ನಾಣ್ಯವನ್ನು ಹೊಸ್ತಿಲಿಗೆ ಹೊಡೆಯುತ್ತಾರೆ. ಇದಾದ ಮೇಲೆ ವಧುವು ಪತಿಯ ಪಾದಗಳನ್ನು ತೊಳೆದು ನಮಸ್ಕಾರ ಮಾಡಿ ಮನೆಯನ್ನು ಪ್ರವೇಶಿಸುತ್ತಾಳೆ. ಮನೆಯ ಮಧ್ಯಭಾಗದಲ್ಲಿ ಹಣತೆಯನ್ನು ಹಚ್ಚಿಟ್ಟು ಇಬ್ಬರನ್ನೂ ಕೂರಿಸಿ ಅವರ ಮಡಿಲಿಗೆ

ಕೂಸೊಂದನ್ನು ಹಾಕುತ್ತಾರೆ.[೧೦೩] ಕಾರಣ ಹೆಣ್ಣಿನ ಗೃಹಪ್ರವೇಶದಿಂದಾಗಿ ಇನ್ನು ಮುಂದೆ ಆ ಮನೆಯಲ್ಲಿ ಯಾವುದಕ್ಕೂ ಕೊರತೆಯಾಗದಂತೆ ಸಿರಿ ಸಂಪತ್ತು ಹೆಚ್ಚಾಗಲಿ ಎಂದೂ ನವ ದಂಪತಿಗಳಿಗೆ ಪುನಃ ಒಂದು ವರ್ಷದೊಳಗಾಗಿ ಸಂತಾನವಾಗಲಿ ಎಂಬ ಆಶಯವಾಗಿದೆ.

**೨೬. ದಾಂತಳ್ ದೇರೋ (ಮರದ ಕಡ್ಡಿ ಹಂಚುವುದು) :**

ಮರುದಿನ ವರನು ಮುಂಜಾನೆ ಕಾಡಿಗೆ ಹೋಗಿ ಒಂದು ಬಗೆಯ ಹಲ್ಲುಜ್ಜುವ ಕಟ್ಟಿಗೆ (ಹುಣಾಲಕಡ್ಡಿ) ಕಡಿದುಕೊಂಡು ಬಂದು ಅದನ್ನು ಒಂದೊಂದು ಅಂಗುಲದಷ್ಟು ಕಡಿದು ಹೆಣ್ಣಿನ ಕೈಗೆ ಕೊಡುತ್ತಾನೆ. ಹೆಣ್ಣು ಅದನ್ನು ತೆಗೆದುಕೊಂಡು ಅವರ ಬಂಧು-ಬಳಗದವರ ಮನೆಗೆ ಹೋಗಿ ತುಂಬಿದ ತಂಬಿಗೆಯಲ್ಲಿ ಆ ಕಟ್ಟಿಗೆಯ 'ದಾಂತಳ್' ಇಟ್ಟು ಪ್ರತಿಯೊಬ್ಬರಿಗೂ ಕೊಟ್ಟು ನಮಸ್ಕರಿಸುತ್ತಾಳೆ. 'ದಾಂತಳ್' ಎನ್ನುವ ಕಟ್ಟಿಗೆ ಹಲ್ಲುಜ್ಜುವ ಸಾಧನವಾಗಿದೆ.[೧೦೪] ಲಂಬಾಣಿಗರು ಮೂಲಭೂತವಾಗಿ ಕಾಡಿನಲ್ಲಿ ಜೀವಿಸುತ್ತಿದ್ದುದರಿಂದ ಅವರು ದಂತವನ್ನು ಸ್ವಚ್ಛಗೊಳಿಸಲು ಈ ಹೂಣಾಲಾಕಡ್ಡಿಯನ್ನು ಬಳಸುತ್ತಿದ್ದುದು ಸರ್ವೇಸಾಮಾನ್ಯ. ಈ ಪದ್ಧತಿಯು ವಿವಾಹ ಸಂದರ್ಭದಲ್ಲಿ ಮಾತ್ರ ಉಪಯೋಗಿಸುತ್ತಾರೆ.

ಅದೇ ದಿನ ಸಾಯಂಕಾಲ ತವರುಮನೆಯವರು ಕೊಟ್ಟಿರುವ ಸಾಮಾನು ಪೆಟ್ಟಿಗೆ 'ತಾಂಗಡಿ'ಯನ್ನು ಪ್ರದರ್ಶನಕ್ಕೆಂದು ತೆಗೆದಿಡುತ್ತಾರೆ. ತಾಂಡಾದ ನಾಯಕ್, ಡಾವಸಾಣಿ, ಕಾರಭಾರಿ ಹಾಗೂ ಇನ್ನಿತರ ಹಿರಿಯ ಸ್ತ್ರೀಯರು ಸೇರಿ ತಾಂಗಡಿ ಪರೀಕ್ಷಿಸುತ್ತಾರೆ. ಆ ಸಾಮಗ್ರಿಗಳಿಂದಲೇ ಹೆಣ್ಣಿನ ತವರುಮನೆಯ ಅಂತಸ್ತಿಕೆಯನ್ನು ಅಳೆಯುತ್ತಾರೆ. 'ತಾಂಗಡಿ'ಯಲ್ಲಿ ಸಾಮಾನ್ಯವಾಗಿ ಹೆಣ್ಣಿನ ಎಲ್ಲ ನಮೂನೆಯ ಬೆಲೆ ಬಾಳುವ ಪೋಷಾಕುಗಳು, ವರನ ತಾಯಿಗೆಂದು ಕೊಟ್ಟಿರುವ ಒಂದು ಜೊತೆ ಬಟ್ಟೆಗಳು, ಬಳಗದವರಿಗೆಂದು ಕೊಟ್ಟಿರುವ ನಾಲ್ಕಾರು ಕಾಂಚಳಿ (ಕುಪ್ಪಸ)ಗಳು ಹಾಗೂ ನವದಂಪತಿಗಳಿಗೆ ಅಡುಗೆ ಮಾಡುವ ಸಾಮಾಗ್ರಿಗಳನ್ನು ಹಾಕಿರುತ್ತಾರೆ. ಇವುಗಳೇ ಅವರ ವೈಶಿಷ್ಟ್ಯಪೂರ್ಣ ಕೊಡುಗೆಗಳು. ತಾಂಗಡಿ ಪೆಟ್ಟಿಗೆಯಲ್ಲಿ ಒಂದು ಗಿಟಕ ಕೊಬ್ಬರಿ ಹಾಗೂ ಬೆಲ್ಲವನ್ನು ಕೊಟ್ಟಿರುತ್ತಾರೆ. ಹೆಣ್ಣು ತನ್ನ ಅತ್ತೆಗಾಗಿ ತಂದಿರುವ ಪೋಷಾಕುಗಳನ್ನು ಸ್ಥಳದಲ್ಲಿಯೇ ಅವಳಿಗೆ ತೊಡಿಸಿ ಅನಂತರ ಎಲ್ಲರಿಗೂ ನಮಸ್ಕರಿಸುತ್ತಾಳೆ.[೧೦೫] ಅಂದು ರಾತ್ರಿ ವರನ ಮನೆಯಲ್ಲಿ ವಧುವಿನ ಕಡೆಯವರಿಗೆ ಮಾಂಸಾಹಾರ ಊಟವಿರುತ್ತದೆ. ಮರುದಿನ ವಧುವಿನ ಕಡೆಯವರು ತಮ್ಮ ಊರಿಗೆ ಹಿಂದಿರುಗುತ್ತಾರೆ.

ಲಂಬಾಣಿಗರಲ್ಲಿ ವಿವಾಹ ಕಾರ್ಯಗಳು ಶಾಸ್ತ್ರೋಕ್ತವಾಗಿ ನಡೆಯುತ್ತವೆ. ಇತರೆ ಸಮುದಾಯಕ್ಕೆ ಹೋಲಿಸಿದರೆ ವಿಭಿನ್ನ ಕಂಡರೂ ಸಹ ಲಂಬಾಣಿಗಳು ತಮ್ಮ ಸಂಸ್ಕಾರಗಳನ್ನು ಚಾಚೂತಪ್ಪದೇ ರೂಢಿ ಮಾಡಿಕೊಂಡು ಬಂದಿದ್ದಾರೆ. ಇಲ್ಲಿಗೆ ವಿವಾಹ ಕಾರ್ಯ ಮುಕ್ತಾಯ ಮಾಡುತ್ತಾರೆ.

**೪.೨.೯ ಬಹುಪತ್ನಿತ್ವ :** ಒಬ್ಬ ಪುರುಷ ಏಕಕಾಲಕ್ಕೆ ಒಬ್ಬರಿಗಿಂತ ಹೆಚ್ಚಿನ ಸ್ತ್ರೀಯರನ್ನು ಪತ್ನಿಯರನ್ನಾಗಿ ಹೊಂದಿದ್ದರೆ ಅದನ್ನು ಬಹುಪತ್ನಿತ್ವ ಎನ್ನಲಾಗಿದೆ. ಪ್ರಾಚೀನ ಕಾಲದ ಸಮಾಜವು ಬಹುಪತ್ನಿತ್ವವನ್ನು ಒಪ್ಪಿಕೊಂಡಿತ್ತು. ರಾಜಾಡಳಿತ ವರ್ಗದವರಲ್ಲಿ ಅಧಿಕವಾಗಿ ಕಂಡುಬರುತ್ತದೆ. ಈ ಪದ್ಧತಿ ಸಾಮಾನ್ಯರಲ್ಲಿ ವಿರಳವಾಗಿತ್ತು. ಚಕ್ರವರ್ತಿಗಳು ಹಾಗೂ ಸಾಮಂತರು ಬಹುಪತ್ನಿವಲ್ಲಭರಾಗಿದ್ದರು. ಬಹುಪತ್ನಿತ್ವವನ್ನು ಅನುಸರಿಸುವುದು ಪ್ರತಿಷ್ಠೆಯ ಸಂಕೇತವಾಗಿತ್ತು.

ಸಾಮಾನ್ಯ ವರ್ಗದವರಾಗಿದ್ದ ಲಂಬಾಣಿಗರಲ್ಲಿ ಏಕಪತ್ನಿತ್ವ ರೂಢಿಯಲ್ಲಿತ್ತು. ಆದರೆ ಕೆಲವು ಅನಿವಾರ್ಯ ಸಂದರ್ಭಗಳಲ್ಲಿ ಮಾತ್ರ ಪುರುಷರು ಇಚ್ಛೆಪಟ್ಟಲ್ಲಿ ಒಂದಕ್ಕಿಂತ ಹೆಚ್ಚು ಸ್ತ್ರೀಯರನ್ನು ವಿವಾಹವಾಗಬಹುದು. ಮೊದಲನೇ ಹೆಂಡತಿಗೆ ಗಂಡು ಸಂತಾನ ಅಥವಾ ಸಂತಾನವೇ ಇಲ್ಲದಿದ್ದಾಗ, ಹೆಂಡತಿ ರೋಗಿಷ್ಠೆಯಾಗಿದ್ದಾಗ ಅಥವಾ ಇಂತಹ ಇನ್ನಾವುದೇ ಗಂಭೀರ ಕಾರಣಗಳಿದ್ದಾಗ ಮಾತ್ರ ಈ ಜನಾಂಗವು ಬಹುಪತ್ನಿತ್ವಕ್ಕೆ ಅವಕಾಶ ನೀಡಲಾಗಿದೆ.[೧೦೬] ಪತ್ನಿಯು ತನ್ನ ಧಾರ್ಮಿಕ ಕಾರ್ಯಗಳನ್ನು ಸರಿಯಾಗಿ ನೆರವೇರಿಸದಿದ್ದರೆ, ಹತ್ತು ವರ್ಷಗಳ ಕಾಲ ಹೆಣ್ಣು ಮಕ್ಕಳನ್ನು ಹಡೆಯುತ್ತಿದ್ದರೆ, ಅಕಾಲಿಕ ಮರಣ ಹೊಂದಿದರೆ ಮಾತ್ರ ಎರಡನೇ ಮದುವೆ ಆಗಬಹುದಾಗಿದೆ. ಈ ರೀತಿ ವ್ಯವಸ್ಥೆಯನ್ನು ಲಂಬಾಣಿಗರಲ್ಲಿ ಇಂದಿಗೂ ಕಾಣಬಹುದಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿ ಅನೇಕ ಕುಟುಂಬಗಳು ಬಹುಪತ್ನಿತ್ವವನ್ನು ಅನುಸರಿಸುತ್ತಿವೆ. ಈ ಪದ್ಧತಿಯಿಂದ ಯಾವುದೇ ರೀತಿ ಕೌಟುಂಬಿಕ ನೆಮ್ಮದಿ ಕಳೆದುಕೊಂಡಿಲ್ಲದಿರುವುದು ಕಂಡುಬರುತ್ತದೆ. ಪತ್ನಿಯರು ಅಕ್ಕ ತಂಗಿ ಎಂಬ ಭಾವನೆಯಿಂದ ಕೂಡಿ ಸಂಸಾರ ಮಾಡುವುದು ಕಂಡುಬಂದಿದೆ. ನಗರ ಪ್ರದೇಶಗಳಲ್ಲಿ ಕಂಡುಬರದ ಈ ಪದ್ಧತಿ ಗ್ರಾಮೀಣ ಪ್ರದೇಶದಲ್ಲಿ ಇಂದಿಗೂ ಪ್ರಚಲಿತದಲ್ಲಿದೆ. ಒಟ್ಟಾರೆ ಲಂಬಾಣಿಗರಲ್ಲಿ ಬಹುಪತ್ನಿತ್ವವು ಕೆಲವು ಸಂದರ್ಭಗಳಿಗೆ ಸೀಮಿತವಾಗಿರುವುದೆಂದು ತಿಳಿಯುತ್ತದೆ. ಹೀಗಾಗಿ ಪದ್ಧತಿ ಆಚರಣೆಯಲ್ಲಿದ್ದರೂ ಅಲ್ಪ ಪ್ರಮಾಣದಲ್ಲಿದೆ.

**೫.೨.೧೦. ವಿಧವಾ ವಿವಾಹ :** ಲಂಬಾಣಿಗರಲ್ಲಿ ವಿಧವಾ ವಿವಾಹಕ್ಕೆ ಮಾನ್ಯತೆ ನೀಡಲಾಗಿದೆ. ಗಂಡ ಸತ್ತರೆ ಅಥವಾ ವಿಚ್ಛೇದನವಾಗಿದ್ದರೆ, ಆ ಸ್ತ್ರೀಯು ತನಗೆ ಇಷ್ಟವಾದ ಪುರುಷನ ಜೊತೆಗೆ ವಿವಾಹ ಆಗಬಹುದು. ಇದನ್ನು ಲಂಬಾಣಿಗರ ಭಾಷೆಯಲ್ಲಿ 'ಘುಗರಿಘಾಲೇರೋ' ಎನ್ನುವರು. ವಿಧವಾ ವಿವಾಹದ ವಿಧಿ ವಿಧಾನಗಳು ಭಿನ್ನವಾಗಿರುತ್ತವೆ.[೧೦೭]

ಪ್ರಾಚೀನ ಕಾಲದಿಂದಲೂ ವಿಧವಾ ವಿವಾಹ ರೂಢಿಯಲ್ಲಿದೆ. ಅಂದರೆ, ಇದಕ್ಕೆ ಸಾಕ್ಷಿ ಆಧಾರಗಳಿಲ್ಲ. ಸಹಗಮನ ಪದ್ಧತಿ ರೂಢಿಯಲ್ಲಿತ್ತೆಂದು ಶಾಸನಗಳಿಂದ ಸ್ಪಷ್ಟವಾಗುತ್ತದೆ. ಸಹಗಮನ ಪದ್ಧತಿ ಕೇವಲ ಕ್ಷತ್ರಿಯರಲ್ಲಿ ಮಾತ್ರ ರೂಢಿಯಲ್ಲಿತ್ತು. ಶೂದ್ರರಾದ ಲಂಬಾಣಿಗರಲ್ಲಿ ವಿಧವಾ ವಿವಾಹ ಪದ್ಧತಿಯಿತ್ತು; ಆದರೆ ಗಣ್ಯವರ್ಗದವರಾಗಿದ್ದ ಲಂಬಾಣಿ ಸ್ತ್ರೀಯರು ತಮ್ಮ ಪತಿ ಮರಣ ಹೊಂದಿದಾಗ ಸತಿಯನ್ನಾಚರಿಸುತ್ತಿದ್ದರು ಎಂದು ತಿಳಿಯುತ್ತದೆ.

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ವಿಧವಾ ವಿವಾಹವನ್ನು ನಿಷೇಧಿಸಿರಲಿಲ್ಲ.[೧೦೮] ಕೆಳ ಜಾತಿಗಳಲ್ಲಿ ಆಚರಣೆ ರೂಢಿಯಲ್ಲಿರಲಿಲ್ಲ. ಅವರು ವಿಧವಾ ವಿವಾಹವನ್ನು ಪ್ರೋತ್ಸಾಹಿಸುತ್ತಿದ್ದರು. ಹೀಗಾಗಿ ಅಂದು ವಿಧವಾ ವಿವಾಹ ಪ್ರಮುಖ ಸ್ಥಾನ ಪಡೆದಿತ್ತೆಂದು ತಿಳಿಯುತ್ತದೆ.

ಲಂಬಾಣಿಗರು ವಿಧವಾ ವಿವಾಹವನ್ನು ನೆರವೇರಿಸುವಲ್ಲಿ ಅನೇಕ ವಿಧಿ ವಿಧಾನಗಳನ್ನು ಅನುಸರಿಸುತ್ತಿದ್ದರು. ವಿಧವೆಯು ಗಂಡನ ಮನೆಯಲ್ಲಿ ನೆಲೆಸಿರುವವರೆಗೂ ಮರುವಿವಾಹವಾಗಲು ಬರುವುದಿಲ್ಲ. ಹೆಂಡತಿ ಬಿಟ್ಟವನು, ವಿಧುರನಾದವನು ಮದುವೆಯಾಗದ ಯುವತಿಯರೊಂದಿಗೆ ಶಾಸ್ತ್ರೋಕ್ತವಾಗಿ ವಿವಾಹವಾಗಬಹುದು. ಗಂಡಬಿಟ್ಟವಳು ಬೇರೊಬ್ಬ ಗಂಡಸಿನೊಂದಿಗೆ ಮದುವೆಯಾದರೆ ಆ ಗಂಡನಿಂದ ಶುಲ್ಕದ ಹಣವನ್ನು ವಸೂಲು ಮಾಡಿ ತಾಂಡಾದ ನಾಯಕನು ಹಿಂದಿನ ಗಂಡನಿಗೆ ಕಳುಹಿಸುತ್ತಾನೆ.[೧೦೯] ಒಬ್ಬ ಅವಿವಾಹಿತನು ವಿಧವೆಯನ್ನು ವಿವಾಹವಾಗಬಹುದು. ಆದರೆ ಅದಕ್ಕೆ ವಿಧವೆಯ ಒಪ್ಪಿಗೆ ಅಗತ್ಯವಾಗಿರುತ್ತದೆ.

ವಿಧವಾ ವಿವಾಹ ಊರಿನ ಪ್ರಮುಖರಾದ ತಾಂಡಾ ನಾಯಕ, ಕರಭಾರಿ, ಡಾವೋ ಮುಂತಾದ ಹಿರಿಯರ ಸಮ್ಮುಖದಲ್ಲಿ ನಡೆಯುತ್ತದೆ. ಇವರು ಶಾಸ್ತ್ರೋಕ್ತವಾಗಿ ವಿವಾಹವಾಗುವಂತಿಲ್ಲ. ಮದುವೆಯಾಗುವ ಗಂಡು ಹೆಣ್ಣಿಗೆ ಸೀರೆ, ಬಂಗಾರ ಕೊಡುತ್ತಾರೆ. ಅದೇ ರೀತಿ ಹೆಣ್ಣಿನವರು ಗಂಡಿನ ಬಟ್ಟೆ, ಬಂಗಾರ ಕೊಡುತ್ತಾರೆ. ವಧು-ವರರನ್ನು ಊರಿನ ದೇವಸ್ಥಾನದಲ್ಲಿ ಹಾಸಿದ ಕಂಬಳಿಯ ಮೇಲೆ ನಿಲ್ಲಿಸುತ್ತಾರೆ. ಸಮಾವೇಶಗೊಂಡ ಜನಗಳ ಸಮ್ಮುಖದಲ್ಲಿ ತಾಳಿ ಕಟ್ಟುತ್ತಾನೆ. ನಂತರ ಎಲ್ಲರಿಗೂ ಸಿಹಿ ಊಟ ಹಾಕಿಸಲಾಗುತ್ತದೆ.

ಮರುವಿವಾಹವಾದವಳು ತನ್ನ ಮೊದಲ ಗಂಡನ ಆಸ್ತಿಯ ಹಕ್ಕನ್ನು ಕಳೆದುಕೊಳ್ಳುತ್ತಾಳೆ. ಅವಳಿಗೆ ಮಕ್ಕಳಾಗಿದ್ದರೆ ಅವು ಮೊದಲ ಗಂಡನ ಮನೆತನಕ್ಕೆ ಸೇರುತ್ತವೆ. ಇವಳು ಸಾಮಾನ್ಯವಿವಾಹದಲ್ಲಿ ಪಾಲ್ಗೊಳ್ಳುವಂತಿಲ್ಲ ಹಾಗೂ ಅವಳಿಗೆ ಜನಿಸುವ ಮಕ್ಕಳನ್ನು ಮಕ್ಕಳಂತೆ ಪರಿಗಣಿಸಲಾಗುತ್ತದೆ. ಒಂದು ವೇಳೆ ಚಿಕ್ಕವಯಸ್ಸಿನಲ್ಲಿ ಮದುವೆಯಾದ ಅಣ್ಣಾ ಸವಾನ್ನಪ್ಪಿದ್ದರೆ, ಅಣ್ಣನ ಮಡದಿಯ ಒಪ್ಪಿಗೆಯ ಮೇರೆಗೆ ತಮ್ಮ ವಿವಾಹವಾಗಬಹುದಿತ್ತು. ಆದರೆ ಈಗ ಈಪದ್ಧತಿ ಕಡಿಮೆಯಾಗಿದೆ. ನಾಗರಿಕತೆಯಿಂದ ದೂರವಿರುವ ಅಲೆಮಾರಿ ಜನಾಂಗವೊಂದು ಹೆಣ್ಣಿನ ಅಂತರ್ಯದ ನೋವನ್ನು ಅರಿತುಕೊಂಡು ಮರು ವಿವಾಹವಾಗುವ ಸ್ವಾತಂತ್ರ್ಯ ನೀಡಿದ ಲಂಬಾಣಿಗರು ಸ್ತ್ರೀಯರ ಬಗ್ಗೆ ಉನ್ನತ ಗೌರವವನ್ನು ಹೊಂದಿದ್ದರೆಂದು ತಿಳಿಯುತ್ತದೆ.

**೫.೨.೧೧. ಮೈದುನ ವಿವಾಹ :** ಲಂಬಾಣಿಗರು ತಮ್ಮ ಭಾಷೆಯಲ್ಲಿ ಅತ್ತಿಗೆ ಮೈದುನರ ವಿವಾಹ ಎಂಬ ಅರ್ಥ ಬರುವ ರೀತಿಯಲ್ಲಿ 'ದೇವರ್ ಘುಗರಿ ಘಾಲೆರೋ' ಎನ್ನುವರು. ಇದಕ್ಕೆ ಉಡಿಕೆ, ಕೂಡಿಕೆ, ಕೂಟಿಕೆ, ಸೀರುಡಿಕೆ, ಹಾಗೂ ತಾಳಿ ಕಟ್ಟುವುದು ಎಂದು ಕರೆಯುತ್ತಾರೆ. ಈ ಮೈದುನ ವಿವಾಹಕ್ಕೆ ಕೆಲವೊಂದು ಕಟ್ಟುಪಾಡುಗಳನ್ನು ವಿಧಿಸುತ್ತಾರೆ.

ಪ್ರಾಚೀನ ಕಾಲದ ಧಾರ್ಮಿಕ ಗ್ರಂಥವಾದ ಋಗ್ವೇದದಲ್ಲಿ ಅಣ್ಣನು ಮರಣ ಹೊಂದಿದ ನಂತರ ಪ್ರಾಯಕ್ಕೆ ಬಂದ ತಮ್ಮನಿದ್ದರೆ, ಅಣ್ಣನ ಹೆಂಡತಿಯನ್ನು ತಮ್ಮನಿಗೆ ವಿವಾಹ ಮಾಡಿಕೊಡುವ ಪದ್ಧತಿ ರೂಢಿಯಲ್ಲಿದ್ದಿತು. ಇದನ್ನು 'ನಿಯೋಗ ಪದ್ಧತಿ' ಎನ್ನುವರು. ನಿಯೋಗ ಪದ್ಧತಿಯ ಮೂಲ ಉದ್ದೇಶ ಗಂಡು ಮಗುವಿನ ಸಂತಾನ ಪಡೆಯುವುದಾಗಿತ್ತು. ವಂಶೋದ್ಧಾರಕನ ಆಸೆಗಾಗಿ ಈ ಪದ್ಧತಿ ಪಾಲಿಸುತ್ತಿದ್ದರು. ಆದರೆ ಲಂಬಾಣಿಗರಲ್ಲಿ ಮೈದುನ ವಿವಾಹ ಪದ್ಧತಿಯು ನಿಯೋಗ ಪದ್ಧತಿಯನ್ನು ಹೋಲುವ ರೀತಿಯಲ್ಲಿದ್ದರೂ ಸಹ ಇದು ಹೆಣ್ಣಿಗಿರುವ ವಿಧವೆ ಎಂಬ ಹಣೆಪಟ್ಟಿಯನ್ನು ಅಳಿಸಿ ಹಾಕಿ ಅವಳಿಗೆ ಪುನರ್‌ಜೀವನವನ್ನು ನೀಡುವ ಸಲುವಾಗಿ ಆಚರಿಸುತ್ತಿದ್ದರು ಎಂದು ತಿಳಿಯುತ್ತದೆ.

ಲಂಬಾಣಿ ಸಮುದಾಯದ ಮೈದುನ ವಿವಾಹದ ಬಗ್ಗೆ ವಿದ್ವಾಂಸರು ಬರೆಯುತ್ತ, ಒಂದು ವೇಳೆ ವರನು ವಧುವಿನ ಹಾಲಿನ ಪಾತ್ರೆಗೆ ಹಾಕಬೇಕಾದ ಏಳು ಸುತ್ತುಗಳನ್ನು ಪೂರೈಸದೇ ಮರಣ ಹೊಂದಿದ್ದರೆ ವರನ ತಮ್ಮನು ಉಳಿದ ಸಮಾರಂಭದಲ್ಲಿ ಶಾಸ್ತ್ರಗಳನ್ನು ಪೂರೈಸುತ್ತಾನೆ. ಅವನು ಆ ಹುಡುಗಿಯ ಗಂಡನಾಗುತ್ತಾನೆ. ಇದು ಮರಣಿಸಿದ ಗಂಡನ ಸ್ಥಾನವನ್ನು ತುಂಬಲು ಹಿಂದಿನಿಂದಲೂ ಗುರುತಿಸಿಕೊಂಡ ಮಾರ್ಗವಾಗಿದೆ[೧೧] ಎಂಬುದಾಗಿ ತಿಳಿಸಿದ್ದಾರೆ. ಇದರಿಂದ ಈ ವಿವಾಹ ಪದ್ಧತಿಯು ಇವರಲ್ಲಿ ಆರಂಭದಿಂದಲೂ ರೂಢಿಯಲ್ಲಿತ್ತು ಎಂಬುದಾಗಿ ತಿಳಿಯುತ್ತದೆ.

ಈ ಸಮುದಾಯ ಅಲೆಮಾರಿ ಸಮುದಾಯವಾಗಿದ್ದು, ಪ್ರಾರಂಭದ ದಿನಗಳಲ್ಲಿ ಹೆಣ್ಣುಗಳ ಕೊರತೆ ಇದ್ದಿತು. ಹಾಗೂ ಇವರು ವ್ಯಾಪಾರ ವೃತ್ತಿಯಲ್ಲಿ ತೊಡಗಿರುತ್ತಿದ್ದಾಗ ಒಮ್ಮೆ ವಿವಾಹವಾಗಿ ಗಂಡನ ಮನೆ ಸೇರಿದ ಹೆಣ್ಣು ಮತ್ತೊಮ್ಮೆ ತವರು ಮನೆ ಸೇರುವುದು ಅತ್ಯಂತ ವಿರಳವಾಗಿತ್ತು. ವಿವಾಹ ಮಾಡಿ ಬೇರ್ಪಟ್ಟ ಗಂಡು ಹೆಣ್ಣಿನ ಕುಟುಂಬಗಳು ಮತ್ತೆ ಪರಸ್ಪರ ಭೇಟಿಯಾಗುವುದು ಸಾಧ್ಯವಿರಲಿಲ್ಲ. ಚಿಕ್ಕ ವಯಸ್ಸಿನಲ್ಲಿ ವಿಧವೆಯಾದ ಅವಳ ಜವಾಬ್ದಾರಿಯನ್ನು ನಿರ್ವಹಿಸುವುದು ಅವಳ ಅತ್ತೆ ಮಾವಂದಿರಿಗೆ ಹೊರೆಯಾಗುತ್ತಿತ್ತು. ಲಂಬಾಣಿಗಳಲ್ಲಿ ಮದುವೆಯಾದ ನಂತರ ದಂಪತಿಗಳು ಸ್ವತಂತ್ರವಾಗಿ ಕುಟುಂಬ ನಿರ್ವಹಣೆ ಮಾಡುತ್ತಿದ್ದರು. ಅನಂತರ ಕೌಟುಂಬಿಕ ವ್ಯವಸ್ಥೆಯಲ್ಲಿ ಹೆಣ್ಣು ವಿಧವೆಯಾದರೆ ನಿರಾಶ್ರಿತಳಾಗುತ್ತಿದ್ದಳು. ಅಣ್ಣನ ತಬ್ಬಲಿ ಹೆಂಡತಿ ಮತ್ತು ಮಕ್ಕಳಿಗೆ ಬದುಕನ್ನು ಕೊಡಲು ತಮ್ಮನೇ ಜವಾಬ್ದಾರಿಯನ್ನು ನಿರ್ವಹಿಸುವುದು ಅನಿವಾರ್ಯವಾಗಿತ್ತು. ಇದು ಮೈದುನ ವಿವಾಹಕ್ಕೆ ಕಾರಣವಾಗುವುದು ಎಂಬುದಾಗಿ ಹೇಳಬಹುದು.

ಮೈದುನ ವಿವಾಹವಾಗುವವರು ತಾಂಡಾ ನಾಯಕನ ಅಪ್ಪಣೆ ಪಡೆಯಬೇಕು. ನಾಯಕನು ಹಿರಿಯರ ಸಮ್ಮುಖದಲ್ಲಿ ಮದುವೆಯ ದಿನವನ್ನು ನಿಶ್ಚಯಿಸುತ್ತಾನೆ. ಮದುವೆ ಸಾಮಾನ್ಯವಾಗಿ ಶುಭದಿನ ನಡೆಯುತ್ತದೆ. ಮದುವೆಯಾಗುವ ಗಂಡು ಹೆಣ್ಣಿನ ಸೀರೆ, ಕುಪ್ಪಸ ಆಭರಣ ಕೊಡುತ್ತಾನೆ. ಅದೇ ರೀತಿ ಹೆಣ್ಣಿನವರು ಗಂಡಿಗೆ ಬಟ್ಟೆ, ಬಂಗಾರ ಕೊಡುತ್ತಾರೆ. ವಧು-ವರರನ್ನು ಮನೆಯ ಅಂಗಳದಲ್ಲಿ ಹಾಸಿದ ಕಂಬಳಿಯ ಮೇಲೆ ನಿಲ್ಲಿಸುತ್ತಾರೆ. ಸಮಾವೇಶಗೊಂಡ ಜನಗಳ ಸಮ್ಮುಖದಲ್ಲಿ ತಾಳಿ ಕಟ್ಟುತ್ತಾನೆ. ನಂತರ ಎಲ್ಲರಿಗೂ ಸಿಹಿ ಊಟ ಹಾಕಿಸಲಾಗುತ್ತದೆ.

ಈ ಮದುವೆಗೆ ಸಮುದಾಯದಲ್ಲಿ ಯಾವುದೇ ಒತ್ತಾಯ ಮಾಡುವುದಿಲ್ಲ. ಅತ್ತಿಗೆ ಮೈದುನರು ಒಬ್ಬರಿಗೊಬ್ಬರು ಒಪ್ಪಿಗೆ ಇದ್ದರೆ ಮಾತ್ರ ನಡೆಯುತ್ತಿತ್ತು. ಅತ್ತಿಗೆ ಮೈದುನರನ್ನು ಒಂದು ಗೂಡಿಸುವುದಷ್ಟೆ ಇಲ್ಲಿ ಪ್ರಮುಖವಾಗಿರುತ್ತದೆ. ತಮ್ಮನಿಗೆ, ಅಣ್ಣನ ಚರ ಮತ್ತು ಸ್ಥಿರ ಆಸ್ತಿಗಳಿಗೆ ಹಕ್ಕುದಾರನಾಗುತ್ತಿದ್ದನು. ಅಣ್ಣನ ಮಕ್ಕಳ ಪಾಲನೆ ಪೋಷಣೆಯ ಜವಾಬ್ದಾರಿ ಇವನಿಗೆ ಸೇರುತ್ತಿತ್ತು. ಹೆಣ್ಣಿನ ಬದುಕಿಗೊಂದು ಭದ್ರತೆ ದೊರಕಿಸುವುದು ವಿಶೇಷವಾಗಿರುತ್ತದೆ. ನಗರ ಪ್ರದೇಶಗಳಲ್ಲಿ ಕಂಡುಬರುವ ಈ ಪದ್ಧತಿ ಗ್ರಾಮೀಣ ಪ್ರದೇಶದಲ್ಲಿ ಇಂದಿಗೂ ರೂಢಿಯಲ್ಲಿದೆ. ಒಟ್ಟಾರೆ ಲಂಬಾಣಿಗರಲ್ಲಿ ಮೈದುನ ವಿವಾಹ ಕೆಲವು ಸಂದರ್ಭಗಳಿಗೆ ಸೀಮಿತವಾಗಿರುವುದೆಂದು ತಿಳಿಯುತ್ತದೆ.

**೫.೨.೧೨. ಕೂಡಿಕೆ ಕಾರ್ಯ :** ಲಂಬಾಣಿಗರಲ್ಲಿ ಈ ಕೂಡಿಕೆಯನ್ನು ಇವರು ಓಡಿ ಬಂದವಳನ್ನು ಸೇರಿಸಿಕೊಳ್ಳುವುದು ಎಂಬ ಅರ್ಥಬರುವಂತೆ 'ದಾಂಸ್ಸನೇನ್ ಘಾಲ್ಲೆರೋ' ಎಂಬುದಾಗಿ ಕರೆಯುತ್ತಾರೆ. ಈ ಕಾರ್ಯ ಸಂಯೋಗದಲ್ಲಿ ಸ್ತ್ರೀಯ ಮುತ್ತೈದೆಯ ಪ್ರತೀಕವಾದ ಚೋಡೋ (ದಂತದ ಬಳೆ) ಘುಗರಿ (ಮುತ್ತೈದೆಯ ಆಭರಣ) ಧರಿಸುವುದರಿಂದ ಇದನ್ನು 'ಭಾಂಗ್ ಘುಗರಿ' ಎನ್ನುವರು. ವಿವಾಹಕ್ಕೆ ಮೊದಲು ಅನೈತಿಕ ಸಂಬಂಧ ಇಟ್ಟುಕೊಳ್ಳುವುದನ್ನು ತೀವ್ರವಾಗಿ ವಿರೋಧಿಸುತ್ತಾರೆ. ಆದರೆ ಕೆಲವು ಅನಿವಾರ್ಯ ಪರಿಸ್ಥಿತಿಯಲ್ಲಿ ನಿಷೇಧವನ್ನು ಸ್ವಲ್ಪ ಮಟ್ಟಿಗೆ ಸಡಿಲಿಸುತ್ತಾರೆ. ಈ ಹಿನ್ನೆಲೆಯಲ್ಲಿ ಕೂಡಿಕೆ ಕಾರ್ಯ ಹುಟ್ಟಿಕೊಂಡಿದೆ. ವಿವಾಹ ಮೊದಲು ಯುವತಿಯು ಗರ್ಭವತಿಯಾಗಿದ್ದಾಗ, ಯುವಕನೊಂದಿಗೆ ದೈಹಿಕ ಸಂಬಂಧವಿದ್ದ ಯುವತಿಯು ತಂದೆ ತಾಯಿಯ

ಮನೆತೊರೆದು ಗಂಡನಮನೆ ಸೇರಿದಾಗ, ಯುವಕ ಮತ್ತು ಯುವತಿಯರು ವಿವಾಹ ಮೊದಲು ದೈಹಿಕ ಕ್ರಿಯೆ ಮಾಡುವುದು ದೊಡ್ಡವರ ಗಮನಕ್ಕೆ ಬಂದಾಗ, ಯುವಕ ಯುವತಿಯರು ಮನೆಯನ್ನು ತೊರೆದು ಕೆಲವು ದಿನಗಳ ನಂತರ ತಾಂಡಾಗೆ ಬಂದಾಗ ಈ ಸಂದರ್ಭದಲ್ಲಿ ಕೂಡಿಕೆ ವಿವಾಹ ಮಾಡುತ್ತಾರೆ.

ಈ ಸಂದರ್ಭದಲ್ಲಿ ತಾಂಡಾದ ನಾಯಕ ಕಾರಭಾರಿ, ಡಾವ್ಹೋ ಹಾಗೂ ಊರಿನ ಮುಖಂಡರು ಸಭೆ ಸೇರಿ ಕಾನೂನುಬಾಹಿರವಾಗಿ ನಡತೆಗಾಗಿ ದಂಡವನ್ನು ಹಾಕುತ್ತಾರೆ. ಹುಡುಗಿ-ಹುಡುಗ ವಿವಾಹವು ಬೇರೆಡೆ ನಿಶ್ಚಯವಾಗಿದ್ದರೆ ದಂಡದ ಪ್ರಮಾಣವು ಹೆಚ್ಚಿರುತ್ತದೆ. ವಿವಾಹ ನಿಶ್ಚಯವು ಬೇರೆ ತಾಂಡಾಗಳಲ್ಲಿ ಆಗಿದ್ದರೆ ಎರಡು ನಿಶ್ಚಿತಾರ್ಥದಲ್ಲಿ ಒಬ್ಬರನೊಬ್ಬರು ಎರಡೂ ಕುಂಟುಂಬದವರೂ ಎಲ್ಲರ ಸಮಕ್ಷಮದಲ್ಲಿ 'ಪ್ರಮಾಣ'ವನ್ನು ಮಾಡುತ್ತಾರೆ. ತಪ್ಪಿತಸ್ತರಿಗೆ ೫ರಿಂದ ೧೦ ಸಾವಿರ ರೂಗಳವರೆಗೆ ದಂಡವನ್ನು ವಿಧಿಸುತ್ತಾರೆ.[೧೧]

ಅಂದು ಸಾಯಂಕಾಲ ತಾಂಡಾ ನಾಯಕ, ಕಾರಭಾರಿ, ಡಾವ್ಹೋ ಮತ್ತು ಇತರೇ ಹಿರಿಯರ ಸ್ತ್ರೀಯರನ್ನು ಗಂಡನ ಮನೆಗೆ ಕರೆತಂದು ಎಲ್ಲರೂ ಸೇರಿ ಆಡಂಬರವಿಲ್ಲದ ಕೂಡಿಕೆ ಕಾರ್ಯ ಮಾಡುತ್ತಾರೆ. ಸ್ತ್ರೀಯರು ಮದು ಮಗಳಿಗೆ ಮುತ್ತೈದೆ ಸೂಚಕವಾದ 'ಘಾಗರಿ' ಮತ್ತು 'ಚೊಡೋ'ಗಳನ್ನು ತೋಡಿಸುತ್ತಾರೆ. ವಧು-ವರರನ್ನು ಅಭಿಮುಖಿವಾಗಿ ಕುಳ್ಳಿರಿಸಿ ಕುಲ್ಲರ್ ಎನ್ನುವ ಸಿಹಿ ಪದಾರ್ಥವನ್ನು ಹಂಚುತ್ತಾರೆ. ಸಿಹಿಪದಾರ್ಥ ತಿಂದ ನಂತರ ಎಕ್ಕೆಗಿಡದ ಕಡ್ಡಿಯನ್ನು ತಂದು ಅದಕ್ಕೆ ಇಬ್ಬರನ್ನು ಏಳು ಸಾರಿ ಸುತ್ತಿಸುತ್ತಾರೆ. ವರನ ಕಡೆಯವರು ತಾಂಡಾದ ಹಿರಿಯರಿಗೆ ಸಾರಾಯಿ ಹಾಗೂ ವೀಳ್ಯವನ್ನು ವಿತರಿಸುತ್ತಾನೆ. ಈ ಪದ್ಧತಿಯನ್ನು ಹಿಂದಿನ ಘಟನೆಯನ್ನು ಮರೆಯುವ ಸಲುವಾಗಿ ಮಾತ್ರ ಆಚರಿಸುತ್ತಿದ್ದರೆಂಬುದು ಸ್ಪಷ್ಟ.

**೫.೩.೧೫ ಮರಣ :** ಲಂಬಾಣಿಗರಲ್ಲಿ ಮರಣ ಸಂದರ್ಭದಲ್ಲೂ ಅನೇಕ ಸಂಸ್ಕಾರಗಳಿವೆ. ಮರಣ ಮತ್ತು ಮರಣೋತ್ತರ ಕ್ರಿಯೆಗಳಿಗೆ ಸಂಬಂಧಿಸಿದಂತೆ ಅನೇಕ ವಿಧಿ ಸಂಸ್ಕಾರಗಳನ್ನು ಆಚರಿಸುತ್ತಾರೆ. ಸತ್ತವರ ಪರಲೋಕ ಸಾಧನೆಗೆ ನೆರವಾಗುವುದೆಂಬ ಹಾಗೂ ಸತ್ತವರ ಆತ್ಮಕ್ಕೆ ಶಾಂತಿ ಸಿಗದೆ ಅದು ತಮ್ಮನ್ನು ಪೀಡಿಸಬಹುದೆಂಬ ಭಯ ಅಥವಾ ನಂಬಿಕೆಯೇ ಈ ಸಂಸ್ಕಾರಕ್ಕೆ ಕಾರಣವಾಗಿದೆ. ಸತ್ತದೇಹಕ್ಕೆ ಸಲ್ಲಿಸುವ ಅಂತಿಮ ಗೌರವವೇ ಶವಸಂಸ್ಕಾರವಾಗಿದೆ.

ಲಂಬಾಣಿಗರು ಮರಣವನ್ನು ಸಮಾಗೋ ಎನ್ನುವರು. ಮರಣ ಹೊಂದಿದವರನ್ನು ಸುಡುವ ಮತ್ತು ಹೂಳುವ ಪದ್ಧತಿಗಳಿವೆ. ಮಕ್ಕಳು, ಬಾಣಂತಿ, ಗರ್ಭಿಣಿ ಹಾಗೂ ಅವಿವಾಹಿತರನ್ನು ಸುಡುವುದಿಲ್ಲ, ಹುಗಿಯುತ್ತಾರೆ. ವ್ಯಕ್ತಿಯು ವೃದ್ಯಾಪ್ಯ ದೈಹಿಕ ರೋಗಗಳಿಗೆ ಬಲಿಯಾಗಿ ತೀರಿಕೊಂಡರೆ ಅವರನ್ನು ಮನೆಯ ಹೊರಗಿನ ಕಟ್ಟೆಯ ಮೇಲೆ ಮಲಗಿಸುತ್ತಾರೆ. ವೃದ್ಧರಿಗೆ ಸಾವಿಗಿಂತ ಮುನ್ನ ಬೇಡಿದ ಪದಾರ್ಥಗಳನ್ನು ಮಾಡಿ ಕೊಡುವರು ತಮ್ಮ ಸಂಬಂಧಿಕರು ಸಾಯುವ ಪೂರ್ವದಲ್ಲಿ ವ್ಯಕ್ತಿಯನ್ನು ಮಾತಾಡಿಸಿ ಹೋಗುತ್ತಾರೆ. ವ್ಯಕ್ತಿ ಸತ್ತ ತಕ್ಷಣ ಮನೆಯವರು ಜೋರಾಗಿ ಅಳುತ್ತಾರೆ. ಪಕ್ಕದಲ್ಲಿರುವ ಸಂಬಂಧಿಕರು ಸತ್ತ ವ್ಯಕ್ತಿಯ ಕಣ್ಣು ಮುಚ್ಚುವುದು ಕೈಕಾಲು ಸರಿಮಾಡುವುದು, ರಾತ್ರಿ ವೇಳೆಯಲ್ಲಿ ಸಾವು ಸಂಭವಿಸಿದರೆ ತಾಂಡಾದ ಹಿರಿಯರೊಂದಿಗೆ ಮನೆಯ ಮುಂದೆ ಬೆಂಕಿಹಾಕಿ ಹೆಣ ಕಾಯುತ್ತಾರೆ. ಶವದ ಕಾಲುಗಳನ್ನು ಮಡಚುವುದಾಗಲೀ, ಗೋಡೆಗೆ ಒರಗಿಸಿ ಕೂರಿಸುವುದಾಗಲಿ

ಇವರಲ್ಲಿ ರೂಢಿಯಲ್ಲಿಲ್ಲ. ಸತ್ತ ವಿಚಾರವನ್ನು ಬಂಧು ಬಳಗದವರಿಗೆಲ್ಲಾ ತಲುಪಿಸಿ ಅಂತ್ಯ ಸಂಸ್ಕಾರವನ್ನು ಆರಂಭಿಸುತ್ತಾರೆ. ವಿಧಿವಶವಾದ ವ್ಯಕ್ತಿ ಗಂಡು ಆದರೆ ಸಾಮಾನ್ಯ ಉದ್ದ ಎರಡು ಬಿದಿರುಗಳನ್ನು ತಂದು ಚಟ್ಟವನ್ನು ಕಟ್ಟುತ್ತಾರೆ. ಶವಕ್ಕೆ ಬಿಳಿಯ ಹೊಸ ವಸ್ತ್ರವನ್ನು ಹೊದಿಸಿ ಚಟ್ಟದ ಮೇಲೆ ಮಲಗಿಸುವರು. ಶವದ ಸೆರಗಿಗೆ ಐದಾಣೆಯನ್ನು ಕಟ್ಟುತ್ತಾರೆ. ಸತ್ತ ವ್ಯಕ್ತಿಯು ಸ್ವರ್ಗಕ್ಕೆ ಹೋಗುವಾಗ ದಾರಿ ಖರ್ಚಿಗಾಗಿ ಈ ಹಣವನ್ನು ಬಳಸುವನೆಂದು ನಂಬುತ್ತಾರೆ. ಶವವನ್ನು ಸಾಗಿಸುವಾಗ ಹಿರಿಯ ಮಗನು ಚಟ್ಟಕ್ಕೆ ಹೆಗಲು ಕೊಡಬೇಕು ಸ್ಮಶಾನಕ್ಕೆ ಶವವನ್ನು ಸಾಗಿಸುವಾಗ ನಿಗದಿತ ಚಟ್ಟವನ್ನು ಇರಿಸಿ ಐದು ಆರು ನಿಮಿಷಗಳ ತರುವಾಯ ಬದಲಾಯಿಸಿಕೊಂಡು ಸಾಗುತ್ತಾರೆ. ದಾರಿಯುದ್ದಕ್ಕೂ ರಾಗಿ ಅಥವಾ ಅಕ್ಕಿಕಾಳನ್ನು ಚಲ್ಲುತ್ತಾ ಹೋಗುವರು. ಈ ಸಂದರ್ಭದಲ್ಲಿ ಶಕುನ ಪರೀಕ್ಷಿಸುವರು, ಇದರಂತೆ ಕಾಗೆ, ನರಿ, ಹಾವು, ಮೊಲ ಇತ್ಯಾದಿಗಳು ಬಲದಿಂದ ಎಡಕ್ಕೆ ಹಾದುಹೋದರೆ ಮೃತನ ಆತ್ಮವು ಮರುಜೀವನ ಪಡೆಯುತ್ತದೆಂದು ತಿಳಿಯುವರು. ಇವರು ಹೆಣವನ್ನು ಹೊರುವ ಕಾರ್ಯವು ಪುಣ್ಯಕಾರ್ಯವೆಂದು ಭಾವಿಸುತ್ತಾರೆ.

ಹೆಣವನ್ನು ಹೂಳುವಲ್ಲಿ ವ್ಯಕ್ತಿಗೆ ಬೇಕಾದಷ್ಟು ಗುಂಡಿಯನ್ನು ತೆಗೆದು ಹೆಣ ಮುಖ ಮೇಲೆ ಮಲಗಿ ಪ್ರತಿಯೊಬ್ಬರು ಮೂರು ಹಿಡಿ ಮಣ್ಣು ಹಾಕುವರು. ಹಾಗೆ ಹೆಣವನ್ನು ಸುಡುವುದಾದರೆ ಸಾಕಷ್ಟು ಸೌದೆಯನ್ನು ಸಂಗ್ರಹಿಸಿ ಮಂದಿಯಂತೆ ಒಟ್ಟಿ ಅದರ ಮೇಲೆ ಉತ್ತರಕ್ಕೆ ತಲೆಮಾಡಿ ಮುಖ ಮೇಲಕ್ಕೆ ಮಾಡಿ ಮಲಗಿಸಿ ಸೌದೆಯನ್ನು ಒಟ್ಟುತ್ತಾರೆ. ತಂದೆಯಾಗಿದ್ದರೆ ಹಿರಿಯ ಮಗ ಕೊಳ್ಳಿಯನ್ನು ಇಡುತ್ತಾನೆ. ಶವ ಸಂಸ್ಕಾರ ಮಾಡಿ ಹಿಂದಕ್ಕೆ ಬರುವಾಗ ಪ್ರತಿಯೊಬ್ಬರೂ ಬಾರಿಗಿಡದ ಎಲೆಯನ್ನು ತಲೆಗೆ ಒಂದರಂತೆ ಒಬ್ಬರ ಕೈಯಲ್ಲಿ ಕೊಡುತ್ತಾರೆ. ಆ ಮೂಲಕ ಶವ ಸಂಸ್ಕಾರಕ್ಕೆ ಎಷ್ಟು ಜನ ಸೇರಿದರು ಎಂದು ತಿಳಿದುಕೊಳ್ಳುತ್ತಾರೆ. ನಂತರ ಮೃತನ ಮನೆಯ ಹತ್ತಿರ ಬಂದು ಕುಳಿತುಕೊಳ್ಳುತ್ತಾರೆ. ಹಿರಿಯರೊಬ್ಬರು ಪಾತ್ರೆಯಲ್ಲಿ ನೀರು ಹಾಕಿಕೊಂಡು ಸೇರಿದ ಎಲ್ಲ ಜನರಿಗೆ ಎಡಗೈಯಲ್ಲಿ ನೀರು ಹಾಕುತ್ತಾರೆ. ಅವಿವಾಹಿತರು ನೀರು ತೆಗೆದುಕೊಳ್ಳುವಂತಿಲ್ಲ, ಮೃತನ ಮನೆಯವರಿಗೆ ಸಮಾಧಾನ ಹೇಳಿ ಹೋಗುತ್ತಾರೆ. ಮೃತನ ಮನೆಯಲ್ಲಿ ಆ ದಿನ ಅಡುಗೆ ಮಾಡುವುದಿಲ್ಲ. ತಾಂಡದ ಪ್ರತಿ ಮನೆಯವರು ಮಾಡಿದ ಅಡುಗೆ ಸ್ವಲ್ಪ ಸ್ವಲ್ಪ ನೀಡಿ ಅವರಿಗೆ ಸಾಂತ್ವನ ಹೇಳಿ ಊಟ ಮಾಡಿಸಿ ಬರುತ್ತಾರೆ.

೧. ದಾಡೋ ಕರೇರೋ : ಮನುಷ್ಯ ಸತ್ತ ಮೂರನೆಯ ದಿನ ಮಾಡುವ ಕಾರ್ಯಕ್ಕೆ 'ಕಾಂದ್ಯ ಕರೇರೋ' ಅಥವಾ 'ದಾಡೋ ಕರೇರೋ' ಎಂದು ಕರೆಯುತ್ತಾರೆ. ರವಿವಾರ ಸತ್ತರೆ ಈ ಕಾರ್ಯ ಮೂರನೆಯ ದಿನ ಮಾಡುವಂತಿಲ್ಲ. ಈ ದಿನಗಳಲ್ಲಿ ಸತ್ತವರು ಪಾಪಿಷ್ಟರೆಂದೂ, ದುಷ್ಟರೆಂದೂ, ಖಂಡಿತವಾಗಿಯೂ ದೆವ್ವ, ಪಿಶಾಚಿಯಾಗಿ ಬರುತ್ತಾರೆಂದು ನಂಬಿದ್ದಾರೆ. ಈ ಕಾರ್ಯವನ್ನು ಅದೇ ದಿನದಲ್ಲಿ ಮಾಡಿ ಮುಗಿಸುವ ನಿಯಮವಿದೆ. ಯಾವ ಕಾರಣದಿಂದಲೂ ಈ ದಿನಗಳನ್ನು ಮುಂದೂಡುವಂತಿಲ್ಲ. ರವಿವಾರ ಅವರ ಪ್ರಕಾರ 'ಕಲ್ಲೊದಾಡೊ' (ಬಿರುಸಿನ ದಿನ) ಆಗಿದೆ. ಸೋಮವಾರ ಸತ್ತರೆ ಸ್ವರ್ಗದ ಬಾಗಿಲುಗಳು ತೆರೆದಿರುತ್ತವೆಂಬುದು[೧೨೨] ಇವರ ನಂಬಿಕೆ.

ತಾಂಡಾದ ಹೊರಗಿನ ಕೆರೆ ಅಥವಾ ಕಟ್ಟೆಯ ದಡದಲ್ಲಿ ಒಂದು ಮರದ ಕೆಳಗೆ ಹತ್ತಾರು ಗಂಡಸರು ಒಲೆ ಹಚ್ಚಿ ಅಕ್ಕಿರೊಟ್ಟಿ ಮಾಡಿ ಅವುಗಳನ್ನು ತುಪ್ಪ ಬೆಲ್ಲದಲ್ಲಿ ಬೆರೆಸಿ ಸ್ವಾದಿಷ್ಟವಾದ ತಿನಿಸನ್ನು ತಯಾರಿಸುತ್ತಾರೆ.

ಇದನ್ನು 'ಚೂರ್ಮೋ' ಎಂದು ಎನ್ನುವರು. ಅಕ್ಕಿ ರೊಟ್ಟಿ ಈ ಕಾರ್ಯಕ್ಕೆ ಶ್ರೇಷ್ಠವೆಂದು ಭಾವಿಸುತ್ತಾರೆ. ಈ ಸಂದರ್ಭದಲ್ಲಿ ಇಬ್ಬರು ಹಿರಿಯ ಅನುಭವಿಗಳು ಹಾಲು ತುಪ್ಪ ತೆಗೆದುಕೊಂಡು ಯಾರೊಡನೆಯೂ ಮಾತನಾಡದಂತೆ ಮೌನವಾಗಿ ಸ್ಮಶಾನಕ್ಕೆ ಹೋಗಿ ಚಿತಾಭಸ್ಮವನ್ನು ಎಕ್ಕದ ಎಲೆಗಳಿಂದ ಗುಡಿಸಿ ಸಮಗೊಳಿಸಿ ಸ್ವಲ್ಪ ಸಮಯ ಅಲ್ಲಿಯೇ ಉಳಿದು ಬೂದಿಯ ಮೇಲೆ ಯಾವ ಪ್ರಾಣಿಯ ಹೆಜ್ಜೆ ಮೂಡಿದೆ ಎಂಬುದನ್ನು ಪರೀಕ್ಷಿಸುತ್ತಾರೆ. ನಂತರ ಹಿಂತಿರುಗಿ ನೋಡದೇ ಆಚರಣೆಯ ಸ್ಥಳಕ್ಕೆ ಬಂದು ಬೂದಿಯ ಮೇಲಿನ ಹೆಜ್ಜೆ ಗುರುತನ್ನು ಹೇಳಿ ಅವನಿಗೆ ಲಭಿಸಬಹುದಾದ ಸ್ವರ್ಗ ಅಥವಾ ನರಕವನ್ನು ಕುರಿತು ವಿಚಾರ ವಿನಿಮಯ ನಡೆಸುತ್ತಾರೆ. ಒಲೆಯ ಬೆಂಕಿಯಲ್ಲಿ ತುಪ್ಪ ಮತ್ತು ಚೂರ್ಮೋದಿಂದ ಧೂಪ ಹಾಕಿ ಎಲ್ಲರೂ ಚೂರ್ಮೋವನ್ನು ಸೇವಿಸುವರು. ಉಳಿದಿದ್ದನ್ನು ಮರದ ಕೊಂಬೆಗೆ ಕಟ್ಟಿ ಕೆರೆಯಲ್ಲಿ ಕೈ ಕಾಲು ಮುಖ ತೊಳೆದುಕೊಂಡು ಮನೆಗಳಿಗೆ ಹಿಂತಿರುಗುತ್ತಾರೆ.

**೨. ಹಾಡ ಭಾಂದೇರೊ :** ಮೂರನೆಯ ದಿನದ ಇನ್ನೊಂದು ಕಾರ್ಯಕ್ಕೆ ಅವರು 'ಹಾಡ ಭಾಂದೇರೊ' ಎಂದು ಕರೆಯುತ್ತಾರೆ. ತಾಂಡಾ ಹಿರಿಯರೊಬ್ಬರು ವಂತಿಕೆ ಸಂಗ್ರಹಿಸಿ ಒಂದು ಕುರಿಯನ್ನು ಖರೀದಿಸಿ ಅದನ್ನು ಕೊಯ್ದು ಎಲ್ಲರೂ ಹಂಚಿಕೊಳ್ಳುವರು. ಒಂದು ಪಾಲನ್ನು ಸತ್ತ ಕುಟುಂಬಕ್ಕೂ ಕಳುಹಿಸುವರು. ಬೇರೆ ತಾಂಡಾದಿಂದ ಬಂದ ಬಂಧು ಬಳಗದವರ ಪಾಲನ್ನು ಸತ್ತವರ ಕುಟುಂಬಕ್ಕೆ ಕೊಡುತ್ತಾರೆ. ಎಲ್ಲರೂ ಸೇರಿ ಮಾಂಸಾಹಾರಿ ಅಡುಗೆ ಮಾಡಿ ಸತ್ತವರ ಮನೆಯವರಿಗೆ ಊಟಬಡಿಸಿ ಮದ್ಯ ಕುಡಿಸಿ ಸಾಂತ್ವನ ಹೇಳಿ ಸಮಾಧಾನ ಮಾಡುವರು.[೧೧] ಅಂದು ರಾತ್ರಿ ಮನೆಯ ಭಾಗದಲ್ಲಿ ಚಿತಾಭಸ್ಮವನ್ನು ಚೆಲ್ಲಿ ಅದರ ಮಧ್ಯೆ ರೊಟ್ಟಿ ಮತ್ತು ಮಾಂಸದ ತಟ್ಟೆಯನ್ನು ತುಂಬಿದ ನೀರಿನ ಚೊಂಬನ್ನು ಇಟ್ಟು ದೊಡ್ಡ ಬುಟ್ಟಿಯನ್ನು ಮುಚ್ಚಿ ಅದರ ಮೇಲೆ ಭಾರವಾದ ವಸ್ತುವನ್ನು ಇಟ್ಟು ಭದ್ರಪಡಿಸುವರು. ಇದು ಸಾವನ್ನಪ್ಪಿದ ವ್ಯಕ್ತಿ ಆತ್ಮವನ್ನು ಆಹ್ವಾನಿಸುವ ವಿಧಾನವಾಗಿದ್ದು ಸತ್ತವರು ಅಂದು ಯಾವುದಾದರೊಂದು ರೂಪದಲ್ಲಿ ಮನೆಗೆ ಬಂದೇ ಬರುತ್ತಾನೆಂದು ಭಾವಿಸುತ್ತಾರೆ. ರೊಟ್ಟಿ, ಮಾಂಸ ಮತ್ತು ನೀರು ಕುಡಿದರೆ ಸತ್ತವರು ಪ್ರೇತಾತ್ಮನಾಗಿದ್ದಾನೆ ಎಂದು ವಿಶೇಷ ಎಚ್ಚರಿಕೆ ವಹಿಸುತ್ತಾರೆ. ಭೂತ ಮನೆಯನ್ನು ಪ್ರವೇಶಿಸದಂತೆ ಮಾಟ ಮಂತ್ರ ಮಾಡಿಸುತ್ತಾರೆ. ಅಂತ್ಯ ಸಂಸ್ಕಾರಕ್ಕೆ ಬಂದಿದ್ದ ಸಂಬಂಧಿಕರು ತಿಥಿಕಾರ್ಯಕ್ಕೆ ಬರಲೇಬೇಕೆಂಬ ನಂಬಿಕೆ ಇದೆ.

**೩. ತೇರೊಬಾರೊ :** ಹನ್ನೆರಡನೆಯ ಹಾಗೂ ಹದಿಮೂರನೆಯ ದಿನದಂದು ನಡೆಯುವ ಕಾರ್ಯಕ್ರಮವನ್ನು ಬಾರೋ ತೇರೋ ಎಂದು ಕರೆಯುತ್ತಾರೆ. ಹನ್ನೆರಡನೆಯ ದಿನ ಸೂತಕ ದಿನವೆಂದು ಭಾವಿಸಿ ಮನೆಗೆಲ್ಲ ಸುಣ್ಣ ಹಚ್ಚಿ ಶುಚಿಗೊಳಿಸುತ್ತಾರೆ. ಪೂಜೆ ಸಾಮಗ್ರಿಯನ್ನು ಸಂಗ್ರಹಿಸಿಕೊಂಡು ಬಂದಂತಹ ಎಲ್ಲಾ ಬಂಧು ಬಳಗದವರು ಸ್ಮಶಾನಕ್ಕೆ ಹೋಗಿ ಹೂವು ಹಣ್ಣು ಕಾಯಿಗಳಿಂದ ಪೂಜೆಯನ್ನು ಸಲ್ಲಿಸಿ ಬರುತ್ತಾರೆ. ಹದಿಮೂರನೆಯ ದಿನ ಮೃತನ ಮನೆಯಲ್ಲಿ ಆತ್ಮಕ್ಕೆ ಚಿರಕಾಲ ಶಾಂತಿ ಕೋರಲು ಅಲೆಯುತ್ತಿರುವ ಪ್ರೇತಾತ್ಮಕ್ಕೆ ಮುಕ್ತಿ ದೊರೆಯಲು ಗೋದಿಯನ್ನು ಮುದ್ದೆ ಮಾಡಿ ತುಪ್ಪದಲ್ಲಿ ಬೆರೆಸಿ ಬೆಂಕಿ ಕೆಂಡಕ್ಕೆ ಧೂಪದೋಪಾದಿಯಲ್ಲಿ ಹಾಕುತ್ತಾರೆ. ಆಗ ಮನೆಯವರೆಲ್ಲರೂ ಸೇರಿ ಇಂದಿನಿಂದ ದೈವತ್ವ ಪಡೆದ ನಿನ್ನ ವಂಶದ ಕುಡಿಗಳನ್ನು ರಕ್ಷಿಸುವ ಜವಾಬ್ದಾರಿ ನಿನ್ನ ಮೇಲಿದೆ ಎಂದು ನಮಸ್ಕರಿಸುತ್ತಾರೆ.

ಲಂಬಾಣಿಗರು ಆತ್ಮದ ವರ್ಗಾವಣೆಯನ್ನು ನಂಬುತ್ತಾರೆ. ಮೃತನಾದ ಮೇಲೆ ಒಳ್ಳೆಯ ಮನುಷ್ಯ ಸ್ವರ್ಗೈಕ್ಯನಾಗುತ್ತಾನೆ. ದೇವರ ಅಪ್ಪಣೆ ಪಡೆದು ಮತ್ತೆ ಭೂಮಿಯ ಮೇಲೆ ಜನ್ಮಪಡೆಯಬಹುದು ಎಂಬುದಿವರ ನಂಬಿಕೆ. ಲಂಬಾಣಿಗರು ಪುನರ್ಜನ್ಮದಲ್ಲಿ ನಂಬಿಕೆಯುಳ್ಳವರಾಗಿದ್ದಾರೆ.[೨೨] ತಾಂಡದಿಂದ ಬಂದ ಬಂಧು-ಬಳಗದವರಿಗೆ ಸಾಮೂಹಿಕವಾಗಿ ಊಟ ಮಾಡಿಸುತ್ತಾರೆ. ಊಟ ಮುಗಿದ ನಂತರ ಎಲ್ಲರೂ ಸೇರಿ ಭಜನೆ, ಕೀರ್ತನೆ, ಪುರಾಣ ಹೇಳುತ್ತಾ ರಾತ್ರಿಯನ್ನು ಕಳೆಯುತ್ತಾರೆ. ಲಂಬಾಣಿಗರಲ್ಲಿ ಅಂತ್ಯ ಸಂಸ್ಕಾರದ ರೂಢಿ-ಸಂಪ್ರದಾಯಗಳು ಇತರೇ ಸಮುದಾಯಗಳ ಆಚರಣೆಗಿಂತ ಭಿನ್ನವಾಗಿದೆ.

**ಟಿಪ್ಪಣಿಗಳು**

೧. ಕುರುಗೋಡು ಸಿಂಧರು : ಒಂದು ಅಧ್ಯಯನ, ಚನ್ನಬಸಯ್ಯ ಹಿರೇಮಠ, ತಂಗಣ್ಣವರು ಅಗಡಿ ಪ್ರತಿಷ್ಠಾನ, ಕೊಪ್ಪಳ, ೧೯೯೫, ಪುಟ.-೧೫೧

೨. ವೇದಗಳಲ್ಲಿ ಜನಸಾಮಾನ್ಯರು, ವೀರಭದ್ರಪ್ಪ ಬಿ.ವಿ., ನವಕರ್ನಾಟಕ ಪ್ರಕಾಶನ, ಬೆಂಗಳೂರು-೨೦೦೩ ಪುಟ-೪೮

೩. ಹೈದರಾಬಾದ್ ಕರ್ನಾಟಕ ಭಾಗದ ಶಿಲಾಶಾಸನಗಳು, ಶಿವಾನಂದ ವಿ., ಕನ್ನಡ ಪೀಠ, ಬನಾರಸ ಹಿಂದೂ ವಿದ್ಯಾಲಯ, ವಾರಣಾಸಿ-೧೯೯೩, ಪು - xxxix

೪. ದಿವಂಗತ ಹರಿದಾಸ್‌ನಾಯ್ಕ್, ಪುರೋಹಿತರು, ಚಿಕ್ಕಜೋಗಿಹಳ್ಳಿ ತಾಂಡ ಕೂಡ್ಲಿಗಿ ತಾ. ಅವರು ಬ್ರಾಹ್ಮಣರಿಗಲ್ಲದೆ ಗೋರ್‌ಬಾಯ್‌ಗಳಿಗೆ ಸಲ್ಲದು ಬ್ರಾಹ್ಮಣ ಪೂಜೆ ಬಗ್ಗೆ ತಿಳಿಸಿರುತ್ತಾರೆ.

೫. ಅದೇ

೬. ಕ್ಯಾಸ್ಟ್ ಇನ್ ಇಂಡಿಯಾ, ಹಟ್ಟನ್ ಜೆ.ಹೆಚ್., ಆಕ್ಸ್‌ಫರ್ಡ್ ವಿಶ್ವವಿದ್ಯಾಲಯ ಲಂಡನ್- ೧೯೪೬ ಪುಟ-೫೫

೭. ಅದೇ ಪುಟ ೫೫ "among the Rajputs of Bihar the gotra is tending to supplant the clan as on exogamous unit. Like the clan, the gotra or got by derivation a 'cow shed' is an exogamous unit of individuals the vertically descended From a single amcesfer"

೮. ಲಂಬಾಣಿ ಸಂಸ್ಕೃತಿ, ಸಣ್ಣರಾಮ, ಮಲ್ನಾಡ್ ಆಫ್‌ಸೆಟ್ ಪಬ್ಲಿಷರ್ಸ್ ಶಿವಮೊಗ್ಗ- ೧೯೯೯, ಪುಟ ೪೭

೯. ಅದೇ ಪುಟ ೪೮

೧೦. ಅದೇ ಪುಟ ೪೮

೧೧. ದ ಮೈಸೂರು ಕ್ಯಾಸ್ಟ್ ಅಂಡ್ ಟ್ರೈಬ್ಸ್ ವಾಲ್ಯೂಂ - II ನಂಜುಂಡಯ್ಯ ಹೆಚ್.ವಿ., ಮತ್ತು ಅನಂತಕೃಷ್ಣ ಅಯ್ಯರ್ ಎಲ್.ಕೆ., ಬೆಂಗಳೂರು, ೧೯೨೮, ಪುಟ ೧೩೮

೧೨. ಪೂರ್ವೋಕ್ತ, ಸಣ್ಣರಾಮ, ಪುಟ ೪೯

೧೩. ಕರ್ನಾಟಕ ಲಂಬಾಣಿಗರು ಒಂದು ಸಾಂಸ್ಕೃತಿಕ ಅಧ್ಯಯನ, ಖಂಡೋಬ ಪಿ.ಕೆ., ದಿ ತೇಜ್‌ಸಿಂಗ್ ರಾಠೋಡ್ ಮೆಮೋರಿಯಲ್ ಟ್ರಸ್ಟ್ ಗುಲ್ಬರ್ಗ, ೧೯೯೧, ಪುಟ ೪೭

೧೪. ಮಾತೃ ಪ್ರಧಾನ ಪರಿಕಲ್ಪನೆ, ಶೈಲಜಾ ಹಿರೇಮಠ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಪು.

೧೫. ಸಂಸ್ಕೃತಿ ಮಹಿಳಾ ಮಾಲೆ ಸಂಪುಟ-೫, ಮಲ್ಲಿಕಾ ಘಂಟಿ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೮, ಪುಟ ೧೭೦

೧೬. ಶಾಂತಿಬಾಯಿ, ಮಯಸ್ಸು ೪೮, ಸಂಡೂರು ಕರಕುಶಲ ಕೇಂದ್ರ, ಸಂಡೂರು. ತಾ, ಬಳ್ಳಾರಿ ಜಿಲ್ಲೆಯವರು ''ಲಂಬಾಣಿಗರಲ್ಲಿ ಕಸೂತಿ ಪ್ರಮುಖ ವೃತ್ತಿಯಾಗಿದೆ. ಇವರು ಬಣ್ಣದ ತುಂಡು ಬಟ್ಟೆಗಳನ್ನು ತೆಗೆದುಕೊಂಡು ಅದಕ್ಕೆ ವಿವಿಧ ಬಣ್ಣಗಳ ದಾರದಿಂದ ಅಲಂಕರಿಸುತ್ತಾರೆ''. ಎಂದು ತಿಳಿಸಿರುತ್ತಾರೆ.

೧೭. ಕೊಳ್ಳೆಗಾಲದ ಸುತ್ತಿನ ಜನಪದ ಊಟೋಪಚಾರ ಒಂದು ಅಧ್ಯಯನ, ಕೇಶವನ ಪ್ರಸಾದ್ ಕೆ., ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ಪುಟ ೨೮.

೧೮. ಕರ್ನಾಟಕ ಬುಡಕಟ್ಟಿನ ಲಂಬಾಣಿಗಳು, ಖಂಡೋಬಾ ಪಿ.ಕೆ., ಶ್ರೀ ಸಿದ್ಧಲಿಂಗೇಶ್ವರ ಬುಕ್‌ಡಿಪೋ, ಗುಲ್ಬರ್ಗಾ, ೨೦೦೦, ಪು ೬೦.

೧೯. ಉತ್ಕ್ರಾಂತಿಯತ್ತ ಲಂಬಾಣಿಗಳು, ಗೋಪಾಲ್ ಸಿ.ಆರ್., ಐಬಿಎಚ್ ಪ್ರಕಾಶನ, ಬೆಂಗಳೂರು, ೨೦೧೧, ಪುಟ ೧೪೯.

೨೦. ಡುಂಗರನಾಯ್ಕ, ಕೋಗಳಿ ತಾಂಡ, ವಯಸ್ಸು ೮೦, ಹಗರಿಬೊಮ್ಮನಹಳ್ಳಿ ತಾ., ಬಳ್ಳಾರಿ ಜಿಲ್ಲೆಯವರು ಹುರುಳಿ ಹಿಟ್ಟಿನಿಂದ ತಯಾರಿಸುವ ಕೊಡತಿರ ಅಟೋ, ಹುರಿದು ತಯಾರಿಸಿದ ಗೋದಿರವೆಯ ಪಾಯಸವಾದ 'ಸಳೊಯ್' ವಿಶೇಷವಾದ ಆಹಾರ ತಯಾರಿಸುತ್ತಾರೆ ಎಂದು ಹೇಳಿದರು.

೨೧. ಅದೇ

೨೨. ಅದೇ

೨೩. ಲಂಬಾಣಿ ಸಂಸ್ಕೃತಿ ನಾಯಕ ಡಿ.ಬಿ., ಕರ್ನಾಟಕ ಸಾಹಿತ್ಯ ಅಕಾಡೆಮಿ, ನೃಪತುಂಗ ರಸ್ತೆ, ಬೆಂಗಳೂರು. ೧೯೯೪, ಪುಟ. ೧೭

೨೪. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ ೬೧

೨೫. ಕ್ಯಾಸ್ಟ್ ಅಂಡ್ ಟ್ರೈಬ್ಸ್ ಆಫ್ ಸದರನ್ ಇಂಡಿಯಾ, ಎಡ್ಗರ್ ಥರ್ಸ್ಟನ್ ವ್ಯಾಲ್ಯೂಂ -IV,ಮದ್ರಾಸ್ ಸರ್ಕಾರ, ೧೯೮೭, ಪುಟ ೨೩೫

೨೬. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ, ೬೪

೨೭. ಅದೇ, ಪುಟ ೬೪

೨೮. ಅದೇ, ಪುಟ ೬೪

೨೯. ಅದೇ, ಪುಟ ೬೪

೩೦. ಪೂರ್ವೋಕ್ತ, ಗೋಪಾಲ್ ಸಿ.ಆರ್., ಪುಟ ೧೪೪

೩೧. ಅದೇ, ಪುಟ ೧೪೪

೩೨. ಅದೇ, ಪುಟ ೧೪೯

೩೩. ಬಾಬುನಾಯ್ಕ್ ಚಿಕ್ಕಜೋಗಿಹಳ್ಳಿ ತಾಂಡ ವಯಸ್ಸು ೭೦, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರು ಹೀಗೆ ಹೇಳಿದ್ದಾರೆ.

೩೪. ಪೂರ್ವೋಕ್ತ, ಗೋಪಾಲ್ ಸಿ.ಆರ್., ಪುಟ ೧೫೧.

೩೫. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ ೬೨.

೩೬. ಶಬ್ದಕಲ್ಪದಾಮ: ಸಂಸ್ಕೃತ ಶಬ್ದಕೋಶ, ಸಂಪುಟ: ೨, ಬೆಂಗಳೂರು, ೧೯೯೧, ಪುಟ ೮೬೩.

೩೭. ಇವನು ಒಂದು ರೀತಿಯ ಸೇನೆಯ ದಂಡನಾಯಕನಂತೆ ಮಹತ್ತರ ಪಾತ್ರ ನಿರ್ವಹಿಸುತ್ತಾನೆ. ಭೀಮನಾಯ್ಕ್ ಚಿಕ್ಕಜೋಗಿಹಳ್ಳಿ ತಾಂಡ, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರ ಹೇಳಿಕೆ.

೩೮. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ ೫೩.

೩೯. ಕಾರಿಬಾರಿ ಪ್ರಸ್ತುತಿಯಲ್ಲಿ ಡಾವೋಗೆ ನಾಯಕ ಸ್ಥಾನವನ್ನು ನೀಡುವ ಸಂಪ್ರದಾಯ ಬಹುಶಃ ಸಾಕಷ್ಟು ಆಶ್ಚರ್ಯವೆನಿಸಿದರೂ, ಇಂದು ತಾಂಡಾದಲ್ಲಿ ಬೆಳೆದು ಬಂದಿರುವ ಪದ್ಧತಿಯಾಗಿದೆ.

೪೦. ಜನಪದ ವೈದ್ಯ ಪದ್ಧತಿ, ಸೂಗಯ್ಯ ಹಿರೇಮಠ, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ ಗುಲ್ಬರ್ಗಾ-೧೯೯೯, ಪು ೨೦

೪೧. ಪೂರ್ವೋಕ್ತ, ಸಣ್ಣರಾಮ, ಪುಟ ೬೮

೪೨. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ ೧೧೪

೪೩. ಅದೇ ಪುಟ ೧೧೫.

೪೪. ಲಂಬಾಣಿಗರಲ್ಲಿ ಗರ್ಭಿಣಿ ಮಹಿಳೆ ಹಲವಾರು ನಿಯಮಗಳಿಗೆ ಒಳಪಟ್ಟಿರುತ್ತಾಳೆ ಹಾಗೂ ಪದ್ಧತಿ ರೂಢಿಯಲ್ಲಿದೆ. ಪಾರ್ವತಿಬಾಯಿ, ೬೦ ವ್ಯವಸಾಯ, ಚಿಕ್ಕಜೋಗಿಹಳ್ಳಿ, ತಾಂಡ, ಕೂಡ್ಲಿಗಿ ತಾ. ಇವರ ಹೇಳಿಕೆ.

೪೫. ಅದೇ.

೪೬. ಆಧುನಿಕತೆಯ ಪ್ರಭಾವದಿಂದ ಲಂಬಾಣಿಗರು ತಾಯಿ ಮನೆಯಲ್ಲಿ ಹೆರಿಗೆ ಕಾರ್ಯ ನಡೆಯುತ್ತದೆ.

೪೭. ಪೂರ್ವೋಕ್ತ, ಸಣ್ಣರಾಮ, ಪುಟ ೬೯.

೪೮. ಲಕ್ಷ್ಮಿಬಾಯಿ, ವಯಸ್ಸು ೬೪, ವ್ಯವಸಾಯ ಚಿಕ್ಕಜೋಗಿಹಳ್ಳಿ ತಾಂಡ ಕೂಡ್ಲಗಿ ತಾ,ರವರ ಹೇಳಿಕೆಯನ್ನು ದಾಖಲಿಸಲಾಗಿದೆ.

೪೯. ಲಂಬಾಣಿ ಸಂಸ್ಕೃತಿ, ನಾಯಕ ಡಿ.ಬಿ., ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೪, ಪುಟ.೧೯.

೫೦. ಲಂಬಾಣಿಗರು ಆಚರಣೆಯನ್ನು ಪ್ರಾಚೀನ ಕಾಲದಿಂದಲೂ ಆಚರಿಸುವ ಸಂಪ್ರದಾಯ ರೂಢಿಯಲ್ಲಿದೆ.

೫೧. ಭೀಮಾಬಾಯಿ, ವಯಸ್ಸು ೬೪, ಕೊಮಾರಹಳ್ಳಿ ತಾಂಡ, ಹೂವಿನಹಡಗಲಿ ತಾ. ಬಳ್ಳಾರಿ ಜಿಲ್ಲೆ. ಇವರ ಹೇಳಿಕೆ.

೫೨. ಕೊಡಗು ದೇಶದ ಜನರು,

೫೩. ಪೂರ್ವೋಕ್ತ, ನಾಯಕ ಡಿ.ಬಿ., ಪುಟ ೮೮

೫೪. 'ಖಂಡ್' ಎಂಬುದು ಒಂದು ಹೋಳು ಕೊಬ್ಬರಿ ಹಾಗೂ ಸೀಪರು ಪದಾರ್ಥವಾಗಿದೆ.

೫೫. ಶ್ರೀ ಸೇವಾಲಾಲ್ ಚರಿತ್ರೆ, ಮಲ್ಲಿಕಾರ್ಜುನ ನಾಯ್ಕ ಬಿ.ಎಚ್., ಯೋಗೇಶ್ವರ ಪ್ರಕಾಶನ, ಕೊಮಾರಹಳ್ಳಿ ತಾಂಡ, ೨೦೦೨, ಪುಟ

೫೬. ಮಂಡರ ಸಂಸ್ಕೃತಿ, ಚಂದ್ರಪ್ಪ ಎಸ್., ಕರ್ನಾಟಕ ಸಾಹಿತ್ಯ ಅಕಾಡೆಮಿ, ನೃಪತುಂಗ ರಸ್ತೆ, ಬೆಂಗಳೂರು, ೧೯೯೪, ಪು. ೧೨೬

೫೭. ಕರ್ನಾಟಕ ಬುಡಕಟ್ಟುಗಳು, ಸಂಪಾದಕರು ಲಕ್ಕಪ್ಪಗೌಡ ಹೆಚ್.ಕೆ., ಸಂಪುಟ ೧. ಕೃಷ್ಣಮೂರ್ತಿ ಹನೂರು, ಬೆಂಗಳೂರು, ೧೯೯೮, ಪುಟ ೮೩೧. ಹಲಸರಲ್ಲಿ ಜನನವಾದ ಮೂರು, ಏಳು ಮತ್ತು ಹನ್ನೊಂದನೆಯ ದಿವಸ ಮೂರು ಬಾರಿ ಸೂತಕ ಕಳೆಯುವ ವಿಧಿಗಳು ಆಚರಣೆಯಲ್ಲಿವೆ. ಕಾಡುಗೊಲ್ಲರಲ್ಲಿ ಒಂಬತ್ತು ದಿನಗಳವರೆಗೆ ಸೂತಕ ಕಳೆಯುವ ಪದ್ಧತಿ ರೂಢಿಯಲ್ಲಿದೆ.

೫೮. ಪೂರ್ವೋಕ್ತ, ನಂಜುಂಡಯ್ಯ ಹೆಚ್.ವಿ. ಮತ್ತು ಅನಂತಕೃಷ್ಣ ಅಯ್ಯರ್ ಎಲ್.ಕೆ., ಪುಟ ೧೬೨

"on the seventh day when the pollation it removed is some married women proceed a well and a pot fall of water. one of them is emptied into small pit day in frant yard of the house and a lamplited in a receptade made of sweetened flowre is worshiped and thrown into it. The lonfined womenps mode to dig hera toe in the water part of the water in the other pot is used prepare food for the enteranment of women and bay who are invited on the occasion. the guest have their feet woshed with water remaining in the sexnt port"

೫೯. ಪೂರ್ವೋಕ್ತ, ಖಂಡೋಬ ಪಿ.ಕೆ., ಪು ೧೧೮

೬೦. ಲಂಬಾಣಿಗರಲ್ಲಿ ಕುಟುಂಬದ ಮೂಲ ವ್ಯಕ್ತಿಯ ಹೆಸರು ನಾಮಕರಣ ಮಾಡುವ ಪದ್ಧತಿ ರೂಢಿಯಲ್ಲಿದೆ.

೬೧. ಕೆಳದಿ ಶಾಸನ ಸಾಂಸ್ಕೃತಿಕ ಅಧ್ಯಯನ, ವೆಂಕಟೇಶ್ ಜೋಯಿಸ್, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೯೬, ಪುಟ ೯೩

೬೨. ಈ ಆಚರಣೆಯು ಲಂಬಾಣಿ ಸಮುದಾಯದಲ್ಲಿ ಪ್ರಚಲಿತವಿದ್ದ ಇದರ ಮಾಹಿತಿಯನ್ನು ಮೃತ್ಯು ಸಂಸ್ಕಾರಗಳಲ್ಲಿ ತಿಳಿಸಲಾಗಿದೆ.

೬೩. ಲಂಬಾಣಿಗಳಲ್ಲಿ ದತ್ತು ಸ್ವೀಕಾರ ಆಚರಿಸುತ್ತಾರೆ. ಒಕಿಬಾಯಿ ೫೦ ವರ್ಷ, ಕೊಮಾರಹಳ್ಳಿ ತಾಂಡ ಇವರ ಹೇಳಿಕೆ.

೬೪. ಜವುಳ ತೆಗೆಯುವುದು ಎಂದರೆ ತಲೆಯ ಹುಟ್ಟು ಕೂದಲನ್ನು ತೆಗೆಯುವುದು. ಸಂಸ್ಕೃತದಲ್ಲಿ ಇದನ್ನು ಕೆಸ ಪ್ರಾಶನ (ಚೂಡಾಕಮ್) ಎಂಬುದಾಗಿ ಹೇಳಿದೆ. ಸರ್ವೇಸಾಮಾನ್ಯವಾಗಿ ಭಾರತದ ಎಲ್ಲಾ ಸಮುದಾಯದಲ್ಲಿ ಇದನ್ನು ನೋಡಬಹುದು.

೬೫. ಪೂರ್ವೋಕ್ತ, ಸಣ್ಣರಾಮ, ಪುಟ ೬೮

೬೬. ಪೂರ್ವೋಕ್ತ, ಖಂಡೋಬ ಪಿ.ಕೆ., ಪುಟ ೧೨೦

೬೭. ಅದೇ, ಪುಟ ೧೨೦

೬೮. ಕೆಳಗಿನ ವರ್ಗಗಳಲ್ಲಿ ಸಂಸ್ಕಾರಗಳು, ಸಂಪ್ರದಾಯಗಳು ಮತ್ತು ಆಚರಣೆ ಎಂಬುದಾಗಿ ಕರೆದಿರುವುದನ್ನು ಹಲವಾರು ಗ್ರಂಥಗಳು ಉಲ್ಲೇಖಿಸಿವೆ.

೬೯. ಪೂರ್ವೋಕ್ತ, ಸಣ್ಣರಾಮ, ಪುಟ ೬೯.

೭೦. ಕುರುಗೋಡು ಸಿಂಧರು ಒಂದು ಅಧ್ಯಯನ, ಚನ್ನಬಸವಯ್ಯ ಹಿರೇಮಠ, ಸಂಗಣ್ಣನವರು ಅಗಡಿ ಸಂಸ್ಕೃತಿ ಪ್ರತಿಷ್ಠಾನ ಕೊಪ್ಪಳ ೧೯೯೫. ಪು ೧೮೭

೭೧. ಪೂರ್ವೋಕ್ತ, ಸಣ್ಣರಾಮ, ಪುಟ ೮೦

೭೨. ಲಂಬಾಣಿಗರಲ್ಲಿ 'ತೇರು'ಪದ್ಧತಿ ಪ್ರಾಚೀನ ಕಾಲದಿಂದಲೂ ಸಂಪ್ರದಾಯವಾಗಿದ್ದು ಪ್ರಸ್ತುತ ದಿನಗಳಲ್ಲಿ ಸ್ಥಿತ್ಯಂತರವಾಗಿರುವುದು ಕಂಡುಬರುತ್ತದೆ.

೭೩. ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಚನ್ನಕ್ಕ ಎಲಿಗಾರ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ೧೯೯೦ ಪುಟ ೧೪

೭೪. ಅದೇ ಪುಟ ೧೫

೭೫. ಹಾಲುಮತಸ್ಥರು. ನಾಯ್ಕ ಬ.ಪ., ವಿದ್ಯಾನಿಧಿ ಪ್ರಕಾಶನ, ಗದಗ ೨೦೦೩, ಪುಟ ೨೨.

೭೬. ಕರ್ನಾಟಕ ಚರಿತ್ರೆ ಸಂ: ೩, ಸಂ: ಷೇಕ್‌ಅಲಿ ಬಿ., ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೭. ಪುಟ ೧೪೦

೭೭. ಪೂರ್ವೋಕ್ತ, ಸಣ್ಣರಾಮ, ಪುಟ ೮೧.

೭೮. ಕರ್ನಾಟಕದ ಕುರುಬರು, ಶಿವಾನಂದ ಗುಬ್ಬಣ್ಣವರ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ೧೯೯೩ ಪುಟ ೨೫

೭೯. ಪೂರ್ವೋಕ್ತ, ಸಣ್ಣರಾಮ, ಮಲ್ನಾಡ್ ಆಫ್‌ಸೆಟ್ ಪ್ರಿಂಟರ್ಸ್ ಅಂಡ್ ಪಬ್ಲಿಶರ್ಸ್, ಶಿವಮೊಗ್ಗ ೧೯೯೯ ಪುಟ ೮೨

೮೦. ಲಂಬಾಣಿ ಗೋತ್ರ ಮತ್ತು ಶಾಸ್ತ್ರ, ಖಂಡೋಬಾ ಪಿ.ಕೆ., ಸಂಗೀತಾ ಪಬ್ಲಿಕೇಷನ್ಸ್, ಗುಲ್ಬರ್ಗಾ ೨೦೦೮ ಪುಟ ೩೫

೮೧. ಅದೇ ಪುಟ ೩೬

೮೨. ಜನ್ನಬಾಯಿ, ವಯಸ್ಸು ೫೦ ಕೊಮಾರನಹಳ್ಳಿತಾಂಡ ಹೂವಿನಹಡಗಲಿ ತಾಲ್ಲೂಕು ಅವರ ಹೇಳಿಕೆ.

೮೩. ಲಂಬಾಣಿ ಗೋತ್ರ ಮತ್ತು ಶಾಸ್ತ್ರ, ಖಂಡೋಬಾ ಪಿ.ಕೆ., ಸಂಗೀತಾ ಪಬ್ಲಿಕೇಷನ್ಸ್ ಗುಲ್ಬರ್ಗಾ ೨೦೦೮ ಪುಟ ೩೧

೮೪. ಅದೇ ಪುಟ ೩೧

೮೫. ಪೂರ್ವೋಕ್ತ, ಸಣ್ಣರಾಮ, ಪುಟ ೯೦.

೮೬. ಅದೆ ಪುಟ ೯೧

೮೭. ಶ್ರೀ ಸೇವಾಲಾಲ್ ಚರಿತ್ರೆ, ಮಲ್ಲಿಕಾರ್ಜುನ ನಾಯ್ಕ ಬಿ. ಎಚ್., ಯೋಗೇಶ್ವರಿ ಪ್ರಕಾಶನ್, ಕೊಮಾರನಹಳ್ಳಿತಾಂಡ ೨೦೦೭, ಪುಟ ೧೯೧.

೮೮. ಅದೇ ಪುಟ ೧೯೧

೮೯. ಪೂರ್ವೋಕ್ತ, ಸಣ್ಣರಾಮ, ಪುಟ ೯೨.

೯೦. ಪೂರ್ವೋಕ್ತ, ಸಣ್ಣರಾಮ, ಪುಟ ೯೬.

೯೧. ಪ್ರೇಮಬಾಯಿ, ವಯಸ್ಸು ೫೩ ಚಿಕ್ಕಜೋಗಿಹಳ್ಳಿ ತಾಂಡ, ಕೂಡ್ಲಿಗಿ ತಾಲ್ಲೂಕು ಅವರು ಮಾಹಿತಿಯನ್ನು ನೀಡುತ್ತಾರೆ.

೯೨. ಈ ದಾರ ಕಟ್ಟುವ ಪದ್ಧತಿ, ಸಂಸಾರ ಹಾಗೂ ಸಂತತಿ ಕಾವಲು ಹಾಗೂ ಒಂದು ಗೂಡಿ ಎಂದರೆ ತಪ್ಪಾಗಲಾರದು.

೯೩. ಲಂಬಾಣಿ ಸಮುದಾಯದ ಥಾಲ್ಯಾಪಂಗಡದ ಅಧ್ಯಯನ. ಬೆಂಕ್ಯಾನಾಯ್ಕ ಎಂ.ಫಿಲ್ ಪ್ರಬಂಧ (ಅಪ್ರಕಟಿತ) ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೪ ಪುಟ ೫೩.

೯೪. ಪೂರ್ವೋಕ್ತ, ಸಣ್ಣರಾಮ, ಪುಟ ೧೦೦, ೧೦೨

೯೫. ವರನ ದೈಹಿಕ ದಾಢ್ಯತೆಯನ್ನು ಶೋಧಿಸುವ ಒಂದು ರೂಢಿಯಾಗಿದೆ ಎಂದು ಹೇಳಬಹುದು ಶಾಂತಿಬಾಯಿ ೬೩ ವರ್ಷ, ಚಿಕ್ಕಜೋಗಿಹಳ್ಳಿತಾಂಡ, ಕೂಡ್ಲಿಗಿ ತಾಲ್ಲೂಕು ಮಾಹಿತಿ ನೀಡಿರುತ್ತಾರೆ.

೯೬. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ ೧೫೦.

೯೭. ಅದೇ ಪುಟ ೧೫೧.

೯೮. ಈ ಪದ್ಧತಿ ಅನುಷ್ಠಾನ ಮಹತ್ವ ಬಹಳ ಪ್ರಮುಖವಾದ್ದುದು. ಇಲ್ಲಿ ತಂದೆ ತಾಯಿಗಳು ಜೀವನದ ಮೊದಲ ಮೆಟ್ಟಿಲು ಕಾಲಿಡುವ ತಮ್ಮ ಮಕ್ಕಳಿಗೆ ವಿಶೇಷವಾಗಿ ಹೆಣ್ಣುಮಕ್ಕಳಿಗೆ ತನ್ನ ಮುಂದಿನ ಜೀವನದ ಗೌಪ್ಯಗಳ ಬಗ್ಗೆ ಹೇಳುವ ಕ್ರಮವಾಗಿದೆ ಹಾಗೂ ಮಾರ್ಗದರ್ಶನವು ಆಗಿದೆ.

೯೯. ಈ ರೂಢಿ ಪ್ರಾಚೀನ ಕಾಲದ ವ್ಯವಸ್ಥೆಯೆಂದು ಹೇಳಬಹುದು. ಇದು ವರದಕ್ಷಿಣೆಯ ಪದ್ಧತಿ ರೂಢಿಯಾಗಿ ಬೆಳೆದು ಬಂದಿದ್ದು ಕುಟುಂಬದ ಆರ್ಥಿಕ ಅನುಗುಣವಾಗಿ ಉಡುಗೊರೆ ಎಂದು ಹೇಳಬಹುದು.

೧೦೦. ನಾನು ಬರುವಾಗಲೆಲ್ಲಾ ಸುಖ-ಸಮೃದ್ಧಿಯ ಇರಲಿ ಎಂಬುದಾಗಿ ತಾನು ಜನ್ಮನೀಡಿದ ಮನೆ ಮತ್ತು ತಾಂಡದ ಕುರಿತು ಹಾವೇಲಿಯ ಮೂಲಕ ಹೊಗಳುತ್ತಾಳೆ.

೧೦೧. ಪೂರ್ವೋಕ್ತ, ಬೆಂಕ್ಯಾನಾಯ್ಕ, ಪುಟ ೫೪.

೧೦೨. ಲಂಬಾಣಿ ಸಂಸ್ಕೃತಿ, ಸಣ್ಣರಾಮ, ಮಲ್ನಾಡ್ ಆಫ್‌ಸೆಟ್ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ ಶಿವಮೊಗ್ಗ, ೧೯೯೯ ಪುಟ ೧೦೮.

೧೦೩. ಅದೇ ಪುಟ ೧೦೮

೧೦೪. ಕರ್ನಾಟಕ ಲಂಬಾಣಿಗಳು ಒಂದು ಸಾಂಸ್ಕೃತಿಕ ಅಧ್ಯಯನ, ಖಂಡೋಬಾ ಪಿ.ಕೆ., ದಿ. ತೇಜ್‌ಸಿಂಗ್ ರಾಠೋಡ್ ಮೆಮೋರಿಯಲ್ ಟ್ರಸ್ಟ್ ಗುಲ್ಬರ್ಗಾ ೧೯೯೧ ಪುಟ ೧೫೫

೧೦೫. ಅದೇ ಪುಟ ೧೫೫

೧೦೬. ಲಂಬಾಣಿ ಸಂಸ್ಕೃತಿ, ಸಣ್ಣರಾಮ, ಮಲ್ನಾಡ್ ಆಫ್‌ಸೆಟ್ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ ಶಿವಮೊಗ್ಗ ೧೯೯೯, ಪುಟ ೧೧೪

೧೦೭. ಕೇಲವು ವಿಧಿವಿಧಾನದ ಮೂಲಕ ವಿಧವಾ ವಿವಾಹ ರೂಢಿಯಲ್ಲಿರುವುದನ್ನು ನೋಡಬಹುದು. ಕೊಟ್ರೇಶ್ ನಾಯ್ಕ ಎಸ್.ಡಿ. ಮ್ಯಾನೇಜರ್ ಬಿ.ಡಿ.ಸಿ.ಸಿ. ಬ್ಯಾಂಕ್ ಕುಮಾರನಹಳ್ಳಿ ತಾಂಡ, ಹೂವಿನ ಹಡಗಲಿ ತಾಲ್ಲೂಕು ಇವರ ಹೇಳಿಕೆಯನ್ನು ದಾಖಲಿಸಿಕೊಳ್ಳಲಾಗಿದೆ.

೧೦೮. ಕರ್ನಾಟಕ ಚರಿತ್ರ ಸಂ:೩, (ಸಂ:) ಷೇಕ್‌ಅಲಿ ಬಿ., ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೭ ಪುಟ ೨೮೭

೧೦೯. ಪೂರ್ವೋಕ್ತ, ಸಣ್ಣರಾಮ, ಪುಟ ೧೧೩

೧೧೦. ದಿ ಮೈಸೂರು ಕ್ಯಾಸ್ಟ್ ಅಂಡ್ ಟ್ರೈಬ್ಸ್ ವ್ಯಾಲ್ಯೂಂ೨, ನಂಜುಂಡಯ್ಯ ಹೆಚ್.ವಿ., ಮತ್ತು ಅನಂತಕೃಷ್ಣ ಅಯ್ಯರ್ ಎಲ್.ಕೆ, ಮೈಸೂರು ಸರ್ಕಾರ, ಬೆಂಗಳೂರು ೧೯೨೮ ಪುಟ. ೧೭೯

೧೧೧. ಪೂರ್ವೋಕ್ತ, ಸಣ್ಣರಾಮ ಪುಟ. ೧೧೧

೧೧೨. ಕರ್ನಾಟಕ ಲಂಬಾಣಿಗಳು ಒಂದು ಸಾಂಸ್ಕೃತಿಕ ಅಧ್ಯಯನ, ಖಂಡೋಬಾ ಪಿ.ಕೆ., ದಿ ತೇಜ್‌ಸಿಂಗ್ ರಾಠೋಡ್ ಮೆಮೋರಿಯಲ್ ಟ್ರಸ್ಟ್, ಗುಲ್ಬರ್ಗ, ೧೯೯೧, ಪುಟ ೧೨೭

೧೧೩. ಅದೇ ಪುಟ ೧೨೭

೧೧೪. ದಿ. ಮೈಸೂರ್ ಕ್ಯಾಸ್ಟ್ ಅಂಡ್ ಟ್ರೈಬ್ಸ್ ವ್ಯಾಲ್ಯೂ, ನಂಜುಂಡಯ್ಯ ಹೆಚ್.ವಿ. ಮತ್ತು ಅನಂತಕೃಷ್ಣ ಅಯ್ಯರ್ ಎಲ್.ಕೆ., ಮೈಸೂರು ಸರ್ಕಾರ ಬೆಂಗಳೂರು ೧೯೨೮, ಪುಟ ೧೯೧

•••

ಅಧ್ಯಾಯ ಆರು

# ಲಂಬಾಣಿ ಸಮುದಾಯದ ಧಾರ್ಮಿಕ ಜೀವನ

## ಲಂಬಾಣಿ ಸಮುದಾಯದ ಧಾರ್ಮಿಕ ಜೀವನ

### ೬.೧. ದೇವ ದೇವತೆಗಳು

ಹಿಂದೂ ಧರ್ಮದಲ್ಲಿ ದೇವರುಗಳು ಅಸಂಖ್ಯಾತ. ಭಯ ಭಕ್ತಿಯೇ ದೈವ-ದೇವರುಗಳ ಆರಾಧನೆಗೆ ಪ್ರಮುಖ ಕಾರಣವಾಗಿದೆ.[೧] ಈ ಭಗವಂತನ ಶಕ್ತಿ ಸಂಬಂಧ ಮೊದಲಾದವುಗಳನ್ನು ನಾವು ದೇವರ ವಿಷಯದಲ್ಲಿ ಚರ್ಚಿಸುತ್ತೇವೆ. ದೇವರುಗಳು ಒಬ್ಬನಾಗಿರಬಹುದು ಅಥವಾ ಹಲವರಾಗಿರಬಹುದು. ದೇವರುಗಳನ್ನು ವ್ಯಾಪ್ತಿಗನುಗುಣವಾಗಿ ವಿಂಗಡಿಸಿ ಮನೆದೇವರು, ಕುಲದೇವರು, ಗ್ರಾಮದೇವರು ಎಂದು ಆರಾಧಿಸುತ್ತಾರೆ.

ಒಂದು ಗುಂಪು ಅಥವಾ ಸಮುದಾಯದ ದೇವರುಗಳಾದವರು ಬಹುಶಃ ಆಯಾ ಗುಂಪಿನವರ ಯಾವುದೋ ಕಾಲದ ಮುಖಂಡರಾಗಿರುವ ಸಾಧ್ಯತೆಯಿದೆ.[೨] ಅವರು ಆ ಗುಂಪಿನ ಮೇಲೆ ಮಾಡಿದ ಪ್ರಭಾವದ ಕುರುಹುಗಳನ್ನು ಅಥವಾ ಅದ್ಭುತ ಲೀಲೆಗಳನ್ನು ಮುಂದಿನ ಪೀಳಿಗೆಯವರು ಕೊಂಡಾಡಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ನಾಯಕರು ಅಥವಾ ಹಲವಾರು ವೀರರು ದೇವರಾಗಿರುವುದಕ್ಕೆ ಇಂದಿಗೂ ಪೂಜಿಸಲ್ಪಡುವ ಅನೇಕ ವೀರಗಲ್ಲುಗಳೇ ಸಾಕ್ಷಿಯಾಗಿವೆ. ಪ್ರಮುಖವಾದ ವ್ಯಕ್ತಿಯ ವೀರಗಲ್ಲು ನಿಲ್ಲಿಸಿರುವುದಲ್ಲದೇ ದೇವಾಲಯಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ.[೩] ಹೀಗೆ ಪ್ರತಿಯೊಂದು ಸಮುದಾಯದವರು ತಮ್ಮದೇ ಆದ ದೇವರನ್ನು ಸೃಷ್ಟಿಸಿಕೊಂಡು ಕುಲದೇವರೆಂದು ಆರಾಧಿಸುತ್ತಿರುವುದು ಸ್ಪಷ್ಟ. ಈ ಪದ್ಧತಿಯು ಲಂಬಾಣಿಗರಲ್ಲೂ ಕಂಡುಬರುತ್ತದೆ.

ಲಂಬಾಣಿಗರಲ್ಲಿ ಅನೇಕ ವೀರರು, ಪವಾಡಪುರುಷರು ದೇವರಾಗಿದ್ದಾರೆ. ಅವರನ್ನು ಕುಲದೇವರು, ಮನೆದೇವರು, ಗ್ರಾಮದೇವರು, ನಾಡದೇವರು ಎಂದು ವರ್ಗೀಕರಿಸಿ ಆರಾಧಿಸುವುದು ಕಂಡುಬರುತ್ತದೆ. ಅವರನ್ನು ಹೆಸರಿಸುವುದಾದರೆ, ಶ್ರೀ ಸೇವಾಭಾಯ, ಮೀಠುಭುಕ್ಯ, ಹಾತಿರಾಂ ಭಾವಾ, ಸಾತಿಸತ್ತಿ, ಸಾತೀಭವಾನಿ (ಆದಿಶಕ್ತಿ) ಭೀಮಸತಿ, ಹುನಾಸತಿ, ಸಾಧು-ಸಂತರು.

### ೬.೧.೧. ಶ್ರೀ ಸೇವಾ ಭಾಯಾ

ಭಾರತೀಯ ಸಮಾಜದಲ್ಲಿ ಪ್ರತಿಯೊಂದು ಸಣ್ಣ ಪಂಗಡಕ್ಕೂ ಒಬ್ಬ ದೇವರಿರುವುದನ್ನು ಕಾಣಬಹುದಾಗಿದೆ. ಹೀಗೆ ಗುಂಪಿನವರಿಗೆ ದೇವರುಗಳಾದವರು ಒಂದು ಕಾಲದಲ್ಲಿ ಮುಖಂಡರಾಗಿದ್ದು, ಅಂದಿನ ಗುಂಪಿನ ಮೇಲೆ ಪ್ರಭಾವ ಬೀರಿರುವ ಸಾಧ್ಯತೆಯಿದೆ. ಇವರ ಬಗ್ಗೆ ನಂತರದ ಕಾಲದಲ್ಲಿ ಪುರಾಣ ಕಥೆಗಳು ಸೃಷ್ಟಿಗೊಂಡಿವೆ. ಶ್ರೀ ಸೇವಾಭಾಯಾ ಈ ರೀತಿಯ ವ್ಯಕ್ತಿಯಾಗಿರುವ ಸಾಧ್ಯತೆಯಿದೆ. ಲಂಬಾಣಿಗರು ಶ್ರೀ ಸೇವಾಭಾಯಾರನ್ನು ತಮ್ಮ

ಕುಲದೇವರೆಂದು ಆರಾಧಿಸುತ್ತಾರೆ. 'ಸೇವಾ' ಎನ್ನುವ ಪದ ಸೇವಕ (ಭಗತ್) ಶಬ್ದದಿಂದ ಬಂದಿದೆ.[೪] ಇದರಿಂದಾಗಿ ಮರಿಯಮ್ಮ (ಮಾರಿಕಾಂಬೆ) ಸೇವಕನನ್ನಾಗಿ ಭಗತ್ ಮಾಡಬೇಕೆಂದೂ, ಅವನಿಗೆ ಸೇವಾ ಎಂದು ಹೆಸರಿಡಬೇಕೆಂದೂ ಆಜ್ಞಾಪಿಸಿ ಭೀಮಾನಾಯ್ಕರಿಂದ ಪ್ರತಿಜ್ಞೆ ಮಾಡಿಸಿಕೊಳ್ಳುತ್ತಾಳೆ.[೫] ಹೀಗೆ ಸೇವಕನಾಗಿ ದೇವರಾಗಿದ್ದಾನೆಂದು ಹೇಳಬಹುದಾಗಿದೆ. ಭಾಯಾ ಎಂದರೆ ಲಂಬಾಣಿ ಭಾಷೆಯಲ್ಲಿ 'ಅಣ್ಣ' ಎಂದರ್ಥ. ಆಜನ್ಮ ಬ್ರಹ್ಮಚಾರಿಯಾದ ಇವನು ಸಮಸ್ತ ಲಂಬಾಣಿ ಸಮುದಾಯದ ಭಾಯಾ (ಅಣ್ಣ) ಆಗಿದ್ದಾನೆ. ಶ್ರೀ ಸೇವಾಭಾಯಾ 'ಸೂರಾಸಾದ್' 'ಧನುಸಾದ್'ನ ಅವತಾರವೆಂದೂ ಪರಿಗಣಿಸಲಾಗುತ್ತದೆ.[೬]

ಪ್ರಾಚೀನ ಕಾಲದಿಂದಲೂ ಪ್ರಕೃತಿಯ ಆರಾಧಕರಾಗಿದ್ದ ಲಂಬಾಣಿಗರು ಕಲ್ಲು, ಬಂಡೆ, ಗಾಳಿ, ನೀರುಗಳನ್ನು ಪೂಜಿಸುತ್ತಿದ್ದರು. ಇಂದು ಅಧಿಕವಾಗಿ ಶ್ರೀ ಸೇವಾಭಾಯಾ ದೇವಾಲಯಗಳಲ್ಲಿ ಕಲ್ಲು, ಬಂಡೆಯ ಬದಲಾಗಿ ಮೂರ್ತಿಗಳನ್ನು ಪೂಜಿಸುತ್ತಾರೆ. ಲಂಬಾಣಿಗರಿರುವ ಪ್ರತಿಯೊಂದು ತಾಂಡಾಗಳಲ್ಲೂ ಶ್ರೀ ಸೇವಾಭಾಯರ ದೇವಸ್ಥಾನಗಳಿರುತ್ತವೆ. ಇವುಗಳನ್ನು 'ಮಠ್' ಎಂಬುದಾಗಿ ಕರೆಯುತ್ತಾರೆ. ಇದರ ಜೊತೆಯಲ್ಲಿಯೇ ಮರಿಯಮ್ಮ ದೇವತೆಯ ಮೂರ್ತಿಯನ್ನು ಸ್ಥಾಪಿಸಿ ಆರಾಧಿಸುವರು.

ಈ ದೇವಸ್ಥಾನಗಳ ಮಹಾದ್ವಾರದ ಮೇಲ್ಭಾಗದಲ್ಲಿ ಬಿಳಿ ಮತ್ತು ಕೆಂಪು ಬಾವುಟಗಳನ್ನು ಕಾಣುತ್ತೇವೆ. ಇವುಗಳು ಸೇವಾಭಾಯಾ ಮತ್ತು ಮರಿಯಮ್ಮ ದೇವತೆಗಳ ಸಂಕೇತಗಳಾಗಿವೆ. ಪ್ರತಿವರ್ಷ ತಪ್ಪದೇ 'ಮಠೇರ್ ಪೂಜಾ' ಅಂದರೆ, ದೇವಸ್ಥಾನದ ಪೂಜೆ ಎಂಬ ಅರ್ಥದಲ್ಲಿ ಸೇವಾಭಾಯ ಮತ್ತು ಮರಿಯಮ್ಮ ದೇವತೆಯನ್ನು ಸಾಮೂಹಿಕವಾಗಿ ಪೂಜಿಸುತ್ತಾರೆ. ಶ್ರೀ ಸೇವಾಭಾಯಾ ಸಮಸ್ತರಿಗೂ ಹಿತಬಯಸುವ ದೇವರೆಂದು ಮೌಖಿಕ ಸಾಹಿತ್ಯ ಹಾಗೂ ಲಂಬಾಣಿ ಹಾಡುಗಳಿಂದ ತಿಳಿದು ಬರುತ್ತದೆ.

ಲಂಬಾಣಿಗರ ಹಾಡು, ಮೌಖಿಕ ಸಾಹಿತ್ಯದಲ್ಲಿ ಶ್ರೀ ಸೇವಾಲಾಲ್ ದೇವರ ಸೃಷ್ಟಿ ಮೂಲದ ಬಗ್ಗೆ ಮಾಹಿತಿಗಳಿವೆ. ಇವುಗಳ ಪ್ರಕಾರ ರಾಠೋಡ್ ವಂಶದ ರಾಂಜಿನಾಯಕ್ ಎಂಬುವವರು ಶ್ರೀಮಂತ ಮನೆತನಕ್ಕೆ ಸೇರಿದವನಾಗಿದ್ದು, ಅವನಿಗೆ ಭೀಮಾ, ಹೇಮಾ, ಖೇಮ ಎಂಬ ಮಕ್ಕಳಿದ್ದರು. ಇವರಲ್ಲಿ ಹಿರಿಯ ಮಗನಾದ ಭೀಮಾನಾಯ್ಕನಿಗೆ ಧರ್ಮಿಣಿಬಾಯಿಯೊಡನೆ ಮದುವೆಯಾಗಿ ಸುಮಾರು ವರ್ಷಗಳಾದರೂ ಸಂತಾನ ಪ್ರಾಪ್ತಿಯಾಗಲಿಲ್ಲ. ಆಗ ತಮ್ಮ ಬುಡಕಟ್ಟಿನ ದೇವತೆಯಾದ ಮರಿಯಮ್ಮನನ್ನು ಧ್ಯಾನಿಸಲಾಗಿ ಮರಿಯಮ್ಮ ಪ್ರತ್ಯಕ್ಷಳಾಗಿ ತಮ್ಮ ಹಿರಿಯ ಮಗನನ್ನು ತನ್ನ ಸೇವಕನನ್ನಾಗಿ ಒಪ್ಪಿಸಿದರೆ ನಿಮಗೆ ಮಕ್ಕಳನ್ನು ದಯಪಾಲಿಸುತ್ತೇನೆ ಎಂಬುದಾಗಿ ಷರತ್ತನ್ನು ಹಾಕುತ್ತಾಳೆ. ಈ ನಿರ್ಬಂಧಕ್ಕೆ ಪತಿಪತ್ನಿಯರು ಸಮ್ಮತಿಸಿದುದರ ಪರಿಣಾಮವಾಗಿ ಸೇವಾ, ಹಾಂಪಾ, ಬದ್ದು, ಭಾಣ ಎಂಬ ನಾಲ್ಕರ ಜನನವಾಗುತ್ತದೆ. ಮಕ್ಕಳು ದೊಡ್ಡವರಾದ ಮೇಲೆ ಶಕ್ತಿಗನುಗುಣವಾಗಿ ಧರ್ಮಿಣಿ ಮತ್ತು ಆಕೆಯ ಹಿರಿಯ ಮಗ ಸೇವಾ ಈ ಕರಾರನ್ನು ತಿರಸ್ಕರಿಸುತ್ತಾರೆ. ಇದರಿಂದ ಕೋಪಿತಳಾದ ಮರಿಯಮ್ಮ ಸೇವಾರ ಕುಟುಂಬಕ್ಕೆ ಹಲವಾರು ತೊಂದರೆಗಳನ್ನು ನೀಡುತ್ತಾಳೆ. ಕೊನೆಗೆ ಸೇವಾಭಾಯನನ್ನು ಮನವೊಲಿಸಿ ಮರಿಯಮ್ಮಳ ಭಗತ್ ಅಂದರೆ ಸೇವಕನನ್ನು ಕಾರ್ಯನಿರ್ವಹಿಸಲು ನೇಮಿಸುತ್ತಾರೆ.[೭]

ಮಾರಿಕಾಂಬಳ ಸೇವೆ ಮಾಡುತ್ತಾ ಇವನು ತನ್ನ ಸಮುದಾಯದ ಅಭಿವೃದ್ಧಿಗೆ ಶ್ರಮಿಸುತ್ತಾ ಆಧ್ಯಾತ್ಮಿಕ ಪುರುಷನಾಗಿ ಪ್ರಸಿದ್ಧಿಯನು ಪಡೆಯುತ್ತಾನೆ. ಇದರಿಂದ ಮಾರಿಕಾಂಭಾ ತಾನು ಈ ಸಮುದಾಯದಲ್ಲಿ ಜನಪ್ರಿಯತೆಯನ್ನು ಕಳೆದುಕೊಳ್ಳುತ್ತೇನೆಂದು ಭಾವಿಸಿ ಸೇವಾನು ಮದುವೆಯಾಗದೇ ಬ್ರಹ್ಮಚಾರಿಯಾಗಿರುವುದೇ ಇವನ ಜನಪ್ರಿಯತೆಗೆ ಕಾರಣ ಎಂಬುದಾಗಿ ತಿಳಿದು ಸೇವಾಭಾಯನ ಬಳಿಗೆ ಬಂದು ವಿವಾಹವಾಗುವಂತೆ ಆಜ್ಞಾಪಿಸುತ್ತಾಳೆ. ಸೇವಾಭಾಯನನ್ನು ಸಮಸ್ತ ಲಂಬಾಣಿ ಸ್ತ್ರೀ-ಪುರುಷರು ಸಹೋದರ ಸಹೋದರ ಎನ್ನುವರು. ಆದ್ದರಿಂದ ಎಲ್ಲಾ ಯುವತಿಯರೆಲ್ಲಾ ನನಗೆ ಸಹೋದರಿಯರಿದ್ದಂತೆ ಎಂಬುದಾಗಿ ಹೇಳಿ ಮರಿಯಮ್ಮಳ ಆಜ್ಞೆಯನ್ನು ಸ್ವೀಕರಿಸುವುದಿಲ್ಲ. ಆಗ ಮಾರಿಕಾಂಭಾ ನಿನ್ನ ಹಣೆಬರಹದಲ್ಲಿ ವಿವಾಹ ಬರೆದಿದೆಯೋ ಇಲ್ಲವೋ ಎಂಬುದರ ಬಗೆಗೆ ಪರೀಕ್ಷೆ ದೇವಲೋಕದಲ್ಲಿ ನಡೆಯಲಿ; ಅಲ್ಲಿಗೆ ಹೋಗೋಣ ಬಾ ಎಂದು ಕರೆಯುತ್ತಾಳೆ. ಸೇವಾ ಭಗವಂತನ ಬಳಿಗೆ ಹೋಗಲು ಸಿದ್ಧನಾಗುತ್ತಾನೆ. ಸಶರೀರದೊಂದಿಗೆ ಮಾನವನಾದವನನ್ನು ದೇವಲೋಕಕ್ಕೆ ಕರೆದೊಯ್ಯಲು ಸಾಧ್ಯವಿಲ್ಲವೆಂದು, ಸೇವಾಭಾಯ ದೇವಸ್ಥಾನವನ್ನು ಪ್ರವೇಶಿಸಿ ''ಸ್ವರ್ಗ ಲೋಕಕ್ಕೆ ಹೋಗುತ್ತಿದ್ದೇನೆ. ನನ್ನ ಶರೀರವನ್ನು ಬೇವಿನ ಸೊಪ್ಪಿನಲ್ಲಿ ಮುಚ್ಚಿರಿ; ನಾನು ಹಿಂತಿರುಗಿ ಬರುವವರೆಗೂ ಹಗಲು ರಾತ್ರಿ ವಾದ್ಯಗಳು ಮೊಳಗುತ್ತಿರಬೇಕು. ದೇವರ ಧ್ಯಾನ ಮಾಡುತ್ತಿರಬೇಕು. ನನ್ನ ದೇಹವನ್ನು ಯಾರೂ ಮುಟ್ಟಬಾರದು'' ಎಂದು ತನ್ನ ಅನುಯಾಯಿಗಳಾದ ಗೋರಭಾಯಿಗಳಿಗೆ ಹೇಳಿ ಸ್ವರ್ಗಕ್ಕೆ ಹೊರಡುತ್ತಾನೆ. ಇತ್ತ ಗೋರಭಾಯಿಗಳು ಚಾಚೂತಪ್ಪದೇ ಆತನು ಹೇಳಿದಂತೆ ಮಾಡಿ ಮುಗಿಸುತ್ತಾರೆ. ಅತ್ತ ಭಗವಂತನ ಸಮ್ಮುಖದಲ್ಲಿ ಸೇವಾಭಾಯಾ ಮತ್ತು ಮರಿಯಮ್ಮನ ವಾದವಿವಾದಗಳು ನಡೆಯುತ್ತವೆ. ಭಗವಂತನು ಸೇವಾಭಾಯನ ಹಣೆಬರಹದಲ್ಲಿ ವಿವಾಹ ಬರೆದಿಲ್ಲವೆಂದೂ ತಿಳಿಸುತ್ತಾನೆ. ಇದರಿಂದ ಅವಮಾನಿತಳಾದ ಮರಿಯಮ್ಮ ಸೇವಾನನ್ನ ಹೀಗೆಯೇ ಬಿಟ್ಟರೆ ಲಂಬಾಣಿ ಸಮುದಾಯದಲ್ಲಿ ತನ್ನ ಅಸ್ತಿತ್ವ ಉಳಿಯುವುದಿಲ್ಲವೆಂದು ಭಾವಿಸಿ ಸೇವಾಭಾಯಾನಿಗಿಂತ ಮೊದಲು ಧರ್ಮಿಣಿ ಬಾಯಿ ಹತ್ತಿರ ಬಂದು ''ನಿನ್ನ ಮಗ ದೇವಸ್ಥಾನದಲ್ಲಿ ಸತ್ತು ಬಿದ್ದಿದ್ದಾನೆ. ನೀನು ಸಂತೋಷದಿಂದ ಇಲ್ಲಿ ಬಟ್ಟೆ ಹೊಲೆಯುತ್ತಿದ್ದಿಯೇ ಎಂದು ಹೇಳುತ್ತಾಳೆ. ದುಃಖಿತಳಾದ ತಾಯಿ ಧರ್ಮಿಣಿಬಾಯಿ ದೇವಸ್ಥಾನಕ್ಕೆ ಬಂದು ಯಾರೂ ಎಷ್ಟು ತಡೆದರೂ ಕೇಳದೆ ಮಗನ ದೇಹದ ಮೇಲೆ ಬಿದ್ದು ಗೋಳಾಡುತ್ತಾಳೆ. ದೇಹಕ್ಕೆ ಮಾನವರ ಸ್ಪರ್ಶವಾದ ಮೇಲೆ ಸೇವಾಭಾಯರ ಆತ್ಮವು ಮರಳಿ ದೇಹವನ್ನು ಸೇರದೆ ಪುನಃ ಸ್ವರ್ಗಕ್ಕೆ ಹಿಂತಿರುಗುತ್ತದೆ. ಸೇವಾಭಾಯರು ಅಮರರಾಗುತ್ತಾರೆ. ಈ ರೀತಿಯ ಕಥೆಗಳನ್ನು, ಪವಾಡಗಳನ್ನೂ ಸಮುದಾಯಕ್ಕೆ ಮಾಡಿದ ಉಪಕಾರಗಳನ್ನು ಲಾವಣಿಗಳ ರೂಪದಲ್ಲಿ ತಮ್ಮ ಸಾಂಪ್ರದಾಯಿಕ ವಾದ್ಯಗಳೊಂದಿಗೆ ರಾತ್ರಿಯಿಡೀ ಭಕ್ತಿಯಿಂದ ಹಾಡುತ್ತಾರೆ.[೭]

ಸೇವಾಭಾಯ ಮಹಾರಾಷ್ಟ್ರದ 'ಪೌರಗಡ' ಎಂಬಲ್ಲಿ ದೇಹತ್ಯಾಗವನ್ನು ಮಾಡಿದನು. ಅಲ್ಲಿ ಅವನಿಗೆ ಗಂಧದ ಕಟ್ಟಿಗೆ ಹಾಗೂ ಬೇವಿನ ಕಟ್ಟಿಗೆಯಲ್ಲಿ ತುಪ್ಪ ಸುರಿದು ಅಂತ್ಯ ಸಂಸ್ಕಾರವನ್ನು ಮಾಡಲಾಯಿತು. ಸುಟ್ಟುಕೊಳ್ಳುತ್ತಲೇ ಬೆಂಕಿಯ ಮಧ್ಯದಿಂದ ಸೇವಾಲಾಲ್ ತನ್ನ ಸಮುದಾಯವನ್ನು ಕುರಿತು ದಿವ್ಯ ಸಂದೇಶ ನೀಡಿದನು.[೮]

''ಸಾತ್ ಪೀಡಿಮಾಯಿ ಅವತಾರ ಲೀಯು

ಚೌದ ಪೀಡಿಮಾಯಿ ಗುತ್ತಿವಲ್ಲಾರಿಮಾಯಿ

ಘರ್ ಜಲಮಲೀಯು''

ಏಳನೇ ತಲೆಮಾರಿನಲ್ಲಿ ಅವತಾರವನ್ನು ತಾಳುತ್ತೇನೆ. ಹದಿನಾಲ್ಕನೇ ತಲೆಮಾರಿನಲ್ಲಿ ಮಂಗಳೂರಿನ ಗುತ್ತಿವಲ್ಲಾರಿಯಲ್ಲಿ ಮರುಜನ್ಮ ಪಡೆಯುತ್ತಾನೆ ಎಂಬುದಾಗಿ ಸಂದೇಶ ನೀಡಿದ್ದಾನೆ. ಅದೇ ಪ್ರಕಾರ ಇಂದು ಮಹಾರಾಷ್ಟ್ರದ ಅಕೋಲಾ ಜಿಲ್ಲೆಯ ಪೌರದೇವಿಯ ಶ್ರೀರಾಮರಾವ್ ಮಹಾರಾಜರೇ ಸಾತ್ ಪೀಡಿಯ (೭ನೇ ತಲೆಮಾರು) ಅವತಾರಿ ಪುರುಷರಾಗಿ ಕಾಣಿಸಿಕೊಂಡಿದ್ದಾರೆ.[೧೮]

ಗೋರ್‌ಭಾಯಿ ನೀವು ಯಾರು ಭಯಪಡಬೇಡಿ; ಊರಿನಿಂದ ಒಂದೆರಡು ಮೈಲು ದೂರದಲ್ಲಿರಿ. ಕೋಳಿ ಹಾಗೂ ಹಂದಿಗಳನ್ನು ಸಾಕಬೇಡಿ. ದುಷ್ಟ ಜನರ ''ಕಳ್ಳ ಕದೀಮರ ಸಹವಾಸ ಮಾಡಬೇಡಿ'' ಎಂದೂ ಅವರ ಬಳಿ ಹೋಗದಿರಿ. ನನ್ನ ಭಸ್ಮದ ಒಂದು ಚಿಟಿಕೆ ಸೇವಿಸಿದರೆ ಸಾಕು ಎಲ್ಲ ರೋಗಗಳು ವಾಸಿಯಾಗುತ್ತೆ. ಅಂದಿನಿಂದ ಸೇವಾಲಾಲ್, ಮರಿಯಮ್ಮ ದೇವಿಯಂತೆ ಪೂಜ್ಯನಾದ. ಅಂದಿನಿಂದ ದೇವಸ್ಥಾನದ ಮುಂದೆ ಎರಡು ಬಾವುಟಗಳನ್ನು ನೆಟ್ಟರು. ಕೆಂಪು ಬಾವುಟ ದೇವಿಯದು. ಬಿಳಿ ಬಾವುಟ ಶ್ರೀ ಸೇವಾಲಾಲ್‌ನದು; ಇವೆರಡು ಧ್ವಜಗಳು ಎಲ್ಲ ಕಡೆಗೂ ಇರಲಿ. ಪಿಡುಗು (ಪ್ಲೇಗು) ಕಾಲರಾ ಏನು ಬಂದರೂ ನಾನಿದ್ದೇನೆ ಎಂದು ಹೇಳಿದ[೧೯] ಈ ಸಂದೇಶಗಳಿಂದ ರೋಗಗಳಿಂದ ಹಾಗೂ ಸ್ವಚ್ಛತೆಯಿಂದ ದೂರವಾಗಿರಬೇಕೆಂದು ಇವರ ಆಸೆಯಾಗಿತ್ತು ಎಂಬುವುದು ತಿಳಿಯುತ್ತದೆ.

ದೈವಾಂಶಸಂಭೂತರಾಗಿದ್ದ ಶ್ರೀ ಸೇವಾಭಾಯ್ ಜನ್ಮವೃತ್ತಾಂತ ಹಾಗೂ ಇತಿವೃತ್ತಾಂತ ಕುರಿತು ವಿದ್ವಾಂಸರಲ್ಲಿ ಹಾಗೂ ಜನಸಾಮಾನ್ಯರಲ್ಲಿ ಪ್ರಾದೇಶಿಕವಾಗಿ ಭಿನ್ನಾಭಿಪ್ರಾಯಗಳಿವೆ. ಲಂಬಾಣಿಗರ ಲಾವಣಿಗಳಲ್ಲಿ ಜನಪ್ರಿಯವಾಗಿರುವ ಕಾಳೂಕುಂಡ ಎಂದು ಕರೆಯುವ ಕಪ್ಪುಗುಹೆ, ಚಂದನಖೋಳಿ ಎಂದು ಕರೆಯುವ ವಿಶಾಲವಾದ ಗಂಧದ ವನ ಬೊರಿಪಾಟಾರ್ ಎಂದು ಕರೆಯುವ ಸಮತಟ್ಟಾದ ವಿಶಾಲವಾದ ಬಯಲು ಪ್ರದೇಶ ಝುಮ್ರಿಝುಲ್ ಎಂದು ಕರೆಯುವ ಸದಾಕಾಲ ಹರಿಯುವ ನೀರಿನ ಝರಿ. ಸೇವಾಭಾಯರು ದನಗಳನ್ನು ಮೇಯಲು ಬಿಟ್ಟು ಆಟವಾಡುತ್ತಿದ್ದ; ಗೊಲ್ಲನ ಗುಡಿಯ ಪಕ್ಕದ ದೊಡ್ಡಿಯನ್ನು ದನಗಳನ್ನು ಕಟ್ಟಲು ಬಳಸುತ್ತಿದ್ದ. ಈ ಎಲ್ಲಾ ಪ್ರದೇಶವನ್ನು ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ದಾವಣಗೆರೆ ಜಿಲ್ಲೆಯ ಸೂರಗೊಂಡನ ಕೊಪ್ಪದ ಹಳ್ಳಿಯ ಸುತ್ತಮುತ್ತಲು ಪ್ರದೇಶದಲ್ಲಿ ಕಾಣಬಹುದು ಎಂಬುದಾಗಿ ಲಂಬಾಣಿಗರ ಹಿರಿಯರು ಹೇಳುತ್ತಾರೆ.[೧೨]

ಪ್ರಾಚೀನ ಕಾಲದಿಂದಲೂ ಬಂದಿರುವ ಲಾವಣಿಗಳಲ್ಲಿ ಈ ಹೆಸರುಗಳು ಜನಪ್ರಿಯವಾಗಿರವುದರಿಂದ ಇವುಗಳನ್ನು ಬದಲಾವಣೆ ಮಾಡದೇ ಹಾಗೆಯೇ ಉಚ್ಚರಿಸಲು ಪ್ರಯತ್ನಿಸುತ್ತಾರೆ. ಆದುದರಿಂದ ಮಹಾರಾಷ್ಟ್ರ, ಆಂಧ್ರಪ್ರದೇಶ ಹಾಗೂ ಕರ್ನಾಟಕದ ಹಿರಿಯ ಲಂಬಾಣಿಗರು ಕೂಲಂಕಶವಾಗಿ ಪರಿಶೀಲಿಸಿ ಸೂರಗೊಂಡನ ಕೊಪ್ಪವೇ ಸೇವಾಭಾಯ್‌ನ ಜನ್ಮಸ್ಥಳ ಎಂಬುದಾಗಿ ನಿರ್ಧರಿಸಿ ಒಂದು ದೇವಸ್ಥಾನವನ್ನು ಈಚೆಗೆ ನಿರ್ಮಿಸಿ ಅದನ್ನು ಪವಿತ್ರ ಯಾತ್ರಾಸ್ಥಳ ಮಾಡುವ ಪ್ರಯತ್ನವನ್ನು ನಡೆಸಿದ್ದಾರೆ.

ವಿದ್ವಾಂಸರ ಪ್ರಕಾರ "ಸೇವಾಲಾಲ್ ತಂದೆ ತಾಯಿಗಳು ಮಂಗಳೂರಿನಿಂದ ಬರೋಡಾಕ್ಕೆ ಹೋದರು". "ಕರ್ನಾಟಕದ ಮಂಗಳೂರಿನ ಸಮೀಪವಿರುವ ಗುತ್ತಿವೆಲ್ಲಾರಿಯು ಸೇವಾಭಾಯ ಜನ್ಮಸ್ಥಳವಾಗಿದೆ". ಶ್ರೀ ಸೇವಾಲಾಲ್‌ರ ಜನನದ ಬಗ್ಗೆ ಖಚಿತವಾಗಿ ಹೇಳಲು ಚಾರಿತ್ರಿಕ ಆಧಾರದ ಕೊರತೆ ಕಂಡುಬರುತ್ತದೆ. ಆದರೆ ಕೆಲವು ಜನಪದ ಐತಿಹ್ಯ, ಲಾವಣಿ, ಕಥೆಗಳನ್ನು ಪರಿಶೀಲಿಸಲಾಗಿ ಹಾಗೂ ಈ ಹಿನ್ನೆಲೆಯಲ್ಲಿ ದೊರಕುವ ಸಾಕ್ಷ್ಯಾಧಾರಗಳು ಮತ್ತು ಜನಾಭಿಪ್ರಾಯಗಳು ದಾವಣಗೆರೆ ಜಿಲ್ಲೆಯ ಸೂರಗೊಂಡನಕೊಪ್ಪ ಸಮೀಪ ಒಳಗುತ್ತಿ ಸಮೀಪದ ತಾಂಡದಲ್ಲಿ ಶ್ರೀ ಸೇವಾಭಾಯರ ಜನನವಾಗಿದೆ ಎಂಬುದನ್ನು ದೃಢಪಡಿಸುತ್ತವೆ. ಒಟ್ಟಾರೆ ಹೇಳುವುದಾದರೆ ಇವರು ಸಾಧು ಪುರುಷ, ಯೋಗಿ, ಸಂತ, ಸದಾ ದೇವರ ಧ್ಯಾನ ಭಕ್ತಿಯಿಂದ ಸಮುದಾಯ ಸೇವೆಯನ್ನು ಮಾಡಿದ ಚಿಂತಕ ಎಂಬುದಾಗಿ ಹೇಳಬಹುದು.

**೬.೧.೨ ಮೀಠು ಭುಕ್ಯಾ**

ಮೀಠುಭುಕ್ಯ ಲಂಬಾಣಿಗರ ಆರಾಧ್ಯ ದೈವಗಳಲ್ಲಿ ಪ್ರಮುಖನಾಗಿದ್ದಾನೆ. ಇವರು ಸಹ ಇವರ ಕುಲಗುರುವಾಗಿದ್ದಾರೆ. ಲಂಬಾಣಿಗರ ಭುಕ್ಯಾ ಪಂಗಡದ ಮೀಠುಭುಕ್ಯಾ ತಾಂಡಾದ ಪಾಲಕನೆಂದು ಆರಾಧಿಸುತ್ತಾರೆ. ತಮ್ಮ ಕಾಲಾವಧಿಯಲ್ಲಿ ಧಾರ್ಮಿಕವಲ್ಲದ, ಸಾಮಾಜಿಕ, ರಾಜಕೀಯ ಕ್ಷೇತ್ರಗಳ ಮೇಲೆಯೂ ವಿಪುಲ ಪ್ರಭಾವ ಬೀರಿದ್ದಾರೆ.

ಮೀಠುಭುಕ್ಯಾ ಜೀವನ ಬಗ್ಗೆ ತಿಳಿಯಲು ಜಾನಪದ ಹಾಡುಗಳು ಸಹಾಯಕವಾಗಿವೆ. ಒಂದು ಜನಪದ ಪ್ರಕಾರ ಒಂದು ದಿನ ಕೈಲಾಸದಲ್ಲಿ ಶಿವನ ಸಮ್ಮುಖದಲ್ಲಿ ದೇವ-ದೇವತೆಗಳು ಭೃಂಗಿಯ ನೃತ್ಯ ನೋಡುತ್ತಿರುತ್ತಾರೆ. ಶಿವನ ದರ್ಶನಕ್ಕಾಗಿ ಮೀಠುಭುಕ್ಯಾನು ಬರುವಾಗ ಅವನ ಪಾದ ದಾರುಕ ಮುನಿಗೆ ಬಡಿಯುತ್ತದೆ. ಇದನ್ನು ತಿಳಿದ ಶಿವನು ದಾರುಕನನ್ನು ಸಮಾಧಾನ ಪಡಿಸುತ್ತಾನಲ್ಲದೆ, ಮೀಠುಭುಕ್ಯಾನಿಗೆ ನರಜನ್ಮ ಪ್ರಾಪ್ತವಾಗುವಂತೆ ಶಾಪ ನೀಡುತ್ತಾನೆ. ಶಿವನ ಆದೇಶದಂತೆ ಮೀಠುಭುಕ್ಯಾನು ಭೂಲೋಕದಲ್ಲಿ ಜನಿಸುತ್ತಾನೆ.[೧೫]

ಲಂಬಾಣಿ ಸಮುದಾಯ ರಾಠೋಡ ಪಂಗಡದ ರೇಖ್ಯಾನಾಯ್ಕ ಮತ್ತು ಧರ್ಮಿಣಿ ಮಾತೆ ಇವರ ಮಗನಾಗಿ ಜನಿಸುತ್ತಾನೆ. ಇವರು ಸಮುದಾಯದ ಏಳಿಗೆಗಾಗಿ ದುಡಿದ ದೈವತ್ವವನ್ನು ಪಡೆದ ಮಹಾ ಅವತಾರಿ ಪುರುಷ. ಇವರ ದೇವಸ್ಥಾನವನ್ನು ಗುತ್ತಿ ಪಾಮ್ನ ಎಂಬ ಸ್ಥಳದಲ್ಲಿ ಸ್ಥಾಪಿಸಲಾಗಿದೆ ಎಂಬುವುದು ಸಮುದಾಯದ ಮುಖಂಡರ ಅಭಿಪ್ರಾಯವಾಗಿದೆ.[೧೬]

ಈ ದೇವರಿಗೆ ತಾಂಡಾದಲ್ಲಿ ತನ್ನದೇ ಆದ ದೇವಸ್ಥಾನ ಇರುವುದಿಲ್ಲ. ಈ ಸಮುದಾಯದ ಲಾವಣಿಗಳಲ್ಲಿ ಸಿಹಿ ನೈವೇದ್ಯವೇ ಇವರ ಬಯಕೆ ಎಂಬ ಮಾತುಗಳು ಬರುವುದರಿಂದ ಕುರಿಬಲಿಯನ್ನು ಕೊಡುವುದಿಲ್ಲ. ಈ ದೇವರಿಗೆ ಭುಕ್ಯಾ ಗೋತ್ರದವರೇ ಪೂಜಾರಿಗಳಾಗಿದ್ದು, ಇವರ ಗದ್ದುಗೆಯನ್ನು ಸೇವಾಲಾಲ್ ದೇವಾಲಯದಲ್ಲಿ ನಿರ್ಮಿಸಿ ಇವರನ್ನು ಆರಾಧಿಸುತ್ತಾರೆ. ಇವರ ಆರಾಧನೆಯ ಸಮಯದಲ್ಲಿ ಗದ್ದುಗೆಯಿಂದ ಕಠಾರಿ ಮತ್ತು ಹೋಕ್ಕಾಗಳನ್ನಿಟ್ಟು ಆರಾಧನೆ ಮಾಡುತ್ತಾರೆ. ಇವರ ಬಗ್ಗೆ ಈ ಸಮುದಾಯದಲ್ಲಿ ಲಾವಣಿಯೊಂದು ಪ್ರಚಲಿತದಲ್ಲಿದ್ದು ಆತನ ಬದುಕು, ಹಾಡು, ಉಪದೇಶಗಳನ್ನು ವರ್ಣಿಸಲಾಗಿದೆ. ತಾಂಡಾಕ್ಕೆ ಭೀಕರ ಬರಗಾಲ

ಬಂದು ಸೇವಿಸಲು ಆಹಾರ ಧಾನ್ಯಗಳು, ಕುಡಿಯಲು ನೀರು ಇಲ್ಲದೇ ಹೋದ ಸಮಯದಲ್ಲಿ ತಾಂಡಾದವರು ಅನ್ಯಮಾರ್ಗವಿಲ್ಲದೇ ಅನಿವಾರ್ಯವಾಗಿ ಕಳ್ಳತನ ಮಾಡಲು ಹೊರಟಾಗ ಮೀಠಭುಕ್ಯಾ ಬೇಡವೆಂದು ತಡೆಯಲು ಪ್ರಯತ್ನಿಸಿ ವಿಫಲನಾದಾಗ ಆ ಸಮುದಾಯದ ಪರವಾಗಿ ತನ್ನನ್ನು ಅರ್ಪಿಸಿಕೊಂಡು ತ್ಯಾಗಮಯ ವ್ಯಕ್ತಿ. ಸಿಹಿ ನೈವೇದ್ಯವನ್ನು ಬಯಸುವ ನನ್ನನ್ನು ಸದಾ ಧ್ಯಾನಿಸಿ ನನ್ನ ಧ್ಯಾನ ಸ್ಮರಣೆ ಮಾಡಿದವರಿಗೆ ಹಸಿವು, ಬಾಯಾರಿಕೆಗಳ ತೊಂದರೆ ಬರುವುದಿಲ್ಲ. ನಿಮ್ಮ ಗೋಸಂಪತ್ತು ವೃದ್ಧಿಸುತ್ತದೆ.[೭] ಎಂಬುದಾಗಿ ಉಪದೇಶ ಮಾಡಿದನು. ಆ ಮೂಲಕ ಸಮುದಾಯದ ಏಳಿಗೆಗೆ ಶ್ರಮಿಸಿದ ಎಂದು ಹೇಳಬಹುದಾಗಿದೆ.

ಒಟ್ಟಾರೆ ಮೀಠುಭುಕ್ಯಾ ಲಂಬಾಣಿಗರ ಏಳಿಗೆಗೆ ಶ್ರಮಿಸಿದ ಮಹಾಪುರುಷರಲ್ಲಿ ಪ್ರಮುಖರು. ಶ್ರೀ ಸೇವಾಲಾಲ್ ರವರು ಕುಲದೇವರಾದರೆ, ಮೀಠುಭುಕ್ಯಾ ಕುಲಗುರುವಾಗಿರುವುದು ಕಂಡುಬರುತ್ತದೆ.

**೬.೧.೩. ಭೀಮಾನಾಯ್ಕ**

ಭೀಮಾನಾಯ್ಕ ಲಂಬಾಣಿಗರ ಇನ್ನೋರ್ವ ಕುಲಗುರು ಮತ್ತು ಆರಾಧ್ಯ ದೇವನಾಗಿದ್ದಾನೆ. ಇವನನ್ನು ಅವತಾರ ಪುರುಷ, ಸಿದ್ಧಿ ಪುರುಷನೆಂದೂ ಭಾವಿಸಿದ್ದಾರೆ. ಭೀಮಾನಾಯ್ಕ ಸಮಸ್ತ ಲಂಬಾಣಿ ಸಮುದಾಯದವರಿಗೆ 'ದಾದಾ' (ಅಜ್ಜ) ಆಗಿದ್ದಾನೆ. ಅವರೊಬ್ಬ ಚಾರಿತ್ರಿಕ ಮಹಾನುಭಾವ. ಅವನನ್ನು ಕುರಿತಾದ ಕಥೆಯನ್ನು ನಿರೂಪಿಸುವ ಅನೇಕ ಹಾಡುಗಳು ಲಂಬಾಣಿಗರಲ್ಲಿ ಪ್ರಚಲಿತವಿದೆ. ಲೋಕ ಕಲ್ಯಾಣಕ್ಕಾಗಿ ದಾದಾ ಭೀಮನಾಯ್ಕನು ಅನೇಕ ಪವಾಡಗಳನ್ನು ಮೆರೆದು ಸಿದ್ಧಿಪುರುಷನಾಗಿದ್ದಾನೆ. ಅವನ ನಾಮಸ್ಮರಣೆಯಿಂದ ಗೋರ್ ಬಂಜಾರ ಸಮುದಾಯ ತಮ್ಮ ಕಷ್ಟಕಾರ್ಪಣ್ಯ ದೂರವಾಗುತ್ತವೆಂದೂ, ತಪ್ಪಿದರೆ ಊರಿಗೆ ಕೇಡುಗಾಲ ಬಂದು ಮಳೆ, ಬೆಳೆ ಬಾರದೇ ಕಾಯಿಲೆ, ಕಷ್ಟ-ನಷ್ಟಗಳು ತಾಂಡಾದಲ್ಲಿ ಸಂಭವಿಸುತ್ತವೆ ಎಂಬುದಾಗಿ ನಂಬುತ್ತಾರೆ.

ಬಳ್ಳಾರಿ ಜಿಲ್ಲೆ ಕೂಡ್ಲಿಗಿ ತಾಲ್ಲೂಕಿನ ಚಿಕ್ಕಜೋಗಿಹಳ್ಳಿ ಭೀಮಾನಾಯ್ಕನ ಜನ್ಮಸ್ಥಳವಾಗಿದೆ. ವ್ಯಾಪಾರಿಗಳಾದ ಇವನ ಪೂರ್ವಜರಲ್ಲಿ ರಾಠೋಡ್ ವಂಶದ ಲಾಲುನಾಯ್ಕ ಎಂಬುವನು ಶ್ರೀಮಂತ ಮನೆತನಕ್ಕೆ ಸೇರಿದವನಾಗಿದ್ದ. ಅವನಿಗೆ ರಾಂಜಿ ನಾಯಕ್ ಎಂಬ ಏಕೈಕ ಪುತ್ರನಿದ್ದನು. ಮುಂದೆ ರಾಂಜಿನಾಯ್ಕನಿಗೆ ಕನ್ಯಾನ್ವೇಷಣೆ ಮಾಡಿ ಮಂಗ್ನಿಬಾಯಿಯೊಡನೆ ಒಳ್ಳೆಯ ಸಂಬಂಧ ಕೂಡಿ ಅವಳೊಂದಿಗೆ ಮದುವೆ ಮಾಡಿದರು.

ರಾಂಜಿನಾಯ್ಕನು ಮುಗ್ನಿಬಾಯಿಯೊಡನೆ ವಿವಾಹವಾಗಿ ''ಭೀಮಾ, ಖೇಮಾ ಮತ್ತು ಹೇಮಾ ಮೂರು ಮಕ್ಕಳ ಜನನವಾಯಿತು''. ವ್ಯಾಪಾರಿಯಾಗಿದ್ದ ರಾಂಜಿನಾಯ್ಕ ವ್ಯಾಪಾರಕ್ಕಾಗಿ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸಂಚರಿಸುತ್ತ ದಾವಣಗೆರೆ ಜಿಲ್ಲೆ ಹೊನ್ನಳ್ಳಿ ತಾಲೂಕಿನ ಸೂರಗೊಂಡನ ಕೊಪ್ಪ ಸಮೀಪ ಬಳಗುತ್ತಿಯಲ್ಲಿ ಕುಟುಂಬ, ರಾಸುಗಳೊಂದಿಗೆ ನೆಲೆಸಿದನು.[೮] ಬಾಲಕನಾದ ಭೀಮಾನಾಯ್ಕ ಹುಣ್ಣಿಮೆ ಚಂದ್ರನಂತೆ ಬೆಳೆಯತೊಡಗಿದನು. ಮುಖವು ದಿವ್ಯವಾದ ತೇಜಸ್ಸಿನಿಂದ ಕಂಗೊಳಿಸುತ್ತಿತ್ತು. ಮನೆಯಲ್ಲಿ ಹಾಲು, ಮೊಸರು, ಬೆಣ್ಣೆ ತುಪ್ಪ ಯಥೇಚ್ಚವಾಗಿ ಸಿಗುತ್ತಿದ್ದರಿಂದ ಮುದ್ದಾಗಿ ಮೈಕೈ ತುಂಬಿಕೊಂಡು ಬೆಳೆಯತೊಡಗಿದನು. ಎಲ್ಲರಿಗೂ ಮುದ್ದಿನ ಕಣ್ಮಣಿಯಾಗಿ ಕಂಗೊಳಿಸತೊಡಗಿದನು. ಸುಮಾರು ಐದಾರು ವರ್ಷದ ಮಗುವಾದನು. ಪ್ರತಿದಿನವೂ ತನ್ನ ತಂದೆ ದನಗಳನ್ನು ಮೇಯಿಸಲು ಅರಣ್ಯಕ್ಕೆ ಹೋಗುತ್ತಿರುವುದನ್ನು ಕಂಡು ಒಂದು ದಿನ ಅಪ್ಪಾಜಿ ನೀವು

ಅಡವಿಗೆ ಹೋಗುವುದು ಬೇಡ, ಮನೆಯಲ್ಲಿ ಇದ್ದು ಬಿಡಿ, ನಾನು ಅರಣ್ಯಕ್ಕೆ ಹೋಗಿ ದನಗಳನ್ನು ಮೇಯಿಸಿಕೊಂಡು ಬರುತ್ತೇನೆ ಎಂದನು ಮಗು ಭೀಮನಾಯ್ಕ.[೨೦]

ಪ್ರತಿನಿತ್ಯವು ಭೀಮನಾಯ್ಕನು ಹಸಿರು ದಟ್ಟವಾದ ಅಡವಿಯಲ್ಲಿ ಹಸುಗಳನ್ನು ಮೇಯಿಸಲು ಬರುತ್ತಿದ್ದನು. ಏಳು ವರ್ಷ ತುಂಬುತ್ತಿರುವಾಗ ಶಿರಸಿಯ ಮಾರಿಕಾಂಬಾದೇವಿಯ ಜಾತ್ರೆ ಪ್ರಾರಂಭವಾಯಿತು. ರಾಂಜೀನಾಯ್ಕನು ತಾನು ದೇವಿಗೆ ಹರಕೆ ಹೊತ್ತಿದ್ದನ್ನು ತೀರಿಸದೇ ಗೋದಾವರಿ ವನಕ್ಕೆ ತನ್ನ ತಾಂಡದವರೆಲ್ಲ ಹೋಗಿ ನೆಲೆಸಲು ನಿರ್ಧರಿಸಿದ್ದರು. ಇವರು ಈ ತಾಂಡವನ್ನು ಬಿಟ್ಟು ಹೋಗಲು ಕಾರಣವೂ ಇತ್ತು. ವಾಸವಾಗಿದ್ದ ಜಾಗದಲ್ಲಿ ಪ್ರತಿ ದಿನವು ದನಕರುಗಳು ಸಾಯುತ್ತಿದ್ದವು. ಊರಲ್ಲಿ ಕಾಲರಾ ಬೇನೆ ಪ್ರಾರಂಭವಾಯಿತು. ಆದ್ದರಿಂದ ತಾಂಡವನ್ನು ಬಿಟ್ಟು ಗೋದಾವರಿ ವನಕ್ಕೆ ಹೋಗಿ ಅಲ್ಲಿಯೇ ವಾಸ ಮಾಡಬೇಕೆಂದು ಯೋಚಿಸಿಕೊಂಡರು.[೨೧]

ಆಗ ಊರ ಪ್ರಮುಖರಾದ ರಾಂಜೀನಾಯ್ಕರು ದೇವಿಗೆ ಹೊತ್ತಿರುವ ಹರಕೆಯನ್ನು ತೀರಿಸದೇ ಇರುವುದಕ್ಕೆ ಆ ತಾಯಿಯು ಕೋಪಗೊಂಡು ಈ ರೀತಿ ಮಾಡುತ್ತಿದ್ದಾಳೆ ಎಂದು ನುಡಿದರು. ಆಗ ಭೀಮನಾಯ್ಕನು ಅಪ್ಪಾಜಿ ದೇವಿಯ ಜಾತ್ರೆಯನ್ನು ನೋಡಿ ಆ ಮಹಾ ತಾಯಿಯ ದಿವ್ಯ ದರ್ಶನವನ್ನು ಪಡೆಯೋಣ ಎಂದು ಹೇಳಿ ಎಲ್ಲರೂ ಸಂತೋಷದಿಂದ ಜಾತ್ರೆಗೆ ಹೊರಟರು. ತಾವು ತಂದ ಹರಕೆ-ಕಾಣಿಕೆಗಳನ್ನು ಮಾರಿಕಾಂಬೆ ದೇವಿಯ ಮುಂದಿಟ್ಟರು. ಬಗೆ ಬಗೆಯಾಗಿ ಸ್ತುತಿಸಿದರು. ತಮ್ಮ ತಮ್ಮ ತಪ್ಪನ್ನು ಮನ್ನಿಸಿ ತಮ್ಮನ್ನು ಕಾಪಾಡು ತಾಯಿ ಎಂದು ಪ್ರಾರ್ಥಿಸಿಕೊಂಡರು.[೨೨]

ಭೀಮಾನಾಯ್ಕನು ಪ್ರಾಯಕ್ಕೆ ಬರುತ್ತಿದ್ದಂತೆ ಮೈಸೂರು ರಾಜ್ಯವು ಅರಸರ ದುರ್ಬಲ ಸರ್ವಾಧಿಕಾರಿಗಳ ದುರಾಡಳಿತ, ಆಂತರಿಕ ವೈಷಮ್ಯ ಮತ್ತು ನೆರೆಯ ರಾಜ್ಯದ ಆಕ್ರಮಣಗಳಿಂದ ತತ್ತರಿಸಿತು. ಇಂತಹ ವಿಷಮ ಪರಿಸ್ಥಿತಿಯಲ್ಲಿ ಸೈನಿಕರಾಗಿ ನೇಮಕಗೊಂಡ ಭೀಮಾನಾಯ್ಕ ತನ್ನ ಅಪ್ರತಿಮ ಸಾಹಸ, ಚತುರತೆ, ಮತ್ತು ಸಂಘಟಿತ ಶಕ್ತಿಯಿಂದ ಹೈದರಾಲಿಗೆ ಸಲಹೆ, ಸಹಕಾರ, ಸಹಾಯಕನಾಗಿ ಕಾರ್ಯ ನಿರ್ವಹಿಸುತ್ತಾ ದಳವಾಯಿಗಳನ್ನು ದಮನ ಮಾಡಿ ಅರಸರನ್ನು ಬದಿಗೊತ್ತಿ ಅಧಿಕಾರಕ್ಕೆ ತರುವಲ್ಲಿ ಮಹತ್ವದ ಪಾತ್ರ ವಹಿಸಿದನು.

ಹೈದರಾಲಿಯು ಇವನ ಪ್ರಾಮಾಣಿಕತೆ, ನಿಷ್ಠೆ ನೋಡಿ ತನ್ನ ಸೈನ್ಯಕ್ಕೆ ಆಹಾರ ಧಾನ್ಯಗಳನ್ನು ಮದ್ದುಗುಂಡುಗಳನ್ನು ರಫ್ತು ಮಾಡುವ ಕೆಲಸಕ್ಕೆ ನೇಮಿಸಿಕೊಂಡನು. ಮೈಸೂರಿನ ದೊರೆ ಟಿಪ್ಪುಸುಲ್ತಾನ್ ಮತ್ತು ಬ್ರಿಟಿಷರ ಮಧ್ಯೆ ಯುದ್ಧ ನಡೆದ ಕಾಲ. ಅದು ಆ ಸಂದರ್ಭದಲ್ಲಿ ಟಿಪ್ಪುವಿಗೆ ಮತ್ತಷ್ಟು ಮದ್ದು ಗುಂಡು ಸಾಮಗ್ರಿಗಳ ಅಗತ್ಯವಿತ್ತು. ಆಗ ಆತ ತನ್ನ ಸೈನ್ಯದಲ್ಲಿನ ವೀರಸೈನಿಕ ಭೀಮಾನಾಯ್ಕನ ನೇತೃತ್ವದಲ್ಲಿ ಎಂಟು ಯೋಧರ ಪಡೆ ರಚಿಸಿ ಬಾಬಾಬುಡನ್‌ಗಿರಿಯ ಗುಹೆಯಲ್ಲಿ ಅಡಗಿಸಿಟ್ಟಿದ್ದ ಯುದ್ಧ ಸಾಮಗ್ರಿಗಳನ್ನು ರಹಸ್ಯವಾಗಿ ತೆರಲು ಕಳುಹಿಸಿದ.

ಶತ್ರುಗಳ ಕಣ್ಣುತಪ್ಪಿಸಿ ರಾತ್ರೋರಾತ್ರಿ ಭೀಮನಾಯ್ಕನ ತಂಡ ಕುದುರೆ ಮೇಲೆ ಯುದ್ಧ ಸಾಮಗ್ರಿ ತರುತ್ತಿತ್ತು. ಆಗ ಕೊಡಗಿನ ಕಡೆಯಿಂದ ಸಾಗಿ ಬರುತ್ತಿದ್ದ ಬ್ರಿಟಿಷ್ ಸೈನ್ಯ ಪಿರಿಯಾಪಟ್ಟಣದ ಸಮೀಪ ಇವರನ್ನೆಲ್ಲ ಸೆರೆಹಿಡಿಯಿತು. ಯುದ್ಧ ಸಾಮಗ್ರಿಗಳನ್ನು ಅಡಿಗಿಸಿಟ್ಟ ಸ್ಥಳ ತಿಳಿಸುವಂತೆ ಚಿತ್ರ ಹಿಂಸೆ ನೀಡಿತು. ಸ್ವಾಮಿ ನಿಷ್ಠೆಯಿಂದ ಭೀಮನಾಯ್ಕ

ಮತ್ತು ಅವರ ತುಕಡಿ ಈ ಹಿಂಸೆಯನ್ನು ಸಹಿಸಿಕೊಂಡಿತು. ಆದರೆ ರಹಸ್ಯವಾಗಿಟ್ಟ ಸ್ಥಳವನ್ನು ಮಾತ್ರ ಹೇಳಲೇ ಇಲ್ಲ.

ಕುಪಿತರಾದ ಬ್ರಿಟಿಷರು ಭೀಮನಾಯ್ಕ ಸೇರಿದಂತೆ ಎಂಟು ಸೈನಿಕರನ್ನು ಗಲ್ಲಿಗೆ ಆದೇಶಮಾಡುತ್ತಾರೆ. ಅವರಲ್ಲಿ ಒಬ್ಬನಾದ ತೀತಾರಾಜನಾಯ್ಕ ಸೇರಿದಂತೆ ಇತರೆ ಸೈನಿಕರಿಗೆ ಗಲ್ಲಿಗೇರಿಸಿದರು. ಕೆಲವರು ತಪ್ಪಿಸಿಕೊಂಡರು ಅವರಲ್ಲಿ ಭೀಮನಾಯ್ಕ ಒಬ್ಬರು. ತೀತಾರಾಜನಾಯ್ಕನ ಪತ್ನಿ ಭೀಮಿಬಾಯಿ (ಭೀಮಿಸತ್ತಿ) ಪತಿಯ ಸಾವಿನ ಸುದ್ದಿ ತಿಳಿದು ಪ್ರಾಣತ್ಯಾಗ ಮಾಡುತ್ತಾಳೆ. ಅದಕ್ಕಾಗಿ ಇಂದಿಗೂ ತುಮಕೂರು ಜಿಲ್ಲೆ ಚಿಕ್ಕನಾಯಕನಹಳ್ಳಿ ತಾಲ್ಲೂಕು ಹುಲಿಯೂರು ಸಮೀಪ ಅಣೆಗೆರೆ ಗ್ರಾಮದ ತೆಂಗಿನ ತೋಪುಗಳ ಮಧ್ಯ ಕಟ್ಟಿದ ದೇವಾಲಯದಲ್ಲಿ ಆಕೆ ದೇವಿ ಭೀಮಿಸತ್ತಿಯಾಗಿ ದೇವಾಂಶ ಸಂಭೂತೆಯಾಗಿ ಲಂಬಾಣಿ ಜನಾಂಗದ ಪೂಜೆಗೆ ಪಾತ್ರಳಾಗಿದ್ದಾಳೆ.

ಭೀಮನಾಯ್ಕರು ಕಾಲಾಂತರದಲ್ಲಿ ತಮ್ಮ ತಂಡವನ್ನು ಸಿರಸಗಡದಿಂದ ಹೈದರಾಬಾದ್ ಮಾರ್ಗವಾಗಿ ನಿಜಾಮಬಾದ್ ಸಮೀಪದಲ್ಲಿರುವ ಮಂಗಾಕ್ಕೆ ಸ್ಥಳಾಂತರಿಸಿದರು. ಅಲ್ಲಿ ನಿಜಾಮನ ಬಳಿಯಲ್ಲಿ ಆಶ್ರಯವನ್ನು ಪಡೆದು ಸೈನಕ್ಕೆ ಆಹಾರ ಧಾನ್ಯಗಳನ್ನು ರಫ್ತು ಮಾಡುವ ಕೆಲಸವನ್ನು ಕೈಗೊಂಡರು. ಅಲ್ಲಿಂದ ಮುಂದೆ ಸೂರಖಂಡ್ (ಸೂರತ್) ಬಾದಶಹನೊಂದಿಗೆ ಟಗರಿನ ಸಲುವಾಗಿ ಹೋರಾಟ ಮಾಡಿ ಭೀಮಾನಾಯ್ಕ ತಂಡದವರು ಮಹಾರಾಷ್ಟ್ರದ ನಾಂದೇಡ ಜಿಲ್ಲೆಯ ಪೇಸಗಂಗಾ (ನಂದಗಾಂವ) ನದಿಯ ಕಡೆ ಬಂದರು. ಅಲ್ಲಿದ್ದ ಭಿಲ್ ಜನರು ಭೀಮನಾಯ್ಕರ ಬೀಜದ ಹೋರಿ (ಗರಸ್ಯಾಸಾಂಡ)ಯನ್ನು ಕದ್ದೊಯ್ದು 'ಭೂರಿಪಾಟಾರ್' ಎಂಬಲ್ಲಿ ಕೂಡಿಹಾಕಿದರು. ಭಿಲ್ ಜನರೊಡನೆ ಹೋರಾಟಕ್ಕಿಳಿದು ಭೀಮಾನಾಯ್ಕರು ತಮ್ಮ ಗರಸ್ಯಾ ಸಾಂಡನ್ನು ಪಡೆದು ಅಲ್ಲಿಂದ ಮುಂದೆ 'ಪಂಚವಟಿ' ಎಂಬಲ್ಲಿಗೆ ಬಂದರು"[೫] ಅಲ್ಲಿ ಶ್ರೀರಾಮನ ದರ್ಶನವನ್ನು ಪಡೆದು ಕಸಳ್ಯಾಘಾಟನ್ನು ದಾಟಿ ರೂಯಿಗಡ ಎಂಬಲ್ಲಿಗೆ ಬಂದರು.[೬] ಭೀಮಾನಾಯ್ಕರು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಗಳಿಗೆ ಸಂಚರಿಸುತ್ತ ತನ್ನ ಜನರ ಸ್ಥಿತಿಗತಿಗಳನ್ನು, ಸಂಕಷ್ಟಗಳನ್ನು ಮನಗಂಡು ಅವರ ಏಳ್ಗೆಗಾಗಿ ಶ್ರಮಿಸಲು ತೊಡಗಿದರು. ಭಾರತದ ಉದ್ದಗಲಕ್ಕೂ ಸಂಚರಿಸುತ್ತ ತಮ್ಮ ಅಸಾಧಾರಣ ದೈವೀಶಕ್ತಿಯಿಂದ ಅನೇಕ ಪವಾಡಗಳನ್ನು ಮಾಡಿದರು. ಇವರು ಹೋದೆಡೆ ಸುಖ ಸಮೃದ್ಧಿ ನೆಲೆ ನಿಂತಿದ್ದರಿಂದ ಹಾಗೂ ಅವನ ಪವಾಡ ಸದೃಶ್ಯ ವ್ಯಕ್ತಿತ್ವಕ್ಕೆ ಮಾರುಹೋದ ಜನ ಅವನನ್ನು ಒಬ್ಬ ಸತ್ಪುರುಷ ಮಹಾತ್ಮನೆಂದು ಒಪ್ಪಿಕೊಂಡರು.

ತನ್ನ ಅನುಭವದ ಸೊಬಗನ್ನು ಜಗತ್ತಿಗೆ ತಿಳಿಸಲು ದಾದಾ ಭೀಮನಾಯ್ಕ ಪ್ರದಕ್ಷಿಣೆ ಕೈಗೊಂಡ. ಭೂಮಿ ಬಹು ವಿಸ್ತಾರವಾದುದೆಂದು ತಿಳಿದು ಅಂದಿನ ಮೈಸೂರು, ಮದ್ರಾಸ್, ಹೈದರಾಬಾದ್, ಮುಂಬೈ ನಗರಗಳು ಸಂಚರಿಸುತ್ತಾ ಸಾಮಾಜಿಕ ಸುಧಾರಣೆಗಳ ಜೊತೆಗೆ ಧರ್ಮಬೋಧನೆ ಮಾಡಿದನು. ಪ್ರತಿಯೊಬ್ಬ ಪಂಚಗಣಾದೀಶ್ವರನಿಗಿರುವಂತೆ ದಾದಾ ಭೀಮನಾಯ್ಕನಿಗೂ ಗುರಿ ಉದ್ದೇಶಗಳು ಅಚಲವಾಗಿದ್ದವು.

ದಾದಾಭೀಮನಾಯ್ಕ ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲೂಕು, ಸೂರೆಗೊಂಡನ ಕೊಪ್ಪದಲ್ಲಿ ವಾಸಿಸುತ್ತಾನೆ. ಇಲ್ಲಿನ ಮಾರಿಕಾಂಭಾ ದೇವಾಲಯದಲ್ಲಿ ನೆಲೆಸಿರುವಾಗ ಆ ಮಾರಿಕಾಂಭಾ ದೇವಿಯ ಲಿಂಗಾಧಾರಣೆ ಮಾಡಿ ಸೂರೆಗೊಂಡನ ಕೊಪ್ಪದ ಗ್ರಾಮಸ್ಥರಿಗೆ ಉಪದೇಶಮಾಡುತ್ತಾನೆ. ಹೀಗಿರುವಾಗ ಹಟ್ಟಿಯ ವ್ಯಾಪಾರಿ ಲಕ್ಮನಾಯ್ಕನು ಸೂರೆಗೊಂಡನ ಕೊಪ್ಪಕ್ಕೆ ಬಂದಾಗ ಪರಿಚಯವಾಗುತ್ತದೆ. ಲಕ್ಮನಾಯ್ಕನ ಗಾಢವಾದ ಗೆಳೆತನದೊಂದಿಗೆ ದಾರಿ ಸವೆಸುತ್ತಾ ಜಗಳೂರು (ತಾ) ಅಣಬೂರು ಜೋಗಿಹಳ್ಳಿ ಗ್ರಾಮಕ್ಕೆ ಬಂದು ನೆಲೆಸಿದನು.

ಸ್ಥಳೀಯ ಪಾಳೆಗಾರರ ನಿಯೋಜಿತ ಅಧಿಕಾರಿಯ ಕಿರುಕುಳದಿಂದ ಮತ್ತು ಜೀವನಾವಶ್ಯಕ ಸೌಲಭ್ಯಗಳಿಗೆ ಯೋಗ್ಯವಿಲ್ಲದ ವಾತಾವರಣದಿಂದ, ಕುಟಿಲ ಭೋದೂಪಾಯದ ಜನರಿಂದ ಬೇಸತ್ತು ಚಿಕ್ಕಜೋಗಿಹಳ್ಳಿ ತಾಂಡ ಪೂರ್ವಾಭಿಮುಖವಾಗಿ ಪ್ರಯಾಣಿಸಿದ ಆತನ ಬರುವಿಕೆಗೆ ಲಕ್ಮನಾಯ್ಕ ದಂಪತಿಗಳು ಸ್ವಾಗತಿಸಲು ತುದಿಗಾಲಲ್ಲಿ ನಿಂತಿದ್ದರು. ಅವರ ಮನೆಗೆ ಬಂದು ಲಕ್ಮನಾಯ್ಕ ಮತ್ತು ಆತನ ಧರ್ಮಪತ್ನಿಗೆ ಲೋಕಜ್ಞಾನದ ಬಗ್ಗೆ ವಿವರಿಸಿದನು. ಸನ್ಮಾರ್ಗ ಪ್ರಾಪ್ತಿಗೆ ಅಗತ್ಯವಾದ ಎಲ್ಲಾ ಸಂಗತಿಗಳನ್ನು ತಿಳಿಯುವುದು ಅಗತ್ಯವೆಂದು ಮನವರಿಕೆಮಾಡಿಕೊಟ್ಟನು.ಅರಿಷಡ್ವರ್ಗಗಳ ನಿಗ್ರಹ, ಅತಿಥಿ ಸತ್ಕಾರ ಮಾಡುವುದು ಸತ್ಯ ಧರ್ಮ ಪ್ರಾಮಾಣಿಕತೆಯಿಂದ ಜೀವಿಸುವುದನ್ನು ಬೋಧಿಸಿದ.

ದಿನದಿಂದ ದಿನಕ್ಕೆ ತನ್ನ ಪವಾಡವನ್ನು ಹೆಚ್ಚಿಸಿಕೊಂಡ ಭೀಮನಾಯ್ಕ ಸುತ್ತಲಿನ ಗಡ್ಡಗೆ (ಪ್ರವೇಶ) ಲೋಕಖ್ಯಾತಿ ಪಡೆದ. ತನ್ನ ದೈವಿಶಕ್ತಿಯಿಂದ ಅನೇಕ ಪವಾಡಗಳನ್ನು ಮಾಡಿತೋರಿಸಿ ಶ್ಲಾಘನೆಗೊಳಗಾದ. ಲಕ್ಮನಾಯ್ಕ ದಂಪತಿಗಳಿಗೆ ಸುಮಾರು ವರ್ಷಗಳಿಂದ ಸಂತಾನವಿರಲಿಲ್ಲ. ಆಶೀರ್ವಾದ ಮಾಡಿದನು. ಅದರ ಫಲವಾಗಿ ಒಂದು ಗಂಡು ಮಗು ಜನನವಾಯಿತು. ಭೀಮನಾಯ್ಕ ಎಂದು ನಾಮಕರಣಮಾಡಲಾಯಿತು. ಲಕ್ಮನಾಯ್ಕ ಸ್ವಾಮಿಯ ಕೃಪೆಗೆ ಪಾತ್ರನಾದನು. ಪಾಳೆಗಾರರು ಇವರ ಆಶೀರ್ವಚನ ಪಡೆದರು. ಭೀಮಸಮುದ್ರ ಸಮೀಪ ಬಿಳಿನೀರ ಚಿಲುಮೆಯಲ್ಲಿ ಗಂಗೆ ಉಕ್ಕಿ ಬಂತು. ಬುತ್ತಿಯಲ್ಲಿ ಅಕ್ಷಯ ಪವಾಡ ತೋರಿಸಿದ್ದು, ಸತ್ತು ಹೋದ ವ್ಯಕ್ತಿಯನ್ನು ಬದುಕಿಸಿದ್ದು, ಕೆಟ್ಟುಹೋದ ರೈಲನ್ನು ಚಾಲು ಮಾಡಿದ್ದು ಲಕ್ಮನಾಯ್ಕನ ಸಂಸಾರ ಆನಂದ ಸಾಗರದಲ್ಲಿ ತೇಲಿಸಿದ್ದು, ಶ್ರೀಗಳ ಶಿವಪೂಜೆ, ಮಹಿಮೆ-ಮಾಯೆಗಳ ಚಿತ್ರಣವನ್ನು ತೋರಿಸಿದ್ದು ಗಮನಾರ್ಹ.

ಭೀಮನಾಯ್ಕ ನೀತಿ ಬೋಧಿಸಿದ್ದು ಮಹಾಪರಿವರ್ತನೆಗೆ ಸಂಕೇತವಾಯಿತು. ಪತಿ-ಪತ್ನಿ, ಮಕ್ಕಳ, ತಂದೆ-ತಾಯಿಗಳ, ಅಣ್ಣ-ತಮ್ಮಂದಿರ ಬಾಂಧವ್ಯದ ಬಗ್ಗೆ ತಿಳಿಸಿದನು. ಪ್ರಾಣಿಗಳ ಹಿಂಸೆಯನ್ನು ತಡೆದು ಪ್ರಾಣಿಗಳ ಬಗ್ಗೆ ದಯೆ ಇಡಬೇಕೆಂದು ಸತ್ತ ಎಮ್ಮೆಯ ಹಾಲು ಕರೆಯುತ್ತಾರೆ. ಈ ಭಾಗದಲ್ಲಿ ಲಂಬಾಣಿಗರು ಬೇಟೆಯಿಂದ ಸಹಸ್ರಾರು ಪ್ರಾಣಿಗಳನ್ನು ಕೊಲ್ಲುತ್ತಿದ್ದರು. ಸರ್ವರೂ ಸಮಾನರು; ಜಾತಿಭೇದವಿಲ್ಲವೆಂದು ಭೀಮನಾಯ್ಕ ಹರಿಜನರ ಮನೆಯಲ್ಲಿ ಊಟ ಮಾಡುವುದು ಇತರರನ್ನು ನಿಬ್ಬೆರಗಾಗುವಂತೆ ಮಾಡಿತು.

ತಮ್ಮ ಸಾಮಾಜಿಕ ಕಳಕಳಿಯ ವ್ಯಕ್ತಿತ್ವದಿಂದ ಭೀಮನಾಯ್ಕ ಜನಮನಗಳನ್ನು ಗೆದ್ದಿದ್ದಾರೆ. ರೈತರು, ಕಾರ್ಮಿಕರು, ವ್ಯಾಪಾರಿಗಳು, ದೀನದಲಿತರು, ಅಧಿಕಾರಿಗಳು ಮತ್ತು ದೊರೆಗಳನ್ನು ಹೆಸರಿಸಬಹುದು. ತಪ್ಪು ಮಾಡುವವರಿಗೆ ಶಿಕ್ಷೆ ಕೊಡುವ ಪೂರ್ವದಲ್ಲಿ ಶಿಕ್ಷಣ ಕೊಡುವ ಹಂಬಲ ಭೀಮನಾಯ್ಕರದು. ಹೀಗೆ ತನ್ನ ಸಹಸ್ರಾರು ಕನಸುಗಳ ಗೂಡಿನಲ್ಲಿ ಬೆಂದ ಭೀಮನಾಯ್ಕ ಜನ ಕಲ್ಯಾಣಕ್ಕಾಗಿ ಅಪಾರ ಶ್ರಮಿಸಿ, ವಿಶ್ರಮಿಸಿಕೊಳ್ಳಲು ಏಕಾಂತಕ್ಕಾಗಿ ಚಡಪಡಿಸಿದರು. ಮುಕ್ತಿಯನ್ನು ಕಾಣಲು ತಪಸ್ಸು ಮಾಡುವ ಶಿವಧ್ಯಾನ ಮಗ್ನರಾಗಿ ಭೀಮಸಮುದ್ರ ಹೋಗುವ ರಸ್ತೆ ಪಕ್ಕದ ಗವಿಯ ನೆಲಮಾಳಿಗೆಯಲ್ಲಿ ಕುಳಿತರು. ಇಂದು ಆ ಸ್ಥಳಕ್ಕೆ ಭೀಮನಾಯ್ಕನ ಮಠ ಅಥವಾ ಭೀಮನಾಯ್ಕರ ದೇವಳ್‌ವೆಂದು ಕರೆಯಲ್ಪಡುತ್ತದೆ. ಧ್ಯಾನದಲ್ಲಿ ತೊಡಗಿದ ಭೀಮನಾಯ್ಕರಿಗೆ ಸದಾ ತನ್ನ ಜನಸಾಮಾನ್ಯರ ಚಿಂತೆ ಮನಸ್ಸಿಂದ ಅಳಿಯಲಿಲ್ಲ. ಅನೇಕ ಬಗೆಯಲ್ಲಿ ಜನರಿಗೆ ಸ್ಪಂದಿಸಿದರು. ತಾನು ಸಂತನಾಗುವ ಮೊದಲು ಸಮಾಜ ಇಟ್ಟುಕೊಂಡಿದ್ದು ನಂಬಿಕೆಗಳೇ ಬೇರೆ. ಮತ್ತು ಸಮಾಜ ಸುಧಾರಣೆಯಲ್ಲಿ,

ತತ್ವಜ್ಞಾನವನ್ನು ಬೋಧಿಸಿದ್ದಲ್ಲಿ ಪರಿವರ್ತನೆ ಕಾಣದೆ ಕೊನೆಯಲ್ಲಿ, ತಪಸ್ಸು ಮಾಡುವುದು ಮಾಗಿದ ಜೀವನಕ್ಕೆ ಮರುಕ ಹೋಗಲಿಲ್ಲ. ಒಟ್ಟಾರೆ ಭೀಮನಾಯ್ಕ ದಲಿತೋದ್ಧಾರಕ್ಕೆ ಶ್ರಮಿಸಿದ ಮಹಾನಾಯಕನೆಂದರೆ ಅತಿಶಯೋಕ್ತಿಯಲ್ಲ.

**ರೂಪ-ವಿರೂಪ, ಉಡುಗೆ-ತೊಡುಗೆ ಇತ್ಯಾದಿ.**

ಶಾರೀರಿಕವಾಗಿ ಭೀಮನಾಯ್ಕ ಅಷ್ಟೇನು ಎತ್ತರವಿದ್ದಂತಿಲ್ಲ. ಸುಂದರವಾದ ಮೈಕಟ್ಟು ದಷ್ಟಪುಷ್ಟವಾಗಿದ್ದಿತು. ಸೊಂಟದವರೆಗೆ ಪಂಚೆ ಕಚ್ಚೆ, ಒರಿಮೈಮೇಲೊಂದು ವಸ್ತ್ರ, ತಲೆಯ ಮೇಲೆ ರುಮಾಲು, ಕೊರಳಲ್ಲಿ ರುದ್ರಾಕ್ಷಿಮಾಲೆ ಕಾಲಲ್ಲಿ ಕಟ್ಟಿಗೆ ಪಾದರಕ್ಷೆಗಳು, ತಪೋನಿರತನಂತೆ ಹಣೆಯಲ್ಲಿ ಮೂರು ಗೆರೆ ವಿಭೂತಿ ಧ್ಯಾನಸ್ಥ ಮನಸ್ಸನ್ನು ಸಂಕೇತಿಸುತ್ತದೆ. ತಲೆಗೂದಲನ್ನು ಮುದಿ ಕಟ್ಟಿಕೊಂಡು, ಗಡ್ಡವನ್ನು ಬಿಡಿಸಿರುತ್ತಾನೆ. ನೋಡುಗರಿಗೆ ಈತ ಸಂತ, ಪವಾಡಪುರುಷ ತ್ಯಾಗಿಯಾಗಿ ಕಂಡುಬರುತ್ತಾನೆ.

ಆರಂಭದ ಉಡುಗೆ ತೊಡುಗೆಗೂ ಅನಂತರದ್ದಕ್ಕೂ ಸುಧಾರಣೆಯಿತ್ತು. ಶ್ರೇಷ್ಠಮಟ್ಟದ ಉಡುಪು ಈತನಿಗೆ ಇರಲಿಲ್ಲ, ಉಡಲಿಲ್ಲ. ಸಾಮಾನ್ಯ ಲಂಬಾಣಿಗರನಂತೆ ಬಾಗಿದ ಕೋಲು, ಹೆಗಲಲ್ಲಿ ತೆಂಗಿನ ಪರಟೆಗಳು, ಹರಕು ಕಂಬಳಿ, ಸೊಂಟದಿಂದ ಮೊಳಕಾಲಿನವರೆಗೆ ಧೋತಿ ಧರಿಸುತ್ತಿದ್ದ. ಪಶುಪಾಲಕರೊಂದಿಗೆ, ಬಾಲಕರೊಂದಿಗೆ ಇದ್ದು ಹುಚ್ಚನಂತೆ ಆರಂಭದಲ್ಲಿ ವರ್ತಿಸುತ್ತಿದ್ದನಂತೆ. ನಂತರ ಮೈಸೂರು ರಾಜ್ಯದ ಸಾಮಾನ್ಯ ಸೈನಿಕನಾಗಿ ಸೇರ್ಪಡೆಯಾದ ಮೇಲೆ ಉಡುಗೆ ತೊಡುಗೆಗೂ ಬದಲಾವಣೆಯಾಯಿತು. ಕುದುರೆಯ ಮೇಲೆ ಕುಳಿತು ಕೈಯಲ್ಲಿ ಕತ್ತಿ ಹಿಡಿದಿರುವುದು ಸಾಮಾನ್ಯವಾಗಿ ನೋಡುತ್ತೇವೆ. ಈ ರೂಪದಲ್ಲಿ ಇಂದು ವಿಗ್ರವನ್ನು ಕೆತ್ತಿಸಿ ಆರಾಧನೆ ಮಾಡುತ್ತಿರುವುದನ್ನು ನೋಡಬಹುದು. ದಲಿತರೊಂದಿಗೆ ಬೆರೆತು ಅವರ ಉದ್ಧಾರಕ್ಕೆ ಶ್ರಮಿಸಿ ಅವರಂತೆ ಅನೇಕ ಕಷ್ಟನಷ್ಟಗಳಿಗೆ ಮರುಗಿದ ಸಂಗತಿಗಳು ಕಂಡುಬರುತ್ತವೆ.

**ಸಮಾಧಿ**

ಭೀಮಾನಾಯ್ಕನಿಗೆ ಸ್ಥಳೀಯ ಪಾಳೆಯಗಾರರು ೧೦ ಬಿರುದುಗಳನ್ನು ಅರ್ಪಿಸಿದ್ದರು. ಲಕ್ಮನಾಯ್ಕನಿಗೆ ಭೀಮಾನಾಯ್ಕ ಶಿವಲಿಂಗ ಪೂಜಿಸಲು ಹೇಳಿದನು. ಮೊದಲಿಗೆ ಚಿಕ್ಕಜೋಗಿಹಳ್ಳಿ ತಾಂಡದಲ್ಲಿ ನೆಲೆಯೂರಲು ಬಂದ ಭೀಮಾನಾಯ್ಕನಿಗೆ ವಾಸಸ್ಥಾನ ಸಿಕ್ಕಿರಲಿಲ್ಲ. ಕೊನೆಗೆ ಕುರಿಹಟ್ಟಿಯಲ್ಲಿ ಬಂದು ತನ್ನ ಬೆತ್ತ-ಜೋಳಿಗೆ ಇಡಲು ಕೇಳಿ ಸ್ವಲ್ಪ ಜಾಗ ಕೊಟ್ಟರೆ ಇಡೀ ಗುಡಿಯನ್ನು ಆಕ್ರಮಿಸಿಕೊಳ್ಳುತ್ತಾನೆ ತನ್ನ ಪವಾಡದಿಂದ. ಅದನ್ನು ಕೊಟ್ಟ ಪ್ರತೀಕವಾಗಿ 'ಸಿಡಿ' ಆಡಬೇಕೆಂದು ಕುರಿಹಟ್ಟಿ ಮಾರಮ್ಮ ಎಂಬ ದೇವತೆ ತಿಳಿಸುವಳು. ಅಂದಿನಿಂದ ಅದು ಅವನ ನೆಲೆಯಾಯಿತು. ಆ ದೇವತೆಯನ್ನು ಕುರಿಹಟ್ಟಿ ಮಾರಮ್ಮನೆಂದು ಕರೆದು ವರ್ಷಕೊಮ್ಮೆ ಜನವರಿಯಲ್ಲಿ ಜಾತ್ರೆ ಮಾಡುತ್ತಾರೆ. ಹೀಗೆ ಮಾಡುವಾಗ ಈ ದೇವತೆಯನ್ನು ಭೀಮಾನಾಯ್ಕರ ದೇವಳ್ (ಭೀಮನಾಯ್ಕನ ಮಠ) ಮುಂದೆ ಪ್ರತ್ಯೇಕ ಕಟ್ಟೆಯನ್ನು ನಿರ್ಮಿಸಿ ಕುರಿಬಲಿ ಕೊಟ್ಟು ಪೂಜೆ ಮಾಡುತ್ತಾರೆ. ಬಹುಶಃ ಇವಳು ಹೀನಕುಲ ದಲಿತ ದೇವತೆಯಾಗಿರಬೇಕು. ಇಲ್ಲವೆ ಇವರಿಬ್ಬರೂ ಒಂದೇ ಕೋಮಿಗೆ ಸೇರಿದವರೂ ಇರಬೇಕು. ಸಂಬಂಧಿಸಿದ ಆಚರಣೆ ಸಂಪ್ರದಾಯಗಳನ್ನು ಮಾಡಿಕೊಂಡು ಬಂದಿದ್ದಾರೆ. ಇಹಲೋಕ ಯಾತ್ರೆ

ಸಮೀಪಿಸಿದಂತೆ ಭಕ್ತರೊಂದಿಗೆ ತನ್ನಲ್ಲಿ ಭಾವನೆಗಳನ್ನು ಹಂಚಿಕೊಳ್ಳುತ್ತಾನೆ ಭೀಮನಾಯ್ಕ, ನಾನು ಜೀವೈಕ್ಯ ಸಮಾಧಿಯಾಗುವುದು ಕುರಿಹಟ್ಟಿ ಪಶ್ಚಿಮ ಭಾಗ ಸುಂದರವಾದ ಸ್ಥಳದಲ್ಲಿ, ಎಲೆ, ಅಡಿಕೆ, ಒಂದು ಬಂಗಾರದ ದಬ್ಬಣ ೫ ಬೆಳ್ಳಿಯ ನಾಣ್ಯಗಳು ಇವೆ. ಹುಡುಕಿ ನೋಡಿ ಆ ಸ್ಥಳದಲ್ಲಿ ನೆಲಮಾಳಿಗೆ ನಿರ್ಮಿಸಲು ಸೂಚಿಸುತ್ತಾರೆ. ಅದರಂತೆ ಭಕ್ತರು ನಿರ್ಮಿಸಿದರು. ಜನರು ಈ ಸಂಗತಿ ತಿಳಿದು ಅತೀವ ದುಃಖಿತರಾದರು. ಲಕ್ಮನಾಯ್ಕ ದೈನಂದಿನ ಪೂಜೆಯಲ್ಲಿ ಏರುಪೇರು ಮಾಡಿದ್ದಕ್ಕಾಗಿ ಶಾಪಕ್ಕೆ ಗುರಿಯಾಗುತ್ತಾನೆ.

**ಸದ್ಭಕ್ತನಿಗೆ ಸಮಾಧಿ ವಾರಸುದಾರಿಕೆ**

ಲಕ್ಮನಾಯ್ಕನು ಭೀಮನಾಯ್ಕನ ನಿರೀಕ್ಷೆಗೆ ಸ್ಪಂದಿಸಲಿಲ್ಲವಾದ್ದರಿಂದ ಅವನ ಮನೆಯಲ್ಲೇ ಕೂಲಿ ಆಳಾಗಿದ್ದ ಮೇಘನಾಯ್ಕ ಎಂಬುವನ ಶ್ರದ್ಧೆ, ಭಕ್ತಿಗೆ ಮೆಚ್ಚಿದ ಭೀಮಾನಾಯ್ಕ ಸಮಾಧಿಗೆ ಪೂಜೆ ಮಾಡಲು ಹೇಳುತ್ತಾನೆ. ಅದನ್ನು ಕೇಳಿದ ಬಾಲಕ ಪುಳಕಿತಗೊಂಡು ಎಲ್ಲರಿಗೂ ವಿಷಯ ತಿಳಿಸುವನು. ಧಣಿಯ ಕಿವಿಗೂ ಈ ವಿಷಯ ಬೀಳುತ್ತದೆ. ಅಂದಿನಿಂದ ಇಂದಿನವರೆಗೂ ಪೂಜೆ ಹಕ್ಕನ್ನು ಲಂಬಾಣಿ ಒಳಪಂಗಡದ ಕಿಮಾವತ್ ವಂಶಸ್ಥರು ದೇವಳ್ ಭೀಮನಾಯ್ಕ ಮಠ ಮುಂದುವರೆಸಿಕೊಂಡು ಬಂದಿದ್ದಾರೆ. ಲಕ್ಮನಾಯ್ಕ ವಂಶಸ್ಥರು ಭೀಮಾನಾಯ್ಕ ಗುಡಿ (ಒಳ ಮಠ) ಗದ್ದುಗೆಗೆ ಪೂಜಾರಿಗಳಾಗಿರುತ್ತಾರೆ. ಪೂಜಾರಿ ಸೇವನಾಯ್ಕ ಮತ್ತು ಅಣ್ಣತಮ್ಮಂದಿರು ಇಂದು ಪೂಜೆಕಾರ್ಯಗಳನ್ನು ಮಾಡುತ್ತಿದ್ದಾರೆ.

**ದಾದಾ ಭೀಮಾನಾಯ್ಕ ದೇವಾಲಯ ಒಳಮಠ**

ಚಿಕ್ಕಜೋಗಿಹಳ್ಳಿ ತಾಂಡಾದಲ್ಲಿ ದಾದಾ ಭೀಮನಾಯ್ಕಗೆ ಸಂಬಂಧಿಸಿದಂತೆ ಪ್ರಧಾನವಾಗಿ ಎರಡು ದೇವಾಲಯಗಳಿವೆ. ಒಂದು ಭೀಮಾನಾಯ್ಕ ದೇವಳ (ಹೊರಮಠ) ಮತ್ತೊಂದು ಭೀಮಾನಾಯ್ಕಗುಡಿ ಒಳಮಠ. ಇವುಗಳ ನಡುವಿನ ಅಂತರ ಸುಮಾರು ೨ ಕಿ.ಮೀ. ಚಿಕ್ಕಜೋಗಿಹಳ್ಳಿ ತಾಂಡಾದಲ್ಲಿ ದಕ್ಷಿಣ ತುದಿಗೆ ಒಳಮಠವಿದ್ದರೆ, ಉತ್ತರ ತುದಿ ಭೀಮಸಮುದ್ರ ಹತ್ತಿರ ಹೊರಮಠವಿದೆ.

ಈ ಒಳಮಠವಿರುವಲ್ಲಿ ಮತ್‌ಕುಂಟಿಯಾಡಿ ಎಂಬ ದೇವತೆಯಿದ್ದಳು. ಭೀಮಾನಾಯ್ಕ ಮೊದಲು ಬಂದಾಗ ತಂಗಿದ್ದು ಇಲ್ಲೇ. ಹಾಗಾಗಿ ಇಲ್ಲಿನ ದೇವತೆ ಪಲಾಯನಗೈದು ಕುರಿಹಟ್ಟಿಗೆ ಹೋದಳು. ಈ ದೇವಾಲಯಕ್ಕೆ ಜೆ.ಎಂ.ರತ್ನನಾಯ್ಕ (ಚೀಫ್ ಇಂಜಿನಿಯರ್)ನೆಂಬ ಭಕ್ತ ಜೀರ್ಣೋದ್ಧಾರ ಮಾಡಿಸಿದ್ದಾನೆ. ಗೋಪುರ ಸುಮಾರು ೮೦ ಅಡಿ ಎತ್ತರವಿದೆ. ಇವುಗಳ ಮೇಲೆ ರಾಮಾಯಣ, ಮಹಾಭಾರತ ಕಥೆಗಳ ಶಿಲ್ಪಚಿತ್ರಕಲೆಯನ್ನು ಕೆತ್ತಲಾಗಿದೆ. ಪೌರಾಣಿಕ ನಾಟಕ ಕಥೆಗಳ ದೃಶ್ಯಾವಳಿಯನ್ನು ಕೆತ್ತಿರುವುದು ಗಮನಸೆಳೆಯುತ್ತದೆ. ಗರ್ಭಗುಡಿಯಲ್ಲಿ ಭೀಮಾನಾಯ್ಕರವರ ಪಾಲ್ಕಿ ಇಟ್ಟಿರುವರು. ಗಾರೆಯಿಂದ ಶಿಲ್ಪಗಳನ್ನು ನಿರ್ಮಿಸಿದ್ದು ಭೀಮಾನಾಯ್ಕ ಕುದುರೆ ಮೇಲೆ ಕುಳಿತು ಕತ್ತಿ ಹಿಡಿದು ಬರುತ್ತಿರುವ ದೃಶ್ಯಗಳು ಮನಮೋಹಕವಾಗಿವೆ. ಇಲ್ಲಿ ಸಸ್ಯಹಾರವನ್ನು ನೈವೇದ್ಯ ಮಾಡುವರು. ಎಲ್ಲಾ ಜಾತಿ ಧರ್ಮದವರಿಗೆ ಮುಕ್ತ ಪ್ರವೇಶವಿದೆ.

**ಭೀಮಾನಾಯ್ಕ ದೇವಳ್ (ಹೊರಮಠ)**

ರಕ್ತಾಕ್ಷಿನಾಮ ಸಂವತ್ಸರದ ಫಾಲ್ಗುಣ ಬಹುಳ ತದಿಗೆ ಚಿತ್ತಾ ನಕ್ಷತ್ರದ ಶುಭಯೋಗದಲ್ಲಿ ಆಯುಸ್ಸಿನ ಮುಪ್ಪು ಕವಿದಾಗ ಭಕ್ತರೊಂದಿಗೆ ಸಮಾಧಿಗೆ ಬಂದು ಜೀವಕ್ಯನಾದ ಭೀಮನಾಯ್ಕ ಸಮಾಧಿ ಸ್ಥಳವೇ ದೇವಳ್

(ಹೊರಮಠ). ಈ ಶುಭ ದಿನದಂದು ಜಾತ್ರೆ ನಡೆದು ಪರೀಕ್ಷೆ ಮರುಪರೀಕ್ಷೆ ಮಾಡುವ ಕಾರ್ಯಗಳು ಹಲವು. ಈ ದೇವಾಲಯವು ದ್ರಾವಿಡ ಶೈಲಿಯನ್ನು ಹೊಂದಿದೆ. ಲಕ್ಮನಾಯ್ಕನಿಗೆ ಪುತ್ರಸಂತಾನ ಪ್ರಾಪ್ತಿಸಿದ್ದಕ್ಕಾಗಿ ಸ್ಥಳೀಯ ಪಾಳೆಯಗಾರರ ಆದೇಶದಂತೆ ಚೌಕಾಕಾರದ ಲಕ್ಷಣಗಳಿರುವ ದೇವಾಲಯವನ್ನು ನಿರ್ಮಿಸಿದರು. ಲಕ್ಮನಾಯ್ಕ ಈ ನೆನಪಿಗಾಗಿ ತನ್ನ ಮಗನಿಗೆ ಭೀಮಾನಾಯ್ಕ ಎಂದು ಕರೆದನಂತೆ. ಇಲ್ಲಿ ಪ್ರತಿ ಸೋಮವಾರ ಪೂಜೆ ನಡೆಯುತ್ತದೆ. ಪ್ರತಿ ವರ್ಷ ಯುಗಾದಿ ಅಮವಾಸ್ಯೆಯಿಂದ ಏಳು ದಿವಸಕ್ಕೆ ಜಾತ್ರೆ ಜರುಗಿದಾಗ ಇಲ್ಲಿನ ಸಂಭ್ರಮ, ಭಕ್ತರ ಅಡುಗೆ, ಹರಕೆಗಳನ್ನು ತೀರಿಸುವ ಕ್ರಮ ವೈಭವಯುತವಾದುದು. ಲಂಬಾಣಿಯ ಕಿಮಾವತ್ ಪಂಗಡದವರು ಭೀಮನಾಯ್ಕ ದೇವಳ (ಹೊರಮಠ) ಪೂಜಾರಿಗಳು. ಎಲ್ಲಾ ಜಾತಿ-ಧರ್ಮಿಯರು ಮುಕ್ತ ಪ್ರವೇಶವಿದ್ದು. ಮಾಂಸಹಾರವನ್ನು ಈ ದೇವಾಲಯದ ಹೊರಗೆ ಮಾಡುತ್ತಾರೆ. ಇಲ್ಲಿ ಸುಂದರವಾದ ನೈಸರ್ಗಿಕ ವಾತಾವರಣ ಕಂಡುಬರುತ್ತದೆ.

**ಯುಗಾದಿ ಜಾತ್ರೆ ಮತ್ತು ಪೂಜೆ**

ಪ್ರತಿವರ್ಷ ಏಪ್ರಿಲ್ ತಿಂಗಳಿನಲ್ಲಿ ತಾಂಡಾದ ಹಿರಿಯರ ಹಾಗೂ ನಾಯಕರ ತೀರ್ಮಾನಗಳಿಗೆ ಅನುಗುಣವಾಗಿ ಈ ಹಬ್ಬವನ್ನು ಸಾಮೂಹಿಕವಾಗಿ ಆಚರಿಸುತ್ತಾರೆ. ಲಂಬಾಣಿಗರು 'ಆಟಮೋ' ಎಂದು ಕರೆಯುವರು. ಸಾಮಾನ್ಯವಾಗಿ ಈ ದೇವತೆಯನ್ನು ಬೆಳ್ಳಿಯ ತಗಡಿನಿಂದ ಮಾಡಿಸಿ ಸಣ್ಣ ಛತ್ರಿ ಇತ್ಯಾದಿಗಳಿಂದ ಅಲಂಕರಿಸಿ ಬೂದು ಪೆಟ್ಟಿಗೆಯಲ್ಲಿ ಇಟ್ಟಿರುತ್ತಾರೆ. ಹಬ್ಬ ಹುಣ್ಣಿಮೆಗಳಲ್ಲಿ ಆಗಾಗ ಪೂಜೆ ಮಾಡಿ ಪುನಃ ಆ ಪೆಟ್ಟಿಗೆಯಲ್ಲಿ ಭದ್ರಪಡಿಸುತ್ತಾರೆ. ಜಾತ್ರೆಯ ಮೊದಲನೆಯ ದಿನ ಆ ವಿಗ್ರಹಗಳನ್ನು ತರಲು ಹೆಂಗಸರು, ಗಂಡಸರು ನಗಾರಿ, ಕಂಚಿನ ಗಂಗಳ ಇತ್ಯಾದಿಗಳನ್ನು ಬಾರಿಸುತ್ತಾ ಹಾಡುತ್ತ, ಅಕ್ಕಸಾಲಿಗರ ಮನೆಗೆ ಹೋಗಿ ಅಲ್ಲಿಂದ ನದಿಗೆ ಹೋಗಿ ಪೂಜೆ ಮಾಡಿ ಅಲ್ಲಿಂದ ಪೂಜಾರಿ ತಲೆಯ ಮೇಲೆ ಪೆಟ್ಟಿಗೆ(ಪಾಲ್ಕಿ)ಯಲ್ಲಿ ಈ ವಿಗ್ರಹವನ್ನು ಇಟ್ಟು ಪುನಃ ಹಾಡುತ್ತಾ ವಾದ್ಯಗಳೊಂದಿಗೆ ಊರಿನ ಹೊರವಲಯದಲ್ಲಿ ಕುರಿಮರಿಗೆ ಬಲಿಕೊಟ್ಟು ಪ್ರವೇಶ ಮಾಡುತ್ತಾರೆ. ನೇರವಾಗಿ ದೇವಾಲಯದಲ್ಲಿ (ಒಳಮಠ) ಇಟ್ಟು ಹೊಸಬಟ್ಟೆ, ಹೂ, ಹಣ್ಣು, ಕಾಯಿ ದೀಪ ಧೂಪಗಳಿಂದ ಪೂಜಿಸುತ್ತಾರೆ.

ನಂತರ ಸೋಮವಾರ ಸಂಜೆ ೫.೦೦ಗಂಟೆಗೆ ಒಳಮಠ(ಗುಡಿ)ದಿಂದ ಹೊರಮಠ (ಭೀಮಾನಾಯ್ಕ ದೇವಳ್)ಕ್ಕೆ ಹೋಗುವಾಗ ಹಿಂದೊಮ್ಮೆ ಪಾಲ್ಕಿ (ಪೆಟ್ಟಿಗೆ) ಮುರಿದು ಹೋಗಿತ್ತು. ನಂತರ ಹೊಸ ಪಾಲ್ಕಿ (ಪೆಟ್ಟಿಗೆ) ನಿರ್ಮಿಸಿದ್ದು ಸುಗಮವಾಗಿ ಕೆಲಸಕಾರ್ಯಗಳು ನಡೆಯುತ್ತವೆ. ದೇವಳ್‌ಗೆ ಹೋಗುವ ಮುನ್ನ ಗುರುಕನ್ನೆಯ (ಶ್ರೀಕೃಷ್ಣ, ಗುರುನಾನಕ) ಪೂಜೆ ಮಾಡುವರು. ಪಾಲ್ಕಿಯಲ್ಲಿ ಉತ್ಸವಮೂರ್ತಿಯನ್ನು ಇಟ್ಟು ಡೊಳ್ಳು, ನಗಾರಿ ಕರಡಿವಾದ್ಯ, ಓಲಗ ಮುಂತಾದ ವಾದ್ಯಗಳ ಮೂಲಕ ದೇವಳ್‌ಗೆ ಬಂದು ಪಾಲ್ಕಿ ಇಡುತ್ತಾರೆ. ರಾತ್ರಿ ೯-೧೦ಗಂಟೆ ಸುಮಾರಿಗೆ ಒಣ ಕೊಬ್ಬರಿ ಸುಡುವರು. ಲಂಬಾಣಿಗರು ಕುರಿ, ಟಗರು, ಮೇಕೆ, ಹೋತ ಇತರೆ ಪ್ರಾಣಿಗಳನ್ನು ಕಡಿದು ಮಾಂಸಹಾರಿ ಅಡುಗೆ ಮಾಡುತ್ತಾರೆ.

ಪ್ರಾಣಿಬಲಿಯ ನಂತರ ತಲೆಯ ಭಾಗವನ್ನು ಮತ್ತು ಬಲ ಮುಂಗಾಲನ್ನು ಕತ್ತರಿಸಿ ಪ್ರಾಣಿಯ ಬಾಯಿಯಲ್ಲಿ ಇಟ್ಟು, ದೇವರ ಮುಂದೆ ಇಡುತ್ತಾರೆ. ಒಳಗಿನ ಮಂಗಳಾರತಿ ಪೂಜಾ ಕಾರ್ಯಕ್ರಮಗಳು ಮುಗಿಯುವವರೆಗೂ ದೇವರ ಮುಂದಿಟ್ಟು, ತಲೆಯ ಭಾಗವನ್ನು ತೆಗೆಯುವುದಿಲ್ಲ. ಈ ರೀತಿ ಪದ್ಧತಿ ಭಾರತದ ಇತರೆ ಕೆಲವೂ ಬುಡಕಟ್ಟುಗಳಲ್ಲಿಯೂ ಕಾಣಬಹುದು. ಇಂತದ್ದೇ ಪದ್ಧತಿ ಈಜಿಪ್ಟ್‌ನ ಓಪರೀಸ್ ಪಂಥದಲ್ಲಿದ್ದುದನ್ನು ಗುರುತಿಸಿದ್ದಾರೆ. ಭಾರತದ ಗ್ರಾಮದೇವತೆಯ ಬಲಿಯ ಸಂದರ್ಭದಲ್ಲಿ ಕಾಲು ಕಡಿದು ಬಾಯಿಯಲ್ಲಿಡುವುದರ ಅರ್ಥ ಪ್ರಾಣಿಯ ಚೈತನ್ಯ ಒಳಹೊರಗೆ ಹೋಗಿ ಬರಲಿ ಎಂಬುದಾಗಿರಬೇಕು ಎನ್ನುತ್ತಾರೆ.

ಪ್ರಾಣಿ ಬಲಿಯ ಬಳಿಕ ದೇವರಿಗೆ 'ಸಳೋಯಿ', 'ಫೀಕೀ ಜೋಟಿ', 'ಗುಂಡಿವಾಳೋಹಡಕ', 'ಪೇರೇರೋ ಹಡಕ', 'ಭೂಂಜೋ ಕಳಜೋ', 'ಸೂಳಾರಿ ಜೋಟಿ' ಇತ್ಯಾದಿಗಳನ್ನು ಎಡೆಯಿಟ್ಟು, ದೇವರನ್ನು ಹೊಗಳುವ ಗೀತೆಗಳ ಮುಖೇನ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ. ರಾತ್ರಿ ಊಟವಾದ ಬಳಿಕ ಸೂರ್ಯೋದಯಕ್ಕೆ ಮುನ್ನ ಆಗುವ ಅಂತಿಮ ಮಂಗಳಾರತಿಯವರೆಗೂ ತಮ್ಮ ಸಾಂಪ್ರದಾಯಿಕ ವಾದ್ಯಗಳನ್ನು ಬಾರಿಸುತ್ತ

''ದೀಂಗಡ ದೀಂಗಡ ನೋಬತ್‌ವಾಜೆ,
ಭೀಮದಾದಾ ತಾರೇ ಗಡೇಪರ ನೋಬತ ವಾಜೆ,
ಲಂಗಡಿಯಾಯೇ ಭೇಟೋ ತಾರೆ ಭಾರ ಭೀಮದಾದಾ ತಾರೇ
ಗಡೇ ಫರ ನೋಜತ ವಾಜೆ.
ಲಂಗಡಿಯಾರೀ ಟಂಗೇ ಸದರಾಯೇ ಭೀಮದಾದಾ
ತಾರೇಗಡೇ ಪರನೋ ಬತಂ ವಾಜೆ,
ಕೋಬಡಿಯಾಯೇ ಬೇಟೋ ತಾರೇ ಬಾರೆ ಭೀಮದಾದ
ತಾರೇ ಗಡೇಪರ ನೂಬತವಾಜೆ,
ಕೋಬಡಿಯಾರಿ ಸದಾರೀ ಭೀಮದಾದಾ
ತಾರೇ ಗಡೇ ಪರನೊಬತವಾಜೆ

ನಗಾರಿ, ಕಂಚಿನ ತಟ್ಟೆ ಕೊಳಲು ಮುಂತಾದ ಪರಿಕರಗಳಿಂದ ನಿನ್ನ ದೇವಸ್ಥಾನದಲ್ಲಿ ವಾದ್ಯ ಮೊಳಗುತ್ತಿದೆ. ಕುಂಟನು ನಿನ್ನ ಬಳಿ ಬಂದು ಕುಳಿತಿದ್ದಾನೆ. ಅವನಿಗೆ ಕಾಲು ಬರುವಂತೆ ಮಾಡು. ಗೂನು ಬೆನ್ನಿನವನು ನಿನ್ನ ಹತ್ತಿರ ಬಂದು ಕುಳಿತಿದ್ದಾನೆ. ಅವನ ಬೆನ್ನು ನೆಟ್ಟಗಾಗುವಂತೆ ಮಾಡು. ಹೀಗೆ ಹಲವಾರು ಬಗೆಯಲ್ಲಿ ದೇವರನ್ನು ಪ್ರಾರ್ಥಿಸುತ್ತಾ ಅದಕ್ಕೆ ಪರಿಹಾರವನ್ನು ಕೇಳುತ್ತಾ ಹಾಡಿನ ಮೂಲಕ ಪ್ರಾರ್ಥನೆ ಸಲ್ಲಿಸಿ ಭಜನೆ ಮಾಡುತ್ತಾ ರಾತ್ರಿ ಇಡೀ ಜಾಗರಣೆ ಮಾಡುತ್ತಾರೆ.

ತರುವಾಯ ಪ್ರಸಾದವನ್ನು ತಪ್ಪದೇ ಕೆಲವು ನಿಯಮಗಳಿಗನುಗುಣವಾಗಿ ಹಂಚುತ್ತಾರೆ. ಹಬ್ಬಕ್ಕೆ ಆಗಮಿಸಿದ ಬೇರೆ ಬೇರೆ ತಾಂಡಾಗಳ ಪ್ರತಿನಿಧಿಗಳಿದ್ದರೆ, ಅವರಿಗೆ 'ಹಡ್ಕ' (ಎಲುಬಿನ ತುಂಡು)ವನ್ನು ಕೊಡುತ್ತಾರೆ.

ಹಾಗೂ ತಮ್ಮ ತಾಂಡಾದ ಪ್ರಮುಖರಿಗೂ ಒಂದೊಂದು ಹಡ್ಮವನ್ನು ಕೊಡುತ್ತಾರೆ. ಇದು ಬೇರೆ ಬೇರೆ ತಾಂಡಾದಿಂದ ಬಂದ ಅಥಿತಿಗಳನ್ನು ಹಾಗೂ ಹಿರಿಯರನ್ನು ಸತ್ಕರಿಸುವ ಒಂದು ವಿಧಾನವಾಗಿದೆ. ಇದು ತಾಂಡ ತಾಂಡಾಗಳ ಮಧ್ಯ ಸೌಹಾರ್ದ ವಾತಾವರಣ ಮೂಡಿಸಿ ಒಗ್ಗಟ್ಟನ್ನು ಮೂಡಿಸುತ್ತದೆ. ನಂತರ ದೇವಳ್(ಹೊರಮಠ)ನಿಂದ ಭೀಮದಾದಾ ದೇವಸ್ಥಾನ (ಒಳಮಠ)ಕ್ಕೆ ಹೋಗುತ್ತಾರೆ. ಹೋಗುವಾಗ ಹೆಂಗಸರು, ಗಂಡಸರು, ನಗಾರಿ ಕಂಚಿನ ಗಂಗಳ ಇತ್ಯಾದಿಗಳನ್ನು ಬಾರಿಸುತ್ತಾ ಹಾಡುತ್ತಾ ಭೀಮನಾಯ್ಕನ ದೇವಸ್ಥಾನಕ್ಕೆ ಬಂದು ಪೂಜೆ ಮಾಡಿ ಎಲ್ಲರೂ ಅವರ ಅವರ ಮನೆಗೆ ಹೋಗುತ್ತಾರೆ. ಹೀಗೆ ಸಡಗರ ಸಂಭ್ರಮದಿಂದ ಹಬ್ಬ ಅಂತ್ಯವಾಗುತ್ತದೆ.

**೬.೧.೪ ಹಾತಿರಾಂ ಬಾವಾ**

ಲಂಬಾಣಿಗರು ಆರಾಧಿಸುವ ದೇವರುಗಳಲ್ಲಿ ಹಾತಿರಾಂ ಬಾವಾ ಒಬ್ಬರಾಗಿದ್ದಾರೆ. ರಾಮಜಿ ಮತ್ತು ಸೋನಾ ಎಂಬ ಲಂಬಾಣಿ ದಂಪತಿಗಳಿದ್ದರು. ರಾಮಜಿನವರದು ಸಾಹಸದ ಬದುಕು. ಬಾಲ್ಯದಲ್ಲೇ ತಪಸ್ಸು ಮಾಡಿ ಶ್ರೀ ಹರಿಯನ್ನು ಒಲಿಸಿಕೊಂಡವರು. ರಾಮಜಿ ಬಾಲ್ಯಾವಸ್ಥೆಯಲ್ಲಿ ನಡೆದ ದುರಂತ ಘಟನೆಯಿಂದ ತನ್ನವರನ್ನೆಲ್ಲ ಕಳೆದುಕೊಂಡ ಆತನೊಬ್ಬನೇ ಪಾರಾಗಿ ಎಲ್ಲೋ ಜಿಟ್ಟನ ಬೆಟ್ಟದ ನಿರ್ಜನ ಪ್ರದೇಶದಲ್ಲಿ ಏಕಾಂತವನ್ನು ಅನುಭವಿಸಿ ಶ್ರೀ ರಾಮಧ್ಯಾನದಲ್ಲಿ ತೊಡಗಿ ಜಪತಪವನ್ನು ಮಾಡಿದ ಪ್ರಾಚೀನ ಸಂತ ಪರಂಪರೆಗೆ ಸೇರಿದವನು. ಶ್ರೀರಾಮನ ವಿಗ್ರಹದ ಎದುರು ಕುಳಿತು ಏಕಲವ್ಯನ ಹಾಗೆ ತನಗೆ ತಾನೇ ಗುರುವಾಗಿ ಆತ್ಮವಿಶ್ವಾಸದಿಂದ ಅಸಾಧಾರಣವಾದ ವ್ಯಕ್ತಿತ್ವನ್ನು ಬೆಳೆಸಿಕೊಂಡನು. ತಾಯಿ ಸೋನಾ ಶಿವಭಕ್ತೆ; ತುಂಬಾ ಚೆಲುವೆಯಾಗಿದ್ದಳು; ಅವಳನ್ನು ಮದುವೆಯಾಗಲು ನಾ ಮುಂದ ತಾ ಮುಂದ ಎಂದು ಅನೇಕರು ಹೋಗಿ ಅವಳಿಂದ ತಿರಸ್ಕೃತರಾಗಿದ್ದರು. ತೇಜಃ ಪೂರ್ಣವಾದ ಯುವಸಾಧು ಮುಂದೊಂದು ದಿನ ಸೋನಾಳ ತಾಂಡಕ್ಕೆ ಬಂದು ಸೋನಾಳ ಮನಸ್ಸನ್ನು ಗೆಲ್ಲುತ್ತಾನೆ. ಸೋನಾಳನ್ನು ಅವನಿಗೆ ಕೊಟ್ಟು ವಿವಾಹ ಮಾಡಿದರು. ಸೋನಾಳನ್ನು ವಿವಾಹ ಮಾಡಿಕೊಂಡು ರಾಮಜಿ ತನ್ನ ಋಷ್ಯಾಶ್ರಮಕ್ಕೆ ಕರೆತಂದನು. ದಂಪತಿಗಳಿಗೆ ಬಹಳ ಕಾಲದವರೆಗೆ ಮಕ್ಕಳಾಗಿರಲಿಲ್ಲವಾದ್ದರಿಂದ ಶ್ರೀಹರಿಯನ್ನು ಬೇಡಿಕೊಂಡರು. ಆಗ ಶ್ರೀಹರಿ ದೇವರ ಪೂಜಾರಿಯು ನಿಮಗೆ ಮಕ್ಕಳ ಯೋಗವಿದೆ; ಶ್ರೀಹರಿಯ ಧ್ಯಾನ ಮಾಡಬೇಕೆಂದು ಹೇಳಿದನು.[೫೮]

ಒಂಬತ್ತು ಮಾಸಗಳು ಕಳೆದ ಮೇಲೆ ಸೋನಾ ಗಂಡು ಮಗುವಿಗೆ ಜನ್ಮನೀಡಿದಳು. ಜನನವಾದ ಮಗುವಿನ ಅಳು ಕೇಳಿದಾಕ್ಷಣ ಗದ್ದುಗೆಯ ಮುಂದೆ ಕುಳಿತಿದ್ದ ಕಾಡಾನೆ ಎರಡು ಕಾಲುಗಳನ್ನು ಬಗ್ಗಿಸಿ ಸೊಂಡಿಲನ್ನೆತ್ತಿ ಇಡೀ ಕಾಡು ನಡುಗುವಂತೆ ಘೀಳಿಟ್ಟಿತು. ಅದನ್ನು ಕೇಳಿದ ಆ ಕಾಡಿನ ಇತರೆ ಕಾಡಾನೆಗಳೂ ನಡುಗುವಂತೆ ಘೀಳಿಟ್ಟವು. ಪ್ರತಿಧ್ವನಿಸಿದವು. ಅವನ ಆಗಮನಕ್ಕೆ ಪ್ರಕೃತಿಯೇ ಪ್ರತಿಸ್ಪಂದಿಸಿತು. ಸೋನಾ ನಿಜಕ್ಕೂ ದಿವ್ಯ ಚೇತನಕ್ಕೆ ಜನ್ಮ ನೀಡಿದ್ದನ್ನು ಕಂಡು ರಾಮಜಿ ತನ್ನ ಮಗ ಮುಂದೊಂದು ದಿನ ವಿಶ್ವಪ್ರಖ್ಯಾತಿಯನ್ನು ಪಡೆಯುವನೆಂದು ಪತ್ನಿಗೆ ತಿಳಿಸುತ್ತಾನೆ. ಆ ಮಗುವಿಗೆ ಹಾತಿ (ಆನೆ) ರಾಂ ಎಂದು ನಾಮಕರಣ ಮಾಡಿದರು. ಶಿವಶರಣರಿಂದ ಶಿಶುವಿಗೆ ಸಂಸ್ಕಾರ ನೀಡಲಾಯಿತು.[೫೯] ಹಾತಿರಾಂ ಎಂದು ಕರೆಯಲ್ಪಡುತ್ತಿದ್ದ ಬಾಲಕನಿಗೆ ತಂದೆಯ ಅಧ್ಯಾತ್ಮಿತ ವಿಚಾರಗಳ ಬಗ್ಗೆ ನಂಬಿಕೆಯಿರಲಿಲ್ಲ. ತಂದೆಯ ಪೂಜೆ, ಜಪ, ತಪ, ವ್ರತಾಚರಣೆ, ದೇವರ ಅಸ್ತಿತ್ವ, ಮೂರ್ತಿಪೂಜೆ ಮೊದಲಾದವುಗಳನ್ನು ಪ್ರಶ್ನಿಸತೊಡಗಿದ. ಕಾಣದ ದೇವರನ್ನು ನಂಬುವುದು ಹೇಗೆ? ಉಣ್ಣುವ ತುಪ್ಪವನ್ನು

ಬೆಂಕಿಗೆ ಹಾಕಿ ವ್ಯರ್ಥ ಮಾಡುವುದೇಕೆ? ಶ್ರೀಹರಿಯು ಶಿಲೆಯಲ್ಲಿರುವನೋ? ಅವನ ನಿಜರೂಪವನ್ನು ನೋಡಿದವರು ಯಾರಿದ್ದಾರೆ? ಹೀಗೆ ಹಲವು ಬಗೆಯ ಚಿತ್ರವಿಚಿತ್ರ ಪ್ರಶ್ನೆಗಳಿಗೆ ತಂದೆ ರಾಮಜಿ ಉತ್ತರಿಸಲು ತಡವರಿಸುತ್ತಿದ್ದರು. ದೇವರು, ಧರ್ಮ, ದೈವ, ದೆವ್ವ ಮೂರ್ತಿಪೂಜೆ ಮೊದಲಾದವುಗಳಲ್ಲಿ ಹಾತಿರಾಂಗೆ ಕ್ರಮೇಣ ನಂಬಿಕೆ ಇಲ್ಲದಂತಾಯಿತು.

ಹಾತಿರಾಂ ತಿರುಪತಿಯ ವೆಂಕಟೇಶ್ವರನ ದರ್ಶನ ಪಡೆದು ಬರಲು ಹೋಗುವ ನೂರಾರು ಜನರನ್ನು ಕಂಡು ಅವರಿಂದ ದೇವರ ವಿಷಯದಲ್ಲಿ ಆಸಕ್ತಿ ಕೆರಳಿಸಿಕೊಳ್ಳುತ್ತಾನೆ. ತಿರುಪತಿ ವೆಂಕಟೇಶ್ವರ ಸ್ವಾಮಿಯನ್ನು ನೋಡಲು ಒಮ್ಮೆ ತಾನೂ ಯಾಕೆ ಹೋಗಬಾರದೆಂದು ಯೋಚಿಸಿ ತಿರುಪತಿಯ ವೆಂಕಟೇಶ್ವರನನ್ನು ಭಕ್ತಿಯಿಂದ ಮಾತನಾಡಿಸಿದರೆ ಮಾತನಾಡುತ್ತಾನೆಂದು, ಭಕ್ತರಿಗೆ ಕೇಳಿದ್ದನು ಕೊಡುತ್ತಾನೆಂದು ತಿಳಿದು ಹಾತಿರಾಂ ಇನ್ನಷ್ಟು ಗಂಭೀರವಾಗತೊಡಗಿದ. ಒಂದು ಸಲ ಪರಮಾತ್ಮನ ದರ್ಶನಕ್ಕೆ ಹೋಗುತ್ತಿದ್ದ ಯಾತ್ರಿಕರ ಒಂದು ಗುಂಪಿನೊಂದಿಗೆ ಹಾತಿರಾಂ ತಿರುಪತಿಗೆ ಹೊರಟು ಬಂದ. ಮನೆಯಲ್ಲಿ ತಂದೆ-ತಾಯಿಗೂ ಹೇಳದೇ ಇದ್ದಕ್ಕಿದ್ದಂತೆ ಯಾತ್ರಿಕ ಗುಂಪಿನವರೊಂದಿಗೆ ಯಾತ್ರಿಕನಾಗಿ ಹೆಜ್ಜೆ ಹಾಕುತ್ತ ದೇವರ ದರ್ಶನಕ್ಕಾಗಿ ತಿರುಪತಿಗೆ ಬಂದು ತಲುಪಿದ.

ಯಾತ್ರೆ ಸಂದರ್ಭದಲ್ಲಿ ಹಾತಿರಾಂಗೆ ಅನುಭವವಾಗುತ್ತದೆ. ಕನಸಿನಲ್ಲಿ ತಾನೆಂದೂ ಕಾಣದ, ಕೇಳದ ಹಾಗೂ ಊಹಿಸಲೂ ಸಾಧ್ಯವಾಗದ ಜಗತ್ತಿನಲ್ಲಿ ವಿಹರಿಸುತ್ತಿರುವಂತಾಯಿತು. ಸರ್ಪದ ಮೇಲೆ ಮಲಗಿದ ದಿವ್ಯ ತೇಜಸ್ಸಿನ ಬಾಲಕನೊಬ್ಬನನ್ನು ಕಂಡಂತಾಯಿತು. ಹಾಗೆಯೇ ಅವನೊಂದಿಗೆ ಆಟವಾಡಿದಂತಾಯಿತು. ಇಡೀ ರಾತ್ರಿ ಕನಸಿನಲ್ಲಿ ಹಾತಿರಾಂ ಆ ಬಾಲಕನೊಂದಿಗೆ ಸಂತೋಷದಿಂದ ಆಟವಾಡಿದನು. ಮಾರನೆಯ ದಿನ ಬೆಳಗ್ಗೆ ಹಾತಿರಾಂ ಯಾತ್ರಿಕರೊಂದಿಗೆ ವೆಂಕಟೇಶ್ವರನನ್ನು ಕಾಣುವ ತವಕದಿಂದ ಗರ್ಭಗುಡಿಯನ್ನು ಪ್ರವೇಶಿಸಿದನು. ಕಪ್ಪು ಶಿಲೆಯಿಂದ ಕೆತ್ತಲ್ಪಟ್ಟ ಮುಖವನ್ನೇ ಕಾಣದ ಕಿರೀಟವನ್ನು ಧರಿಸಿದ್ದ ವೆಂಕಟರಮಣಸ್ವಾಮಿಯ ಶಿಲಾಮೂರ್ತಿಯನ್ನು ಕಂಡ ಬಾಲಕ ಹಾತಿರಾಂ ನಿರಾಶೆಯಿಂದ ಕುಸಿದನು. ಇಷ್ಟೆಲ್ಲ ಏಳು ಬೆಟ್ಟಗಳನ್ನು ಹತ್ತಿ ಆತನ ದರ್ಶನ ಮಾಡಿ ಅವನನ್ನು ಮಾತನಾಡಿಸಲು ಹಾತೊರೆಯುತ್ತಿದ್ದ ಬಾಲಕ ಶಿಲಾಮೂರ್ತಿಯನ್ನು ದೇವರೆಂದು ಭ್ರಮಿಸಿ ಜನ ಮೋಸ ಹೋಗಿದ್ದಾರೆಂದು ತಿರುಮಲೆಯಲ್ಲಿ ಮಾತನಾಡುವ ವೆಂಕಟೇಶ್ವರನ ಇರುವಿಕೆ ಭ್ರಮಾತ್ಮಕವೆಂದೂ ಭಾವಿಸಿದ. ಆದರೆ ಮರುಕ್ಷಣದಲ್ಲಿಯೇ ''ನೀನಾಗಲೇ ವೆಂಕಟೇಶ್ವರನೊಂದಿಗೆ ಮಾತನಾಡಿರುವಿ, ಆಟವಾಡಿರುವಿ ರಾತ್ರಿ ಕನಸಿನಲ್ಲಿ ನಿನ್ನೊಂದಿಗೆ ಆಟವಾಡಿದ ಬಾಲಾಜಿಯೇ ಆ ಪರಮಾತ್ಮ''ನೆಂಬುದು ಒಬ್ಬ ಅಪರಿಚಿತ ಶ್ವೇತ ವಸ್ತ್ರಧಾರಿಯಿಂದ ತಿಳಿದು ಹಾತಿರಾಂ ರೋಮಾಂಚಿತನಾದ. ಹಾಗಾದರೆ ಮತ್ತೆ ಆ ಬಾಲಾಜಿಯನ್ನು ಕಾಣಲು ಮಾತನಾಡಿಸಲು ಏನು ಮಾಡಬೇಕೆಂಬುದನ್ನು ಶ್ವೇತ ವಸ್ತ್ರಧಾರಿಯನ್ನು ಕೇಳಿದ. ಮಗು ಹಾತಿರಾಂ ಈ ನೆಲ ನಿನ್ನ ಕರ್ಮಭೂಮಿಯಾಗಲಿ, ತಪ್ಪಸ್ಸು ಮಾಡು, ಆ ದೇವರನ್ನು ಒಲಿಸಿಕೊ ಎಂದು ಶ್ವೇತ ವಸ್ತ್ರಧಾರಿ ಹೇಳಿ ಅದೃಶ್ಯನಾದನು.

ಹಾತಿರಾಂ ತಪಸ್ಸಿಗಾಗಿ ಪ್ರಶಸ್ತವಾದ ಸ್ಥಳವನ್ನು ಹುಡುಕಿದ. ಮನಸ್ಸಿನಲ್ಲಿಯೇ ವೆಂಕಟೇಶ್ವರ ಮೂರ್ತಿಯನ್ನು ಪ್ರತಿಷ್ಠಾಪಿಸಿಕೊಂಡು ಮನಸ್ಸು ಏಕಾಗ್ರತೆಯನ್ನು ಪಡೆದು ಹನ್ನೆರಡು ವರ್ಷ ತಪಸ್ಸನ್ನಾಚರಿಸುತ್ತಾ

ಹಗಲಿರುಳೂ ಧ್ಯಾನಾಸಕ್ತನಾದನು. ಮನಸ್ಸಿನಲ್ಲಿ ಸಂಪೂರ್ಣವಾಗಿ ವೆಂಕಟೇಶ್ವರನನ್ನು ತುಂಬಿಕೊಂಡು ಹಾತಿರಾಂ ಇಹಲೋಕದ ಪರಿವೆಯನ್ನು ಮರೆತನು. ಆತನ ತಪಸ್ಸಿನ ಜ್ವಾಲೆ ವೈಕುಂಠವನ್ನೆಲ್ಲ ಅತ್ತಿತ್ತ ಅಲುಗಾಡಿಸಿತು. ಹಾತಿರಾಂನ ತಪಸ್ಸು ವೈಕುಂಠಾಧಿಪತಿಯನ್ನೇ ಸೆಳೆಯಿತು. ಈ ಹಿಂದೆ ತನ್ನೊಡನೆ ಮಾತನಾಡಿದ ಶ್ವೇತವಸ್ತ್ರಧಾರಿ ತಾನು ಕನಸಿನಲ್ಲಿ ಕಂಡಿದ್ದ ಸರ್ಪದ ಮೇಲೆ ಕುಳಿತಿದ್ದ ಚತುರ್ಭುಜದ ಬಾಲಾಜಿಯಾಗಿ ಹಾತಿರಾಂನ ಮುಂದೆ ನಿಂತಿದ್ದಾನೆ. ಶಂಖ ಚಕ್ರಗಳನ್ನು ಹಿಡಿದ ಮಹಾನ್ ತೇಜಸ್ವೀ ಬಾಲಕರೂಪಿಯಾದ ವೆಂಕಟೇಶ್ವರನನ್ನು ಕಂಡು ಹಾತಿರಾಂ ಧನ್ಯನಾದ. ಆತನ ಹಲವು ರೂಪಗಳನ್ನು ಕಂಡು ತನ್ನ ಜೀವನ ಸಾರ್ಥಕವಾಯಿತೆಂದು ಭಾವಿಸಿದ. ದೇವರ ನಿಜರೂಪವನ್ನು ದರ್ಶನ ಮಾಡಬೇಕೆಂದು ವೆಂಕಟೇಶ್ವರನನ್ನು ಪ್ರಾರ್ಥಿಸಿಕೊಂಡ ಹಾತಿರಾಂಗೆ ವಿರಾಟ ದರ್ಶನ ಭಾಗ್ಯ ಲಭಿಸಿತು. ಹಾತಿರಾಂ ಭಾವಾವೇಶದಿಂದ ಭಗವಂತನ ಪಾದಗಳ ಮೇಲೆ ಬಿದ್ದನು. 'ಹಾತಿರಾಂ ನಿನಗೆ ಮೂರು ವರಗಳನ್ನು ನೀಡುವೆ ನಿನಗೆ ಏನು ಬೇಕು ಕೇಳು' ಎಂದು ವೆಂಕಟೇಶ್ವರ ಹೇಳಿದಾಗ 'ನಿನ್ನ ವಿಶ್ವರೂಪ ಕಂಡ ಮೇಲೆ ನನಗೆ ಬೇರೇನೂ ಬೇಡ ತಂದೆ' ಎಂದ ಹಾತಿರಾಂ ಅನಿವಾರ್ಯವಾಗಿ ಮೂರು ವರಗಳನ್ನು ಕೇಳುತ್ತಾನೆ. ೧. ನಾನು ನಿನ್ನನ್ನು ಸ್ಮರಿಸಿದಾಕ್ಷಣ ಪ್ರತ್ಯಕ್ಷನಾಗಬೇಕು. ೨. ನಾನು ಲಂಬಾಣಿಗನಾಗಿರುವುದರಿಂದ ನನ್ನ ಜನಾಂಗದ ಮೇಲೆ ನಿನ್ನ ಅಭಯಹಸ್ತ ಇರಬೇಕು. ನನ್ನ ಬಂಜಾರ (ಲಂಬಾಣಿ) ತಾಯಂದಿರು ಪೂರ್ಣ ಉಡುಪಿನಲ್ಲಿಯೇ ಬಂದು ನಿನ್ನ ದರ್ಶನವನ್ನು ಪಡೆಯುವಂತಾಗಬೇಕು. ಹಾಗೂ ೩. ತಿರುಮಲೆಯ ವೆಂಕಟಾದ್ರಿಯಲ್ಲಿ ನೆಲೆಸಿರುವ ನಿನ್ನ ವೈಭವ ಈಗಿರುವುದಕ್ಕಿಂತ ಸಹಸ್ರಾರು ಪಟ್ಟು ಹೆಚ್ಚಬೇಕು. ಆ ಸ್ಥಳ ಅಸಂಖ್ಯಾತ ಭಕ್ತರ ಕಷ್ಟ ಪರಿಹಾರ ಕೇಂದ್ರವಾಗಬೇಕು. ಹಾತಿರಾಂನ ಈ ಮೂರುವರಗಳಿಗೆ ವೆಂಕಟೇಶ್ವರ 'ತಥಾಸ್ತು' ಎಂದನು.

ಹಾತಿರಾಂ ವೆಂಕಟೇಶ್ವರನ ಆಶೀರ್ವಾದದಿಂದ ಮುಂಭಾಗದಲ್ಲಿಯೇ ಎತ್ತರದ ಸ್ಥಳದಲ್ಲಿ ಆಶ್ರಮ ನಿರ್ಮಾಣ ಮಾಡಿಕೊಂಡನು. ಹಗಲು ರಾತ್ರಿ ವೆಂಕಟೇಶ್ವರನನ್ನು ಪೂಜೆ ಮಾಡಿಕೊಂಡು ಕಾಲ ಕಳೆಯಲಾರಂಭಿಸಿದನು. ಪ್ರತಿದಿನ ಸೂರ್ಯೋದಯಕ್ಕೆ ಮುಂಚೆ ಅರ್ಚಕರು ಬರುವ ಮೊದಲೇ ದೇವಾಲಯ ಪ್ರವೇಶಿಸಿ ಪರಮಾತ್ಮನನ್ನು ಪೂಜಿಸಿ ಅವನೊಂದಿಗೆ ಮಾತನಾಡಿ, ಭಕ್ತರ ಕಷ್ಟಕಾರ್ಪಣ್ಯಗಳಿಗೆ ಪರಿಹಾರವನ್ನು ತಿಳಿದುಬಂದು, ಭಕ್ತಾದಿಗಳನ್ನು ಆಶೀರ್ವದಿಸಿ ಕಳಿಸುತ್ತಿದ್ದನು. ಹಾತಿರಾಂನಿಂದ ಭಕ್ತಾದಿಗಳ ಸಂಖ್ಯೆ ಅಧಿಕಗೊಂಡಿತು. ಇದರಿಂದ ಭಕ್ತಾದಿಗಳು ವೆಂಕಟೇಶ್ವರನ ದರ್ಶನ ಪಡೆಯದೇ ಹಾತಿರಾಂ ಬಾವಾಜಿಯ ದರ್ಶನಕ್ಕೆ ಬರಲಾರಂಭಿಸಿದರು. ಎಲ್ಲ ಕಡೆಗೂ ಬಾವಾಜಿಯ ಭಕ್ತಿ ಮತ್ತು ಶಕ್ತಿಯ ಗುಣಗಾನ ನಡೆಯಿತು. ವೆಂಕಟೇಶ್ವರನೇ ಬಾವಾಜಿಯಾಗಿ ಕುಳಿತಿದ್ದಾನೆಂದು ಪ್ರಚಾರವಾಯಿತು.

ಭಗವಂತನ ನೆನೆದು ಹಾತಿರಾಂ ಬಾವಾಜಿಯವರು ವೆಂಕಟೇಶ್ವರನನ್ನು ಪ್ರತ್ಯಕ್ಷಮಾಡಿಕೊಂಡು ಅವನೊಂದಿಗೆ ಪಗಡೆ ಆಟ ಆಡುತ್ತಿದ್ದನು. ವೆಂಕಟೇಶ್ವರನಿಂದ ಆಧ್ಯಾತ್ಮದ ವಿಚಾರಗಳನ್ನು ತಿಳಿದುಕೊಳ್ಳುತ್ತಿದ್ದನು. ಹಗಲು ಭಕ್ತರ ಸೇವೆ, ರಾತ್ರಿ ಭಗವಂತನ ಸೇವೆ ನಿರಂತರವಾಗಿ ಸಾಗಿತ್ತು. ಬಾವಾಜಿಯ ಖ್ಯಾತಿ ಎಲ್ಲೆಡೆಗೆ ಹಬ್ಬಿತು. ವೆಂಕಟೇಶ್ವರನನ್ನು ಮರೆತು ಜನ ಬಾವಾಜಿಯನ್ನು ಪೂಜಿಸತೊಡಗಿದರು. ಭಗವಂತನಿಗಿಂತ ಭಕ್ತನೇ ಶ್ರೇಷ್ಠನೆಂಬುದನ್ನು ಸಾರಲೆಂದೇ ಬಾಲಾಜಿ ಈ ರೀತಿ ಆಶೀರ್ವಾದ ಮಾಡಿರಬೇಕು. ಲೋಕವೆಲ್ಲ ಕೊಂಡಾಡುವ ರೀತಿಯಲ್ಲಿ ಬಾವಾಜಿಯ ಮಹಿಮೆ ಬೆಳೆಯಿತು.

ಹಾತಿರಾಂ ಲಂಬಾಣಿ (ಬಂಜಾರ) ಜನಾಂಗದವನೆಂದು ತಿಳಿದಾಕ್ಷಣ ಕೆಲವು ಸನಾತನವಾದಿಗಳು ಅವನನ್ನು ಹೀಗೆ ಬಿಟ್ಟರೆ ಜನ ಬಾಲಾಜಿಯನ್ನು ಸಂಪೂರ್ಣ ಮರೆತುಬಿಡುವುದರಲ್ಲಿ ಸಂದೇಹವಿಲ್ಲವೆಂದು ಭ್ರಮಿಸಿ ಅವನನ್ನು ಮುಗಿಸಿ ಬಿಡಲು ಯೋಚಿಸಿದರು. ದೇವರ ದರ್ಶನಕ್ಕೆ ತಡೆ ಒಡ್ಡಿ ದೇವಸ್ಥಾನಕ್ಕೆ ದೊಡ್ಡ ಬೀಗಗಳನ್ನು ಹಾಕಿದರು. ಆದರೆ ದೈವಲೀಲೆಯಿಂದ ಎಲ್ಲ ಬಾಗಿಲುಗಳ ಕೀಲಿಗಳು ಕಳಚಿ ಬಿದ್ದು ಪೂಜಿಸತೊಡಗಿದನು. ಇದನ್ನರಿತ ಅರ್ಚಕರು ಕೋಪಗೊಂಡು ರಾಜ ಪ್ರಮುಖರನ್ನೂ ಸಾಧು-ಸಂತರನ್ನು ಗುರುಹಿರಿಯರನ್ನೂ ಸಭೆ ಸೇರಿಸಿದರು. ಹಾತಿರಾಂನನ್ನು ಸಭೆಗೆ ಕರೆದು ಆರೋಪಕ್ಕೆ ಸಮಜಾಯಿಷಿ ಕೇಳಿದರು. ನಿಜಾಂಶವನ್ನು ತಿಳಿಯದ ಅವರು ಹಾತಿರಾಂನನ್ನು ಲೇವಡಿ ಮಾಡಿ ಅವನನ್ನು ಅಲ್ಲಿಂದ ಓಡಿಸಬೇಕೆಂದು ತೀರ್ಮಾನಿಸಿದರು. ಆದರೆ ಬಾವಾಜಿಯ ಕೋರಿಕೆಯ ಮೇರೆಗೆ ರಾಜಪ್ರಮುಖರು ಹಾತಿರಾಂ ದೇವರ ಪೂಜೆಗೆ ಬರಕೂಡದೆಂದು, ತನ್ನ ಆಶ್ರಮದಲ್ಲಿಯೇ ಇರಬೇಕೆಂದು ಅಪ್ಪಣೆ ನೀಡಿದರು.

ದೇವಸ್ಥಾನದಲ್ಲಿ ಜಾರಿಗೆ ತಂದ ಹೊಸ ನಿಯಮದಂತೆ ರಾತ್ರಿ ವೇಳೆಯಲ್ಲಿ ದೇವಾಲಯದ ದ್ವಾರಗಳಿಗೆ ಬೀಗ ಹಾಕಲಾಯಿತು. ಬೆಳಗ್ಗೆ ಬಾವಾಜಿ ಮತ್ತೆ ಬಂದು ಪೂಜೆಗೆ ಪ್ರಯತ್ನಿಸಬಹುದೆಂದು ಭಾವಿಸಿ ಕಾವಲುಗಾರರನ್ನು ನೇಮಿಸಲಾಯಿತು. ಎಂದಿನಂತೆ ಬಾವಾಜಿ ಸ್ನಾನ ಮಾಡಿಕೊಂಡು ಅಂದು ನೇರವಾಗಿ ಆಶ್ರಮಕ್ಕೆ ಬಂದು ಭಗವಂತನನ್ನು ಪೂಜಿಸಿದನು. ಬಾಲಾಜಿ ಅಲ್ಲಿಯೇ ಪ್ರತ್ಯಕ್ಷನಾಗಿ ಹಾತಿರಾಂನಿಗೆ ಸಮಾಧಾನಿಸಿದ. ದೇವಾಲಯದ ದ್ವಾರಗಳಿಗೆ ಹಾಕಿದ್ದ ಬೀಗಗಳು ಎಷ್ಟು ಪ್ರಯತ್ನಿಸಿದರೂ ಬಿಚ್ಚಿಕೊಳ್ಳಲಿಲ್ಲ. ಬೀಗ ಒಡೆಯಲು ಪ್ರಧಾನ ಅರ್ಚಕರು ಆಜ್ಞಾಪಿಸಿದರು. ವಜ್ರದಷ್ಟು ಗಟ್ಟಿಯಾಗಿದ್ದ ಅವುಗಳನ್ನು ಸುತ್ತಿಗೆಯಿಂದ ಹೊಡೆದರೂ ಪ್ರಯೋಜನವಾಗಲಿಲ್ಲ. ಮಧ್ಯಾಹ್ನವಾದರೂ ಅಂದು ವೆಂಕಟೇಶ್ವರನ ಪೂಜೆ ನಡೆಯಲಿಲ್ಲ. ಈ ವಿಷಯ ರಾಜ ಪ್ರಮುಖರಿಗೆ ತಿಳಿಯಿತು. ಸಹಸ್ರ ಸಂಖ್ಯೆಯಲ್ಲಿ ಭಕ್ತಾದಿಗಳು ನೆರೆದರು. ಎಲ್ಲರೂ ಪ್ರಯತ್ನಿಸಿದರೂ ಬೀಗ ತೆರೆದುಕೊಳ್ಳಲಿಲ್ಲ. ಇದು ಬಾವಾಜಿಗೆ ಮಾಡಿದ ಅವಮಾನದ ಫಲವೆಂದು ಕೆಲವರು ದೂರಿದರು. ರಾಜ ಪ್ರಮುಖರು ಎಚ್ಚೆತ್ತು ಹಾತಿರಾಂ ಬಾವಾಜಿ ಆಶ್ರಮಕ್ಕೆ ಓಡಿಬಂದು ತಮ್ಮ ಅಪರಾಧವನ್ನು ಮನ್ನಿಸಿ ಬಂದು ಭಗವಂತನ ಪೂಜೆ ಮಾಡಲು ವಿನಂತಿಸಿಕೊಂಡರು. ಬಾವಾಜಿ ಮರಳಿ ದೇವಸ್ಥಾನಕ್ಕೆ ಧಾವಿಸಿ ಬಂದು ವೆಂಕಟೇಶ್ವರನನ್ನು ಪ್ರಾರ್ಥಿಸಿದನು. ಇದ್ದಕ್ಕಿದ್ದಂತೆ ಹಾಕಿದ ಬೀಗಗಳು ತಮ್ಮಷ್ಟಕ್ಕೆ ಮುರಿದು ಕೆಳಗೆ ಬಿದ್ದವು. ಬಾಗಿಲುಗಳು ತಾವೇ ತೆರೆದುಕೊಂಡವು. ಈ ದೃಶ್ಯವನ್ನು ಜನ ಕಂಡು ಬಾವಾಜಿಯನ್ನು ಕೊಂಡಾಡತೊಡಗಿದರು.

ಹಾತಿರಾಂ ಬಾವಾಜಿ ಸಂಚಾರ ಕೈಗೊಂಡರು. ನಂತರ ತಿರುಮಲೆ ವೆಂಕಟೇಶ್ವರನ ದೇವಸ್ಥಾನಕ್ಕೆ ಬಂದು ದರ್ಶನ ಪಡೆದು ಅಲ್ಲೆ ನೆಲೆಸಿದರು. ಅನೇಕ ಪವಾಡಗಳನ್ನು ಮಾಡಿದರು. ಇದನ್ನು ಕಂಡ ಜನರು ಹಾತಿರಾಂ ಬಾವಾಜಿರವರ ಭಕ್ತರಾದರು. ಹಾತಿರಾಂ ಬಾವಾಜಿರವರು ಚಿಕ್ಕವರಾಗಲಿ, ದೊಡ್ಡವರಾಗಲಿ ಭೇದ ಮಾಡದೆ ಎಲ್ಲರನ್ನು ಪ್ರೀತಿಸುತ್ತಿದ್ದರು. ಹೀಗಾಗಿ ದಿನದಿಂದ ದಿನಕ್ಕೆ ಭಕ್ತರ ಸಂಖ್ಯೆ ಅಧಿಕಗೊಂಡಿತು. ತನಗೂ ವಯಸ್ಸಾಗುತ್ತಾ ಬಂತು, ತಾನು ಬಂದ ಕೆಲಸ ಮುಗಿಯಿತು. ಭಗವಂತ ಆಶೀರ್ವಾದ ಮಾಡಬೇಕೆಂದು ಕೇಳಿಕೊಂಡನು; ಭಕ್ತರ ಸಮ್ಮುಖದಲ್ಲಿ ಸಜೀವ ಸಮಾಧಿಯಾದನು.

ಲಂಬಾಣಿಗರು ಹಾತಿರಾಂ ಬಾವಾಜಿ ಜೀವನ ಚರಿತ್ರೆ ಪವಾಡಗಳನ್ನು ತಮ್ಮ ಕಥನ ಗೀತೆಗಳಲ್ಲಿ ಸ್ವಾರಸ್ಯಕರವಾಗಿ ವ್ಯಕ್ತಪಡಿಸುತ್ತಾರೆ.

**೬.೧.೫ ಸಾತಿಸತ್ತಿ (ಸಾತೀ ಸತಿಯರು)**

ಸಾತಿಸತ್ತಿ ಹಾಗೂ ಸಾತಿಭವಾನಿ ಇವುಗಳಲ್ಲಿರುವ ಮುಖ್ಯ ವ್ಯತ್ಯಾಸ ಏನೆಂದರೆ - ಸಾತಿಸತ್ತಿ ಮನೆಯ ದೇವತೆಯ ರೂಪದಲ್ಲಿ ಆರಾಧಿಸುತ್ತಾರೆ. ಸಾತಿ ಭವಾನಿಯನ್ನು ಗ್ರಾಮ ದೇವತೆಯ ರೂಪದಲ್ಲಿ ಪೂಜಿಸುವರು. ಸಾತಿಸತ್ತಿ ಎಂದು ಕರೆಯಿಸಿಕೊಳ್ಳುವ ಏಳು ಜನ ಅಕ್ಕ-ತಂಗಿಯರು ಏಳು ರಾಜರ ಮಹಾಸತಿಯರಾಗಿದ್ದರು ಎಂದು ಹೇಳುತ್ತಾರೆ. ಲಂಬಾಣಿಗರು ಆಯಾ ಪ್ರದೇಶಗಳಲ್ಲಿ ರೂಢಿಗನುಸಾರವಾಗಿ ಈ ಏಳು ಜನಸತ್ತಿಯರಲ್ಲಿ ಯಾರಾದರೊಬ್ಬರನ್ನು ತಮ್ಮ ಮನೆ ದೇವತೆಯನ್ನಾಗಿ ಆರಾಧಿಸುತ್ತಾರೆ. ಈ ಏಳು ಜನ ಸತ್ತಿಯರು(ದೇವತೆಗಳು) ಅವರ ಪತಿ(ಮಹಾರಾಜರು) ಹೆಸರುಗಳು ಇಂತಿವೆ. ೧. ಹೂನಾಸತ್ತಿ-ರಾಮಜಿರಾಜಾ, ೨. ಕೇಸಿರಾಣಿ-ಕಾನಾಜಿರಾಜಾ, ೩. ಸೀತಾಸತ್ತಿ-ಥಾಕುರಾಜಾ, ೪. ಭೀಮಾಸತ್ತಿ-ತೀತಾರಾಜಾ, ೫. ತೋಳಾಸತ್ತಿ-ಮಾದುರಾಜಾ, ೬. ತಳಜಾಸತ್ತಿ-ಸೇಕಾರಾಜಾ, ೭. ರೂಪಾಸತ್ತಿ-ಕಾಸಾರಾಜ,[೨೫] ಲಂಬಾಣಿಗರು ಸತಿ ಸಹೋದರಿಯ ಮಹಿಮೆಯನ್ನು, ಅವರ ಪವಾಡ ಸಾದೃಶ್ಯ ಬದುಕನ್ನು ಲಾವಣಿಗಳ ರೂಪದಲ್ಲಿ ಸ್ವಾರಸ್ಯಕರವಾಗಿ ಹಾಡಿ ಹೊಗಳುತ್ತಾರೆ.

ಈ ಸತಿಯರಿಗೆ ಪೂಜಾಸಮಾರಂಭಗಳಲ್ಲಿ ಯಾವುದೇ ಬಲಿಯನ್ನು ಕೊಡುವುದಿಲ್ಲ. ಸಿಹಿ ಅಡುಗೆಯನ್ನು ಮಾಡಿ ನೈವೇದ್ಯ ಅರ್ಪಿಸುತ್ತಾರೆ. ಈ ಸಂದರ್ಭದಲ್ಲಿ ತಾಸುಗಟ್ಟಲೆ ಆವೇಶಪೂರಿತವಾಗಿ ''ಓಳಂಗ್‌ಶಾಸ್ತ್ರ'' ಮೂಲಕ ಅವರನ್ನು ಹಾಡಿ ಹೊಗಳುತ್ತಾ ಕೊಂಡಾಡುತ್ತಾರೆ. ಹಿಂದೂ ಸಮಾಜದಲ್ಲಿ ಮಹಿಳೆಯುಪತಿಯ ಚಿತೆ ಏರಿ ಸತ್ತು ಹೋದ ಸ್ಥಳದಲ್ಲಿ ಕುರುಹುಗಳಾಗಿ ಮಹಾಸತಿ ಕಲ್ಲು ಕೆತ್ತಿಸುತ್ತಾರೆ.[೨೬] ಆದರೆ ಲಂಬಾಣಿ ಮಹಿಳೆಯರು ಪತಿಯ ಚಿತೆ ಏರಿ ಸತ್ತು ಹೋದರೆ ಯಾವುದೇ ಬಗೆಯ ಮಹಾಸತಿ ಕಲ್ಲುಗಳಾಗಲಿ ಸ್ಮಾರಕಗಳಾಗಲಿ ಕೆತ್ತಿಸಿರುವುದು ಕಂಡು ಬಂದಿರುವುದಿಲ್ಲ.

**೬.೧.೬ ಸಾತೀಭವಾನಿ [ಆದಿಶಕ್ತಿ]**

ಸಾತೀಭವಾನಿ ಎಂದರೆ ಆದಿಶಕ್ತಿಪತಿ ಎನ್ನಲಾಗಿದೆ.[೨೭] ಅಥವಾ ಸಾತೀ ಭವಾನಿಗಳೆಂದರೆ ಏಳು ಜನ ಅಕ್ಕತಂಗಿ ದೇವತೆಗಳೆಂದು ಅರ್ಥ. ಲಂಬಾಣಿಗರ ಪ್ರತಿಗೋತ್ರದವರೂ ಒಂದೊಂದು ದೇವತೆಯನ್ನು ಪೂಜಿಸುತ್ತಾರೆ. ಇವರು ಶಕ್ತಿ ದೇವತೆಗಳಾಗಿದ್ದು ತಪ್ಪದೇ ಬಲಿಯನ್ನು ಅರ್ಪಿಸುತ್ತಾರೆ. ಈ ಏಳು ಜನ ಅಕ್ಕ-ತಂಗಿಯರ ಹೆಸರುಗಳು ಇಂತಿವೆ. ತುಳಜಾ ಭವಾನಿ, ಸೀತಲಾಭವಾನಿ, ಮೋದರಿಮಾತಾ, ಮತರಾಲ್‌ಭವಾನಿ, ಮೆಸೋರುಭವಾನಿ, ವಾಗಜಯಿಭವಾನಿ, ಹಿಂಗಳಾ ಮಾತಾ ಇವರು ಶಕ್ತಿ ದೇವತೆಗಳಾಗಿವೆ.[೨೮]

ಈ ಶಕ್ತಿ ದೇವತೆಗಳಿಗೆ ತೃಪ್ತಿಯಾಗದಿದ್ದರೆ ಊರಿಗೆ ಊರೇ ಕೋಪಕ್ಕೆ ತುತ್ತಾಗುತ್ತದೆಂಬ ನಂಬಿಕೆ ಅವರಲ್ಲಿದೆ. ಮನೆಯಲ್ಲಿ ಯಾವುದಾದರೂ ದುರಂತ ಸಂಭವಿಸಿದರೆ, ದನಕರುಗಳಿಗೆ ಯಾವುದಾದರೂ ತೊಂದರೆಯಾದರೆ ಈ ದೇವತೆಗಳೇ ಮೂಲಕಾರಣ ಎಂಬುದಾಗಿ ನಂಬುತ್ತಾರೆ. ಇದಕ್ಕಾಗಿ ಪ್ರತ್ಯೇಕ ದೇವಾಲಯ ಇರುವುದಿಲ್ಲ. ಈ ದೇವತೆಯರನ್ನು ಹೊಲ, ಗದ್ದೆ ಅಥವಾ ತಾಂಡಾದ ಹೊರವಲಯದಲ್ಲಿ ಚಿಕ್ಕ ಚಿಕ್ಕ ಏಳು

ಕಲ್ಲುಗಳನ್ನಿಟ್ಟು ಪ್ರತಿಷ್ಠಾಪಿಸಿ ಕುರಿ, ಕೋಳಿ ಮುಂತಾದವುಗಳನ್ನು ಬಲಿಕೊಟ್ಟು ಸಂತೃಪ್ತಿಪಡಿಸುತ್ತಾರೆ. ಅಲ್ಲದೇ ಗ್ರಾಮ ದೇವತೆಗಳ ರೂಪದಲ್ಲೂ ಈ ದೇವತೆಗಳನ್ನು ಪೂಜಿಸುವುದನ್ನು ಲಂಬಾಣಿಗರಲ್ಲಿ ಕಾಣಬಹುದಾಗಿದೆ.

**೬.೧.೭ ಭೀಮಾಸತಿ ತೀತಾರಾಜ್**

ಲಂಬಾಣಿಗರು ಆರಾಧನೆ ಮಾಡುವ ಸ್ತ್ರೀ ದೇವತೆಗಳಲ್ಲಿ ಭೀಮಾಸತಿಯು ಒಬ್ಬಳು. ಭೀಮಾಸತಿಯು ಲಂಬಾಣಿ ಸಮುದಾಯದ ಒಬ್ಬ ಅನುಭಾವಿ ಹೆಣ್ಣುಮಗಳು. ಭೀಮಾಸತಿ ಅಥವಾ ಭೀಮಣಿಬಾಯಿ ತೀತಾರಾಜ ಎಂಬುವವನ ಪತ್ನಿಯಾಗಿದ್ದು ತೀತರಾಜನು ತಮ್ಮ ರಾಜ್ಯಕ್ಕಾಗಿ ಹೋರಾಡುತ್ತಿರುವಾಗ ಯುದ್ಧದಲ್ಲಿ ವೀರ ಮರಣವನ್ನಪ್ಪಿದನು. ಇದನ್ನು ತಿಳಿದ ಭೀಮಾಣಿಬಾಯಿಯು ಚಿಕ್ಕನಾಯ್ಕನಹಳ್ಳಿ ತಾಲ್ಲೂಕಿನ ದೊಡೆಣ್ಣೆಗೆರೆ ಎಂಬ ಸ್ಥಳದಲ್ಲಿ ಚಿತೆ ಏರಿ ಸತಿಯಾದಳೆಂದು ನಂಬಿರುವ ಇವರು ಈ ಸ್ಥಳವನ್ನು ಪುಣ್ಯಕ್ಷೇತ್ರ ಎಂಬುದಾಗಿ ನಂಬಿದ್ದಾರೆ. ಆಕೆಯ ಹೆಸರಿನಲ್ಲಿ ದೇವಾಲಯವನ್ನು ಕಟ್ಟಿ, ದೇವತೆಗೆ ನಡೆದುಕೊಳ್ಳುವ ಪ್ರತಿ ಕುಲದವರು ಪ್ರತಿವರ್ಷ ಮೂರು ದಿನ ವಿಜೃಂಬಣೆಯಿಂದ ನಡೆಯುವ ಜಾತ್ರೆಗೆ ಬಂದು ತಮ್ಮ ಹರಕೆಯನ್ನು ಸಲ್ಲಿಸಿ ತಮ್ಮ ಕುಲದ ರಕ್ಷಣೆಗೆ ದೇವರನ್ನು ಬೇಡಿಕೊಳ್ಳುತ್ತಾರೆ. ಈ ದೇವಾಲಯದ ಪಕ್ಕದಲ್ಲೇ ಪತಿಯಾದ ತೀತಾರಾಜನ ಗದ್ದುಗೆ ಪ್ರತಿಷ್ಠಾಪಿಸಿ ಜಾತ್ರೆಯ ಸಂದರ್ಭದಲ್ಲಿ ಇವನಿಗೆ ಕುರಿಬಲಿ ಕೊಟ್ಟು ಅಲ್ಲಿಯೇ ಅಡುಗೆ ಮಾಡಿ ಊಟ ಮಾಡಿ ಹೋಗುತ್ತಾರೆ.[೧೦] ಲಂಬಾಣಿಗರು ಭೀಮಾಸತಿ ದೇವತೆಯನ್ನು ಶ್ರದ್ಧಾಭಕ್ತಿಯಿಂದ ಆರಾಧಿಸುವುದು ಕಂಡುಬರುತ್ತದೆ.

**೬.೧.೮ ಹೂಣಾಸತಿ ರಾಮಜಿರಾಜ್**

ಲಂಬಾಣಿಗರು ಆರಾಧನೆ ಮಾಡುವ ಸ್ತ್ರೀ ದೇವತೆಗಳಲ್ಲಿ ಹೂಣಸತಿಯು ಒಬ್ಬ ಅನುಭಾವಿ ಹೆಣ್ಣುಮಗಳು. ಹೂನಾಸತಿ ಅಥವಾ ಹೂನಬಾಯಿಗೆ ರಾಮಜಿನಾಯ್ಕ ಎಂಬುವವನ ಜೊತೆ ಮದುವೇ ನಿಶ್ಚಯ ಆಗಿರುತ್ತದೆ. ದೀಪಾವಳಿಯ ಹಬ್ಬ ಸಂದರ್ಭದಲ್ಲಿ ಇಬ್ಬರ ಮದುವೆ ಮಾಡುವುದೆಂದು ಗೊತ್ತುಮಾಡಿರುತ್ತಾರೆ. ಭೀಕರ ಬರಗಾಲದಿಂದ ರಾಮಜಿಯ ಕುಟುಂಬದವರು ತಂಡದ ಗುಂಪಿನವರೊಂದಿಗೆ ಗೋವುಗಳನ್ನು ಮೇಯಿಸಲು ಬೇರೆಕಡೆ ಹೋಗುವ ಅನಿವಾರ್ಯ ಪರಿಸ್ಥಿತಿ ಬರುತ್ತದೆ. ರಾಮಜಿರವರು ಗೋವುಗಳನ್ನು ಮೇಯಿಸುತ್ತಿರುವಾಗ ಹುಲಿ ಗೋವುಗಳ ದಾವಣಿಯ ಹತ್ತಿರ ಬಂದು ರಾಮಜಿಯ ಮೈಮೇಲೆ ಜಿಗಿದು ಕುತ್ತಿಗೆ ಹಿಡಿದುಕೊಂಡಿತು. ಜನ ಬರುವುದೊಳಗೆ ರಾಮಜಿಯ ಕಥೆ ಮುಗಿದಿತ್ತು. ಹುಲಿ ರಾಮಜಿಯನ್ನು ಬಿಟ್ಟು ಕಾಡಿನ ಕಡೆಗೆ ಓಡಿ ಹೋಯಿತು.[೧೧] ಇದನ್ನು ತಿಳಿದ ಹೂನಬಾಯಿ ಹನುಮರೆಡ್ಡಿಯ ಹೊಲದಲ್ಲಿ ಚಂದನದ ಕಟ್ಟಿಗೆಯ ಸುತ್ತ ಆಲ, ಅರಳೆ, ಅತ್ತಿ ಮುಂತಾದ ಕಟ್ಟಿಗೆಗಳಿಂದ ಗುಡಿಕಟ್ಟಿದ ಹಾಗೆ ಬಿಟ್ಟಿದರು ಕೊಂಡಕ್ಕೆ ಪೂಜೆ ಮಾಡಿದರು. ಹೂನಾಬಾಯಿಯ ಉಡಿಯಲ್ಲಿ ರಾಮಜಿಯ ಬಟ್ಟೆ ಬರೆ ಎಲೆ ಅಡಿಕೆ ಸಂಚಿ ಮುಂತಾದ ವಸ್ತುಗಳಿರುತ್ತವೆ. ಕೊಂಡದ ಒಳಗೆ ನಿಗಿ ನಿಗಿ ಕೆಂಡ, ಗುಡಿಯ ಸುತ್ತ ಹೂನಾಬಾಯಿ ಏಳು ಸುತ್ತು ಪ್ರದಕ್ಷಿಣೆ ಹಾಕುತ್ತಾಳೆ. ಗುಡಿಯ ಒಳಗಿನ ಬಡಗಿಚ್ಚು ಇನ್ನೇನು ಕ್ಷಣಾರ್ಧದಲ್ಲಿ ಧಗಧಗಿಸುತ್ತದೆ.[೧೨]

ಚೆಲುವಾದ ಹೂನಾಬಾಯಿಯ ಬದುಕು ದುರಂತಮಯ. ಹೂನಾಬಾಯಿಗೆ ರಾಮಜಿಯ ಜೊತೆಗೆ ಮದುವೆ ಆಗಿ ಬದುಕು ನಡೆಸಬೇಕೆಂದು ಅಪಾರ ಆಸೆ ಇತ್ತು. ಆದರೆ ಅದು ಈಡೇರಲಿಲ್ಲ. ಇಲ್ಲಿಗೆ ಹೂನಾಬಾಯಿ ಬದುಕಿನ

ದುಃಖಾಂತ್ಯದ ಕೊನೆಗೆ ಚಿತೆ ಏರಿ ಸತಿಯಾದಳು. ಲಂಬಾಣಿಗಳು ಹೂಸಾಸತಿಯನ್ನು ಶ್ರದ್ಧಾ ಭಕ್ತಿಯಿಂದ ಆರಾಧಿಸುವುದು ಕಂಡುಬರುತ್ತದೆ.

**ಸಾಧು-ಸಂತರು**

ತಿಳಿವಳಿಕೆ ಮಾರ್ಗಕಾಣದೇ ಜನಾಂಗ ನರಳುವಾಗ ಅರಿತು ದಾರಿ ತೋರುವ ಸಾಧುಸಂತರು ಜನಿಸುತ್ತಾರೆಂಬ ನಂಬಿಕೆ ಇದೆ. ನಂಬಿಕೆಯಂತೆ ಈ ಸಾಧು-ಸಂತರು ಜನ ಸಮುದಾಯವನ್ನು ಉತ್ತಮ ಮಾರ್ಗದಲ್ಲಿ ಕೊಂಡೊಯ್ಯುವಲ್ಲಿ ಮಹತ್ತರವಾದ ಪಾತ್ರವನ್ನು ನಿರ್ವಹಿಸುತ್ತಾರೆ. ಈ ಸಾಧು-ಸಂತರ ಬಗ್ಗೆ ಈ ಜನಾಂಗದಲ್ಲಿ ಐತಿಹಾಸಿಕ ಆಧಾರಗಳು ಇಲ್ಲದಿರುವುದರಿಂದ ಮೌಖಿಕ ಆಧಾರಗಳನ್ನು ಅವಲಂಬಿಸಬೇಕಾಗಿದೆ. ಲಂಬಾಣಿಗರ ಸಾಹಿತ್ಯದಲ್ಲಿ ಬರುವ ಪ್ರಸಿದ್ಧ ಸಾಧುಗಳೆಂದರೆ 'ಸಾನುಸಾದ್' ಸಾಮೂಸಾದ್ ಥಾಕುಭುಕ್ಕ, 'ಲಿಂಬೂಭುಕ್ಕ', 'ಧಾವರ್‌ಸಾದ್' 'ಮಂಜೆಭುಕ್ಕ' 'ಬರಮಸಾಮ' ಮೊದಲಾದವರು. ಇವರು ತಮ್ಮ ಸಮುದಾಯದ ಏಳಿಗೆ ಶ್ರಮಿಸಿ ತಮ್ಮ ಜೀವನವನ್ನು ಭಕ್ತರಿಗಾಗಿ ಧಾರೆ ಎರೆದು ಈ ಜನಾಂಗವನ್ನು ಸನ್ಮಾರ್ಗದಲ್ಲಿ ನಡೆಯಲು ಸಹಾಯಕರಾದರು.

**ದುರ್ಗಮ್ಮ**

ಬಳ್ಳಾರಿ ಜಿಲ್ಲೆಯ ಅನೇಕ ತಾಂಡಾಗಳಲ್ಲಿ ದುರ್ಗಮ್ಮ ಪೂಜೆಗೊಳ್ಳುತ್ತಿರುವುದು ಕಂಡುಬರುತ್ತದೆ. ''ದುರ್ಗಮ್ಮ ದುರ್ಗದ ಯುದ್ಧದ ದೇವತೆಯಾಗಿದೆ''.[೬] ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಚಿಕ್ಕಜೋಗಿಹಳ್ಳಿ ತಾಂಡಾದ ಹತ್ತಿರ ಗುಂಡಮೆಡಗು ಊರಿಗೆ ಹೋಗುವ ದಾರಿಯಲ್ಲಿ 'ದುರ್ಗಮ್ಮ' ದೇವತೆಯ ಹೆಸರಲ್ಲಿ ಮಾಡುವರು. ಈ ಜಾತ್ರೆಗೆ ಸುತ್ತ ಮುತ್ತಲಿನ ಸುಮಾರು ಐದು ಆರು ತಾಂಡಾಗಳ ಲಂಬಾಣಿಗರು ಭಾಗವಹಿಸುತ್ತಾರೆ. ೪ ದಿನಗಳ ಕಾಲ ನಡೆಯುವ ಈ ಜಾತ್ರೆಯಲ್ಲಿ ಗಂಗೆಪೂಜೆ ಅಥವಾ ಹೊಳೆಗೆ ಹೋಗುವುದು, ಬಲಿಕೊಡುವುದು, ಮುತ್ತೈದೆ ಹೆಣ್ಣು ಮಕ್ಕಳಿಂದ ಚರಗ ಚೆಲ್ಲುವುದು, ಅನಂತರ ಜಾತ್ರೆ ಅಥವಾ 'ಪರಸ'- ಹೀಗೆ ಕ್ರಮವಾಗಿ ನಡೆಯುತ್ತದೆ. ಈ ದುರ್ಗಮ್ಮನ ಪೂಜಾರಿಕೆಯು, ಲಂಬಾಣಿಗರಲ್ಲಿ ಕಂಡುಬರುವ ''ಮೂಡ್'' ಎಂಬ ಬೆಡಗಿನವರಿಗೆ ಮಾತ್ರವೇ ಸೀಮಿತವಾಗಿದೆ.

**ಗಾಳೆಮ್ಮ**

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನಲ್ಲಿ ನಡೆಯುವ ಪ್ರಮುಖ ಜಾತ್ರೆಗಳಲ್ಲಿ ಇದು ಒಂದು. ಈ ಜಾತ್ರೆಯು ಹೊಸಪೇಟೆಯಿಂದ ಕಮಲಾಪುರ ಮಾರ್ಗದ ರಸ್ತೆಯ ಎಡಭಾಗದಲ್ಲಿ ಗಾಳೆಮ್ಮ ದೇವಾಲಯದ ಹತ್ತಿರ ನಡೆಯುತ್ತದೆ. ಜಾತ್ರೆಯ ಸಂದರ್ಭದಲ್ಲಿ ಲಂಬಾಣಿ ಜನಾಂಗಕ್ಕೆ ಸೇರಿದ ಜೋಗಮ್ಮರು ವಿಶೇಷ ಪಾತ್ರ ವಹಿಸುವುದು ಕಂಡುಬರುತ್ತದೆ. ಪಡಲಿಗಿ ಹಿಡಿದ ಐವರು ಜೋಗಮ್ಮಗಳು ಆಚರಣಾ ವಿಧಿಗಳುದ್ದಕ್ಕೂ ಇರಬೇಕಾಗುತ್ತದೆ. ಸಾಮಾನ್ಯವಾಗಿ ಲಂಬಾಣಿ ಪಂಗಡಕ್ಕೆ ಸೇರಿದ ಇವರನ್ನು ಸಮೀಪದ ಕಲ್ಲಹಳ್ಳಿ ತಾಂಡಾ ಅಥವಾ ಕೆರೆತಾಂಡಾದಿಂದ ಕರೆತರಲಾಗುತ್ತದೆ. ಅವರು ಜಾತ್ರಾವಧಿಯ ವಿಶೇಷ ಘಟ್ಟಗಳಲ್ಲೆಲ್ಲಾ 'ಗಾಳೆಮ್ಮ ನಿನ್ನಾ ಪಾದಕ್ಕೆ ಉಧೋ!, ಹುಲಿಗೆಮ್ಮ, ನಿನ್ನಾಲ್ಕುಧೋ!, ಮಾರಮ್ಮ ನಿನ್ನಾಲ್ಕುಧೋ!' ಎಂದು ಹೇಳುತ್ತಾರೆ.

ಅವರಿಗೆ ಒಟ್ಟು ಆಚರಣೆಯಲ್ಲಿ ವಿಶೇಷ ಆದ್ಯತೆ ಇದೆ. ತೇರಿನ ಮುನ್ನಾದಿನ (ಚತುರ್ದಶಿ) ದಿಂದ ಮರುದಿನ ಪಾಡ್ಯದವರೆಗೆ ಒಟ್ಟು ಮೂರು ದಿನಗಳ ಆಚರಣೆಗಳಲ್ಲಿ ಅವರ ಪಾಲ್ಗೊಳ್ಳುವಿಕೆಯಿದೆ. ಮೂರನೆಯ ದಿನ ಅವರಿಗೆ ಉಡಿ ತುಂಬಿಸಿ ಕಳುಹಿಸಿಕೊಡುವ ಸಂಪ್ರದಾಯವಿದೆ. ಈ ಆಹ್ವಾನಿತ ಜೋಗಮ್ಮರಲ್ಲದೇ ಇತರ ಜೋಗಮ್ಮರು ಜಾತ್ರೆಗೆ ಬರುತ್ತಾರೆ. ಆದರೆ ಅವರಿಗೆ ಅಂತಹ ಗೌರವ ಸಲ್ಲುವುದಿಲ್ಲ. ಈ ರೀತಿಯಾಗಿ ಲಂಬಾಣಿ ಸಮುದಾಯದ ಜೋಗಮ್ಮಳಿಗೆ ವಿಶೇಷ ಮಾನ್ಯತೆ ದೊರಕಿರುವುದು ಗಾಳೆಮ್ಮನ ಜಾತ್ರೆಯ ಸಂದರ್ಭದಲ್ಲಿ ಕಂಡುಬರುತ್ತದೆ.

### ೬.೨. ಧಾರ್ಮಿಕ ಆಚರಣೆಗಳು

ಜನರು ಮಾಡುವುದು ಏನು ಎಂಬುದನ್ನು ತಿಳಿಸುವುದೇ ಸಂಪ್ರದಾಯವಾದರೆ ಅದನ್ನು ಹೇಗೆ ಮಾಡುತ್ತಾರೆಂದು ತಿಳಿಸುವುದೇ ಆಚರಣೆಯಾಗಿದೆ. ಈ ''ಹಬ್ಬ ಹರಿದಿನಗಳು ಧರ್ಮ, ಶ್ರದ್ಧೆಯ ಸಾಧನ, ವ್ರತಗಳು ಸಾಂಸ್ಕೃತಿಕ ಸಂವರ್ಧಕ ಕಾರ್ಯಗಳು; ಇವುಗಳ ಆಚರಣೆ ಎಲ್ಲಾ ಜನಾಂಗದಲ್ಲಿ ಕಂಡುಬರುತ್ತದೆ.''[೩೪] ಪ್ರಸ್ತುತ ಅಧ್ಯಯನದ ಸಮುದಾಯ ಮೊದಲಿನಿಂದಲೂ ತಮ್ಮದೇ ಆದ ವಿಶಿಷ್ಟತೆಯಿಂದ ಹಬ್ಬ ಹರಿದಿನಗಳನ್ನು ಆಚರಿಸುತ್ತಾ ಬಂದಿದ್ದಾರೆ. ಲಂಬಾಣಿಗರು ಭಾರತದ ಮೂಲೆ ಮೂಲೆಗೂ ಅಲೆದಾಡಿ ಕಾಲಾಂತರದಲ್ಲಿ ತಾಂಡಾದ ರೂಪದಲ್ಲಿ ಅಲ್ಲಲ್ಲಿ ನೆಲೆಸಿಕೊಂಡಿದ್ದಾರೆ. ಅವರದೇ ಆದ ಸಂಸ್ಕೃತಿಯ ಬದುಕಿನ ರೀತಿ ನೀತಿಯ ಮೇಲೆ ಉಡುಗೆ-ತೊಡುಗೆ ಹಾಗೂ ಭಾಷೆಯ ಮೇಲೆ ಪ್ರಾದೇಶಿಕವಾದ ಪ್ರಭಾವವನ್ನು ಕಾಣುತ್ತೇವೆ. ಇಂತಹ ಹಲವಾರು ಅಂಶಗಳಲ್ಲಿ ತೀವ್ರವಾದ ಬದಲಾವಣೆಯ ಛಾಯೆ ಕಾಣಿಸುವುದು ಸಹಜವಾದರೂ ಸಂಪ್ರದಾಯಸ್ಥರಾಗಿ ಲಂಬಾಣಿಗರು ಹಿಂದೂ ಸಂಪ್ರದಾಯದ ಜೊತೆ-ಜೊತೆಗೆ ತಮ್ಮದೇ ಆದ ವಿಶಿಷ್ಟವಾದ ಸಂಸ್ಕೃತಿಯನ್ನು ಪರಂಪರೆಯಿಂದ ಉಳಿಸಿಕೊಂಡು ಬಂದಿದ್ದಾರೆ.

ಲಂಬಾಣಿಗರು ಸಾಮಾನ್ಯವಾಗಿ ಪ್ರಮುಖವಾದ ಎಲ್ಲಾ ಭಾರತೀಯ ಹಬ್ಬಗಳನ್ನು ತಮ್ಮದೇ ಆದ ರೀತಿಯಲ್ಲಿ ಆಚರಿಸುವುದುಂಟು. ಅವರು ಆಚರಿಸುವ ಹಬ್ಬಗಳನ್ನು ಇಲ್ಲಿ ಸ್ಥೂಲವಾಗಿ ವಿವೇಚಿಸುವುದು ಅಗತ್ಯ. ಅವುಗಳಿಂದ ಅವರ ಧಾರ್ಮಿಕ ಮನೋಭಾವವನ್ನು ಅರಿತುಕೊಳ್ಳಬಹುದು. ಲಂಬಾಣಿಗರು ದೀಪಾವಳಿ, (ದವಾಳಿ) ಹೋಳಿ, ತೀಜ್, ದಸರಾ, ಯುಗಾದಿ, ಸೀತ್ಲಾ. ಜಾತ್ರೆ ಇತ್ಯಾದಿ ಹಬ್ಬಗಳನ್ನು ಶ್ರದ್ಧೆ-ಭಕ್ತಿಯಿಂದ ಆಚರಿಸುತ್ತಾರೆ. ಕೆಲವು ವಿಶೇಷ ಧಾರ್ಮಿಕ ಆಚರಣೆಗಳನ್ನು ಆಚರಿಸುವುದು ಲಂಬಾಣಿಗರಲ್ಲಿ ಕಂಡುಬರುತ್ತದೆ.

#### ೬.೩.೧. ದೀಪಾವಳಿ:

ಭಾರತದ ಹಲವು ಸಮುದಾಯಗಳು ಆಚರಿಸುವಂತಹ ಹಬ್ಬಗಳಲ್ಲಿ ದೀಪಾವಳಿ ಸಹ ಒಂದು. ಈ ಹಬ್ಬವನ್ನು ಲಂಬಾಣಿ ಸಮುದಾಯದವರು ಅತ್ಯಂತ ಸಂಭ್ರಮ ಸಡಗರದಿಂದ ಆಚರಿಸುತ್ತಾರೆ. ''ದೀಪಾವಳಿ ಅಂಧಃಕಾರವನ್ನು ಹೋಗಲಾಡಿಸಿ ಬೆಳಕನ್ನುಂಟುಮಾಡುವ ಹಿಂದೂಗಳ ಬಹುದೊಡ್ಡ ಹಬ್ಬ. ಈ ಹಬ್ಬದಲ್ಲಿ ಧನಲಕ್ಷ್ಮೀ, ಧಾನ್ಯಲಕ್ಷ್ಮೀಗಳೆರನ್ನೂ ಆರಾಧಿಸುತ್ತಾರೆ.''[೩೫] ಲಂಬಾಣಿ ಸಮುದಾಯದವರು ಸಹ ಈ ಹಬ್ಬವನ್ನು ವಿಶಿಷ್ಟತೆಯಿಂದ ಆಚರಿಸುತ್ತಾರೆ. ''ಲಂಬಾಣಿಗರಲ್ಲಿ ದೀಪಾವಳಿ ಹಬ್ಬವು ಜನರ ಮನ ತಣಿಸುವ, ಪೂರ್ವಜರನ್ನು ನೆನಪಿಸಿಕೊಳ್ಳುವ ಪರಸ್ಪರ ದ್ವೇಷ ಅಸೂಯೆಗಳನ್ನು ಮರೆತು ಒಂದಾಗುವ ಜ್ಞಾನಜ್ಯೋತಿಯ ಪ್ರತೀಕವಾಗಿ

ಆಚರಿಸುತ್ತಾರೆ. ದೀಪಾವಳಿ ಹಬ್ಬವನ್ನು ಇವರು ತಮ್ಮ ಭಾಷೆಯಲ್ಲಿ 'ದವಾಳಿ' ಎಂಬುದಾಗಿ ಕರೆದುಕೊಳ್ಳುತ್ತಾರೆ."[೨] ದೀಪಾವಳಿಯ ಮೊದಲನೆಯ ದಿನ ಅಂದರೆ ಅಮಾವಾಸ್ಯೆಯ ದಿನ ಲಂಬಾಣಿಗರಿಗೆ 'ಕಾಳಿಮಾಸ್' ಎರಡನೆ ದಿನ 'ದವಾಳಿ'.

ಮೊದಲನೇ ದಿನ ಬೆಟ್ಟದ ಅಮಾವಾಸ್ಯೆಗೆ 'ಕಾಳಿಮಾಸ್' ಎಂದು ಕರೆಯುವರು. ಅಮಾವಾಸ್ಯೆಯ ದಿನ ಮುಂಜಾನೆ ತಾಂಡಾದವರು ಶಕ್ತ್ಯಾನುಸಾರ ಹಣ ಸಂಗ್ರಹಿಸಿ ಕುರಿಮರಿಯನ್ನು ಕಡಿದು ಎಲ್ಲರೂ ಮಾಂಸವನ್ನು ಹಂಚಿಕೊಳ್ಳುತ್ತಾರೆ. ಅಂದು ಸಂಜೆ 'ಸಳೋಯಿ' ಎಂದು ಕರೆಯುವ ವಿಶೇಷ ಮಾಂಸದ ಅಡುಗೆಯನ್ನು ಮಾಡಿ ತಮ್ಮ ಪೂರ್ವಜರಿಗೆ ಎಡೆ ಇಟ್ಟು ಪೂಜಿಸುತ್ತಾರೆ. ನಂತರ ತಾಂಡಾದ ನಾಯಕ, ಕಾರಭಾರಿ ಮತ್ತು ಮನೆ ಹಿರಿಯರು ಒಂದು ಕಡೆ ಸೇರಿ ಊಟ ಮಾಡುವರು. ಕೆಲವರಲ್ಲಿ ವೈಮನಸ್ಸು ಮನಸ್ತಾಪಗಳಿದ್ದರೆ ಅವುಗಳನ್ನು ಮರೆತುಬಿಟ್ಟು ಪುನಃ ಸ್ನೇಹಿತರಂತೆ ಮುಂದುವರೆಯಲು ನಾಯಕರು, ಹಿರಿಯರು ಸಲಹೆ ಮಾಡಿ ಒಂದುಗೂಡಿಸುತ್ತಾರೆ. ಅಲ್ಲದೇ ಕಾಳಿಮಾತೆ ದೇವತೆಯನ್ನು ಪ್ರತಿಷ್ಠಾಪಿಸಿ ಮಾಂಸವನ್ನು ಎಡೆ ಇಟ್ಟು ದನಕರುಗಳಿಗೆ ಉಣ್ಣೆ ತೊಣಚಿಗಳ ಕಾಟದಿಂದ ರಕ್ಷಿಸುವಂತೆ ದೇವರನ್ನು ಪ್ರಾರ್ಥಿಸುತ್ತಾರೆ.

ಕಾಳಿಮಾಸ್ ಎಂಬ ಶಬ್ದದ ಮೂಲ ಮತ್ತು ಅರ್ಥಗಳ ಬಗ್ಗೆ ಸ್ಪಷ್ಟವಾದ ಆಧಾರಗಳು ದೊರೆಯುವುದಿಲ್ಲ. ಸಮುದಾಯದ ಮುಖಂಡರನ್ನು ವಿಚಾರಿಸಿದಾಗ ಸ್ಪಷ್ಟವಾದ ಅರ್ಥ ಹೇಳುವುದಿಲ್ಲ. ಕಾಳಿ ಎಂದರೆ ಪರ್ವಕಾಳಿ ಅರ್ಥಾತ್ ಪುಣ್ಯಕಾಲ.[೩] ಕಾಳಿಮಾಸ್ ಎಂಬ ಪದವು 'ಕಾಲಿ' ಮತ್ತು 'ಅಮಾಸ್' ಎಂಬ ಹಿಂದಿ ಮೂಲ ಪದಗಳ ಮಿಶ್ರಣವಾಗಿದೆ. ಕಾಲಿ ಎಂಬ ಪದಕ್ಕೆ ಹಿಂದಿ ಭಾಷೆಯಲ್ಲಿ ಕಪ್ಪು, ಕಾರ್ಗತ್ತಲು ಕಾಳಿಕಾದೇವಿ ಎಂಬ ಅರ್ಥಗಳಿವೆ. ಅಮಾಸ ಎಂಬ ಪದಕ್ಕೆ ಅಮಾವಾಸ್ಯೆ ಎಂಬ ಅರ್ಥವಿದೆ. ಕಾಳಿಮಾಸ್, ಕಾಳಿಅಮಾಸ್ ಕಾಳಿಮಾಸ್ ಆಗಿದೆ. ಪದಶಃ ಕಪ್ಪು ಅಮಾವಾಸ್ಯೆ[೪] ಎಂಬುದಾಗಿ ಅರ್ಥೈಸಿದ್ದಾರೆ. ವಿದ್ವಾಂಸರು ಸಂಕುಚಿತ ಮತ್ತು ವಿಶಾಲಾರ್ಥಗಳಲ್ಲಿ ಈ ಪದವನ್ನು ಅರ್ಥೈಸಲು ಪ್ರಯತ್ನಿಸಿದ್ದಾರೆ. ಇಲ್ಲಿ ಕಾರ್ಗತ್ತಲಿನ ಅಮಾವಾಸ್ಯೆ ಎಂಬ ಪದ ಹೆಚ್ಚು ಸಮಂಜಸವಾಗಿದೆ.

ದೀಪಾವಳಿ ಅಮಾವಾಸ್ಯೆ ಸಂಜೆ ತಾಂಡಾದ ಎಲ್ಲ ಯುವತಿಯರು ಅಂದರೆ ಮದುವೆಯಾಗಿರದೇ ಇರುವ ಹುಡುಗಿಯರು ಬಣ್ಣ ಬಣ್ಣದ ವೇಷ-ಭೂಷಣಗಳಿಂದ ಶೃಂಗರಿಸಿಕೊಂಡು, ಹರಳೆಣ್ಣೆ ದೀಪದ ಆರತಿಯನ್ನು ಹಚ್ಚಿಕೊಂಡು ತಾಂಡಾದ ಮುಖ್ಯಸ್ಥನ ಮನೆಗೆ ಹೋಗಿ ಆರತಿ ಬೆಳಗಲು ಅನುಮತಿ ಪಡೆದು ಅವರ ಮನೆಗೆ ಆರತಿ ಬೆಳಗಿ ನಂತರ ತಾಂಡಾದ ಎಲ್ಲರ ಮನೆಗೆ ಹೋಗಿ 'ಮೇರಾ' ಮಾಡುತ್ತಾರೆ. ಹುಡುಗಿಯರು ಮನೆ-ಮನೆಗೆ ಹೋಗುವಾಗ ತಮ್ಮ ಮನೆಯವರನ್ನೆಲ್ಲಾ ಸಂಭೋಧಿಸಿ ಹಾಡು-ಹಾಡುತ್ತಾ ಒಂದೆಡೆ ಸೇರುತ್ತಾರೆ. ದೀಪಾವಳಿ ಶುಭಾಶಯ ತಿಳಿಸುವುದನ್ನು ಇವರು 'ಮೇರಾ' ಎನ್ನುವರು. ಮೇರಾ ಮಾಡುವಾಗ ಹಿರಿಯರನ್ನು ಕುರಿತು ಹೀಗೆ ಹಾಡುತ್ತಾರೆ.

ವರ್ಷೇದಾಡ್ ಕೋರ್ ದವಾಳಿ
ಬಾಪುತೋನ ಮೇರಾ
ವರ್ಷೇದಾಡ್ ಕೋರ್ ದವಾಳಿ

ಮರಿಯಮ್ಮ ತೋನ ಮೇರಾ
ವರ್ಷೇದಾಡ್ ಕೋರ್ ದವಾಳಿ
ಜಗದಂಬಾತೋನ ಮೇರಾ
ವರ್ಷೇದಾಡ್ ಕೋರ್ ದವಾಳಿ
ಸತ್ತಿ ತೋನ್ ಮೇರಾ

ವರ್ಷೇದಾಡ್ ಕೋರ್ ದವಾಳಿ
ಸೇವಾಭಾಯ ತೋನ ಮೇರಾ[4]

ಹಾಗೆಯೇ ಕುಲದೇವರು, ಮನೆದೇವರು, ಹಾಗೂ ಮನೆಯವರೆಲ್ಲರ ಹೆಸರುಗಳನ್ನು ಹೇಳಿ ಅವರಿಗೆ ಆರತಿ (ಮೇರಾ) ಮಾಡುತ್ತಾರೆ. ಕೆಲವು ಮನೆಯವರಿಗಷ್ಟೇ ಅಲ್ಲದೆ ಸಾಕುಪ್ರಾಣಿಗಳಾದ ಆಕಳು, ಎತ್ತುಗಳಿಗೂ ಕೂಡ ಮೇರಾ ಮಾಡುವರು. ಮರಳಿ ದೀಪಾವಳಿ ಬರುವವರೆಗೂ ಮನೆಯಲ್ಲಿ ಎಲ್ಲರೂ ಸುಖ ಸಮೃದ್ಧಿಯಿಂದ ಇರುವಂತಾಗಲೆಂದು ಹಾರೈಸುತ್ತಾರೆ. ಮನೆಯವರು ಪ್ರೀತಿಯಾಗಿ ಹುಡುಗಿಯರಿಗೆ ಹಣತೆಯಲ್ಲಿ ಕಾಣಿಕೆ ರೂಪದಲ್ಲಿ ತಮಗೆ ತಿಳಿದಷ್ಟು ಹಣ ಹಾಕುತ್ತಾರೆ. ಹೀಗೆ ಅಂದಿನ ದಿನ ಕಾರ್ಯ ಮುಕ್ತಾಯವಾಗುತ್ತದೆ.

ಎರಡನೇ ದಿನ ಕಾರ್ಯಕ್ರಮಕ್ಕೆ 'ಧಬುಕಾರ್‌ದೇರೂ' ಅಥವಾ 'ಹೋಮ' ಎಂದು ಕರೆಯುತ್ತಾರೆ. ಆ ದಿನ ಬೆಳಗ್ಗೆ ಮನೆಯ ಅಂಗಳವನ್ನು ಸಾರಿಸಿ ರಂಗೋಲಿ ಹಾಕಿ ತಾಂಡಾದ ಎಲ್ಲಾ ಹುಡುಗಿಯರು ಮಡಿಯಾಗಿ ಒಂದೆಡೆ ಸೇರುತ್ತಾರೆ. ತಲಾ ಒಂದೊಂದು ಬುಟ್ಟಿಯನ್ನು ಹಿಡಿದುಕೊಂಡು ಕೆರಕನ ಹೂ ಎಂದರೆ ಹೊಸದಾಗಿ ಬೆಳದಿರುವ ಪೈರು ರಾಗಿ ತೆನೆ, ಭತ್ತದ ತೆನೆ, ಹೆಸರುಕಾಯಿ ಅವರಿಕೆ ಹೂ ಬಂದರಿಕೆ ಹೂ ಮುಂತಾದವುಗಳನ್ನು ಹಾಡು-ಹಾಡುತ್ತಾ, ಕುಣಿಯುತ್ತಾ ತರುತ್ತಾರೆ.[5] ಮೊದಲು ತಾಂಡಾದ ಮುಖ್ಯಸ್ಥರ ಮನೆಯ ಮುಂದೆ ಕರಕನ ಹೂವನ್ನು ಮಾಡುತ್ತಾರೆ. ಪ್ರತಿಯೊಂದು ಮನೆಯವರು ಹಸುವಿನ ಸೆಗಣಿಯಿಂದ ಸಣ್ಣ-ಸಣ್ಣ ಉಂಡೆಗಳನ್ನು ಕಟ್ಟಿರುತ್ತಾರೆ. ಹುಡುಗಿಯರು ಎಲ್ಲಾ ಹೂವುಗಳನ್ನು ಅದಕ್ಕಿಟ್ಟು ಪೂಜೆ ಮಾಡುತ್ತಾ ಪ್ರತಿಯೊಬ್ಬರ ಮನೆಗೆ ಹೋಗುತ್ತಾರೆ. ಕೆರಕನ ಹೂವು ಎಲ್ಲಾ ಮನೆಯ ಮುಂದೆ ಇಟ್ಟ ನಂತರ ಅಡುಗೆ ಮನೆಯನ್ನು ಒಲೆಗಳನ್ನು ಸಗಣಿಯಿಂದ ಸಾರಿಸಿ ಶುದ್ಧಗೊಳಿಸಿ ಹೊಸ ಮಣ್ಣಿನ ಪಾತ್ರೆಗಳಲ್ಲಿ 'ಘೋಟಿ ಘಾಟಿ ಲಪ್ಸಿ' ಎಂದು ಕರೆಯುವ ಗೋದಿಹಿಟ್ಟು ಹಾಗೂ ಬೆಲ್ಲದ ಮಿಶ್ರಣದಿಂದ ಮಾಡಿರುವ ವಿಶೇಷವಾದ ಮುದ್ದೆಯನ್ನು ಸಿದ್ಧಪಡಿಸಿ ಹಿರಿಯರನ್ನು ಪೂಜಿಸಿ ಹೋಮ ಮಾಡುವ ಪದ್ಧತಿ ಇವರಲ್ಲಿ ರೂಢಿಯಲ್ಲಿದೆ. ಘೋಟಿ ಘಾಟಿ ಲಾಪಟಿಯನ್ನು ಒಂದು ತಟ್ಟೆ ಇಲ್ಲವೇ ಬಾಳೆ ಎಲೆಯಲ್ಲಿ ಹಾಕಿಕೊಂಡು ಮನೆಯ ಒಲೆಯ ಹತ್ತಿರ ಮನೆಯ ಯಜಮಾನ ಅಥವಾ ಹಿರಿಯ ಮಗನು ಬಲಗೈನ ಎರಡು ಬೆರಳುಗಳಿಂದ ತುಪ್ಪವನ್ನು ಹಾಕಿ ಅದುಮುತ್ತಾ ತಮ್ಮ ಪೂರ್ವಜರ ಹೆಸರುಗಳಾದ,

ದಾದಾ ಮೂಲ ತೋ ಲೇಸ್,
ರಾಧಾದಾದಿ ತೋ ಲೇಸ್
ತೋಕ್ಯದಾದಾ ತೋಲೇಸ್

ಸಬಾವಟ್ ದಾದಾ ತೋ ಲೇಸ್

ಡಕಣಾ ಬಾ ತೋ ಲೇಸ್

ಗಂಗಿ ಯಾ ತೋಲೇಸ್

ಎಂದು ಹೇಳಿ ಕುಲದ ಮುಖ್ಯಸ್ಥ ಹಾಗೂ ಗತಿಸಿದ ವ್ಯಕ್ತಿಗಳನ್ನು ಹೇಳಿ ಸ್ವಲ್ಪ ಸ್ವಲ್ಪ ಮುದ್ದೆಯನ್ನು ತುಪ್ಪದಲ್ಲಿ ಕಲಸಿ ಕುಲದ ಹಿರಿಯರಿಗೆ ಸಲ್ಲಿಸಿ ಕೆಂಡದ ಮೇಲೆ ಇಟ್ಟು ತುಪ್ಪ ಸುರಿಯುತ್ತಾರೆ. ಕುಟುಂಬದವರೆಲ್ಲರೂ ಒಲೆಯ ಮುಂದೆ ನಿಂತು ನಮಸ್ಕರಿಸುವರು. ನಂತರ ಊದುಬತ್ತಿ, ಕರ್ಪೂರ, ಹಣ್ಣು, ಕಾಯಿ ಇಟ್ಟು ಆರತಿ ಮಾಡುತ್ತಾರೆ. ಹಾಗೆಯೇ ದೀಪಾವಳಿ ಹೆಸರಿನಲ್ಲಿಯೂ ಹೋಮ ಮಾಡುತ್ತಾರೆ. ಇದನ್ನು 'ಧಬುಕಾರ್‌ದೇರೋ' ಎಂಬುದಾಗಿ ಕರೆಯುತ್ತಾರೆ.

ಪುರುಷರು ದನದಕರುಗಳನ್ನು ತೊಳೆದು ಅವುಗಳನ್ನು ಅಲಂಕರಿಸಿ ಮನೆಯಲ್ಲಿ ತಯಾರಿಸಿದ ಆಹಾರವನ್ನು ತಿನ್ನಿಸುತ್ತಾರೆ. ಸಾಯಂಕಾಲ ತಾಂಡಾದ ಯುವಕರು ಕೈಗಳಲ್ಲಿ ಪಂಜುಗಳನ್ನು ಹಿಡಿದುಕೊಂಡು ಮರವನ್ನು ಕೋಲುಗಳಿಂದ ಬಡಿಯುತ್ತಾ ಅಗ್‌ಝಡ್ ಬಗ್‌ಝಡ್ ಗಂಗೋಡ್ ಝಡ್ ಅಂದರೆ ದನ ಕರುಗಳಿಗೆ ಅಂಟಿಕೊಳ್ಳುವ ಉಣ್ಣೆ ಹಾಗೂ ತೊಣಚಿ ಉದುರಿಹೋಗು ಎಂದು ಕೂಗುತ್ತಾ ಊರನ್ನು ಏಳು ಬಾರಿ ಪ್ರದಕ್ಷಿಣೆ ಹಾಕುತ್ತಾರೆ. ಕೆಲವು ವಿದ್ವಾಂಸರು ಹೇಳುವ ಪ್ರಕಾರ ಸಾಯಂಕಾಲ ಗೋವುಗಳನ್ನೆಲ್ಲಾ ಊರ ಹೊರಗೆ 'ಗೋಲ ತೌವ್ವ' ಎಂಬ ದೇವತೆಯ ಗುಡಿಯ ಮುಂದೆ ನಿಲ್ಲಿಸಿ ಕಿಚ್ಚಾಯಿಸುವರು. ದನ-ಕರುಗಳು ಮನೆಗೆ ಬರುವಾಗ ಕೊಟ್ಟಿಗೆ ಬಾಗಿಲಿಗೆ ಸೊಪ್ಪನ್ನು ದನಗಳ ಮೇಲೆ ಹರಿಯುವರು, ಒನಕೆ ದಾಟಿಸುವರು. ಹಿಂದೆ ಅಚ್ಚಕಾಯಿಯಿಂದ ಹೊಡೆಯುವರು. ಹೀಗೆ ಮಾಡುವುದರಿಂದ ದನಕರುಗಳಿಗೆ ರೋಗರುಜಿನಗಳು ಬರುವುದಿಲ್ಲ ಎಂಬ ನಂಬಿಕೆ.[೪೧] ಪ್ರಜ್ಞಾವಂತ ಹಿರಿಯರು ತಾಂಡಾದ ಮಧ್ಯ ನಿಂತು ಗೋದೂಳಿ ಲಗ್ನದಲ್ಲಿ ಉದಯಿಸುತ್ತಿರುವ ಚಂದ್ರನನ್ನು ಪಶ್ಚಿಮದಿಕ್ಕಿಗೆ ನಿಂತು ನಮಸ್ಕರಿಸಿ ವಿನಂತಿಸುತ್ತಾರೆ. ದೇವಸ್ಥಾನದ ಬಳಿ ಸೇರಿದ ಪುರುಷರು ನಗಾರಿ, ಗಂಗಳ ಬಾರಿಸುತ್ತಾ ಹಾಡು, ಕಥೆ ಹೇಳುತ್ತಾ ಕುಣಿಯುವರು. ಸ್ತ್ರೀಯರು ಸುತ್ತುವರೆದು ಹಾಡು-ಹಾಡುತ್ತಾ ನೃತ್ಯ ಪ್ರದರ್ಶಿಸುತ್ತಾರೆ.

ಸಂತೋಷದಿಂದ ಆಚರಿಸುವ ದೀಪಾವಳಿಯ ಹಿರಿಮೆಯನ್ನು ಹಿರಿಯರು ಹೀಗೆ ಹೇಳುತ್ತಾರೆ. 'ಹೋಳಿ ಮಾಂಗಿ ಗೇರಿಯಾರ್ ಥಾಟ್ ದವಾಳಿ ಮಾಂಗಿ ಡಾವೇ ಸಾಣೇರ ಥಾಟ್' (ಹೋಳಿ ಕೇಳಿತು ರಸಿಕನ ಸಂತೋಷ. ದೀಪಾವಳಿ ಕೇಳಿತು ಹಿರಿಯರ ಸಂತೋಷ.) 'ಹೋಳಿ ದವಾಳಿ ದೋಯಿ ಭೇನೆ ಭೇನೆ' (ದೀಪಾವಳಿ ಮತ್ತು ಹೋಳಿ ಇಬ್ಬರೂ ಅಕ್ಕ-ತಂಗಿಯರು).[೪೨]

### ೬.೩.೨. ಹೋಳಿ

ಈ ಹಬ್ಬವು ಭಾರತೀಯ ಸಂಸ್ಕೃತಿ ಪರಂಪರೆಯ ದ್ಯೋತಕವಾಗಿದೆ. ದೇಶದಾದ್ಯಂತ ಭಾರತೀಯರು ಇದನ್ನು ಭಿನ್ನ ಭಿನ್ನವಾದ ರೀತಿಯಲ್ಲಿ ಸಂಭ್ರಮದಿಂದ ಆಚರಿಸುತ್ತಾರೆ. ವಸಂತಮಾಸವನ್ನು ಪಾಲ್ಗುಣ ಮಾಸದ ಪೌರ್ಣಿಮೆಯನ್ನು (ಮಾರ್ಚ್) ನಮ್ಮ ನಾಡ ಜನ ಹೋಳಿ ಹುಣ್ಣಿಮೆ ಹಬ್ಬವನ್ನಾಗಿ ಆಚರಿಸುತ್ತಾರೆ. ಲಂಬಾಣಿಗರ

ಪ್ರಮುಖವಾದ ಈ ಹಬ್ಬವನ್ನು 'ಹೋಳಿರ್ ತೇವಾರ್' ಎಂಬುದಾಗಿ ಕರೆಯುತ್ತಾರೆ. ಇನ್ನುಳಿದ ಹಬ್ಬಗಳಿಗಿಂತಲೂ ಹೋಳಿಹಬ್ಬ ಅತ್ಯಂತ ವೈಶಿಷ್ಟ್ಯಪೂರ್ಣವಾಗಿದೆ. ಹೋಳಿ ಹಬ್ಬದಲ್ಲಿ ಸ್ತ್ರೀಯರಿಗಿಂತ ಪುರುಷರ ಪಾತ್ರ ಹೆಚ್ಚಾಗಿದೆ.

ಪುರಾಣಗಳಲ್ಲಿರುವ ಕಥೆಯಂತೆ ಶಿವನು ತಪಸ್ಸಿಗೆ ಕುಳಿತುಕೊಳ್ಳುವುದು. ಪಾರ್ವತಿಯೂ ಶಿವನನ್ನು ಒಲಿಸಲು ಪೂಜಿಸುವುದು ಶಿವಪಾರ್ವತಿಯನ್ನು ಒಂದಾಗಿಸಲು ಕಾಮದೇವ ಪ್ರಯತ್ನಪಟ್ಟು ಶಿವನ ಮೂರನೇ ಕಣ್ಣಿನಿಂದ ಇವನು ಭಸ್ಮವಾದುದರ ಕುರುಹಾಗಿ ಕಾಮದಹನ ಮಾಡುವುದು ರೂಢಿಯಲ್ಲಿದೆ. ಕಾಮದಹನ ಈ ಹಬ್ಬದ ವಿಶೇಷವಾದರೆ ಇದೊಂದು ಸಾಂಕೇತಿಕ ಆಚರಣೆಯಾಗಿದ್ದು ಮನೋರಂಜನೆಯೇ ಇಲ್ಲಿನ ಮುಖ್ಯ ಆಶಯವಾಗಿದೆ.

"ಹೋಳಿಯು ಮಾರ್ಚ್‌ತಿಂಗಳ ಹುಣ್ಣಿಮೆಯಿಂದ ಯುಗಾದಿ ಅಮಾವಾಸ್ಯೆಯವರೆಗೆ ೧೫ದಿವಸ ನಡೆಯುವ ಹಬ್ಬ. ಕೆಲವು ಕಡೆಗಳಲ್ಲಿ ಹೋಳಿ ಹುಣ್ಣಿಮೆಗೆ ಹತ್ತುದಿನ ಮೊದಲು ಒಕ್ಕಲು ಮಕ್ಕಳು ಸುಗ್ಗಿಯ ಕುಣಿತದೊಂದಿಗೆ ಈ ಹಬ್ಬವನ್ನು ಪ್ರಾರಂಭಿಸುತ್ತಾರೆ."[೧೫] ಲಂಬಾಣಿ ಸಮುದಾಯದಲ್ಲಿ ತಾಂಡಾದ ಹಿರಿಯರೆಲ್ಲರೂ ಸೇರಿ ಹಬ್ಬವನ್ನು ಆಚರಿಸಲು ನಿರ್ಣಯಿಸುತ್ತಾರೆ. ಅಂದು ಶ್ರೀಸೇವಾಲಾಲ್ ದೇವಾಲಯದಲ್ಲಿರುವ ನಗಾರಿಯನ್ನು ಹೊರಗೆ ತೆಗೆದು ತಾಂಡಾನಾಯಕನು ಅದಕ್ಕೆ ಪೂಜೆ ಸಲ್ಲಿಸಿ ಮೊದಲು ಬಾರಿಸುತ್ತಾನೆ. ತಾಂಡಾದ ಸ್ತ್ರೀಯರು ಪುರುಷರು ತಂಡೋಪತಂಡವಾಗಿ ಹತ್ತಿರ ಊರುಗಳಿಗೆ ಹೋಗಿ ಶೃಂಗಾರ ರಸಭರಿತವಾದ 'ಲೇಂಗಿ'ಹಾಡು (ಪ್ರೇಮಗೀತೆ) ಹಾಡುಗಳನ್ನು ಹಾಡುತ್ತಾ ಹಾಡಿಗೆ ತಕ್ಕಂತೆ ನೃತ್ಯ ಮಾಡುತ್ತಾ ಸಿಕ್ಕ ಸಿಕ್ಕವರಲ್ಲಿ ಖುಷಿ ಹಣವನ್ನು ಪಡೆಯುವುದರಲ್ಲಿ ಇವರಿಗೆ ಯಾವುದೇ ರೀತಿಯಲ್ಲಿ ಸಂಕೋಚ ಕಂಡುಬರುವುದಿಲ್ಲ. ಬದಲಾಗಿ ಅದು ನಮ್ಮ ಹಕ್ಕು ಎನ್ನುವಷ್ಟರ ಮಟ್ಟಿಗೆ ವ್ಯಕ್ತಿ ಅಥವಾ ಮನೆಯ ಮುಂದೆ ಹಾಡಲು ಆರಂಭಿಸಿ ನೃತ್ಯ ಮಾಡಿದರೆಂದರೆ ಖುಷಿ ನೀಡುವುದು ಯಾರಿಂದಲೂ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ.

ತಾಂಡಾ ನಾಯಕ, ಕಾರಭಾರಿ, ಪಂಚರ ಸಮ್ಮುಖದಲ್ಲಿ ತಾಂಡಾದಲ್ಲಿಯ ವಿವಾಹಯೋಗ್ಯ ಇಬ್ಬರೂ 'ಗೇರಿಯಾ' (ತರುಣ) ತರುಣರನ್ನು ಆಯ್ಕೆ ಮಾಡುತ್ತಾರೆ. ಈ ಇಬ್ಬರು ಬೆಸ ಬೆಡಗಿನ ಆಗಿರಬೇಕು ಉದಾಹರಣೆಗೆ 'ಭೂಕ್ಯ' 'ಜಾತ್' ತಲೆಗೆ ಕೆಂಪು ಪೇಟ ಕಟ್ಟಿಕೊಂಡು ಕೋಲನ್ನು ಹಿಡಿದುಕೊಂಡು ಕಾಮದಹನ ಸಿದ್ಧತೆಯಲ್ಲಿ ತೊಡಗುತ್ತಾರೆ. ಅದು ಬೆಳಿಗ್ಗೆ ಸುಮಾರು ಐದು ಗಂಟೆಗೆ ಹಿರಿಯರ ಸಮ್ಮುಖದಲ್ಲಿ ಕಾಮನಿಗೆ ಬೆಂಕಿ ಇಟ್ಟು ಅಲ್ಲಿಂದ ಲಂಬಾಣಿಗರು 'ಗೇರಿಯಾ' ಯುವಕರು ಎರಡು ಅಥವಾ ಮೂರು ಮೈಲು ದೂರದಲ್ಲಿರುವ ಕರಕೊಳ್ಳೆ ಬಾವಿಗಳಿಗೆ ಹೋಗಿ ಹೆಗಲ ಮೇಲಿರುವ ಶಾಲು ಒದ್ದೆ ಮಾಡಿಕೊಂಡು ಬರುತ್ತಾರೆ. ದಾರಿಯಲ್ಲಿ ಬರುವಾಗ ಯಾವುದಾದರೂ ಕೋಲನ್ನು ಕತ್ತರಿಸಿಕೊಂಡು ಬರುತ್ತಾರೆ. ನಂತರ ನಗಾರಿಯನ್ನು ಬಾರಿಸುತ್ತಾ ಪುರುಷರೆಲ್ಲ ಸೇರಿ ಸುತ್ತುಗಟ್ಟಿ ನಿಂತು ಹಿಂದಕ್ಕೆ-ಮುಂದಕ್ಕೆ ಹೆಜ್ಜೆ ಹಾಕುತ್ತಾ ಕೋಲಾಟ ಆಡುತ್ತಾರೆ. ಇದಕ್ಕೆ ಇವರು 'ಲೇಂಗಿ' ಗೀತೆಗಳೆಂದು ಕರೆಯುವರು. ಕೆಲವು ವೇಳೆ ಅಶ್ಲೀಲತೆಗೂ ಬಂದುಮುಟ್ಟುತ್ತವೆ. ಹೆಚ್ಚಾಗಿ ಈ ಸಂದರ್ಭದಲ್ಲಿ ಪ್ರೇಮ ಹಾಗೂ ಪ್ರಣಯ ಗೀತೆಗಳನ್ನು ಹೇಳುತ್ತಾ ಕುಣಿಯುವರು. ಅಂದು ಸಾಯಂಕಾಲ ಕಾಮದಹನ ಮಾಡಿದ ಬೂದಿಯನ್ನು ತಂದು ಕಿರಿಯರು-ಹಿರಿಯರಿಗೆ ಕೊಟ್ಟು ಆಶೀರ್ವಾದ ಪಡೆಯುತ್ತಾರೆ.

**ಧೂಂಡ್‌ಶಾಸ್ತ್ರ**

ಹುಣ್ಣಿಮೆಯ ಪೂರ್ವರಾತ್ರಿ ಹಾಲಿ ವರ್ಷದಲ್ಲಿ ತಾಂಡಾದಲ್ಲಿ ಜನಿಸಿದ ಗಂಡು ಮಗುವಿನ ಮನೆಯಲ್ಲಿ ನಡೆಯುವ ಶಾಸ್ತ್ರವನ್ನು ಧೂಂಡ್ ಶಾಸ್ತ್ರ ಎನ್ನುತ್ತಾರೆ. ಧೂಂಡ್ ಎಂದರೆ ಹುಡುಕು ಎಂದರ್ಥ. ಈ ಆಚರಣೆಗೆ

ವಿಶೇಷ ಅರ್ಥವಿದೆ. ಮಕ್ಕಳಿಗೆ ರೋಗರುಜಿನಗಳು ಬಾರದಂತೆ ದೇವರಲ್ಲಿ ಪ್ರಾರ್ಥನೆ ಮಾಡಿ ಮಕ್ಕಳ ಮುಂದಿನ ಭವಿಷ್ಯಕ್ಕೆ ಶುಭಕೋರಿ ಹಾರೈಸಿ ಗಂಡುಮಕ್ಕಳನ್ನು ತಮ್ಮ ಸಮುದಾಯಕ್ಕೆ ಸ್ವೀಕರಿಸುವ ಶಾಸ್ತ್ರವಾಗಿದೆ.

ಆ ರಾತ್ರಿ ತಾಂಡಾದ ಸ್ವಲ್ಪದೂರದಲ್ಲಿ ನಿರ್ದಿಷ್ಟ ಸ್ಥಳದಲ್ಲಿ ಕಟ್ಟಿಗೆಗಳನ್ನು ಸಂಗ್ರಹಿಸಿ ಕಾಮದಹನಕ್ಕೆ ವೇದಿಕೆಯನ್ನು ಸಿದ್ಧಗೊಳಿಸುತ್ತಾರೆ. ಇದನ್ನು "ಹೋಳಿ ಶೇಷರೂ" ಎನ್ನುವರು. ಈ ವೇದಿಕೆಯನ್ನು ಕಟ್ಟಿಗೆಗಳಿಂದ ಹಿರಿಯ ವ್ಯಕ್ತಿಗಳು ಬಹಳ ಎಚ್ಚರಿಕೆಯಿಂದ ಮಾಡಿರುತ್ತಾರೆ. ಮುಂದೆ ಈ ವೇದಿಕೆಯು ಉರಿದು ಬೀಳುವ ಆಧಾರದ ಮೇಲೆ ತಾಂಡಾಕ್ಕೆ ಒಳ್ಳೆಯದು, ಕೆಟ್ಟದುಗಳನ್ನು ನಿರ್ಧರಿಸುತ್ತಾರೆ. ಈ ವೇದಿಕೆ ಸಿದ್ಧವಾದ ನಂತರ ಸೂರ್ಯೋದಯಕ್ಕೆ ಮುನ್ನ ತಾಂಡಾ ಹುಡುಗ ಮತ್ತು ಹುಡುಗಿಯನ್ನು ಕರೆದು ವೀಳ್ಯದೆಲೆಯಲ್ಲಿ ಒಂದು ನಾಣ್ಯವನ್ನಿಟ್ಟು ಕೊಡುತ್ತಾನೆ. ಹುಡುಗರು ತನ್ನ ಗೆಳೆಯರೊಡನೆ ತಾಂಡಾ ಹಾಗೂ ನಾಯಕನಿಗೆ ಒಳ್ಳೆಯದು ಆಗಲಿ ಎಂದು ದೇವರಲ್ಲಿ ವಿನಂತಿಸಿಕೊಳ್ಳುತ್ತಾನೆ.

ಸೂರ್ಯೋದಯಕ್ಕೆ ಸರಿಯಾಗಿ ತರುಣ ಮತ್ತು ತರುಣಿಯರು ಗೆಳೆಯರೊಡನೆ ಹಾಡುತ್ತಾ ಕಾಮದಹನ ಸ್ಥಳಕ್ಕೆ ಆಗಮಿಸುತ್ತಾರೆ. ಮೊದಲಿಗೆ ಜಾತ್ ಮತ್ತು ಭೋಕ್ಯಾ ಗೋತ್ರದ ಇಬ್ಬರು ಹುಡುಗರು ಪ್ರತಿಕೃತಿಗೆ ಅಗ್ನಿ ಸ್ಪರ್ಶ ಮಾಡುತ್ತಾರೆ. ತಾಂಡಾ ನಾಯಕನು ಒಂದಿಷ್ಟು ಹಣವನ್ನು ಕಾಣಿಕೆಯಾಗಿ ಕೊಡುತ್ತಾನೆ.

ಕಾಮನ ಪ್ರತಿಕೃತಿಗೆ ಹಾಕಿದ ಬೆಂಕಿಯು ಸಂಪೂರ್ಣವಾಗಿ ನಂದಿಹೋಗುವ ಮೊದಲು ಯುವಕರು ಸಮೀಪವಿರುವ ಕೊಳದಿಂದ ನೀರು ತಂದು ಬೆಂಕಿಯ ಮೇಲೆ ಚುಮುಕಿಸಿ ಇದರ ಸುತ್ತ ಕುಣಿಯುತ್ತಾ ಏಳುಬಾರಿ ಪ್ರದಕ್ಷಿಣೆ ಹಾಕುತ್ತಾರೆ. ನೆರೆದಿರುವ ಎಲ್ಲ ಜನರೂ ನಮಸ್ಕಾರ ಮಾಡುತ್ತಾರೆ. ವೇದಿಕೆ ಸಂಪೂರ್ಣವಾಗಿ ಉರಿದು ಬೀಳುವ ಸಮಯದಲ್ಲಿ ಯಾವ ದಿಕ್ಕಿಗೆ ಬೀಳುವುದೆಂದು ಸೂಕ್ಷ್ಮವಾಗಿ ಗಮನಿಸುತ್ತಾರೆ. ಪೂರ್ವಕ್ಕೆ ಬಿದ್ದರೆ ತಾಂಡಾಕ್ಕೆ ಒಳ್ಳೆಯದಾಗುತ್ತದೆಂದು, ಉತ್ತರ ಅಥವಾ ದಕ್ಷಿಣಕ್ಕೆ ಬಿದ್ದರೆ ಆಪತ್ಕಾಲವಿದೆ ಎಂದು, ಪಶ್ಚಿಮಕ್ಕೆ ಬಿದ್ದರೆ ಹೋಳಿಯು ಸಾರ್ಥಕವಾಗಿಲ್ಲ; ಮತ್ತೊಮ್ಮೆ ಆಚರಿಸಬೇಕೆಂದು ಅಭಿಪ್ರಾಯಪಡುತ್ತಾರೆ. ಬೆಂಕಿ ಉರಿದು ನಂದಿ ಹೋಗುವವರೆಗೆ ಅದರ ಸುತ್ತಲೂ ಗೇರಿಯಾ ಮತ್ತು ಅವನ ಸಂಗಡಿಗರು ಅವರ ಪಾದಗಳಿಗೆ ಎರಗಿ ಆಶೀರ್ವಾದವನ್ನು ಬೇಡುತ್ತಾರೆ."

ಕಾಮದೇವರಿಗೆ ಹರಕೆ ಹೊತ್ತರೆ ಮಕ್ಕಳಾಗುತ್ತವೆ ಎಂದು ಲಂಬಾಣಿಗರು ನಂಬಿರುತ್ತಾರೆ. ಹುಟ್ಟಿದ ಮಗುವಿಗೆ ಧೋಂಡ್ ಮೂಡಿಸುವ ಹರಕೆ ಹೊತ್ತುಕೊಳ್ಳುತ್ತಾರೆ. ಕಾಮದೇವರನ್ನು ಸುಟ್ಟು ಹಿಂತಿರುಗಿ ಬರುವ ತಾಂಡಾದವರಿಗೆಲ್ಲಾ ಸುಮಂಗಲಿಯರು ತುಂಬಿದ ಕೊಡಗಳಿಂದ ಸ್ವಾಗತಿಸಿ, ಅವುಗಳಲ್ಲಿರುವ ನೀರಿನಿಂದ ಗೇರಿಯಾಗಳ ಪಾದ ತೊಳೆದು ನಮಸ್ಕರಿಸುತ್ತಾರೆ. ಪ್ರತಿಯಾಗಿ ಗೇರಿಯಾಗಳು ಅವರಿಗೆ ಸಂತಾನ ಪ್ರಾಪ್ತಿಯಾಗಲೆಂದು ಆಶೀರ್ವದಿಸುತ್ತಾರೆ.

ಬೆಳಗ್ಗೆ ಕಾಮನ ಪ್ರತಿಕೃತಿಯನ್ನು ದಹಿಸಿದ ಮೇಲೆ ಅಂದು ಮಧ್ಯಾಹ್ನದ ಊಟ ಮುಗಿದ ನಂತರ 'ರಂಗದೇರೋ' ಎಂದು ಕರೆಯುವ ಹೋಳಿ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಾರೆ. ಗೇರಿಯಾಗಳು ವಿಧ ವಿಧವಾದ ಬಣ್ಣಗಳನ್ನು ಕಲಸಿ ಓಕುಳಿಯನ್ನು ಸಿದ್ಧಪಡಿಸಿ ದೇವರ ಮುಂದೆ ಇಟ್ಟು ಪೂಜಿಸಿ ತಾಂಡಾದ ನಾಯಕನ ಮನೆಗೆ ತೆರಳಿ ಅವರ ಮೇಲೆ ಬಣ್ಣವನ್ನು ಚುಮುಕಿಸಿ ಪ್ರಾರ್ಥನೆ ಮಾಡಿ ಆಶೀರ್ವಾದ ಪಡೆದು ಓಕಳಿ

ಕಾರ್ಯಕ್ರಮವನ್ನು ವಿಧಿವತ್ತಾಗಿ ಆರಂಭಿಸುತ್ತಾರೆ. ಬಳಿಕ ತಾಂಡಾದ ಸಮಸ್ತ ಜನತೆ ಓಕುಳಿಯನ್ನು ಪರಸ್ಪರ ಎರಚಾಡಿ ಸಂತೋಷದಿಂದ ನಲಿಯುತ್ತಾರೆ. ಮೂರನೆಯ ದಿನ ಸಾಯಂಕಾಲ ಗೇರ್ ಮಾಡುತ್ತಾರೆ. ತಾಂಡಾದಲ್ಲಿ ಅಗತ್ಯವಿರುವಷ್ಟು ಕುರಿಗಳನ್ನು ಕೊಯ್ದು ಅಡುಗೆ ಮಾಡಿ ಪ್ರತಿಯೊಂದು ಮನೆಗೆ ಓಣಿಯ ಹಿರಿಯರು ಬಂದು ಹಂಚುತ್ತಾರೆ. ಇದಕ್ಕೆ ಇವರು ಗೇರೇರ್ ಭೋಟಿ ಎಂದು ಕರೆಯುತ್ತಾರೆ. ಅಂದು ಕೆಲವು ಹಿರಿಯ ಸ್ತ್ರೀ ಪುರುಷರು ಮದ್ಯಪಾನ ಸೇವಿಸಿ ಹರ್ಷಚಿತ್ತರಾಗುತ್ತಾರೆ. ಹೀಗೆ ಇವರು ಹೋಳಿ ಹಬ್ಬವನ್ನು ಅತ್ಯಂತ ಸಂಭ್ರಮ ಸಡಗರದಿಂದ ಮುಕ್ತಾಯ ಮಾಡುತ್ತಾರೆ.

**೬.೩.೩ ತೀಜ್ (ಗೋಧಿ ಗೌರಿಸಸಿ ಹಬ್ಬ)**

ಈ ಆಚರಣೆಯು ಲಂಬಾಣಿಗರಲ್ಲಿ ವಿಶೇಷವಾಗಿದೆ. ಇವರ ತಾಂಡಾದಲ್ಲಿ ಸಮೃದ್ಧಿ, ಶಾಂತಿ, ಸುಖ ವಾತಾವರಣವಿದ್ದ ಸಮಯದಲ್ಲಿ ಅತೀ ಸಂಭ್ರಮದಿಂದ ಆಚರಿಸುವ ಹಬ್ಬವಾಗಿದೆ. ಬಿದಿರು ಬುಟ್ಟಿಗಳನ್ನು ಕೆಂಪುಮಣ್ಣು, ಮರಳು, ಗೊಬ್ಬರ ಹಾಕಿ ಗೋಧಿಕಾಳು ಬಿತ್ತಿ ಬೆಳೆಸಿದ ಸಸಿಗಳನ್ನು 'ತೀಜ್' (ಗೌರಿಸಸಿ ಹಬ್ಬ) ಎನ್ನುವರು. ಈ ಹಬ್ಬವನ್ನು ಮಹಾನವಮಿಯ ಸಂದರ್ಭದಲ್ಲಿ ಕೆಲವು ಕಡೆಗಳಲ್ಲಿ ಆಚರಿಸಿದರೆ ಮತ್ತೆ ಕೆಲವು ಕಡೆಗಳಲ್ಲಿ ಯುಗಾದಿಯ, ಇನ್ನು ಕೆಲವು ಪ್ರದೇಶಗಳಲ್ಲಿ ಶ್ರಾವಣ ಇಲ್ಲವೆ ಭಾದ್ರಪದ ಮಾಸಗಳಲ್ಲಿಯೂ ಆಚರಿಸುವ ರೂಢಿಯಲ್ಲಿದೆ. ಈ ಹಬ್ಬವು ಮದುವೆಯಾಗಿರದೆ ಇರುವ ಯುವತಿಯರಿಗೆ ವಿಶೇಷ ಸಂಭ್ರಮವಾಗಿದೆ. ಇವರದೇ ಹೆಚ್ಚು ಪ್ರಮುಖ ಪಾತ್ರವಿರುತ್ತದೆ ಪುರುಷರು ಬೆರಳೆಣಿಕೆಯಷ್ಟು ಮಾತ್ರ ಭಾಗವಹಿಸುತ್ತಾರೆ.[೨೧]

ಹಿಂದೂ ಧರ್ಮದ ಆಚಾರ-ವಿಚಾರಗಳ ಅಡಿಯಲ್ಲಿಯೇ ಅವತರಿಸಿದ ಸಂಪ್ರದಾಯದವರೂ ಪ್ರತ್ಯೇಕ ಸಂಪ್ರದಾಯವನ್ನು ಕಾಯ್ದುಕೊಂಡಿರುವ ಈ ಸಮುದಾಯದ ವೈಶಿಷ್ಟ್ಯತೆಯನ್ನು ಸಾರುವ ಹಬ್ಬ ಇದಾಗಿದೆ. ತೀಜ್ ಹಬ್ಬವನ್ನು ಎಂದು ಯಾವಾಗ ಆರಂಭಿಸಿದರು ಎಂದು ನಿಖರವಾಗಿ ಹೇಳಲು ಸಾಧ್ಯವಿಲ್ಲವಾದರೂ, ಲಂಬಾಣಿಗಳ ಹಿರಿಯ ವ್ಯಕ್ತಿಗಳನ್ನು ವಿಚಾರಿಸಿದರೆ ಸಂಬಂಧ ಕುರಿತು ಐತಿಹ್ಯವಿದೆ. ಶ್ರೀ ಕೃಷ್ಣನು ಗೋಪಿಕಾ ಮಹಿಳೆಯರೊಡನೆ ಜಲಕ್ರೀಡೆಯಲ್ಲಿ ತೊಡಗಿದ್ದಾಗ ಗೋವುಗಳು ಮೇಯುತ್ತಾ ದೂರದ ಪ್ರದೇಶಗಳಿಗೆ ಹೋಗಿ ಅಲ್ಲಿ ಒಬ್ಬ ಬ್ರಾಹ್ಮಣನ ಗದ್ದೆಯನ್ನು ಪ್ರವೇಶಿಸಿ ಬೆಳೆಯನ್ನು ತಿಂದು ಹಾಕಿದವು. ಹೀಗಾಗಿ ಕೋಪಗೊಂಡ ಹೊಲದ ಮಾಲೀಕ ಗೋವುಗಳನ್ನು ದೂರಕ್ಕೆ ಹೊಡೆದು ಓಡಿಸಿದನು. ಇದರಿಂದ ನೋವನ್ನುಂಡ ಗೋವುಗಳು ಸಮೀಪದ ಅಡವಿಯಲ್ಲಿ ಕಣ್ಮರೆಯಾದವು. ಇತ್ತ ಶ್ರೀ ಕೃಷ್ಣನು ಕಣ್ಮರೆಯಾದ ಗೋವುಗಳನ್ನು ಹುಡುಕುತ್ತಾ ಹೊರಟ ಸಮಯದಲ್ಲಿ ಗೋವುಗಳು ವಿಸರ್ಜಿಸಿದ್ದ ಸಗಣಿಯಿಂದ ಗೋಧಿಯ ಮೊಳಕೆ ಗೋಚರಿಸಿದ್ದರಿಂದ ಅದರ ಆಧಾರದ ಮೇಲೆ ಗೋವುಗಳನ್ನು ಹುಡುಕುವಲ್ಲಿ ಯಶಸ್ವಿಯಾದನು. ಈ ಸಂತೋಷಕ್ಕಾಗಿ ಪರಮಾತ್ಮ ಸಗಣಿಯಲ್ಲಿ ಬೆಳೆದ ಪೈರನ್ನು ತಲೆಯ ಮೇಲೆ ಹೊತ್ತು ನರ್ತಿಸಿದನು. ಇದರ ಸ್ಮರಣೆಗಾಗಿ ತೀಜ್ ಆಚರಣೆ ರೂಢಿಯಲ್ಲಿದೆ ಎಂಬುದಾಗಿ ಹೇಳುತ್ತಾರೆ.[೨೨]

ಈ ಹಬ್ಬವು ಸುಮಾರು ಒಂಬತ್ತು ದಿನಗಳವರೆಗೆ ನಡೆಯುತ್ತದೆ. ಈ ಸಂದರ್ಭದಲ್ಲಿ ಗೀತೆ, ನೃತ್ಯ ಹಾಗೂ ವಿನೋದಗಳಿಂದ ಎಲ್ಲರೂ ಹರ್ಷಚಿತ್ತರಾಗಿರುತ್ತಾರೆ. ಹಬ್ಬವನ್ನು ಆಚರಿಸುವಾಗ ಕುಮಾರಿಯರು

ತಾಂಡಾದ ಪಂಚರ (ದೈವದವರ) ಅನುಮತಿಯನ್ನು ಪಡೆದುಕೊಂಡು ಕೊರಚರ ಮನೆಯಿಂದ ಐದು ಅಥವಾ ಹತ್ತು ಬಿದಿರಿನ ಸಣ್ಣ ಬುಟ್ಟಿಗಳನ್ನು ತೆಗೆದುಕೊಂಡು ಬಂದ ನಂತರ ಎಲ್ಲರೂ ಹಾಡುತ್ತಾ ಕುಣಿಯುತ್ತಾ ಹಳ್ಳದಿಂದ ಮರಳು ಆಡಿನ ಹಿಕ್ಕಿ ಮತ್ತು ನೀರು ಮುಂತಾದವುಗಳನ್ನೆಲ್ಲ ಸಂಗ್ರಹಿಸಿ ಬಳಿಕ ಅನುಭವಿ ಹಿರಿಯ (ಡಾವಿಸಾಣಿ) ಐದು ಅಥವಾ ಹತ್ತು ಮಹಿಳೆಯರಿಗೆ ಬುಟ್ಟಿಗಳನ್ನು ಕೊಟ್ಟು ನಾಟಿ ಮಾಡಿಸುತ್ತಾರೆ. ಮರಿಯಮ್ಮ, ಸೇವಾಲಾಲ್ ಅಥವಾ ಕೃಷ್ಣನ ಹೆಸರಿನಲ್ಲಿ ಆಯಾ ದೇವಸ್ಥಾನಗಳಲ್ಲಿ ಇಟ್ಟು ಪ್ರತಿದಿನ ಭಕ್ತಿಯಿಂದ ಬೆಳಗ್ಗೆ ಸಾಯಂಕಾಲ ಒಂಭತ್ತು ದಿನಗಳವರೆಗೆ ತಾಯಿ ಮಗುವನ್ನು ಸಲಹುವಂತೆ ಅವುಗಳನ್ನು ಸಾಕಿ ಬೆಳೆಸುತ್ತಾರೆ.

ಯುವತಿಯವರು ತಾವು ಜೋಪಾನವಾಗಿ ಬೆಳೆಸಿದ ಸಸಿಯನ್ನು ಕೊನೆಯ ದಿನ ಅಂದರೆ ಒಂಭತ್ತನೇ ದಿನ ಈ ಆಚರಣೆ ಪೂರ್ಣಗೊಳಿಸುತ್ತಾರೆ. ಯುವತಿಯರ ಬಂದು-ಬಳಗದವರು ಕೂಡ ಬಂದಿರುತ್ತಾರೆ. ಅಂದು ವಿಶೇಷ ಪೂಜಾ ಕಾರ್ಯಕ್ರಮ ನೆರವೇರಿಸಲಾಗುತ್ತದೆ. ನೆರೆದಂತಹ ಬಂಧು-ಬಳಗ, ಸಂಬಂಧಿಕರು ಕಾರ್ಯಕ್ರಮದಲ್ಲಿ ಭಾಗವಹಿಸಿ ತಮ್ಮ ಅನುಕೂಲಕ್ಕೆ ತಕ್ಕಂತೆ ಯುವತಿಯರಿಗೆ ದಕ್ಷಿಣೆಯನ್ನು ಬುಟ್ಟಿಯಲ್ಲಿ ಹಾಕುತ್ತಾರೆ. ಅಂದಿನ ದಿನ ಎಲ್ಲರೂ ಬಣ್ಣ-ಬಣ್ಣದ ಉಡುಪುಗಳನ್ನು ಧರಿಸಿಕೊಂಡು ಜೊತೆಗೆ ತಾವು ಸಾಕಿ ಬೆಳೆಸಿದ ಸಸಿಯ ಬುಟ್ಟಿಗಳನ್ನು ವಿವಿಧ ಬಣ್ಣದ ತುಂಡು ಬಟ್ಟೆಗಳಿಂದ ಅಲಂಕರಿಸುತ್ತಾರೆ. ಯುವತಿಯರು ಬುಟ್ಟಿಯನ್ನು ತಲೆಯ ಮೇಲೆ ಇಟ್ಟುಕೊಂಡು ಹೆಂಗಸರೆಲ್ಲಾ ಸುತ್ತುಗಟ್ಟಿ ಲಯಬದ್ಧವಾಗಿ ಹಾಡುವಾಗ ಶೃತಿಬದ್ಧ ತಂಬೂರಿಯ ಝೇಂಕಾರಕ್ಕಿಲ್ಲದ ಜೀವಕಳೆ ಲಾಲಿತ್ಯ, ಚೈತನ್ಯ, ಅಲ್ಲಿ ಮೈತಳೆಯುತ್ತದೆ.[44] ಹೀಗೆ ಹಾಡುತ್ತ ಕುಣಿಯುವಾಗ ತಮ್ಮನ್ನು ತಾವು ಮರೆಯುತ್ತಾರೆ. ಇವರು ಹಾಡುವ ರೀತಿಯೇ ಅಷ್ಟೊಂದು ವಿಶಿಷ್ಟವಾಗಿರುತ್ತದೆ.

ಅಂದು ಸಾಯಂಕಾಲ ಸುಮಾರು ಐದು ಗಂಟೆಗೆ ತಾಂಡಾದ ಎಲ್ಲ ಹಿರಿಯ ಮಹಿಳೆಯರು ಡಾವಿಸಾಣಿ ಮತ್ತು ಪುರುಷರು ಮರಿಯಮ್ಮ, ಸೇವಾಲಾಲ್ ದೇವಸ್ಥಾನದ ಮುಂದೆ ಸೇರುತ್ತಾರೆ. ತಾವು ಒಂಭತ್ತು ದಿನ ಸಾಕಿ ಬೆಳೆಸಿದ ತೀಜ್‌ನ್ನು ತಾಂಡಾದ ಹಿರಿಯ ಮಹಿಳೆಯರು ತೀಜ್ ಕಿತ್ತು ಮುಡಿಯುವುದು ಶುಭ ಸೂಚಕವೆಂದು ಭಾವಿಸಿ ಎಲ್ಲರೂ ಪುಟ್ಟಿಗೆ ಕೈಹಾಕಿ ಕೀಳುತ್ತಾರೆ. ಆಗ ಯುವತಿಯರು ಪರಸ್ಪರ ಅಪ್ಪಿಕೊಂಡು ದುಃಖ, ನಿವೇದನೆಯನ್ನು ವ್ಯಕ್ತಪಡಿಸುತ್ತಾರೆ. ನಂತರ ಕಿತ್ತಿರುವಂತಹ ತೀಜ್‌ನ್ನು ಅಲ್ಲಿ ಸೇರಿದಂತಹ ಎಲ್ಲ ಹಿರಿಯ ವ್ಯಕ್ತಿಗಳಿಗೆ ಸಾಲು ಸಾಲಿಗೆ ಹೋಗಿ ತೀಜ್ ಕೊಟ್ಟು ನಮಸ್ಕರಿಸುತ್ತಾರೆ. ಅಂದು ರಾತ್ರಿ ಎಂಟು ಗಂಟೆಗೆ ಆ ಬುಟ್ಟಿಗಳನ್ನು ತೆಗೆದುಕೊಂಡು ಹೋಗಿ ಹಳ್ಳಕ್ಕೆ ನೀರಿನಲ್ಲಿ ತೇಲಿಸಿ ಬರುತ್ತಾರೆ. ಕೊನೆಯಲ್ಲಿ ಮನೆಗೆ ಹಿಂತಿರುಗುವಾಗ ಯುವತಿಯರು ದುಃಖದ ಹಾಡುಗಳನ್ನು ಹಾಡುತ್ತಾ ಮನೆಗೆ ಬಂದು ಸೇರುತ್ತಾರೆ.

ಈ ಹಬ್ಬವನ್ನು ಸಮುದಾಯದ ಸ್ತ್ರೀ ಮತ್ತು ಪುರುಷರು ಜೊತೆಯಾಗಿ ಆಚರಿಸುತ್ತಾರೆ. ಅಲ್ಲದೇ ಬೇರೆ ಬೇರೆ ರಾಜ್ಯಗಳಲ್ಲಿ ವಿವಿಧ ಬಗೆಗಳಲ್ಲಿ ಹಬ್ಬವನ್ನು ಆಚರಿಸುತ್ತಾರೆ. ಇದಕ್ಕೆ ಪ್ರಾದೇಶಿಕ ವೈವಿಧ್ಯತೆಯೇ ಕಾರಣ ಎಂದು ಹೇಳಬಹುದು. ಈ ಸಮಯದಲ್ಲಿ ಯಾವುದೇ ಯುವಕ ಮತ್ತು ಯುವತಿಯರು ಪರಸ್ಪರ ಸರಸ ಸಲ್ಲಾಪದಲ್ಲಿ ತೊಡಗಬಹುದು. ಇದಕ್ಕೆ ಯಾರು ಅಡ್ಡಿಯನ್ನು ಮಾಡುವಂತಿರಲಿಲ್ಲ. ಇದನ್ನು ಯಾರೂ ಅಪಾರ್ಥ ಮಾಡಿಕೊಳ್ಳುತ್ತಿರಲಿಲ್ಲ. ಅಲ್ಲದೆ ಇವರೆಲ್ಲ ಮತ್ತೊಂದು ಬಗೆಯ ತೀಜ್ ಸಂಪ್ರದಾಯ ರೂಢಿಯಲ್ಲಿದ್ದು ಇದನ್ನು ಹೊಂಸಣೆ ತೀಜ್ ರೂಪದಲ್ಲಿ ಆಚರಿಸುತ್ತಿದ್ದರು. ಆದರೆ ಒಮ್ಮೆ ಅವಿವಾಹಿತ ಯುವಕ ಹಾಗೂ

ಯುವತಿಯರಿಬ್ಬರೂ ಕಾರೇ ಗಿಡದ ಅಡಿಯಲ್ಲಿ ಸಂಭೋಗಿಸಿದ ಪರಿಣಾಮವಾಗಿ ಯುವತಿಯು ಗರ್ಭವತಿಯಾದಳು. ಮುಂದೆ ಹಿರಿಯರು ಅವರನ್ನು ಅದೇ ಗಿಡದ ಸುತ್ತಲೂ ಏಳು ಬಾರಿ ಸುತ್ತಿಸಿ ವಿವಾಹ ಬಂಧನ ಕಾರ್ಯ ಮುಗಿಸಿದರು. ಹೀಗಾಗಿ ಈ ರೀತಿ ವಿವಾಹ ಪೂರ್ಣ ಅನೈತಿಕ ವ್ಯವಹಾರವನ್ನು ಕಂಡು ಹೊಂಸಣ್ ತೀಜ್‌ನ್ನು ನಿರ್ಬಂಧಿಸಲಾಯಿತು.[47]

ವಿದ್ವಾಂಸರು ಈ ವಿವರಣೆಯಿಂದ ಹಬ್ಬದ ಆಚರಣೆಯಲ್ಲಿ ಸ್ತ್ರೀ ಪುರುಷರಿಬ್ಬರಿಗೂ ಸಂಪೂರ್ಣ ಸ್ವತಂತ್ರವಿದ್ದು ನಂತರ ದಿನಗಳಲ್ಲಿ ಹಬ್ಬವನ್ನು ಕೇವಲ ಸ್ತ್ರೀಯರಿಗೆ ನಿರ್ದಿಷ್ಟಪಡಿಸಲಾಯಿತು ಎಂದು ತಿಳಿದು ಬರುತ್ತದೆ. ಒಂಭತ್ತನೇ ದಿನ ಉಪವಾಸವಿದ್ದು ಶಕ್ತಿ ದೇವತೆಯ ಗುಡಿಯ ಮುಂದೆ ಅಗ್ನಿಕುಂಡ ನಿರ್ಮಿಸಿ ಹೋಮ ಧೂಪಗಳೊಡನೆ ಕಂಬ ಸಹಿತ ಕಳಸ ಪೂಜೆಯಾದ ನಂತರ ಬೆಂಕಿಯನ್ನು ತುಳಿಯುತ್ತಾರೆ. ಗೋಧಿಯ ಪೈರನ್ನು ದೇವಿಗೆ ಅರ್ಪಿಸುತ್ತಾರೆ.[48] ಈ ರೀತಿಯ ಆಚರಣೆ ಈ ಸಮುದಾಯದಲ್ಲಿದೆ.

"ಶ್ರಾವಣ ಮತ್ತು ಭಾದ್ರಪದದ ಮಾಸದಲ್ಲಿ ಆಚರಿಸುವ ತೀಜ್‌ನ್ನು ಹೊಂಸಣ್ ತೀಜ್ ಎಂದು ಕರೆಯುತ್ತಾರೆ. ಅಂದರೆ ಆ ವರ್ಷದಲ್ಲಿ ಮದುವೆಯಾಗಿ ಹೋಗುವ ಹೆಣ್ಣುಮಕ್ಕಳು ತಮ್ಮ ಜೀವನದ ಕೊನೆಯ ತೀಜ್ ಹಬ್ಬವನ್ನು ಆಶಾಪೂರ್ವಕವಾಗಿ ಆಚರಿಸುತ್ತಾರೆ. ಈ ರೀತಿಯ ತೀಜ್‌ನ್ನು ಬುಟ್ಟಿಗಳಲ್ಲಿ ಹೆಣ್ಣುಮಕ್ಕಳು ತಮ್ಮ ಮನೆಯಲ್ಲಿಯೇ ನೀರುಹಾಕಿ ಒಂಭತ್ತು ದಿನ ಬೆಳೆಸುತ್ತಾರೆ. ಮನೆಯಲ್ಲಿ ಗೋಧಿ ಪೈರಿನ ಬುಟ್ಟಿಯಲ್ಲಿ ಹಣತೆಯನ್ನು ಹಚ್ಚುತ್ತಾರೆ. ಈ ಒಂದು ವಾರದಲ್ಲಿ ಹೆಣ್ಣುಮಕ್ಕಳು ಅನೇಕ ಹಾಡುಗಳನ್ನು ಹಾಡುತ್ತಾ ನರ್ತನ ಮಾಡುತ್ತಾ ಸಂಭ್ರಮಪಡುವರು.[49] ಈ ರೀತಿಯ ಆಚರಣೆಯು ಶಿವಮೊಗ್ಗ ಹಾಸನ ಹಾಗೂ ಬೆಂಗಳೂರು ನಗರಗಳ ಸುತ್ತ ಮುತ್ತಲಿನ ತಾಂಡಾಗಳಲ್ಲಿ ಕಾಣಬಹುದು.

ಗಣಗೋರ ಹಾಗೂ ಗಣಗೋರಿ ಎಂಬ ಮಣ್ಣಿನ ಮೂರ್ತಿಗಳನ್ನು ತಯಾರಿಸಲು ಸ್ತ್ರೀಯರು ಹಸಿ ಮಣ್ಣನ್ನು ತರಲು ಸಮೀಪದ ಕೆರೆ ಕಾಲುವೆಗಳಿಗೆ ಹೋಗುತ್ತಾರೆ. ಹೆಣ್ಣು ಗಣ ಗೋರಿಗೆ ಲಂಬಾಣಿ ಯುವತಿಯರ ವೇಷವನ್ನು ಗಂಡು ಗಣಗೋರನಿಗೆ ಪುರುಷವೇಶವನ್ನು ತೊಡಿಸುತ್ತಾರೆ. ಮೂರ್ತಿಯನ್ನು ವಿಸರ್ಜಿಸಲು ತಲೆ ಮೇಲೆ ಹೊತ್ತು ಸಮೀಪದ ಕೆರೆ ಹಳ್ಳ ಮುಂತಾದೆಡೆಗೆ ಹೋಗುತ್ತಾರೆ.[50] ಈ ರೀತಿಯ ಆಚರಣೆಯನ್ನು ಗುಲ್ಬರ್ಗಾ, ಸೇಡಂ, ಧಾರವಾಡ, ವಿಜಾಪುರ, ಬಳ್ಳಾರಿ ಮುಂತಾದ ಬಯಲುಸೀಮೆಯ ತಾಂಡಾಗಳಲ್ಲಿ ಕಾಣಬಹುದು.

ಒಟ್ಟಾರೆಯಾಗಿ ಇಡೀ ಆಚರಣೆ ವೈಶಿಷ್ಟ್ಯ ರೀತಿಯಲ್ಲಿ ಹಬ್ಬವು ಪ್ರಾದೇಶಿಕವಾಗಿ ವಿವಿಧತೆಯಿಂದ ಕೂಡಿದ್ದರೂ ಆಚರಣೆಯ ಮೂಲ ಉದ್ದೇಶ ಬಹುತೇಕ ಸಾಮಾನ್ಯತೆಯಿಂದ ಕೂಡಿದೆ. ತೀಜ್ ಕಿತ್ತು ಕೊಡುವುದರಿಂದ ಎಂತಹ ದ್ವೇಷವಿದ್ದರೂ ಈ ಸಂದರ್ಭದಲ್ಲಿ ಎಲ್ಲರೂ ಒಂದಾಗುತ್ತಾರೆ. ಇದು ಒಂದು ರೀತಿಯ ಒಗ್ಗಟ್ಟಿನ ಸಂಕೇತವೆಂದು ವಕ್ತೃಗಳಿಂದ ಮಾಹಿತಿ ದೊರೆತಿದೆ.

**೬.೩.೪. ಸೀತ್ಲಾ**

ಲಂಬಾಣಿಗರು ಸಾಮಾನ್ಯವಾಗಿ ಪ್ರೇತ, ಭೂತ, ಮಾಟ-ಮಂತ್ರಗಳಿಗೆ ಹೆಚ್ಚಾಗಿ ಭಯಪಡುವ ಇವರು ತಾಂಡಾದಲ್ಲಿ ಜ್ವರ, ಗಂಟಲು ಬೇನೆ, ಕಾಲರಾ, ಪ್ಲೇಗ್ ಇತ್ಯಾದಿಗಳಿಗೆ ಶಕ್ತಿದೇವತೆಗಳೇ ಕಾರಣವೆಂದು ಈ

ದೇವತೆಗಳಿಗೆ ತೃಪ್ತಿಪಡಿಸಿದರೆ ಈ ರೋಗಗಳು ಬರುವುದಿಲ್ಲವೆಂದು ನಂಬುತ್ತಾರೆ. ಅದಕ್ಕಾಗಿ ಕುರಿ ಅಥವಾ ಕೋಳಿಯನ್ನು ಗಾಳಿ ದೇವತೆ (ವಾಳ್ ವಂಗೋಳೇರ್ ಭವಾನಿ)ಎನ್ನುವ ದೇವತೆಗೆ ಬಲಿಯನ್ನು ಕೊಟ್ಟು ಪೂಜೆ ಮಾಡುತ್ತಾರೆ. ಈ ದೇವತೆಗಳ ಪೂಜೆಯನ್ನು ತಮ್ಮ ಭಾಷೆಯಲ್ಲಿ "ಸೀತ್ಲಾ" ಎನ್ನುವರು.

ಲಂಬಾಣಿ ಸಮುದಾಯ ಪ್ರತಿವರ್ಷವೂ ಜೂನ್ ತಿಂಗಳಲ್ಲಿ ಬರುವ ಆಶಾಡಮಾಸದ ಯಾವುದಾದರೂ ಮಂಗಳವಾರದಂದು ಆಚರಿಸುತ್ತಾರೆ. ತಾಂಡಾದ ಹೊರಗೆ ಒಂದು ಬೇವಿನ ಮರದ ಕೆಳಗೆ ಒಂಭತ್ತು ಸಣ್ಣ ಸಣ್ಣ ಕಲ್ಲುಗಳಿಗೆ ವಿಭೂತಿ, ಕುಂಕುಮ ಹಚ್ಚಿ ಬೇವಿನ ತೊಪ್ಪಲು ಮತ್ತು ಎಕ್ಕೆ ತೊಪ್ಪಲುಗಳಿಂದ ಮಂಟಪಕಟ್ಟಿ, ಹಸಿರು ತೋರಣಗಳಿಂದ ಶೃಂಗಾರ ಮಾಡಿ ದೇವರನ್ನು ತಾತ್ಕಾಲಿಕವಾಗಿ ಪ್ರತಿಷ್ಠಾಪಿಸುತ್ತಾರೆ. ಈ ಸಮಯ ತಾಂಡಾದ ಮುಖ್ಯಸ್ಥನ ಪತ್ನಿ (ನಾಯಕಣ್) ಮುಂದಾಳುತ್ವದಲ್ಲಿ ಸ್ತ್ರೀಯರು ಹಾಡುತ್ತಾ ತೆಂಗಿನಕಾಯಿ, ಕರ್ಪೂರ, ಉದ್ಬತ್ತಿ ಹಾಗೂ ನವಧಾನ್ಯಗಳ ಗುಗ್ಗರಿಯನ್ನು ತಟ್ಟೆಯಲ್ಲಿ ಹಾಕಿಕೊಂಡು ಕೊಡದಲ್ಲಿ ನೀರು ತುಂಬಿಕೊಂಡು ಚಪ್ಪರದ ಬಳಿ ಬಂದು ಗುಗ್ಗರಿಯನ್ನು ದೇವರಿಗೆ ನೈವೇದ್ಯ ಮಾಡಿ ಅಲ್ಲಿ ಸೇರಿದ್ದ ಮಕ್ಕಳಿಗೆ ಪ್ರಸಾದ ಹಂಚಿ ಹಿಂತಿರುಗುತ್ತಾರೆ. ಮನೆಯಿಂದ ತಂದಿದ್ದ ಗುಗ್ಗರಿ ಮತ್ತು ಉಳಿದ ಇನ್ನಿತರೆ ಪದಾರ್ಥಗಳನ್ನು ಹಿಂತಿರುಗಿ ತೆಗೆದುಕೊಂಡು ಹೋಗುವುದಿಲ್ಲ. ಒಂದು ವೇಳೆಗೆ ಈ ಪದಾರ್ಥಗಳನ್ನು ಹಿಂದಕ್ಕೆ ತೆಗೆದುಕೊಂಡು ಹೋದರೆ ಪ್ರೇತ, ಭೂತಗಳು ಮನೆಗೆ ಪ್ರವೇಶಿಸುತ್ತವೆ ಎಂಬ ನಂಬಿಕೆ ಇವರಲ್ಲಿದೆ.[೨೨]

ಮನೆಯಲ್ಲಿ ಮಕ್ಕಳಿಗಾಗಿ ಹರಿಕೆಗಳಿಗನುಗುಣವಾಗಿ ಕೆಲವರು ಕೋಳಿ ಬಲಿಯನ್ನು ನೀಡುತ್ತಾರೆ. ತಾಂಡಾದ ನಾಯಕನ ಮುಖಂಡತ್ವದಲ್ಲಿ ಪ್ರತಿಮನೆಯಿಂದ ಹಣವನ್ನು ಸಂಗ್ರಹಿಸಿ ೧೦ ರಿಂದ ೧೫ ಕುರಿಯನ್ನು ಖರೀದಿಸಿ ಬಲಿಕೊಟ್ಟು, ಅಡುಗೆ ಮಾಡಿ ದೇವರಿಗೆ ನೈವೇದ್ಯವನ್ನಿಟ್ಟು ಪೂಜೆ ಸಲ್ಲಿಸಿ ಊಟ ಮಾಡಿ ಹಿಂತಿರುಗುತ್ತಾರೆ. ಬಲಿಕೊಟ್ಟ ಯಾವುದೇ ಮಾಂಸವನ್ನು ಮನೆಗೆ ತರುವುದಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ಕುರಿಯನ್ನು ಕತ್ತರಿಸಿ ತಾಂಡಾದ ಪ್ರತಿಯೊಂದು ಮನೆಗೆ ಪಾಲುಗಳನ್ನು ಕಳುಹಿಸುತ್ತಾರೆ. ಈ ಹಬ್ಬದಲ್ಲಿ ಯಾವುದೇ ಜಾಗರಣೆ, ಕುಣಿತ, ನೃತ್ಯಗಳಿಗೆ ಅವಕಾಶವಿರುವುದಿಲ್ಲ. ದೇವರುಗಳನ್ನು ಭಯ ಭಕ್ತಿಗಳಿಂದ ಪೂಜಿಸಿ ತಮಗೆ ಕೆಮ್ಮು, ಜ್ವರ, ಭೇದಿ, ಸಿಡುಬು ಇತರೆ ರೋಗರುಜಿನಗಳು ಬಾರದಂತೆ ಶಕ್ತಿದೇವತೆಯನ್ನು ಬೇಡಿಕೊಳ್ಳುತ್ತಾರೆ.

ಲಂಬಾಣಿ ಸಮುದಾಯದವರ ಸೀತ್ಲಾ ಪೂಜೆಯ ವಿಧಿ ವಿಧಾನಗಳಂತೆಯೇ ಹಕ್ಕಿ-ಪಿಕ್ಕಿ ಸಮುದಾಯದವರು ಮುಮ್ಮಾಯಿ ಎಂಬ ಪೂಜೆ ಮಾಡುವುದನ್ನು ನೋಡಬಹುದಾಗಿದೆ.[೨೩] ಒಟ್ಟಾರೆ ಹೇಳುವುದಾದರೆ ಸಮುದಾಯದಲ್ಲಿ ಹಬ್ಬ ಹರಿದಿನಗಳನ್ನು ವಿಜೃಂಭಣೆಯಿಂದ ಹರ್ಷಚಿತ್ತರಾಗಿ ಆಚರಿಸುತ್ತಾರೆ.

**೬.೩.೫. ದಸರಾ**

ಭಾರತದ ನಾಡಹಬ್ಬವೆಂದು ಹೆಸರುವಾಸಿಯಾಗಿರುವ ದಸರಾ ಹಬ್ಬಕ್ಕೆ ತನ್ನದೇ ಆದ ವೈಶಿಷ್ಟ್ಯವಿದೆ. ದೇಶ-ವಿದೇಶಿಯರ ಕಣ್ಮನ ಸೆಳೆಯುವ ಮೈಸೂರು ದಸರಾ ಕನ್ನಡಿಗರ ನಾಡಹಬ್ಬವಾಗಿದೆ ಲಂಬಾಣಿ ಸಮುದಾಯ ಈ ಹಬ್ಬವನ್ನು ಆಚರಿಸುವಲ್ಲಿ ಹೊರತಾಗಿಲ್ಲ. ವಿಜಯನಗರದ ಕಾಲದಿಂದ ಪ್ರಾರಂಭವಾದ ನವರಾತ್ರಿ ಉತ್ಸವವು, ಮೈಸೂರು ಅರಸರ ಕಾಲದಲ್ಲಿ ದಸರಾ ಹಬ್ಬ ಎಂಬುದಾಗಿ ಖ್ಯಾತಿಯನ್ನು ಪಡೆದುಕೊಂಡಿದೆ. ಲಂಬಾಣಿಗರು

ಅವರದೇ ಆದ ರೀತಿಯಲ್ಲಿ ಅತ್ಯಂತ ಸಡಗರ ಸಂಭ್ರಮದಿಂದ ಅಶ್ವಿಜಮಾಸ, ಶುಕ್ಲಪಕ್ಷ ನವಮಿಯಂದು ತಾಂಡಾಕ್ಕೆ ಸಮೃದ್ಧಿಯಾಗಿ ಬೆಳೆಯಾದ ವರ್ಷದಲ್ಲಿ ತಾಂಡಾದ ನಾಯಕ (ಮುಖ್ಯಸ್ಥ) ಕಾರಭಾರಿ (ಕಾರ್ಯದರ್ಶಿ) ಡಾವೊ (ಹಿರಿಯ) ತೀರ್ಮಾನಗಳಿಗೆ ಬದ್ಧವಾಗಿ ಈ ಹಬ್ಬವನ್ನು ಎಲ್ಲರೂ ಸೇರಿ ಆಚರಿಸುತ್ತಾರೆ.

ಲಂಬಾಣಿಗರು 'ದಸರಾವೋ' ಎನ್ನುವರು. ಈ ಹಬ್ಬದಲ್ಲಿ ಬೇರೆ ಬೇರೆ ಗೋತ್ರದವರು ದುರ್ಗಾಭವಾನಿ, ತುಳಜಾಭವಾನಿ, ವಾಕ್ಮಾಯಿ, ಕಂಕಾಳಿ, ಭೈರವಿ ಎಂದು ವಿವಿಧ ಹೆಸರುಗಳಿಂದ ಶಕ್ತಿದೇವತೆಯನ್ನು ಪೂಜೆ ಮಾಡುತ್ತಾರೆ. ಸಾಮಾನ್ಯವಾಗಿ ಈ ದೇವಿಯನ್ನು ಬೆಳ್ಳಿಯ ತಗಡಿನಿಂದ ಮಾಡಿಸಿ ಸಣ್ಣ ಛತ್ರಿ ಇತ್ಯಾದಿಗಳಿಂದ ಅಲಂಕರಿಸಿ ಒಂದು ಪೆಟ್ಟಿಗೆಯಲ್ಲಿ ಇಟ್ಟಿರುತ್ತಾರೆ. ದಸರಾ ಹಬ್ಬದ ಮೊದಲನೆಯ ದಿನ ಈ ವಿಗ್ರಹಗಳನ್ನು ಅಕ್ಕಸಾಲಿಗರಿಗೆ ಶುದ್ಧಮಾಡಿ ಮೆರಗು ಕೊಡಲು ಕೊಡುತ್ತಾರೆ. ಇವುಗಳನ್ನು ತರಲು ಹೆಂಗಸರು ಗಂಡಸರು ನಗಾರಿ, ಕಂಚಿನ ಗಂಗಾಳ ಇತ್ಯಾದಿಗಳನ್ನು ಬಾರಿಸುತ್ತಾ, ಹಾಡುತ್ತಾ ಅಕ್ಕಸಾಲಿಗರ ಮನೆಗೆ ಹೋಗಿ ಅಲ್ಲಿಂದ ಹೆಣ್ಣು ಮಗಳ ತಲೆಯ ಮೇಲೆ ತಟ್ಟೆಯಲ್ಲಿ ಈ ವಿಗ್ರಹವನ್ನಿಟ್ಟು ಮುಟ್ಟಿಕೊಂಡು ಪುನಃ ಹಾಡುತ್ತಾ ವಾದ್ಯಗಳೊಂದಿಗೆ ತಮ್ಮ ಮನೆಗೆ ತಂದು ಜಗುಲಿಯ ಮೇಲೆ ಕಟ್ಟಿರುವ ಚಪ್ಪರದಲ್ಲಿಟ್ಟ ಹೊಸಬಟ್ಟೆ ಹೂ, ಹಣ್ಣು, ಕಾಯಿ ದೀಪ ದೂಪಗಳಿಂದ ಪೂಜಿಸುತ್ತಾರೆ. ನಂತರ ಕೆಲವು ಗೋತ್ರದವರು ತಮ್ಮ ಕುಲದೇವತೆಗಳಿಗೆ ಗಂಡು ಮಕ್ಕಳ ತಲೆಕೂದಲನ್ನು ಅರ್ಪಿಸುತ್ತಾರೆ. ಬಳಿಕ ತಾಂಡಾದ ದೇವರಾದ ಮರಿಯಮ್ಮನಿಗೆ ಕುರಿ ಬಲಿ ನೀಡಿ ನಂತರವೇ ತಮ್ಮ ಕುಲ ದೇವರುಗಳಿಗೆ ತಮ್ಮ ಶಕ್ತ್ಯಾನುಸಾರ ಕುರಿಬಲಿಯನ್ನು ಕೊಡುತ್ತಾರೆ. ಕುಲದೇವತೆಗಳಿಗಿಂತ ಮರಿಯಮ್ಮ ದೇವಿ ಹಿರಿಯಳೆಂಬುದನ್ನು ಗಮನದಲ್ಲಿಟ್ಟು ಈ ನಿಯಮವನ್ನು ಪಾಲಿಸಿರಬಹುದು."[v]

ಇವರು ಪ್ರಾಣಿಯ ಬಲಿ (ಕುರಿಯನ್ನು ಕತ್ತರಿಸಿ) ನಂತರ ಶಕ್ತಿ ದೇವತೆಗಳಿಗೆ ಕಾಯಿ, ಹೂ, ಕರ್ಪೂರ, ಅಗರಬತ್ತಿ ಹಾಗೂ 'ಸಳೋಯಿ', 'ಪೀಪೀಬೋಟಿ', 'ಸೂಳಾರಿಬೋಟಿ', 'ಭೂಂಜೋ', ಕಳಜೋ, ಗುಂಡಿವಾಳೋ ಹಡಕ, ಪೆರೇರೋ ಹಡಕ ಇನ್ನು ಮುಂತಾದವುಗಳನ್ನು ಎಡೆಯಿಟ್ಟು ದೇವರನ್ನು ಹೊಗಳುವ ಗೀತೆ ಮುಖೇನ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ.

''ಉಧೋ ಉಧೋ ಮಾರಿ ಮಾತಾ
ತೋನ ದೀರ್ಘದಂಡ ಮಾರಿ ಮಾತಾ
ಸುರಾಖೇವಡೇರಿ ಜಗತೆ ಜವಾರೇರಿ
ಸೇವಾಲಾಲ್ ಮಲಕೇರಿ ಮಾತಾ
ಚೀನಪಟಣ ಕಿಲಿವಾಳೀ ಪಾಟೇರಿ ಸಾಡೇವಾಳಿ
ಹಜಾರ ಹಾತೇವಾಳಿ ಜನತಾರ ಮಾರಿಯಾಡಿ
ಈ ಬಕರಾದಿನೇಜ ಕೋ ತಾರೆ ದೇವಳೇನ ಲೇಜಾನ
ರಜಮಾನ ಕರನು ಅನ್‌ಧನ್‌ದೇನು ಲಾವೂ ಲಸ್ಕರದೇನು

ವಾಟೆ ಘಾಟೇರಿ ಸಾಯಿವೇಣು ನಂಗರೆ ಸಾಯಿವೇನು ಜೀವಜನಗಾನೀರ ಸಾಯಿವೇನು ಬಾಲ ಬಚ್ಚಾರ ಸಾಯಿವೇನು ಕಿಡಿಮುಂಗಾರಿಕ ಸಾಯಿವೇನು ಹರಘುಡಿ ಹರದೇಮರೇನು ಸೂತೇರ ಸಪನೇಮರೇನು ಆಯಾ ವಗತ್ ದೊರಕರನು ಸಕೇರ ಪಾಯರಿ ಘಾಲನು ಪಂಚಭಳನ್ ಹಾತ್ ಜೋಡನ ಅರದಾಸ್ ಕರಾಜೇನ ವರದಾನ್ ರಕಾಡನು ವರ್ಷದಾಡೇರ ಕಸಳರಕಾಡನು ತೋನ ದೀರ್ಘದಂಡ ಮಾರಿ ಮಾತಾ ಜೈ ಬೋಲ್ ಮರಿಯಮ್ಮ ಮಾತಾ ಕಿ ಜೈ"

ಉಧೋ ಉಧೋ ಜಗದಂಬಾ ಮಾತಾಯೀ ನಿನಗೆ ದೀರ್ಘದ ನಮಸ್ಕಾರಗಳು. ಶ್ರೀ ಸೇವಾಲಾಲ್‌ನಿಂದ ಪೂಜಿತಳೂ, ಲೋಕಪಾಲಿನಿಯೂ ಆದ ಮಾತೆಯೇ ನಿನಗೆ ನಮಸ್ಕಾರ. ಬಂಗಾರದ ಪಟ್ಟದವಳೂ, ಜರಿತಾರಿ ಸೀರೆ ಧರಿಸಿರುವವಳೂ, ಸಾವಿರ ಕೈಗಳನ್ನು ಹೊಂದಿದವಳೂ ಆದ ಮಾತೆಯೇ ನಿನಗೆ ನಮಸ್ಕಾರಗಳು. ನಾವು ಕೊಟ್ಟಿರುವ ಈ ಬಲಿ ಪೂಜೆಯನ್ನು ಸ್ವೀಕರಿಸಿ ನಮ್ಮ ಸಮಸ್ತ ಸಂಪತ್ತನ್ನೆಲ್ಲ ಉಳಿಸಿ ಬೆಳೆಸು ತಾಯಿಯೇ ನಿನಗೆ ನಮಸ್ಕಾರಗಳು.

ಇದೇ ಸಂದರ್ಭದಲ್ಲಿ ಶ್ರೀ ಸೇವಾಲಾಲ್‌ರನ್ನು ಭಕ್ತಿಯಿಂದ 'ಮೀಠಕಡಾಯಿ' ಎಂಬ ಸಿಹಿ ನೈವೇದ್ಯ ಮಾಡಿ ಪೂಜೆ ಸಲ್ಲಿಸುತ್ತಾರೆ. ಶ್ರೀ ಸೇವಾಭಾಯರು ಕುರಿಬಲಿಯನ್ನು ಸ್ವೀಕರಿಸುವುದಿಲ್ಲ. ಸಿಹಿ ಅಡುಗೆಯಿಂದ ತನ್ನನ್ನು ಪೂಜಿಸುವಂತೆ ಲಂಬಾಣಿಗರಿಗೆ ಅಪ್ಪಣೆ ಮಾಡಿದ್ದಾನೆಂಬ ನಂಬಿಕೆಯೇ ಇದಕ್ಕೆ ಕಾರಣ.

ರಾತ್ರಿ ಊಟವಾದ ಬಳಿಕ ಸೂರ್ಯೋದಯಕ್ಕೆ ಮುನ್ನ ಆಗುವ ಅಂತಿಮ ಮಂಗಳಾರತಿ ಆದ ಮೇಲೆ ಪ್ರಸಾದವನ್ನು ತಪ್ಪದೇ ಕೆಲವು ನಿಯಮಗಳಿಗನುಗುಣವಾಗಿ ವಿತರಿಸುತ್ತಾರೆ. ಹಬ್ಬಕ್ಕೆ ಆಗಮಿಸಿದ ಬೇರೆ ಬೇರೆ ತಾಂಡಾಗಳ ಪ್ರತಿನಿಧಿಗಳಿದ್ದರೆ ಅವರಿಗೆ ಒಂದು 'ಹಡ್ಕ' (ಎಲುಬಿನ ತುಂಡು)ವನ್ನು ಕೊಡುತ್ತಾರೆ. ಹಾಗೂ ತಮ್ಮ ತಾಂಡಾದ ಪ್ರಮುಖರಿಗೂ ಒಂದೊಂದು ಹಡ್ಕವನ್ನು ಕೊಡುತ್ತಾರೆ. ಇದು ಬೇರೆ ಬೇರೆ ತಾಂಡಾದಿಂದ ಬಂದ ಅತಿಥಿಗಳನ್ನು ಹಾಗೂ ಹಿರಿಯರನ್ನು ಗೌರವ ಕೊಡುವ ವಿಧಾನವಾಗಿದೆ. ಇದು ತಾಂಡಾ ತಾಂಡಾಗಳ ಮಧ್ಯ ಸೌಹಾರ್ದ ವಾತಾವರಣ ಮೂಡಿಸಿ ಒಗ್ಗಟ್ಟನ್ನು ಮೂಡಿಸುತ್ತದೆ. ಈ ರೀತಿಯಲ್ಲಿ ವಿಜೃಂಭಣೆಯಿಂದ ದಸರಾ ಹಬ್ಬವನ್ನು ಆಚರಿಸುತ್ತಾರೆ.

**೬.೩.೬ ಜಾತ್ರೆ**

ಪ್ರತಿನಿತ್ಯವೂ ಬೇಸಾಯದಲ್ಲಿ ತೊಡಗಿ ನಿರಂತರ ಶ್ರಮವಹಿಸಿ ದುಡಿಯುವ, ಕೂಲಿ ಮಾಡುವ ಲಂಬಾಣಿಗರು ಬದುಕಿನ ಸಂಕೋಲೆಯಿಂದ ಸ್ವಲ್ಪ ವಿರಾಮ ಪಡೆದು ನೆಮ್ಮದಿಯಿಂದ ಇರಲು ಹಬ್ಬ, ತೇರು, ಉತ್ಸವ, ಜಾತ್ರೆ ಮೊದಲಾದ ಸಾಮೂಹಿಕ ಆಚರಣೆಗಳಲ್ಲಿ ತೊಡಗಿಕೊಳ್ಳುತ್ತಾರೆ. ಈ ಆಚರಣೆಗಳಲ್ಲೆಲ್ಲಾ ಸಂತೋಷದ ಜೀವನವನ್ನು ಕಾಣಬಹುದು. ಇವರ ಅನೇಕ ಕೆಲಸಗಳಿಗೆ ಜಾತ್ರೆಯು ಬಂದು ಬಿಡುವು. ಈ ಸಂದರ್ಭದಲ್ಲಿ ಹೊಸ ಬಟ್ಟೆಯನ್ನು ಖರೀದಿ ಮಾಡುವುದು, ಮನೆಗಳಿಗೆ ಬೇಕಾದ ವಿವಿಧ ವಸ್ತುಗಳ ಸಂಗ್ರಹ ಇನ್ನು ಮುಂತಾದ ಕೆಲಸಗಳನ್ನು ಸಂಭ್ರಮದಿಂದ ನಡೆಸುತ್ತಾರೆ.

ಹಬ್ಬ-ಹರಿದಿನ ಹಾಗೂ ಜಾತ್ರೆ-ಉತ್ಸವಗಳು ಸಾಮಾಜಿಕ ಭಿನ್ನ-ಭಿನ್ನವಾದರೂ ಜನಪದರು ಸಾಮಾನ್ಯವಾಗಿ ಇವುಗಳಲ್ಲಿ ಯಾವ ವ್ಯತ್ಯಾಸಗಳನ್ನು ಕಾಣುವುದಿಲ್ಲ. ಕಾರಣ ಜನಪದರು ಯಾವುದೇ ಹಬ್ಬವನ್ನು ಆಚರಿಸುವಾಗ ಅದನ್ನು ವೈಯಕ್ತಿಕವಾಗಿಟ್ಟುಕೊಳ್ಳದೇ ಸಾಮೂಹಿಕವಾಗಿ ಆಚರಿಸುವುದರ ಮೂಲಕ ಹಬ್ಬವನ್ನು ಜಾತ್ರೆ ಅಥವಾ ಯಾತ್ರೆಯನ್ನಾಗಿ ಪರಿವರ್ತಿಸುತ್ತಾರೆ. ಜಾತ್ರೆ ಎನ್ನುವುದು ಒಂದು ಸಾಮೂಹಿಕ ಕ್ರಿಯೆ. ಇದು ಕೇವಲ ಆ ಹಳ್ಳಿಗೆ ಮಾತ್ರ ಸೀಮಿತವಾಗಿರದೆ ಸುತ್ತಲಿನ ಬಹುದೂರದ ಹಳ್ಳಿಗಳಿಂದಲೂ ಜನರು ಬಂದು ಸೇರುತ್ತಾರೆ. ಇಲ್ಲಿ ಮುಖ್ಯವಾಗಿ ಲಂಬಾಣಿ ಸಮುದಾಯದವರು ಊರಿನ ಪಕ್ಕದಲ್ಲಿ ನಡೆಯುವಂತಹ ಜಾತ್ರೆಗಳಲ್ಲಿ ಭಾಗವಹಿಸುತ್ತಾರೆ.

ತಾವು ವಾಸಿಸಿರುವ ಪಕ್ಕದ ಪ್ರದೇಶದಲ್ಲಿ ಯಾವುದೇ ಜಾತ್ರೆ ಉತ್ಸವಗಳೇ ನಡೆಯಲಿ ತಪ್ಪದೇ ಹೋಗುತ್ತಾರೆ. ತಾವು ವಾಸಿಸುವ ತಾಂಡಗಳಲ್ಲಿ ವರ್ಷಕ್ಕೊಂದು ಸಾರಿ ಒಂದಿಲ್ಲೊಂದು ದೇವಸ್ಥಾನಗಳ ದೇವರ ಜಾತ್ರೆ ಸಾಮೂಹಿಕವಾಗಿ ನಡೆಯುತ್ತದೆ. ಇವರ ತಾಂಡಗಳಲ್ಲಿ ಸಾಮಾನ್ಯವಾಗಿ ಮರಿಯಮ್ಮ, ಹಾಗೂ ಶ್ರೀ ಸೇವಾಲಾಲ್ ದೇವಸ್ಥಾನಗಳು ಇರುತ್ತದೆ. ಇವರು ಎಲ್ಲೇ ವಾಸಿಸಲಿ ದೇವರುಗಳನ್ನು ಮರೆಯುವುದಿಲ್ಲ. ವರ್ಷಕ್ಕೊಂದು ಬಾರಿ ಅವರಿಗೆ ಅನುಕೂಲವಾದ ಸಂದರ್ಭಗಳಲ್ಲಿ ದೇವರ ಜಾತ್ರೆಯನ್ನು ಅತ್ಯಂತ ಉತ್ಸಾಹದಿಂದ ವಿಜೃಂಭಣೆಯಿಂದ ಆಚರಿಸುತ್ತಾರೆ. ಭಾರತದಲ್ಲಿ ವಾಸಿರುವ ಲಂಬಾಣಿಗರ ತಾಂಡಗಳ ಯಾವ ಜಾತ್ರೆಗಳಲ್ಲಿಯೂ ರಥೋತ್ಸವ ಕಂಡುಬರುವುದಿಲ್ಲ. ಆದರೆ ಪಲ್ಲಕ್ಕಿಯಲ್ಲಿ ದೇವರುನ್ನು ಕೊಂಡೊಯ್ಯುವುದು ಮಾತ್ರ ರೂಢಿಯಲ್ಲಿದೆ. ಆದರೆ ನಾಗರಿಕತೆಯ ಪ್ರಭಾವದಿಂದ ಪ್ರಸ್ತುತ ಸಂದರ್ಭದಲ್ಲಿ ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲೂಕಿನ ಕೋಗಳಿ ತಾಂಡದಲ್ಲಿ ದಿನಾಂಕ ೨೯.೩.೨೦೦೪ರಂದು ಶ್ರೀ ಸೇವಾಲಾಲ್ ರಥೋತ್ಸವ ನಡೆಯಿತು. ಈ ರಥೋತ್ಸವಕ್ಕೆ ಬಳ್ಳಾರಿ ಜಿಲ್ಲೆಯ ಮೂಲೆಮೂಲೆಯಿಂದ ಜನರು ತಂಡೋಪತಂಡವಾಗಿ ಬಂದು ಜಾತ್ರೆಯಲ್ಲಿ ಪಾಲ್ಗೊಂಡರು. ಇದು ಭಾರತದ ತಾಂಡಗಳಲ್ಲಿ ಪ್ರಪ್ರಥಮವಾಗಿ ನಡೆದಿರುವಂತಹ ರಥೋತ್ಸವ ಎಂದು ಹೇಳಿದರೆ ತಪ್ಪಾಗಲಾರದು.

### ೬.೩.೬. ಹಿರಿಯರ ಆರಾಧನೆಯ ವಿಧಿವಿಧಾನಗಳು

ಲಂಬಾಣಿ ಸಮುದಾಯದಲ್ಲಿ ಮುಖ್ಯವಾಗಿ ಮೂರು ಬಗೆಯ ಹಿರಿಯರ ಆರಾಧನೆಗಳನ್ನು ಕಾಣಬಹುದು. ಹಿರಿಯರ ಆರಾಧನೆ. ಪ್ರಾಣಬಲಿ ಆರಾಧನೆ, ಕುಂಡ ಆರಾಧನೆ.

#### ಅ. ಹಿರಿಯರ ಆರಾಧನೆ :

ಕುಟುಂಬದಲ್ಲಿ ತೀರಿಹೋದ ಹಿರಿಯರ ತಿಥಿ ಆಚರಣೆಯನ್ನು ಹಿರಿಯರ ಹಬ್ಬ ಅಥವಾ ಹಿರಿಯರ ಆರಾಧನೆ ಎಂದು ಕರೆಯಲಾಗಿದೆ. ಮರಣ ಹೊಂದಿರುವ ಹಿರಿಯರು ತಮ್ಮ ವಂಶಜರ ಸುಖ ಆರೋಗ್ಯದ ಬಗ್ಗೆ ವಿಶೇಷ ಆಸಕ್ತಿ ಹೊಂದಿರುತ್ತಾರಲ್ಲದೆ, ಅವರನ್ನು ಶಾಂತಿಗೊಳಿಸಿದರೆ ನಮಗೆ ಒಳ್ಳೆಯದಾಗುವುದೆಂಬ ನಂಬಿಕೆ ಲಂಬಾಣಿಗರಲ್ಲಿದೆ. ಲಂಬಾಣಿಗರು 'ಘರ್ ಘರೇರ್ ಪೂಜಾ' ಎಂದು ಕರೆಯುವ ಹಿರಿಯ ಆರಾಧನೆಯನ್ನು ಮಾಡುತ್ತಾರೆ. ಅಂದರೆ ಪ್ರತಿಮನೆಯವರು ತಮ್ಮ ತಮ್ಮ ವಂಶಸ್ಥರವರು ಮೃತಹೊಂದಿದಾಗ ಪ್ರತ್ಯೇಕವಾಗಿ ಆರಾಧಿಸುವ ಒಂದು ವಿಧಾನವಾಗಿದೆ. ಹಿರಿಯರ ಹಬ್ಬವನ್ನು ದೀಪಾವಳಿ ಹಬ್ಬ, ಯುಗಾದಿ ಹಬ್ಬದಂದು

ಆಚರಿಸುತ್ತಾರೆ. ಕೆಲವೇಳೆ ಬೇರೆ ದಿನಗಳಂದು ಆಚರಿಸುವುದೂ ಕಂಡುಬರುತ್ತದೆ. ಈ ಹಬ್ಬದ ಆಚರಣೆಯ ಪೂರ್ವದಿನ ಮನೆಯನ್ನು ಶುಚಿಗೊಳಿಸಲಾಗುತ್ತದೆ. ಪ್ರತಿಯೊಬ್ಬರೂ ಎಣ್ಣೆ ಸ್ನಾನ ಮಾಡಿ ಶುದ್ಧವಾಗುತ್ತಾರೆ. ಗಂಡು-ಹೆಣ್ಣು ಎಂದು ಎರಡು ಭಾಗಮಾಡುತ್ತಾರೆ. ಎರಡು ಕಡೆಗೆ ಹೊಸ ಬಟ್ಟೆ, ಆಭರಣಗಳನ್ನು ಇಡುತ್ತಾರೆ. ಗಂಡಿಗೆ ಪುರುಷರು ಧರಿಸುವ ಹೊಸ ಬಟ್ಟೆಯನ್ನು ಇಟ್ಟು ಅವರಿಗೆ ಇಷ್ಟವಾದ ತಿನಿಸು ಪಾನೀಯಗಳು, ಬೀಡಿ, ಸಿಗರೇಟ್ ಎಲೆ ಅಡಿಕೆ ಹಾಗೆಯೇ ಸ್ತ್ರೀಯರು ಗತಿಸಿದರೆ ಮಹಿಳೆಯರು ಉಡುವ ಬಟ್ಟೆಯನ್ನಿಟ್ಟು ಆರಾಧನೆ ಮಾಡುತ್ತಾರೆ.[೩೨]

ನಂತರ ಆರತಿ ಬೆಳಗಿ ಲೋಬಾನವಿಂದ ಧೂಪ ಹಾಕುತ್ತಾರೆ. ಅಂದು ಮಾಡಿದ ಮಾಂಸದಡುಗೆಯನ್ನು ಸ್ವೀಕರಿಸಲು ಹಿರಿಯರು ಬರುವರಲ್ಲದೆ, ಒಂದು ದಿನ ಕುಟುಂಬದ ಸದಸ್ಯರೊಂದಿಗೆ ನೆಲೆಸಿರುತ್ತಾರೆ ಎಂದು ನಂಬುತ್ತಾರೆ. ಹೀಗಾಗಿ ಹಿರಿಯರ ಕೃಪೆಯನ್ನು ಸದಾ ಪಡೆದುಕೊಳ್ಳಲು ಹಿರಿಯರ ಆರಾಧನೆ ಮಾಡುವುದು ಕಂಡುಬರುತ್ತದೆ.

**ಆ. ಪ್ರಾಣಬಲಿ ಆರಾಧನೆ**

ಸಮುದಾಯದ ಕುಲದೇವತೆ ಮತ್ತು ಗ್ರಾಮ ದೇವತೆಯಾದ ಮಾರಿಯಮ್ಮಳನ್ನು ಪ್ರಾಣಬಲಿ ನೀಡುವುದರ ಮೂಲಕ ಲಂಬಾಣಿಗರು ಪೂಜೆ ಮಾಡುತ್ತಾರೆ.[೩೩] ಈ ಸಮುದಾಯದವರು ಕೋಳಿ, ಕುರಿ, ಹೋತಮರಿ, ಮೇಕೆ ಇತ್ಯಾದಿಗಳನ್ನು ದೇವರುಗಳಿಗೆ ಬಲಿ ಕೊಡುತ್ತಾರೆ. ಈ ಹಬ್ಬವನ್ನು ಗಮನಿಸಿದರೇ ಪ್ರಾಣಬಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಇದಕ್ಕೆ ಕಾರಣ ಇವರ ದೇವರುಗಳು ಮಾಂಸ ಪ್ರಿಯರು ಎಂದು ಹೇಳಬಹುದು.

ಎತ್ತರವಾದ ವೇದಿಕೆಯನ್ನು ನಿರ್ಮಿಸಿ ಅದರ ಮೇಲೆ ದೇವರ ಮೂರ್ತಿಯನ್ನು ಪ್ರತಿಷ್ಠಾಪಿಸುತ್ತಾರೆ. ಇದನ್ನು ತಮ್ಮ ಭಾಷೆಯಲ್ಲಿ 'ಥಡೋ' ಎಂದು ಕರೆಯುತ್ತಾರೆ. ದೇವರ ಮೂರ್ತಿಯು ಇಂತಹುದೇ ನಿರ್ದಿಷ್ಟ ಆಕಾರವಿರಬೇಕೆಂಬ ಯಾವುದೇ ನಿಯಮ ಇರುವುದಿಲ್ಲ. ತಮ್ಮ ಮನಸ್ಸಿಗೆ ಸರಿ ಎನಿಸಿದ ಆಕಾರದಲ್ಲಿ ಮೂರ್ತಿಯನ್ನು ಬೆಳ್ಳಿಯಿಂದ ಮಾಡಿಸಿರುತ್ತಾರೆ. ಈ ಥಡೋ ವೇದಿಕೆ ಮುಂದೆ ಸಣ್ಣದೊಂದು ಕುಂಡವನ್ನು ನಿರ್ಮಿಸಿರುತ್ತಾರೆ. ಇದನ್ನು ಧೂಪ ಹಾಕಲು ಉಪಯೋಗಿಸುತ್ತಾರೆ. ಇವರು ಬುಡಕಟ್ಟು ಅಲೆಮಾರಿಗಳಾದ್ದರಿಂದ ತಮ್ಮೊಂದಿಗೆ ತಮ್ಮ ಕುಲದ ದೇವತೆಗಳನ್ನು ಹೊತ್ತೊಯ್ಯಲು ಅನುಕೂಲವಾಗುವಂತೆ ಸಣ್ಣದೊಂದು ಬಟ್ಟೆಯ ಚೀಲದಲ್ಲಿ ಇಟ್ಟಿರುತ್ತಾರೆ. ಜೊತೆಯಲ್ಲಿಯೇ ಹತ್ತಾರು ಕವಡೆಗಳನ್ನು ಇಟ್ಟಿರುತ್ತಾರೆ. ಆರಾಧನೆ ದಿನಗಳಲ್ಲಿ ದೇವರ ಮೂರ್ತಿ ಹಾಗೂ ಕವಡೆಗಳನ್ನು ತುಂಬಿದ ಲೋಟ ಇಲ್ಲವೇ ಬಿಂದಿಗೆ ನೀರಿನಿಂದ ಸ್ವಚ್ಛಮಾಡಿ ವೇದಿಕೆಯ ಮೇಲೆ ಪ್ರತಿಷ್ಠಾಪಿಸಿ ಬಲಿ ಆರಾಧನೆಯನ್ನು ಮಾಡುತ್ತಾರೆ.

**ಇ. ಕುಂಡ ಆರಾಧನೆ**

ಲಂಬಾಣಿ ಸಮುದಾಯದ ಪ್ರಮುಖ ದೇವರಾದ ಶ್ರೀ ಸೇವಾಭಾಯ ಪ್ರಾಣಿ ಬಲಿಯನ್ನು ಸ್ವೀಕರಿಸದೇ ಇರುವುದರಿಂದ ಕುಂಡಾ ಪೂಜೆಯ ಆಕಾರದಲ್ಲಿ ಆರಾಧನೆ ಮಾಡುತ್ತಾರೆ. ಈ ಆರಾಧನೆಯನ್ನು ಇವರು ಭೋಗ್ ಲಗಾಡೇರೋ ಎನ್ನುವರು. ತಾಂಡಾದಲ್ಲಿ ಕೆಮ್ಮು, ಜ್ವರ, ಭೇದಿ, ಸಿಡುಬಿನಂತಹ ಸಂದರ್ಭದಲ್ಲಿ ಆಚರಿಸುತ್ತಾರೆ. ಪೂರ್ವದ ದಿನಗಳಲ್ಲಿ ಪ್ರತಿವರ್ಷವೂ ಈ ಆರಾಧನೆಯನ್ನು ಆರಾಧಿಸುತ್ತಿದ್ದರೆಂದು ಹಿರಿಯರು ಹೇಳುತ್ತಾರೆ.

ತಾಂಡಾದ ಮುಖ್ಯಸ್ಥ (ನಾಯಕ), ಕಾರಭಾರಿ (ಕಾರ್ಯದರ್ಶಿ) ಡಾವೋ (ಹಿರಿಯ) ಮತ್ತು ಇತರೇ ಮುಖಂಡರು ಸೇರಿ ಒಂದು ಒಳ್ಳೆಯ ದಿವಸವನ್ನು ನಿರ್ಧರಿಸಿ ಈ ಆರಾಧನೆ ಮಾಡಲು ತೀರ್ಮಾನಿಸುತ್ತಾರೆ. ತಾಂಡಾದ ಎಲ್ಲ ಮನೆಯಿಂದಲೂ ಹಣವನ್ನು ಸಂಗ್ರಹಿಸಿ, ಎಂಟರಿಂದ ಹತ್ತು ಅಡಿ ಉದ್ದ, ಮೂರು ಅಡಿ ಅಗಲ, ಮೂರು ಅಡಿ ಆಳದ ಬೆಂಕಿ ಕುಂಡವನ್ನು ತೋಡಿ ಆ ಕುಂಡದಲ್ಲಿ ಊರಿನ ಜನರಿಗೆ ಬೇಕಾಗುವ ಗೋದಿಹುಗ್ಗಿ, ಅನ್ನ, ಸಾರು ಇತ್ಯಾದಿಗಳನ್ನು ಅಡುಗೆ ಮಾಡಿ ಪುರೋಹಿತನು ಶ್ರೀ ಸೇವಾಲಾಲ್ ದೇವರನ್ನು ಪ್ರಾರ್ಥಿಸುತ್ತಾ ಹುಗ್ಗಿಯನ್ನು ತುಪ್ಪದಲ್ಲಿ ಕಲೆಸಿ ಕೊಂಡಕ್ಕೆ ಸುರಿಯುತ್ತಾನೆ. ಈ ರೀತಿ ಸುರಿಯುವಾಗ ಬೆಂಕಿಯು ಚೆನ್ನಾಗಿ ಹತ್ತಿಕೊಂಡು ಉರಿದರೆ ತಮ್ಮ ಪೂಜೆಯಿಂದ ದೇವರಿಗೆ ಸಂತೃಪ್ತಿಯಾಗಿದೆ ಎಂಬುದಾಗಿ ನಂಬುತ್ತಾರೆ. ಬೆಂಕಿಯು ಸರಿಯಾಗಿ ಹತ್ತಿಕೊಂಡು ಜ್ವಾಲೆ ಬರದಿದ್ದರೆ ದೇವರಿಗೆ ತೃಪ್ತಿಯಾಗಿಲ್ಲವೆಂದು ಪ್ರಾರ್ಥನೆಯಲ್ಲಿ ಲೋಪವಾಗಿರುವುದೆಂದೂ ನಂಬಿಕೆ. ಈ ಆರಾಧನೆಯ ವಿಧಿ-ವಿಧಾನಗಳು ವೈದಿಕ ಪದ್ಧತಿಯ ಯಜ್ಞಗಳ ಆರಾಧನೆ ವಿಧಿ-ವಿಧಾನವನ್ನು ಹೋಲುತ್ತದೆ. ಆರ್ಯರು ಯಜ್ಞಯಾಗಾದಿಗಳನ್ನು ಮಾಡಿ ತಮ್ಮ ಇಷ್ಟ ಬಂಧುಗಳ ಸುಖವನ್ನು ಬೇಡುತ್ತಿದ್ದ ಮಾದರಿಯಲ್ಲಿ ಲಂಬಾಣಿಗರು ತಮ್ಮ ಕುಲದ ಸಮೃದ್ಧಿಗಾಗಿ ಈ ರೀತಿಯ ಆರಾಧನೆಯನ್ನು ಆರಂಭ ಮಾಡಿರಬೇಕು.⁷⁷

ಇವರು ಕೇವಲ ಚಾರಿತ್ರಿಕ ನೆಲೆಗೆ ಮಾತ್ರ ಸಲ್ಲುವ ಲೋಕಾತೀತ ಕಾಲ್ಪನಿಕ ದೇವರನ್ನು ಆರಾಧಿಸುವುದಿಲ್ಲ. ಈ ಸಮುದಾಯದೊಂದಿಗೆ ದೈನಂದಿನ ಜೀವನದಲ್ಲಿದ್ದ ನೋವು ನಲಿವುಗಳಲ್ಲಿ ಭಾಗಿಯಾಗಿದ್ದವರನ್ನು ದೇವರೆಂದು ಆರಾಧನೆ ಮಾಡುತ್ತಾರೆ. ಲಂಬಾಣಿ ಸಮುದಾಯದ ದೇವರು ಜೀವನದ ನೆಲೆಯಿಂದ ಆದರ್ಶಪ್ರಾಯರಾದರೂ ಸಂಸ್ಕೃತಿ ಪರಿವರ್ತನೆಗೆ ಶ್ರಮಿಸಿದವರು. ಸಮುದಾಯದ ಹಿತಕ್ಕೆ ಹೋರಾಡುತ್ತಾ ದೈವತ್ವವನ್ನು ಸಂಪಾದಿಸಿದವರನ್ನು ಪೂಜಿಸುತ್ತಾರೆ. ಇವರು ಆರಾಧಿಸುವ ಮಾತೃ ದೇವತೆ ಮರಿಯಮ್ಮನನ್ನು ಸಾತೀಭವಾನಿಯರನ್ನು ಹೊರತುಪಡಿಸಿ ಸಾತೀಸತ್ತೀ, ಡಾವೋರ್‌ಪೂಜಾ, ಮೀಠು ಭುಕ್ಯ ಇತ್ಯಾದಿ ದೇವರುಗಳು ಬರಮಸಾದು ಮಂಜಿಭುಕ್ಯ ಮೊದಲಾದ ಸಾಧು ಸಂತರುಗಳು ಸಮುದಾಯದಲ್ಲಿ ಜನಿಸಿ ದೈವತ್ವ ಪಡೆದವರನ್ನು ಆರಾಧಿಸುತ್ತಾರೆ.

ಬಂಜಾರ ಸಮುದಾಯದ ಆರಾಧನೆಯ ದೇವರುಗಳನ್ನು ಕುಲದೇವತೆಗಳು ಹಾಗೂ ಸಾಮೂಹಿಕ ಆಚರಣೆಯ ದೇವತೆಗಳು ಎಂಬುದಾಗಿ ಭಾಗ ಮಾಡಲಾಗಿದೆ. ದೇವತೆಗಳು ಬೇರೆ ಬೇರೆಯಾಗಿದ್ದರೂ ಆರಾಧಿಸುವ ವಿಧಿ-ವಿಧಾನಗಳು ಒಂದೇ ಆಗಿದೆ. ಸಂಕಷ್ಟ ಬಂದಾಗ ಕುಲದೇವರುಗಳಿಗೆ ಕುರಿ, ಕೋಳಿ, ಮೇಕೆ ಬಲಿಕೊಟ್ಟು ಪೂಜೆ ಮಾಡುತ್ತಾರೆ.

### ೬.೪. ಹರಕೆ, ನಂಬಿಕೆ ಮತ್ತು ನಿಷೇಧಗಳು

ಮಾನವನಲ್ಲಿ ಆರಾಧನಾ ಸ್ವರೂಪ ಬೆಳದಂತೆಲ್ಲ ಅದೃಶ್ಯವಾದ ಶಕ್ತಿಗೆ ಧಾರ್ಮಿಕ ವ್ಯವಸ್ಥೆಯ ರೂಪ ನೀಡಿದನು. ಅದರ ಮೂಲಕ ತನ್ನ ಸಮಸ್ಯೆಗಳ ನಿವಾರಣೆಗೆ ಹಾಗೂ ನೀಡಿಕೆಗಳ ಪೂರೈಕೆಗೆ ಹರಕೆಗಳನ್ನು ಸೃಷ್ಟಿಸಿಕೊಂಡನು. ಈ ಹರಕೆಯು ಒಂದು ರೀತಿಯಲ್ಲಿ ಭಕ್ತ ಮತ್ತು ದೈವದ ನಡುವೆ ನಡೆಯುವ ಒಂದು ಆಂತರಿಕ ಒಡಂಬಡಿಕೆ ಎಂದು ಅಭಿಪ್ರಾಯವಿದೆ. ಜನಪದರಲ್ಲಿ ಹರಕೆಗಳು ಸ್ವಲ್ಪ ಹೆಚ್ಚು ಕಡಿಮೆ ಸರ್ವೇಸಾಮಾನ್ಯ

ಸ್ವರೂಪ ಪಡೆದಿರುವುದು ಕಂಡುಬರುತ್ತದೆ. ಈ ರೀತಿಯ ಹರಕೆಗಳು ಲಂಬಾಣಿಗರಲ್ಲೂ ಕಂಡುಬರುತ್ತವೆ. ಲಂಬಾಣಿಗರು ತಮ್ಮ ಇಷ್ಟಾರ್ಥಗಳನ್ನು ಪೂರೈಸಿಕೊಳ್ಳಲು, ಸಮಸ್ಯೆಗಳನ್ನು ನಿವಾರಿಸಿಕೊಳ್ಳಲು ತಮ್ಮ ಆರಾಧ್ಯ ದೈವಗಳಿಗೆ ಹರಕೆ ಹೊರುತ್ತಾರೆ. ಶ್ರೀ ಸೇವಾಭಾಯ, ಭೀಮನಾಯ್ಕ, ಮರಿಯಮ್ಮ, ಭೀಮಿಸತ್ತಿ ಎಲ್ಲಮ್ಮ, ದುರ್ಗಮ್ಮ, ಹುಲಿಗೆಮ್ಮ ಮೊದಲಾದ ದೇವಾನುದೇವತೆಗಳಿಗೆ ಹರಕೆಗಳು ಕಾಲಕಾಲಕ್ಕೆ ಸಲ್ಲುತ್ತವೆ.

**೬.೪.೧. ಮೀಸಲು ತುಪ್ಪದ ಹರಕೆ :** ಮನೆಯಲ್ಲಿಯ ಹಾಲಿನಿಂದ ಬೆಣ್ಣೆ ತೆಗೆದು ತುಪ್ಪ ಕಾಸುತ್ತಾರೆ. ಈ ತುಪ್ಪವನ್ನು ನೆಲುವಿನ ಮೇಲಿಡುತ್ತಾರೆ. ಅದನ್ನು ಯಾರು ಮುಟ್ಟುವಂತಿಲ್ಲ. ವಿಶೇಷ ಸಂದರ್ಭಗಳಲ್ಲಿ ಈ ಮೀಸಲು ತುಪ್ಪದಿಂದ ದೀಪ ಹಚ್ಚುತ್ತಾರೆ. ಶ್ರೀ ಸೇವಾಭಾಯ ಭಕ್ತರು ತುಪ್ಪ ಭೀಮಿಸತ್ತಿನಿಗೆ ತಲೆಯಿಂದ ಪಾದದವರೆಗೆ ಮೀಸಲು ತುಪ್ಪದ ಹರಕೆ ಸಲ್ಲಿಸುತ್ತಾರೆ.

**೬.೪.೨. ಉಡುಗೊರೆಯ ಹರಕೆ :** ದೇವರ ಅಂಗಾಂಗ, ಕೈಯಲ್ಲಿ ಆಯುಧ ಅಥವಾ ಇತರೆ ವಸ್ತುಗಳನ್ನು ಉಡುಗೊರೆಯಾಗಿ ಕೊಡುವ ಹರಕೆ ಹೊರುತ್ತಾರೆ. ದೇವರ ಅಂಗಾಂಗಗಳಿಗೆ ಸಂಬಂಧಿಸಿದ ಮುಖ, ಹಸ್ತ, ಕಣ್ಣು, ಮೀಸೆ ಅಲ್ಲದೆ ಚವರ ಪಲ್ಲಕ್ಕಿ, ಕುದುರೆ, ಗಂಟೆ, ಕೊಡ, ಕಳಸ ಮೊದಲಾದ ವಸ್ತುಗಳನ್ನು ಬಂಗಾರ ಬೆಳ್ಳಿ ಹಾಗೂ ಪಂಚಲೋಹಗಳಿಂದ ಮಾಡಿಸಿ ಹರಕೆ ತೀರಿಸುತ್ತಾರೆ. ಭೀಮನಾಯ್ಕ ಭಕ್ತರು ಮೀಸೆ, ಕುದುರೆ, ಕಣ್ಣು, ಭೀಮಿಸತ್ತಿಯ ಭಕ್ತರು ಸೀರೆ, ಬಳೆ, ಗಂಟೆ ಮೊದಲಾದ ವಸ್ತುಗಳನ್ನು ಉಡುಗೊರೆಯ ಹರಕೆರೂಪದಲ್ಲಿ ನೀಡುವುದು ಇಂದಿಗೂ ಕಂಡುಬರುತ್ತದೆ.

**೬.೪.೩. ಜನಗಿ ಹರಕೆ :** ಮನೆಯಲ್ಲಿ ಹೈನು ಸಮೃದ್ಧಿಯಾಗಲೆಂದು ಹೊರುವ ಹರಕೆಯಾಗಿದೆ. ದನಕರು ಕುರಿಗಳನ್ನು ದೇವರ ಹೆಸರಿನಲ್ಲಿ ಗರ್ಭದಲ್ಲಿಯೇ ಬಿಡುತ್ತಾರೆ. ಹೀಗೆ ಹರಕೆ ಬಿಟ್ಟ ಪ್ರಾಣಿಯನ್ನು ಮಾರಾಟ ಮಾಡುವುದಾಗಲಿ, ಹೊಡೆಯುವುದಾಗಲಿ, ತಿನ್ನುವುದಾಗಲಿ ಮಾಡುವಂತಿಲ್ಲ. ಅದರ ಉತ್ಪನ್ನಗಳಾದ ಹಾಲು, ಮೊಸರು, ಬೆಣ್ಣೆ, ತುಪ್ಪ ಇತ್ಯಾದಿಗಳನ್ನು ಬೇರೆಯವರಿಗೆ ನೀಡುವಂತಿಲ್ಲ. ಹರಕೆ ಬಿಟ್ಟ ಪ್ರಾಣಿ ಸ್ವಲ್ಪ ಬೆಳೆದ ನಂತರ ದೇವರಿಗೆ ಅರ್ಪಿಸುತ್ತಾರೆ. ಕೆಲವರು ಹೋರಿ, ಆಕಳು, ಎಮ್ಮೆ ಕುರಿಯನ್ನು ಹರಕೆಗೆ ಬಿಡುತ್ತಾರೆ. ಕೆಲವೆಡೆ ಬೆಳ್ಳಿಯ ಕುದುರೆ, ಕಟ್ಟಿಗೆಯ ಕುದುರೆ ಹಾಗೂ ಮಣ್ಣಿನಿಂದ ಮಾಡಿದ ಆಕಳನ್ನು ಅರ್ಪಿಸುವುದು ಕಂಡುಬರುತ್ತದೆ.

**೬.೪.೪. ಉಪ್ಪು ಗಂಟಿನ ಹರಕೆ :** ಹುಲಿಗಿ ಕ್ಷೇತ್ರದಲ್ಲಿರುವ ಹುಲಿಗೆಮ್ಮನ ದೇವಾಲಯದ ಎದುರಿಗೆ ಉಪ್ಪನ್ನು ಸುರಿಯುವ ಸಂಪ್ರದಾಯವಿರುವುದು ಕಂಡುಬರುತ್ತದೆ. ಹೊಸವಸ್ತ್ರದ ತುಂಡಿನಲ್ಲಿ ಉಪ್ಪನ್ನು ಒಯ್ದು ನಿಗದಿಪಡಿಸಿದ ಸ್ಥಳದ ಸುತ್ತಲೂ ಐದು ಸುತ್ತು ಪ್ರದಕ್ಷಿಣೆ ಹಾಕುತ್ತಾರೆ. ನಂತರ ಆ ಸ್ಥಳದ ಒಂದು ಭಾಗದಲ್ಲಿ ಉಪ್ಪನ್ನು ಸುರಿಯುತ್ತಾರೆ.

**೬.೪.೫. ಮುಡುಪಿನ ಹರಕೆ :**

ಮುಡುಪು ಎಂದರೆ ದೇವರ ಹೆಸರಿನಿಂದ ಹಣ ಸಂಗ್ರಹಿಸಿ ಅದನ್ನು ಹುಂಡಿಗೆ ಹಾಕುವುದೆಂದರ್ಥ ತಮ್ಮ ಸಮಸ್ಯೆ ನಿವಾರಣೆಯಾಗಲೆಂದು ಬೇಡಿಕೊಂಡು ದೇವರ ಹೆಸರಿನಲ್ಲಿ ಹಣವನ್ನು ಒಂದು ವಸ್ತ್ರದ ಗಂಟಿನಲ್ಲಿ

ಕಟ್ಟಿಡುತ್ತಾರೆ. ಪ್ರತಿವಾರವೂ ೫೦ತಿಷ್ಟೆಂದು ಮುಡುಪು ಹಾಕುತ್ತಾರೆ. ಆ ದೇವರ ಜಾತ್ರೆ ಅಥವಾ ವಿಶೇಷ ದಿನದಂದು ಹಣವನ್ನು ದೇವರಿಗೆ ಅರ್ಪಿಸುವ ಸಂಪ್ರದಾಯವಿರುವುದು ಕಂಡುಬರುತ್ತದೆ. ರವಿವಾರ, ಶುಕ್ರವಾರ ಹಾಗೂ ಮಂಗಳವಾರದ ದಿನದಂದು ಮುಡುಪನ್ನು ಕಟ್ಟಿಡುವುದು ಸಾಮಾನ್ಯವಾಗಿ ಕಂಡುಬರುತ್ತದೆ.

**೬.೪.೬. ಉರುಳು ಸೇವೆಯ ಹರಕೆ :** ತಮ್ಮ ಸಮಸ್ಯೆಗಳು ಬಗೆಹರಿಯಲೆಂದು ಅಥವಾ ಬೇಡಿಕೆಗಳು ನೆರವೇರಲೆಂದು ಸ್ತ್ರೀ-ಪುರುಷರು ಉರುಳು ಸೇವೆಯ ಹರಕೆ ಹೊರುತ್ತಾರೆ. ನದಿಯಲ್ಲಿ ಸ್ನಾನ ಮಾಡಿ ಒದ್ದೆ ಮೈಯಲ್ಲಿ ಗುಡಿಯ ಸುತ್ತಲೂ ಉರುಳು ಸೇವೆ ಮಾಡುತ್ತಾರೆ. ಕೆಲವೆಡೆ ನದಿಯಲ್ಲಿ ಸ್ನಾನ ಮಾಡಿ ಕೈಯಲ್ಲಿ ಒಂದು ಚಿಕ್ಕ ಕೋಲನ್ನು ಹಿಡಿದು ಉದ್ದವಾಗಿ ಮಲಗುತ್ತ ದಾರಿಯುದ್ದಕ್ಕೂ ಅಥವಾ ದೇವಸ್ಥಾನದ ಸುತ್ತಲೂ ದೀಡು ನಮಸ್ಕಾರ ಹಾಕುವ ಹರಕೆಯನ್ನು ಸಲ್ಲಿಸುತ್ತಾರೆ. ಹಿರಿಯರು ಸಂಬಂಧಿಕರು ಇವರಿಗೆ ಹೊಸ ವಸ್ತ್ರಗಳನ್ನು ನೀಡುವ ಪದ್ಧತಿಯಿದೆ. ಈ ಪದ್ಧತಿಯು ಶ್ರೀ ಸೇವಾಭಾಯ, ಭೀಮಸಾಯ್ಯ, ಎಲ್ಲಮ್ಮ ಮತ್ತು ಹುಲಿಗೆಮ್ಮ ಭಕ್ತರಲ್ಲಿ ಕಾಣಬಹುದಾಗಿದೆ.

**೬.೪.೭. ಇಡಿಗಾಯಿ ಹರಕೆ :** ಕೆಲವರು ದೇವರಿಗೆ ಇಡಿಗಾಯಿ ಹೊಡೆಯುವ ಹರಕೆ ಹೊರುತ್ತಾರೆ. ಇಡಿಗಾಯಿಗಳ ಸಂಖ್ಯೆ ವ್ಯಕ್ತಿಯಿಂದ ವ್ಯಕ್ತಿಗೆ, ಸ್ಥಳದಿಂದ ಸ್ಥಳಕ್ಕೆ ಹಾಗೂ ದೇವರಿಂದ ದೇವರಿಗೆ ವ್ಯತ್ಯಾಸವಿರುವುದು ಕಂಡುಬರುತ್ತದೆ. ಕೆಲ ವ್ಯಕ್ತಿಗಳು ೨, ೧೧, ೫೧, ೧೦೧, ೫೦೧ ಇಡಿಗಾಯಿಗಳನ್ನು ಹರಕೆ ರೂಪದಲ್ಲಿ ಸಲ್ಲಿಸುತ್ತಾರೆ. ಇಟಗಿ ಭೀಮವ್ವನ ಭಕ್ತರು ಒಂದು ಕಾಯಿಯನ್ನು ಹೊಸ ಬಟ್ಟೆಯಲ್ಲಿಟ್ಟು ದೇವಾಲಯದಲ್ಲಿ ಕಟ್ಟಿ ಬರುವುದು ಕಂಡುಬರುತ್ತದೆ. ಹಾಗೆಯೇ ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲೂಕು ಸೂರೆಗೊಂಡನಕೊಪ್ಪದ ಶ್ರೀ ಸೇವಾಭಾಯ ದೇವಸ್ಥಾನದಲ್ಲಿ ತೆಂಗಿನಕಾಯಿಯನ್ನು ಕಟ್ಟೆಗೆ ಒಡೆದುಕೊಳ್ಳುವ ಹರಕೆ ಸಲ್ಲಿಸುತ್ತಾರೆ. ಇಡಿಗಾಯಿ ಹರಕೆ ಪ್ರತಿಯೊಬ್ಬ ದೇವರಲ್ಲೂ ಕಂಡುಬರುತ್ತದೆ.

**೬.೪.೮. ಮುಡಿ ಕೊಡುವುದು :** ದೇವರಿಗೆ ತಮ್ಮ ತಲೆಗೂದಲ(ಮುಡಿ)ನ್ನು ಕೊಡುವ ಹರಕೆ ಹೊರುತ್ತಾರೆ. ಈ ಪದ್ಧತಿಯು ಎಲ್ಲೆಡೆ ಸಾಮಾನ್ಯವಾಗಿದೆ. ವೈಷ್ಣವ ಧರ್ಮದ ಅನುಯಾಯಿಗಳಲ್ಲಿ ಅಧಿಕವಾಗಿ ಕಂಡುಬಂದರೂ ಶ್ರೀ ಸೇವಾಭಾಯ, ಭೀಮಿಸತ್ತಿ, ಹುಲಿಗೆಮ್ಮನ ಭಕ್ತರಲ್ಲೂ ಈ ಹರಕೆ ಸಲ್ಲಿಸುವುದನ್ನು ಕಾಣಬಹುದು.

**೬.೪.೯. ಕುರಿ ಬಲಿ ಕೊಡುವ ಹರಕೆ :** ಲಂಬಾಣಿಗರಲ್ಲಿ ತಾವು ಹೊತ್ತ ಹರಕೆಗಳನ್ನು ತೀರಿಸದಿದ್ದರೆ ಕೆಡುಕುಂಟಾಗುತ್ತದೆ ಎಂಬ ನಂಬಿಕೆಯಿದೆ. ಹೀಗಾಗಿ ಹರಕೆಗಳು ಕಡ್ಡಾಯವಾಗಿ ತೀರಿಸಲ್ಪಡುತ್ತವೆ. ಆದರೆ ಈ ಹರಕೆಗಳನ್ನು ಸ್ವಲ್ಪ ಬದಲಾಯಿಸುವ ಸಂದರ್ಭಗಳೂ ಕಂಡುಬರುತ್ತವೆ. ತಾವು ಬೇಡಿಕೊಂಡು ವಸ್ತು ನೀಡಲು ಸಾಧ್ಯವಾಗದಿದ್ದಾಗ ಅದರ ಪ್ರಮಾಣವನ್ನು ಕಡಿಮೆ ಮಾಡುವ ಸಾಧ್ಯತೆಯಿದೆ. ಉದಾ: ಬೆಳ್ಳಿಯ ಮುಖ ಅಥವಾ ಬೆಳ್ಳಿಯ ಕುದುರೆ ಕೊಡುವೆನೆಂದು ಬೇಡಿ ಕೊಂಡಿದ್ದರೆ, ಅದರ ಬದಲಿಗೆ ತಗಡಿನ ಅಥವಾ ಪಂಚಲೋಹದ ಮುಖ ಅಥವಾ ಕುದುರೆಯನ್ನು ಮಾಡಿ ಕೊಡಬಹುದಾಗಿದೆ. ಒಟ್ಟಾರೆ ದೈವದ ಮುಂದೆ ಹೇಳಿಕೊಂಡು ತಮ್ಮ ಸಮಸ್ಯೆಗಳಿಗೆ ಪರಿಹಾರ ಪಡೆದುಕೊಳ್ಳಬಹುದು ಎನ್ನುವ ಆಂತರಿಕ ವಿಶ್ವಾಸವೇ ಈ ಹರಕೆಗಳಿಗೆ ಪ್ರಮುಖ ಕಾರಣವಾಗಿದೆ ಎಂಬುದು ಸ್ಪಷ್ಟ.

೬.೪.೧೦. ನಂಬಿಕೆ ಮತ್ತು ನಿಷೇಧಗಳು

ನಮ್ಮ ದೇಶದ ಪ್ರತಿಯೊಂದು ಸಮುದಾಯಗಳು ನಂಬಿಕೆ ನೀಷೇಧಗಳನ್ನು ಇವತ್ತಿಗೂ ನಂಬಿಕೊಂಡು ಬಂದಿರುವುದನ್ನು ನಾವು ಕಾಣಬಹುದು. ಬುಡಕಟ್ಟು ಸಮುದಾಯಗಳಲ್ಲಿ ಒಂದಾದ ಲಂಬಾಣಿ ಸಮುದಾಯ ಸಹ ಇಂದಿಗೂ ಅನೇಕ ನಂಬಿಕೆಗಳನ್ನು ಉಳಿಸಿಕೊಂಡು ಬಂದಿದೆ. ಯಾವುದೇ ಕೆಲಸವನ್ನು ಮಾಡಬೇಕಾದರೆ ಶಕುನಗಳನ್ನು ವಿಶೇಷವಾಗಿ ಗಮನಿಸುತ್ತಾರೆ. ಶಕುನಗಳು ಒಳ್ಳೆಯವೂ ಆಗಿರಬಹುದು, ಕೆಟ್ಟವೂ ಆಗಿರಬಹುದು, ''ಭವಿಷ್ಯದ ಅಜ್ಞಾನದ ಮುನ್ಸೂಚನೆಗಳು ಶಕುನಗಳನ್ನು ವ್ಯಾಖ್ಯಾನಿಸಲಾಗುತ್ತದೆ.'' ಹೊರಡುವ ಮುಂಚಿತವಾಗಿ ತಮಗೇನು ಆಗುತ್ತದೆ ಎಂಬುದರ ಬಗೆಗೆ ಅರಿತುಕೊಳ್ಳುವುದು ಸಾಮಾನ್ಯರ ಸಹಜ ಕ್ರಿಯೆ. ಭವಿಷ್ಯಕ್ಕೆ ಸಂಬಂಧಿಸಿದ ಕೆಡುಕುಗಳಿಗೆ ಉತ್ತರ ಕಂಡುಕೊಳ್ಳುವುದು ಮನುಷ್ಯನ ಜ್ಞಾನ. ಇಂತಹ ಮೂಢನಂಬಿಕೆಗಳು ಭಾರತದಾದ್ಯಂತ ಹಬ್ಬಿವೆ. ''ನಂಬಿಕೆಗಳು ಹಾಗೂ ಶಕುನಗಳು ಒಂದೇ ನಾಣ್ಯದ ಎರಡು ಮುಖಗಳು; ಒಂದಕ್ಕೊಂದು ಪೂರಕವಾಗಿರುತ್ತದೆ. ನಂಬಿಕೆ, ಶ್ರದ್ಧೆ ಕಾರಣವಾದರೆ ಶಕುನಗಳು ಭಯ-ಭೀತಿಗೆ ಕಾರಣವಾಗಿರುತ್ತದೆ. ನಂಬಿಕೆಯಲ್ಲಿ ವಿಶೇಷವಾಗಿ ಶುಭದ ಹಾರೈಕೆ ಕಂಡುಬಂದರೆ ಶಕುನಗಳಲ್ಲಿ ಶುಭ-ಅಶುಭಗಳ ಲೆಕ್ಕಾಚಾರವಿರುತ್ತದೆ. ಹೀಗಾಗಿ ಲಂಬಾಣಿ ಸಮುದಾಯದವರು ಸಹ ನಂಬಿಕೆ ನಿಷೇಧಗಳು ಮನಸ್ಸಿಗೆ ನೆಮ್ಮದಿಯನ್ನು ತಂದುಕೊಡುತ್ತವೆಂದು ನಂಬಿ ಬದುಕುತ್ತಿದ್ದಾರೆ. ಇಂತಹ ನಂಬಿಕೆಗಳನ್ನು ಕ್ರಮಬದ್ಧವಾಗಿ ನೋಡುವುದಾದರೆ,

**೬.೪.೧೧.೧. ಪ್ರಯಾಣಕ್ಕೆ ಸಂಬಂಧಿಸಿದ ನಂಬಿಕೆ-ನಿಷೇಧಗಳು :** ಲಂಬಾಣಿ ಸಮುದಾಯದವರು ಪ್ರಯಾಣ ಸಂದರ್ಭದಲ್ಲಿ ಕೆಲವು ನಂಬಿಕೆ-ನೀಷೇಧಗಳನ್ನು ಇಟ್ಟುಕೊಂಡಿರುತ್ತಾರೆ. ಪ್ರಯಾಣ ಬೆಳೆಸುವಾಗ ಮನೆಯಲ್ಲಿ ಯಾರಾದರೂ ಎಲ್ಲಿಗೆ ಎಂದು ಕೇಳಿದರೆ ಎಲ್ಲಿಲ್ಲದ ಕೋಪವನ್ನು ವ್ಯಕ್ತಪಡಿಸುತ್ತಾರೆ. ಏಕೆಂದರೆ ಹೋಗುವ ಪ್ರಯಾಣ ಸರಿಹೋಗುವುದಿಲ್ಲ ಅಥವಾ ಹೋದ ಕೆಲಸ ಯಶಸ್ವಿಯಾಗುವುದಿಲ್ಲವೆಂದು ನಂಬಿಕೆ.

ಬೆಕ್ಕು, ಹಾವು ಅಡ್ಡ ಬಂದರೆ ಅಶುಭ

ಕಾಗೆ ಅಡ್ಡ ಬಂದರೆ ಅಶುಭ

ಕಟ್ಟಿಗೆ ಹೊರೆ ಎದುರಿಗೆ ಬಂದರೆ ಅಶುಭ

ಗುದ್ದಲಿ, ಸಲಿಕೆ ಎದುರಿಗೆ ಬಂದರೆ ಅಶುಭ

ಕುಂಕುಮ ಬಟ್ಟಲು ಕೈಜಾರಿ ಬಿದ್ದರೆ ಅಶುಭ

ಹೀಗೆ ಪ್ರಯಾಣ ಮಾಡುವಾಗ ಅಡೆತಡೆಯಾದರೆ ಅಮಂಗಳವಾಗುತ್ತದೆ. ಹೋದ ಕೆಲಸಕಾರ್ಯಗಳು ಯಶಸ್ವಿಯಾಗುವುದಿಲ್ಲವೆಂದು ನಂಬಿಕೆ ಇದೆ. ಇಲ್ಲವೇ ಇಂತಹವು ನೋಡಿಕೊಂಡು ಮುಂದೆ ಹೋದರೆ ಹೋದ ಕಾರ್ಯ ವಿಫಲವಾಗುತ್ತವೆ ಎಂಬ ನಂಬಿಕೆ ಇವರಲ್ಲಿದೆ.

**೬.೪.೧೧.೨ ಮನೆಗೆ ಸಂಬಂಧಿಸಿದ ನಂಬಿಕೆ-ನಿಷೇಧಗಳು :**

* ಗುಡಿಗೆ ಹೋಗಿ ಮನೆಗೆ ಬಂದಾಗ ಕಾಲು ತೊಳೆಯದೆ ಒಳಗೆ ಹೋಗಬೇಕು.

* ದಕ್ಷಿಣ ದಿಕ್ಕಿಗೆ ಮನೆ ಬಾಗಿಲಿಡಬಾರದು

* ಮನೆಯ ಮುಂದೆ ಕ್ಷೌರಿಕನ ಅಂಗಡಿ ಇರಕೂಡದು.

* ಹೊಸ್ತಿಲಿಗೆ ಬೇವಿನ ಮರ ಬಳಸುವಂತಿಲ್ಲ

* ಹೊಸ್ತಿಲ ಮೇಲೆ ಕಾಲು ಇಡಬಾರದು

* ರಾತ್ರಿ ಮನೆಯಲ್ಲಿ ವಿಷ ಹುಳುಗಳನ್ನು ಹೊಡೆದು ಹೊರಹಾಕಬಾರದು

೬.೪.೧೧.೩ ದೈನಂದಿನ ಜೀವನದಲ್ಲಿ ನಂಬಿಕೆ-ನಿಷೇಧಗಳು

ಲಂಬಾಣಿ ಸಮುದಾಯದವರು ದೈನಂದಿನ ಬದುಕಿನಲ್ಲಿ ಒಂದಲ್ಲ, ಒಂದು ನಂಬಿಕೆ ನಿಷೇಧಗಳನ್ನು ಪಾಲಿಸುತ್ತಾ ಜೀವನ ಸಾಗಿಸುತ್ತಿದ್ದಾರೆ.

* ಬೆಳಗ್ಗೆ ಎದ್ದು ದೇವರ ಫೋಟೋ ನೋಡಿದರೆ ಒಳ್ಳೆಯದು

* ಏಳುವಾಗ ಬಲಕ್ಕೆ ಎದ್ದರೆ ಒಳ್ಳೆಯದು.

* ನರಿಯ ಮುಖ ನೋಡಿದರೆ ಶುಭ

* ಮಾತನಾಡುವಾಗ ಹಲ್ಲಿಯು ಬಲಭಾಗದಲ್ಲಿ ನುಡಿದರೆ ಆ ಮಾತು ಸತ್ಯವೆಂದು ನಂಬುತ್ತಾರೆ.

* ಮನೆಯಿಂದ ಪೀಡೆಯನ್ನು ಕಳುಹಿಸಿಬರುವಾಗ ಹಿಂದಕ್ಕೆ ತಿರುಗಿ ನೋಡಬಾರದು

* ಕಸಬರಿಗೆಯಿಂದ ಹೆಣ್ಣು ಮಕ್ಕಳನ್ನು ಹೊಡೆಯಬಾರದು

* ಹೆಣ ಹೊತ್ತುಕೊಂಡು ಹೋಗುವಾಗ ಊರಿನಿಂದ ದೂರದಲ್ಲಿ ಹೋಗಿ ಸ್ವಲ್ಪ ಇಳಿಸಬೇಕು

* ಅಂತರ್‌ಜಾತಿ ವಿವಾಹವಾದರೆ ಜಾತಿಯಿಂದ ಹೊರಹಾಕುತ್ತಾರೆ.

* ಸತ್ತ ಹೆಣದ ಕಾಲಿಗೆ ಸೂಜಿಯನ್ನು ಬಡಿದರೆ ದೆವ್ವವಾಗಿ ಬರುವುದಿಲ್ಲ

* ಶವ ಸಂಸ್ಕಾರಕ್ಕೆ ತೆಗೆದುಕೊಂಡು ಹೋಗುವಾಗ ಮುಂದೆ ನವಣಕ್ಕಿ ಮತ್ತು ರಾಗಿಯನ್ನು ಚೆಲ್ಲಿಕೊಂಡು ಹೋದರೆ ದೆವ್ವವು ಅದನ್ನು ಆರಿಸಿಕೊಂಡು ಬರುವವರೆಗೆ ಬೆಳಕಾಗುತ್ತದೆ ಎಂಬ ನಂಬಿಕೆ.

ಒಟ್ಟಾರೆ ಪ್ರತಿಯೊಂದು ಸಂದರ್ಭದಲ್ಲಿ ಲಂಬಾಣಿಗರು ನಂಬಿಕೆ ನಿಷೇಧಗಳನ್ನು ಪರಂಪರೆಯಿಂದ ಉಳಿಸಿಕೊಂಡು ಬಂದಿರುವುದನ್ನು ನಾವು ಇವತ್ತಿಗೂ ಕಾಣಬಹುದು.

* ಮುತ್ತೈದೆಯರು ಎದುರಿಗೆ ಬಂದರೆ ಶುಭ

* ಎದುರಿನಿಂದ ತುಂಬಿದ ಕೊಡ ಬಂದರೆ ಶುಭ

* ಹೂವಿನ ಬುಟ್ಟಿ ಎದುರಿಗೆ ಬಂದರೆ ಶುಭ

* ಮುಂಗುಸಿ ನೋಡಿದರೆ ಒಳ್ಳೆಯದು

ಹೊರಡುವಾಗ ಶುಭಶಕುನಗಳು ಆದರೆ ಶುಭವಾಗುತ್ತದೆ. ಹೋದ ಕೆಲಸ ಯಶಸ್ವಿಯಾಗುತ್ತದೆ ಎಂದು ಭಾವಿಸುತ್ತಾರೆ.

೬.೪.೧೧.೪. ಅಂಗಾಂಗಕ್ಕೆ ಸಂಬಂಧಿಸಿದ ನಂಬಿಕೆ

* ಹೆಣ್ಣಿಗೆ ಎಡಗಣ್ಣು, ಗಂಡಿಗೆ ಬಲಗಣ್ಣು, ಮಳಗಣ್ಣು ಇದ್ದರೆ ಶುಭ

* ಹೆಣ್ಣಿಗೆ ಎಡಗಡೆ, ಗಂಡಿಗೆ ಬಲಗಡೆ ಕರಿಯ ಮಚ್ಚೆ ಇದ್ದರೆ ಶುಭ

* ಗಂಡಿಗೆ ಬಲಗಾಲು, ಬಲಗೈಗೆ, ಹೆಣ್ಣಿಗೆ ಎಡಗಾಲು ಎಡಗೈಗೆ ಆರು ಬೆರಳಿದ್ದರೆ ಒಳ್ಳೆಯದು
* ನಾಲಿಗೆಗೆ ಕರಿ ಮಚ್ಚೆ ಇದ್ದರೆ ಮಾತು ಸತ್ಯವಾಗುತ್ತವೆ ಎಂಬ ನಂಬಿಕೆ

**೬.೪.೧೧.೫ ಬೀಗರು ಬರುವುದಕ್ಕೆ ಕೆಲವು ನಂಬಿಕೆ**

* ಕಾಗೆಯು ಮನೆಯ ಮುಂದೆ ಬಂದು ಕೂಗಿದರೆ ಬೀಗರು ಬರುತ್ತಾರೆ.
* ಮನೆಯ ಬಾಗಿಲ ಚಿಲಕ ಬಾರಿಸಿದರೆ ಬೀಗರು ಬರುತ್ತಾರೆ
* ಕೈ ಕೆರೆದರೆ ಬೀಗರು ಬರುತ್ತಾರೆಂದು ನಂಬಿಕೆ
* ಒಲೆಯಲ್ಲಿ ಸೌದೆ ಸದ್ದು ಮಾಡಿದರೆ ಮನೆಗೆ ಅತಿಥಿಗಳು ಬರುತ್ತಾರೆ.

**೬.೪.೧೧.೬. ಊಟಕ್ಕೆ ಸಂಬಂಧಿಸಿದ ನಂಬಿಕೆಗಳು**

* ಊಟ ಮಾಡುವಾಗ ತುತ್ತು ಕೆಳಗೆ ಬೀಳಬಾರದು.
* ಊಟ ಮಾಡುವಾಗ ನಗಬಾರದು
* ಉಂಡ ಮೇಲೆ ಮೈ ಮುರಿಯಬಾರದು
* ಮುಟ್ಟಾದ ಸ್ತ್ರೀ ಮಾಡಿದ ಅಡುಗೆ ತಿನ್ನುವುದು ನಿಷೇಧ.

**೬.೪.೧೧.೭. ಮಲಗುವಾಗ ಇರುವ ನಂಬಿಕೆ ನಿಷೇಧಗಳು**

* ದಕ್ಷಿಣಕ್ಕೆ ತಲೆ ಮಾಡಿ ಮಲಗಬಾರದು
* ಕನಸಿನಲ್ಲಿ ಬಂಧುಗಳು ಸತ್ತರೆ ಆಯುಷ್ಯ ಹೆಚ್ಚು
* ಕನಸಿನಲ್ಲಿ ಬೆಂಕಿ, ಕಟ್ಟಿಗೆಯನ್ನು ಕಂಡರೆ ಯಾರಾದರು ಸಾಯುವ ಸೂಚನೆ

**೬.೫. ಗುರುಮಠಗಳು**

ಧಾರ್ಮಿಕ ಸಾಂಸ್ಕೃತಿಕ ಸಂಸ್ಥೆಗಳಾದ ಮಠಮಾನ್ಯಗಳಿಗೂ ಸಮಾಜಕ್ಕೂ ಅವಿನಾಭಾವ ಸಂಬಂಧವಿದೆ. ಒಂದು ಕಾಲಕ್ಕೆ ಸಮಾಜದ ಬದುಕನ್ನು ನಿಯಂತ್ರಿಸಬಲ್ಲ, ರೂಪಿಸಬಲ್ಲ, ಮಹತ್ತರವಾದ ಸಂಸ್ಥೆಗಳಾಗಿ ಮಠ ಮಾನ್ಯಗಳು ಬೆಳೆದಿದ್ದವು. ಸಂಚಾರ ಮಾಡುವ ಸ್ವಾಮಿಗಳಿಗೂ ಆಶ್ರಮಗಳಿಗೂ ಹೆಚ್ಚು ಮಠವೆಂದು ಬೆಳಕಿಗೆ ಬಂದವು. ಮಠ ಎಂದರೆ ಸನ್ಯಾಸಿಗಳು ವಾಸಿಸುವ ಯೋಗ್ಯ ಸ್ಥಳವೆಂದೂ, ಅಮರಕೋಶಗಳಿಗೆ ಛಾತ್ರಾದಿ ನಿಲಯ ಎಂಬ ಅರ್ಥವಿದೆ.[೫೯]

ಮಠ ಪದವು ಮೂಲತಃ ಸಂಸ್ಕೃತದ ಪದ. ಸನ್ಯಾಸಿಗಳ ವಾಸಸ್ಥಳ ಆಶ್ರಯಗಳಿಗೆ ವಿದ್ಯಾಲಯವೆನ್ನುವ ಅರ್ಥದಲ್ಲಿ ಬಳಕೆಯಾಯಿತೆಂದು ಅಭಿಪ್ರಾಯವಿದೆ.[೬೦]

೮ನೇ ಶತಮಾನದ ಕೊನೆಯವರೆಗೂ ಜೈನಧರ್ಮ ಸನ್ಯಾಸಿಗಳಲ್ಲದೆ ಕಾಳಾಮುಖ ಕಾಪಾಲಿಕ, ಪಾಶುಪತರು ಮೊದಲಾದ ವಿವಿಧ ಪಂಥಗಳಿಗೆ ಸೇರಿದ ಸನ್ಯಾಸಿಗಳಿದ್ದರು. ಕಾಪಾಲಿಕರು, ಪಾಶುಪತರು ಶಿವಾಲಯಗಳಲ್ಲಿ ವಾಸಿಸುತ್ತಿದ್ದರು. ನಂತರ ಮಠಗಳ ಅಗತ್ಯವನ್ನು ಗ್ರಹಿಸಿ ಭಾರತ ದೇಶದ ನಾಲ್ಕು ದಿಕ್ಕುಗಳಲ್ಲಿ ಮಠಗಳನ್ನು ಸ್ಥಾಪಿಸಿದ ಕೀರ್ತಿ ಶಂಕರಾಚಾರ್ಯರಿಗೆ ಸಲ್ಲುತ್ತದೆ. ಈ ಮಠಗಳ ಮುಖ್ಯಸ್ಥರಿಗೆ ಸ್ವಾಮಿ ಅಥವಾ ಮಹಾಂತ

ಎಂದು ಕರೆಯುತ್ತಿದ್ದರು.[೬೦] ನಂತರ ೧೨ನೇ ಶತಮಾನದಲ್ಲಿ ನಡೆದ ಕಲ್ಯಾಣ ಕ್ರಾಂತಿ ಮಠಗಳಿಗೆ ಹೊಸರೂಪ ನೀಡಿತು. ಈ ಕಾಲದಲ್ಲಿ ಅನೇಕ ಗುರುಮಠಗಳು ಸೃಷ್ಟಿಗೊಂಡಿದ್ದು ಕಂಡುಬರುತ್ತದೆ. ಅವುಗಳಲ್ಲಿ ಲಂಬಾಣಿಗರ ಗುರುಮಠಗಳು ಪ್ರಮುಖವಾಗಿವೆ.

ಮಾರಿಯಮ್ಮದೇವಿಯು ಲಂಬಾಣಿಗರನ್ನು ಒಂದುಗೂಡಿಸಲು ಒಬ್ಬ ಗುರುವನ್ನು ನೇಮಿಸಿ ಒಂದು ಗುರುಮಠವನ್ನು ನಿರ್ಮಿಸಿದರು. ಶ್ರೀ ಸೇವಾಲಾಲ್ ಅಥವಾ ಸೇವಭಾಯನಿಗೆ ದೀಕ್ಷೆ ನೀಡಿ ಲಂಬಾಣಿಗರ ಪ್ರಥಮ ಕುಲಗುರುವಾಗಿ ನೇಮಿಸಿದರು. ಗುರುಗಳನ್ನು ಪೂಜ್ಯರೆಂದು ಕರೆಯಲಾಯಿತು. ಲಂಬಾಣಿ ಸಮುದಾಯಕ್ಕೆ ಪೂಜ್ಯರು ಗುರುಗಳಾಗಿ ಅನೇಕ ಗುರುಮಠಗಳನ್ನು ನಿರ್ಮಿಸಿದರು. ಅವುಗಳಲ್ಲಿ ಸೂರಗೊಂಡನಕೊಪ್ಪವು ಲಂಬಾಣಿಗರ ಮೂಲ ಮಠವಾಗಿದೆ. ಇದನ್ನು ಶ್ರೀ ಸೇವಾಭಾಯರ ಮಠ ಅಥವಾ ಪೀಠ ಎಂದು ಕರೆಯಲಾಯಿತು. ನಂತರ ಕರ್ನಾಟಕ ಪ್ರಮುಖ ಕೇಂದ್ರಗಳಲ್ಲಿ ಉಪಮಠಗಳು ಪ್ರಾರಂಭಗೊಂಡವು.

**೬.೫.೧. ಕೋಗಳಿ ತಾಂಡಾದ ಶ್ರೀ ಗೋಪಾಲಸ್ವಾಮಿ ಮಠ :** ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲೂಕಿನ ಕೋಗಳಿ ತಾಂಡಾದಲ್ಲಿ ಗೋಪಾಲಸ್ವಾಮಿ ಮಠವಿದೆ. ಈ ಮಠ ಸುಮಾರು ೧೫ ವರ್ಷಗಳ ಹಿಂದೆ ಗೋಪಾಲಸ್ವಾಮಿ ಎಂಬುವರು ಸ್ಥಾಪಿಸಿದ್ದಾರೆ. ಇವರು ಲಂಬಾಣಿಗರ ಸಮಾಜದ ಒಳಿತಗಾಗಿ ಶ್ರಮಿಸುತ್ತಾ ಬಂದಿದ್ದಾರೆ. ಗೋಪಾಲಸ್ವಾಮಿ ಗುರುವಿನವರು ಭಕ್ತರ ಶ್ರೇಯಸ್ಸಿಗಾಗಿ ದುಡಿದವರು. ಲಂಬಾಣಿಗರ ಎಲ್ಲ ಸಂಸ್ಕಾರಗಳಿಗೂ ಗುರುಗಳ ಅವಶ್ಯಕತೆಯಿತ್ತು. ಗುರು ಜನರಿಗೆ ಉತ್ತಮ ಮಾರ್ಗದರ್ಶನ ನೀಡುತ್ತ ಒಂದು ಸಂಘಟನೆಯನ್ನು ಸ್ಥಾಪಿಸಿದರು.

ಈ ಮಠಗಳಲ್ಲಿ ಪ್ರಮುಖವಾಗಿ ಪಾಂಡುರಂಗ ವಿಠಲರನ್ನು ಆರಾಧಿಸುತ್ತಾರೆ. ನಂತರ ಶ್ರೀ ಸೇವಾಲಾಲ್‌ರನ್ನು ಕುಲಗುರುವಾಗಿ ಆರಾಧಿಸುತ್ತಾರೆ. ಪ್ರತಿವರ್ಷ ಶ್ರಾವಣಮಾಸದಲ್ಲಿ ಶ್ರೀ ಸೇವಾಲಾಲ್ ರಥೋತ್ಸವ ನಡೆಯುತ್ತದೆ. ಈ ರಥೋತ್ಸವಕ್ಕೆ ಬಳ್ಳಾರಿ ಜಿಲ್ಲೆಯ ಮೂಲೆ ಮೂಲೆಯಿಂದ ಜನರು ತಂಡೋಪತಂಡವಾಗಿ ಬಂದು ಪಾಲ್ಗೊಳ್ಳುವರು. ಇದು ಭಾರತದ ತಾಂಡಾಗಳಲ್ಲಿ ಪ್ರಪ್ರಥಮವಾಗಿ ನಡೆದಿರುವಂತಹ ರಥೋತ್ಸವ[೬೧] ದೊರಕಿದ ಮಾಹಿತಿ ಪ್ರಕಾರ ಭಾರತದ ತಾಂಡಾಗಳಲ್ಲಿ ರಥೋತ್ಸವಗಳಿಗೆ ಬುನಾದಿ ಹಾಕಿದ ಕೀರ್ತಿ ಈ ಮಠಕ್ಕೆ ಸಲ್ಲುತ್ತದೆ. ಈ ಮಠದ ಸ್ವಾಮಿಗಳು ಈ ಕೆಳಗಿನಂತಿದ್ದಾರೆ.

೧. ಶ್ರೀ ಗುರುಗೋಪಾಲ್ ರಾಠೋಡ್ ಮಹಾಸ್ವಾಮಿಗಳು

೨. ಶ್ರೀ ಗುರು ಸರ್ದಾರ್ ಸೇವಾಲಾಲ್‌ಸ್ವಾಮಿ

ಇಂದು ಮಠ ಅಸಂಖ್ಯಾತ ತಾಂಡಾಗಳ ಜನರಿಗೆ ಗುರುಮಠವಾಗಿದೆ. ಕೋಗಳಿ ತಾಂಡಾ, ರಾರಾಳ್ ತಾಂಡಾ, ಆನೇಕಲ್ ತಾಂಡಾ, ಬಾವಳ್ಳಿ ತಾಂಡಾ, ತಿಮ್ಮಲಾಪುರದ ತಾಂಡಾ, ಮರಿಯಮ್ಮನಹಳ್ಳಿ ತಾಂಡಾ, ಕೆರೆ ತಾಂಡಾ, ಕಡ್ಡಿರಾಂಪುರ ತಾಂಡಾ, ಸೀತರಾಮತಾಂಡಾ, ಕುಮಾರನಹಳ್ಳಿ ತಾಂಡಾ, ಕಾಲ್ವಿ ತಾಂಡಾ, ಸೋಗಿ ತಾಂಡಾ, ಚಿಕ್ಕಜೋಗಿಹಳ್ಳಿ ತಾಂಡಾ, ಪೂಜಾರಿಹಳ್ಳಿ ತಾಂಡಾ, ಉಲ್ಲಯೆನಹಳ್ಳಿ ತಾಂಡಾ ಮೊದಲಾದ ತಾಂಡಾದ ಜನರು ಗುರುಮಠದ ಭಕ್ತರಾಗಿದ್ದಾರೆ. ಭಕ್ತರು ವರ್ಷಕ್ಕೆ ಕಾಣಿಕೆಯನ್ನು ನೀಡುವರು. ಹಾಗೆಯೇ ಗುರುಗಳು ಭಕ್ತರ ಪ್ರತಿಯೊಂದು ಶುಭ-ಅಶುಭ ಕಾರ್ಯಗಳಲ್ಲಿ ಭಾಗವಹಿಸುವುದು ಕಂಡುಬರುತ್ತದೆ.

೬.೫.೨ ಚಿಕ್ಕಜೋಗಿಹಳ್ಳಿ ತಾಂಡಾ ದಾದಾ ಭೀಮನಾಯ್ಕಮಠ :

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಚಿಕ್ಕಜೋಗಿಹಳ್ಳಿ ತಾಂಡಾದಲ್ಲಿ ದಾದಾ ಭೀಮನಾಯ್ಕನ ಮಠವಿದೆ. ಲಂಬಾಣಿಗರಿಗೆ ಇದು ಭಾರತದಲ್ಲಿಯೇ ಪ್ರಮುಖವಾದ ಮಠವಾಗಿದೆ. ಸುಮಾರು ೨೦೦-೩೦೦ ವರ್ಷಗಳ ಹಿನ್ನೆಲೆಯನ್ನು ಹೊಂದಿದೆ. ಹಿಂದೆ ದಾವಣಗೆರೆ ಜಿಲ್ಲೆಯಿಂದ ವಲಸೆಬಂದ ಮೂಲಗುರುಗಳ ಬಗ್ಗೆ ಯಾವುದೇ ಆಧಾರಗಳಿಲ್ಲ. ಈ ಮಠದ ಹೆಸರು ದಾದಾ ಭೀಮನಾಯ್ಕ ಎಂದು ಕರೆಯಲು ಒಂದು ಹಿನ್ನೆಲೆ ಇದೆ. ಅದರ ಪ್ರಕಾರ ಹಿಂದೆ ಭೀಮನಾಯ್ಕರವರು ಹೈದರ್‌ಅಲಿ ಕಾಲದಲ್ಲಿ ಸಾಮಾನ್ಯ ಸೈನಿಕನಾಗಿ ಸೇರಿಕೊಂಡು ನಿಷ್ಠ, ದಕ್ಷತೆ, ಪ್ರಮಾಣಿಕತೆಯಿಂದ ಉನ್ನತ ಹುದ್ದೆಗೆ ಬಡ್ತಿಪಡೆದನು. ಇವರ ಪ್ರಮಾಣಿಕತೆ ಗಮನಿಸಿ ಮದ್ದು ಗುಂಡುಗಳನ್ನು ಸರಬರಾಜುಮಾಡಲು ಹೈದರ್‌ಅಲಿ ನೇಮಕಮಾಡಿದರು. ಸ್ವಲ್ಪ ದಿವಸ ಸೇವೆಸಲ್ಲಿಸಿದ ನಂತರ ಜನರ ಸಮಸ್ಯೆಗಳನ್ನು ನೀಗಿಸಲು ತಪಸ್ಸುಮಾಡಿ ಶಿವನಿಂದ ವರ ಪಡೆದುಕೊಂಡು ಪವಾಡ ಮಾಡಿ ಲಂಬಾಣಿ ಜನಾಂಗದ ಏಳಿಗೆಗೆ ಶ್ರಮಿಸಿದರು. ದಿನದಿಂದ ದಿನಕ್ಕೆ ಭಕ್ತರ ಸಂಖ್ಯೆ ಅಧಿಕವಾಗತೊಡಗಿದ್ದರಿಂದ ಒಂದು ಮಠಸ್ಥಾಪಿಸಿ ಲಿಂಗೈಕ್ಯನಾದನು ಭೀಮನಾಯ್ಕ ಊರಿನ ಮುಖ್ಯಸ್ಥನಾದ ಲಕ್ಮನಾಯ್ಕ ಮಂದಿರ ನಿರ್ಮಿಸಲಾಯಿತು. ಈ ಮಠಕ್ಕೆ ದಾದಾ ಭೀಮನಾಯ್ಕ ಮಠವೆಂದು ಕರೆಯತೊಡಗಿದರು.

ಭೀಮನಾಯ್ಕ ಅವರ ನಂತರ ಅನೇಕ ಗುರುಗಳು ಮಠವನ್ನು ಮುನ್ನೆಡೆಸಿದ್ದಾರೆ. ಅನೇಕ ಭಾಗಗಳಲ್ಲಿ ಗುರುಮಠ ಸ್ಥಾಪನೆಯಾಗಿರುವುದನ್ನು ಕಾಣಬಹುದು.

೧. ಭೀಮದಾದಾ ಸ್ವಾಮಿ

೨. ಸೇವಾನಾಯ್ಕ ಸ್ವಾಮಿ

೩. ಗೋಪಿಭೀಮದಾದಾ ಸ್ವಾಮಿ

ಸ್ವಾಮಿಗಳ ಮಾರ್ಗದರ್ಶನದ ಮೇರೆಗೆ ಭಕ್ತರು ತಮ್ಮ ಕೆಲಸಕಾರ್ಯ ನೆರವೇರಿಸುತ್ತಾರೆ. ಚಿಕ್ಕಜೋಗಿಹಳ್ಳಿ ತಾಂಡಾ, ಉಲ್ಲಯನಹಳ್ಳಿ ತಾಂಡಾ, ಬಂಡೆಬಸಾಪುರ ತಾಂಡಾ, ಅಪ್ಪಯನಹಳ್ಳಿ ತಾಂಡಾ, ಶ್ರೀಕಂಠಪುರ ತಾಂಡಾ, ಪೂಜಾರಹಳ್ಳಿ ತಾಂಡಾ, ದೂಪದಹಳ್ಳಿ ತಾಂಡಾ, ಮರಿಯಮ್ಮನಹಳ್ಳಿ ತಾಂಡಾ, ಕೆರೆತಾಂಡಾ, ಕೋಗಳಿ ತಾಂಡಾ, ಹಂಪಾಪಟ್ಟಣ, ಭೀಮಸಮುದ್ರ, ಕುಮಾರಹಳ್ಳಿ ತಾಂಡಾ ಮೊದಲಾದ ತಾಂಡಗಳ ಜನರು ಮಠದ ಭಕ್ತರಾಗಿದ್ದಾರೆ.

ವಿಜಯದಶಮಿ, ಎಳ್ಳಮವಾಸ್ಯೆ, ಯುಗಾದಿ, ದೀಪಾವಳಿ ಮೊದಲಾದ ಹಬ್ಬದ ದಿನಗಳಂದು ವಿಶೇಷ ಪೂಜೆ ಸಲ್ಲಿಸಲಾಗುತ್ತದೆ. ಭಕ್ತರು ಪ್ರತಿಯೊಂದು ವಿಶೇಷದಿನಗಳಂದು ಮಠಕ್ಕೆ ಭೇಟಿನೀಡಿ ಗುರುಗಳಿಗೆ ಕಾಣಿಕೆ ಸಲ್ಲಿಸುತ್ತಾರೆ. ಒಟ್ಟಾರೆ ಭಕ್ತ ಸಮೂಹದ ಒಳಿತಿಗೆ ಶ್ರಮಿಸುವಂತಹ ಮಠವಾಗಿದೆ ಎಂದು ತಿಳಿಯುತ್ತದೆ.

**ಟಿಪ್ಪಣಿಗಳು**

೧. ಜಾನಪದ ಸಾಹಿತ್ಯ ದರ್ಶನ, ಭಾಗ-೯ ಸಂ: ವೃಷಬೇಂದ್ರಸ್ವಾಮಿ ಎಸ್.ಎಂ., ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೧೯೮೮, ಪುಟ - ೧೬.

೨. ಅದೇ, ಪುಟ - ೧೬

೩. ಅದೇ, ಪುಟ - ೧೭

೪. ಕರ್ನಾಟಕ ಲಂಬಾಣಿಗರು ಒಂದು ಸಾಂಸ್ಕೃತಿಕ ಅಧ್ಯಯನ, ಖಂಡೋಬಾ ಪಿ.ಕೆ., ದಿ.ತೇಜ್‌ಸಿಂಗ್ ರಾಠೋಡ್ ಮೆಮೋರಿಯಲ್ ಟ್ರಸ್ಟ್, ಗುಲ್ಬರ್ಗ - ೧೯೯೧, ಪುಟ - ೯೬

೫. ಅದೇ, ಪುಟ - ೯೬

೬. ಅದೇ, ಪುಟ - ೧೦೦

೭. ಕರ್ನಾಟಕ ಲಂಬಾಣಿಗಳು ಇತಿಹಾಸ ಮತ್ತು ಸಂಸ್ಕೃತಿ, ಶೇಖರ್‌ನಾಯ್ಕ ದಿನಕರನ್ ಪ್ರಕಾಶನ ನಾಗರಬಾವಿ, ಬೆಂಗಳೂರು - ೨೦೦೨, ಪುಟ - ೧೯೩

೮. ಅದೇ, ಪುಟ - ೧೯೪

೯. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ - ೯೯

೧೦. ಅದೇ, ಪುಟ - ೯೯

೧೧. ಶ್ರೀ ಸೇವಾಲಾಲ್ ಚರಿತ್ರೆ, ಮಲ್ಲಿಕಾರ್ಜುನ ನಾಯ್ಕ ಬಿ.ಎಚ್., ಯೋಗೇಶ್ವರಿ ಕುಮಾರನಹಳ್ಳಿ ತಾಂಡಾ - ೨೦೦೨ ಪುಟ - ೧೨೬

೧೨. ಬಂಜಾರರ ಕೇಸರಿ ವಾರ ಪತ್ರಿಕೆ. (ಸಂ) ಕಲ್ಯಾಣ್ ನಾಯಕ್ ಪಿ.ಎಸ್., ಸಂಪುಟ-೧೦, ಸಂಚಿಕೆ-೧೫, ದಿನಾಂಕ:೧೫.೧೨.೧೯೯೮.

೧೩. ವಾರ್ಗರ್ಥ, ಚಿದಾನಂದಮೂರ್ತಿ ಎಂ., ಮೈಸೂರು - ೧೯೮೧, ಪುಟ - ೧೧೨

೧೪. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ-೯೬.

೧೫. ಪೂಜಾರಿ ದೇವಸಿಂಗ್‌ನಾಯ್ಕ ವಯಸ್ಸು ೬೫ ವರ್ಷ, ಚಿಕ್ಕಜೋಗಿಹಳ್ಳಿ ತಾಂಡ, ಕೂಡ್ಲಿಗಿ ತಾ. ಬಳ್ಳಾರಿ ಜಿಲ್ಲೆ.

೧೬. ಗೋರ ಬಂಜಾರ ಸಂಪುಟ-೨, ಸಿದ್ದನಾಯಕ (ಸಂ) ಸಂಚಿಕೆ-೧೨ ದಿನಾಂಕ ೩.೬.೨೦೦೧

೧೭. ಗೋರ ಬಂಜಾರ ಸಂಪುಟ-೨, ಸಿದ್ದನಾಯಕ (ಸಂ) ಸಂಚಿಕೆ-೧೨ ದಿನಾಂಕ ೩.೬.೨೦೦೧

೧೮. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ-೯೬.

೧೯. ಪೂಜಾರಿ ದೇವಸಿಂಗ್‌ನಾಯ್ಕ ವಯಸ್ಸು ೬೫ ವರ್ಷ, ಚಿಕ್ಕಜೋಗಿಹಳ್ಳಿ ತಾಂಡ, ಕೂಡ್ಲಿಗಿ ತಾ. ಬಳ್ಳಾರಿ ಜಿಲ್ಲೆ. ಇವರ ಹೇಳಿಕೆ.

೨೦. ಶ್ರೀ ಸೇವಾಲಾಲ್ ಚರಿತ್ರೆ, ಮಲ್ಲಿಕಾರ್ಜುನ ನಾಯ್ಕ ಬಿ.ಎಚ್., ಯೋಗೇಶ್ವರಿ ಕುಮಾರನಹಳ್ಳಿ ತಾಂಡಾ - ೨೦೦೨ ಪುಟ - ೨೫

೨೧. ಅದೇ, ಪುಟ - ೨೬

೨೨. ಅದೇ, ಪುಟ - ೨೭

೨೩. ಕರ್ನಾಟಕ ಬುಡಕಟ್ಟಿನ ಲಂಬಾಣಿಗಳು, ಖಂಡೋಬಾ ಪಿ.ಕೆ., ಶ್ರೀ ಸಿದ್ದಲಿಂಗೇಶ್ವರ ಬುಕ್ ಡಿಪೋ ಗುಲ್ಬರ್ಗ - ೨೦೦೦, ಪುಟ - ೯೬

೨೩. ಅದೇ, ಪುಟ - ೯೬

೨೪. ಹಾತಿರಾಂ ಬಾವಾಜಿ (ಕಾದಂಬರಿ) ಹೀರಾನಾಯ್ಕ, ಅಂಕಿತ ಪ್ರಕಾಶನ ಜಯನಗರ, ಬೆಂಗಳೂರು-೧೯೯೭, ಪುಟ-೨೮

೨೫. ಕರ್ನಾಟಕ ಬುಡಕಟ್ಟಿನ ಲಂಬಾಣಿಗಳು, ಖಂಡೋಬಾ ಪಿ.ಕೆ. ಶ್ರೀ ಸಿದ್ದಲಿಂಗೇಶ್ವರ ಬುಕ್ ಡಿಪೋ ಗುಲ್ಬರ್ಗ, ೨೦೦೦, ಪುಟ-೧೦೦

೨೬. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ-೯೪.

೨೭. ಇ.ಸಿ. ವಾಲ್ಯೂಂ V, ಕಲಗೀರ್ ೧೯೮, ಆರ್.ಡಿ. ೧೧೨೩

೨೮. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ-೯೪.

೨೯. ಅದೇ, ಪುಟ - ೯೪

೩೦. ಕರ್ನಾಟಕ ಲಂಬಾಣಿಗಳು ಇತಿಹಾಸ ಮತ್ತು ಸಂಸ್ಕೃತಿ, ಶೇಖರ್‌ನಾಯ್ಕ, ದಿನಕರ ಪ್ರಕಾಶನ್ ನಾಗರಬಾವಿ, ಬೆಂಗಳೂರು - ೨೦೦೨, ಪುಟ - ೧೯೧

೩೧. ಬೆಂಕಿಯಲ್ಲಿ ಕಮರಿದ ಹೂವು ಹೂನಾಸತಿ, ಹರಿಲಾಲ್ ಪವಾರ್, ಪ್ರೀತಮ್ ಪ್ರಕಾಶನ, ಧಾರವಾಡ - ೨೦೦೩ ಪುಟ-೩೬

೩೨. ಅದೇ, ಪುಟ - ೪೬

೩೩. ಗ್ರಾಮದೇವತೆಗಳು, ಸಿದ್ದಲಿಂಗಯ್ಯ, ಮೂಲ ಭಾರತಿ ಪ್ರಕಾಶನ ಬೆಂಗಳೂರು - ೧೯೯೨, ಪುಟ - ೩೮೧

೩೪. ಕರ್ನಾಟಕ ಲಂಬಾಣಿಗಳು ಒಂದು ಸಾಂಸ್ಕೃತಿಕ ಅಧ್ಯಯನ, ಖಂಡೋಬ ಪಿ.ಕೆ., ದಿ. ತೇಜ್‌ಸಿಂಗ್ ರಾಠೋಡ್ ಮೆಮೋರಿಯಲ್ ಟ್ರಸ್ಟ್ ಗುಲ್ಬರ್ಗ-೧೯೯೧ ಪುಟ-೬೮.

೩೫. ಗೋಸಂಗಿ ಸಮುದಾಯ ಒಂದು ಅಧ್ಯಯನ (ಸಂ) ಮಾರುತಿ ಪಿ.ಎಸ್. ಅಪ್ರಕಟಿತ: ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೨, ಪುಟ-೬೮

೩೬. ರಂಗು ರಂಗಿನ ಬಂಜಾರ ಲಂಬಾಣಿ ಜನಾಂಗ, ರೂಪ್ಲಾನಾಯಕ್ ವೈ. ಎಸ್.ಟಿ.ಸಿ. ಆರ್.ಜಿ. ಪಬ್ಲಿಕೇಷನ್ಸ್, ಬೆಂಗಳೂರು - ೧೯೯೮, ಪುಟ-೨೧೦

೩೭. ಪೂರ್ವೋಕ್ತ, ಖಂಡೋಬ ಪಿ.ಕೆ., ಪುಟ-೭೦

೩೮. ಲಂಬಾಣಿ ಸಂಸ್ಕೃತಿ, ಸಣ್ಣರಾಮ, ಮಲ್ನಾಡ್ ಆಫ್‌ಸೆಟ್ ಪ್ರಿಂಟರ್ಸ್ ಆಂಡ್ ಪಬ್ಲಿಷರ್, ಶಿವಮೊಗ್ಗ-೧೯೯೯, ಪುಟ-೧೩೬

೩೯. ಶ್ರೀ ಸೇವಾಲಾಲ್ ಚರಿತ್ರೆ, ಮಲ್ಲಿಕಾರ್ಜುನ ನಾಯ್ಕ ಬಿ.ಎಚ್., ಯೋಗೇಶ್ವರಿ ಪ್ರಕಾಶನ ಕುಮಾರನಹಳ್ಳಿ ತಾಂಡಾ - ೨೦೦೨ ಪುಟ - ೨೦೧

೪೦. ಪೂರ್ವೋಕ್ತ, ಖಂಡೋಬ ಪಿ.ಕೆ., ಪುಟ-೭೩

೪೧. ಲಂಬಾಣಿಗರು, ಬಸವರಾಜ ನೆಲ್ಲಿಸರ, ಐಬಿಹೆಚ್ ಪ್ರಕಾಶನ, ಬೆಂಗಳೂರು-೧೯೮೦ ಪುಟ-೩೭

೪೨. ಅದೇ, ಪುಟ-೩೭

೪೩. ಕರ್ನಾಟಕ ಸಂಸ್ಕೃತಿ ಪರಂಪರೆ, ಭಾಗ-೧, ಹಬ್ಬಗಳು, ಹಿರೇಮಠ ಎಸ್.ಎಸ್., ಹೊಸಪೇಟೆ ಪುಟ- ೨೦೨

೪೪. ಕರ್ನಾಟಕದ ಲಂಬಾಣಿಗಳು: ಇತಿಹಾಸ ಮತ್ತು ಸಂಸ್ಕೃತಿ, ಶೇಖರ್‌ನಾಯ್ಕ, ದಿನಕರ ಪ್ರಕಾಶನ ನಾಗರಬಾವಿ, ಬೆಂಗಳೂರು - ೨೦೦೨, ಪುಟ - ೧೭೮

೪೫. ರಂಗು ರಂಗಿನ ಬಂಜಾರ (ಲಂಬಾಣಿ) ಜನಾಂಗ, ರೂಪ್ಲಾನಾಯಕ್ ವೈ. ಎಸ್.ಟಿ.ಸಿ. ಆರ್.ಜಿ. ಪಬ್ಲಿಕೇಷನ್ಸ್, ಬೆಂಗಳೂರು - ೧೯೯೮, ಪುಟ-೧೨೬

೪೬. ಪೂರ್ವೋಕ್ತ, ಮಲ್ಲಿಕಾರ್ಜುನ ನಾಯ್ಕ ಬಿ.ಎಚ್., ಪುಟ - ೧೯೭

೪೭. ಲಂಬಾಣಿ ಸಂಸ್ಕೃತಿ ಖಂಡೋಬಾ ಪಿ.ಕೆ. ದಿವಂಗತ ತೇಜ್‌ಸಿಂಗ್ ರಾಠೋಡ್ ಮೆಮೋರಿಯಲ್ ಟ್ರಸ್ಟ್ ಗುಲ್ಬರ್ಗ, ಪುಟ ೬೫

೪೮. ಕರ್ನಾಟಕ ಲಂಬಾಣಿ ಜನಪದ ಗೀತೋಲಂಕ ಸಾಹಿತ್ಯಕ ಅಧ್ಯಯನ, ಲಂಬಾಣಿ ಹೆಚ್.ಡಿ., ಧಾರವಾಡ- ೧೯೭೬ ಪುಟ-೩.೨೫

೪೯. ಬಂಜಾರ ಧರ್ಮದ ಸಾಮಾನ್ಯಜ್ಞಾನ, ಬಾಲಾನಾಯಕ್ ಕೆ., ಬೆಂಗಳೂರು-೧೯೯೬ ಪುಟ-೧೭

೫೦. ರಂಗು ರಂಗಿನ ಬಂಜಾರ (ಲಂಬಾಣಿ) ಜನಾಂಗ, ರೂಪ್ಲಾನಾಯಕ್ ವೈ. ಎಸ್.ಟಿ.ಸಿ.ಆರ್.ಜಿ. ಪಬ್ಲಿಕೇಷನ್ಸ್, ಬೆಂಗಳೂರು - ೧೯೯೮, ಪುಟ-೨೧೬

೫೧. ಪೂರ್ವೋಕ್ತ, ಖಂಡೋಬ ಪಿ.ಕೆ., ಪುಟ-೮೫,೮೬

೫೨. ಪೂರ್ವೋಕ್ತ, ಮಲ್ಲಿಕಾರ್ಜುನ ನಾಯ್ಕ ಬಿ.ಎಚ್., ಪುಟ - ೭೭,೭೮

೫೩. ಎನ್‌ಸೈಕ್ಲೋಪೀಡಿಯಾ ಆಫ್ ರಿಲಿಜಿಯನ್ ಅಂಡ್ ಎತಿಕ್ಸ್ ನ್ಯೂಡೆಲ್ಲಿ ೧೯೧೧, ಪುಟ ೩೪೮. "Lala The cholena god and katudes. to These Sacrifies of Goates are affeared"

೫೪. ಪೂರ್ವೋಕ್ತ, ಶೇಖರ್‌ನಾಯ್ಕ, ಪುಟ - ೨೯೬

೫೫. ಪೂರ್ವೋಕ್ತ, ಮಲ್ಲಿಕಾರ್ಜುನ ನಾಯ್ಕ ಬಿ.ಎಚ್., ಪುಟ - ೧೯೬,೧೯೭

೫೬. ಪೂರ್ವೋಕ್ತ, ಶೇಖರ್‌ನಾಯ್ಕ, ಪುಟ - ೧೮೭,೧೮೮

೫೭. ಈ ರೀತಿಯ ಪಿತೃ ಆರಾಧನೆಗಳನ್ನು ಹಿಂದೂಗಳ ಪಂಗಡಗಳಲ್ಲಿ ಕಾಣಬಹುದಾಗಿದೆ. ಅಂತೆಯೇ ಲಂಬಾಣಿಗರು ಇದಕ್ಕೆ ಹೊರತಾಗಿಲ್ಲವೆನ್ನಬಹುದು.

೫೮. ಪೂರ್ವೋಕ್ತ, ಶೇಖರ್‌ನಾಯ್ಕ, ಪುಟ - ೧೮೯

೫೯. ಕರ್ನಾಟಕ ವೀರಶೈವ ಮಠಗಳು, ಚಂದ್ರಶೇಖರ ನಾರಣಾಪುರ, ಗೆಳೆಯ ಪ್ರಕಾಶನ, ಚಿಕ್ಕಮಗಳೂರು ೨೦೦೨-ಪುಟ

೬೦. ಹೈದರಾಬಾದ್ ಕರ್ನಾಟಕದ ವೀರಶೈವ ಮಠಗಳು ಒಂದು ಅಧ್ಯಯನ, ಸಂಶೊ: ರಮೇಶ ಮೂಲಗೆ, ಅಪ್ರಕಟಿತ ಪಿಎಚ್‌ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೨, ಪುಟ-೪೨

೬೧. ಅದೇ, ಪುಟ ೪-೫

೬೨. ಲಂಬಾಣಿ ಸಮುದಾಯದ ಥಾಲ್ಯಾ ಪಂಗಡದ ಅಧ್ಯಯನ, ಬೆಂಕ್ಯಾನಾಯ್ಕ ಎಸ್, ಅಪ್ರಕಟಿತ ಎಂ.ಫಿಲ್ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೪, ಪುಟ-೪೧

***

## ಅಧ್ಯಾಯ ಏಳು

# ಲಂಬಾಣಿ ಸಮುದಾಯದ ಆರ್ಥಿಕ ಸ್ಥಿತಿ

## ಲಂಬಾಣಿ ಸಮುದಾಯದ ಆರ್ಥಿಕ ಸ್ಥಿತಿ

ಪ್ರಾಚೀನ ಕಾಲದಲ್ಲಿ ಮಾನವ ಬೇಟೆ ಮತ್ತು ಆಹಾರ ಸಂಗ್ರಹಣೆಯನ್ನು ಪ್ರಮುಖ ವೃತ್ತಿಯನ್ನಾಗಿಸಿಕೊಂಡಿದ್ದನು. ದಿನವಿಡೀ ಪ್ರಾಣಿಗಳ ಹಿಂದೆ ಅಲೆಯುತ್ತ ಬೇಟೆಯಾಡಿ ಹಸಿಮಾಂಸವನ್ನು ಸೇವಿಸುತ್ತಿದ್ದನು. ಕಾಲಕ್ರಮೇಣ ಮಾನವ ಪ್ರಾಣಿಗಳನ್ನು ಸಾಕಲಾರಂಭಿಸಿದನು. ಬೇಟೆ ವೃತ್ತಿಯಿಂದ ಕವಲೊಡೆದು ಪಶುಪಾಲಕನಾದನು. ಕಾಲಾನಂತರ ಕೃಷಿಯನ್ನು ಅವಲಂಬಿಸಿದನು. ಕೃಷಿಯನ್ನು ಅವಲಂಬಿಸಿದ ಮೇಲೆ ಒಂದೆಡೆ ನಿಲ್ಲುವುದು ಸಾಧ್ಯವಾಯಿತು. ಒಂದೆಡೆ ನೆಲೆನಿಂತ ಮೇಲೆ ಗ್ರಾಮಗಳು ಸೃಷ್ಟಿಗೊಂಡವು. ಅದರೊಂದಿಗೆ ಅನೇಕ ಬಗೆಯ ವೃತ್ತಿಗಳು ಹುಟ್ಟಿಕೊಂಡವು. ಕಾಲ ಬದಲಾದಂತೆ ಮಾನವನ ಆರ್ಥಿಕ ಜೀವನದಲ್ಲಿ ಸಾಕಷ್ಟು ಬದಲಾವಣೆಗಳಾದವು. ಈ ರೀತಿಯ ಆರ್ಥಿಕ ಚಟುವಟಿಕೆಗಳಿಗೆ ಲಂಬಾಣಿ ಸಮುದಾಯವೂ ಹೊರತಲ್ಲ. ಲಂಬಾಣಿಗರು ವ್ಯಾಪಾರ, ವ್ಯವಸಾಯ, ಕೃಷಿಕಾರ್ಮಿಕರು, ಬೇಟೆ, ಭಟ್ಟಿಸಾರಾಯಿ ತಯಾರಿಕೆ, ಇತರೆ ವೃತ್ತಿಗಳನ್ನು ಅವಲಂಬಿಸಿದ್ದರೆಂದು ತಿಳಿದು ಬರುತ್ತದೆ.

### ೧. ವ್ಯಾಪಾರ

ಮಾನವನ ಆರ್ಥಿಕ ಜೀವನವನ್ನು ರೂಪಿಸಿದ ಅನೇಕ ಕ್ಷೇತ್ರಗಳಲ್ಲಿ ವ್ಯಾಪಾರವೂ ಒಂದಾಗಿದೆ. ವ್ಯಾಪಾರ ವೃತ್ತಿಯಿಂದ ಸಾಮಾಜಿಕ, ಆರ್ಥಿಕ ಸ್ಥಿತಿಗಳು ಒಂದು ಹಂತವನ್ನು ಪಡೆದಿವೆ. ಇದರಿಂದಾಗಿ ಪ್ರಾಚೀನ ಕಾಲದಿಂದಲೂ ವ್ಯಾಪಾರ ಪ್ರಮುಖ ಸ್ಥಾನ ಪಡೆದುಕೊಂಡಿತ್ತೆಂದು ತಿಳಿಯುತ್ತದೆ. ರಾಜಧಾನಿ, ಉಪವಿಭಾಗಗಳ ಮುಖ್ಯ ಸ್ಥಳಗಳು, ಪಟ್ಟಣಗಳು ಅಂದಿನ ಪ್ರಮುಖವಾದ ವ್ಯಾಪಾರಿ ಕೇಂದ್ರಗಳಾಗಿದ್ದವು.[೧] ವ್ಯಾಪಾರವನ್ನೇ ವೃತ್ತಿಯನ್ನಾಗಿಸಿಕೊಂಡಿದ್ದ ವರ್ತಕರಿದ್ದರು. ವರ್ತಕರಲ್ಲಿ ವಡ್ಡ, ವ್ಯವಹಾರಿ, ಮುಮ್ಮರಿದಂಡ, ಪೇಳಾವಿಗಶೆಟ್ಟಿ, ಶೆಟ್ಟಿ, ಬಣಂಜಿತ, ಗಾತ್ರಿಗ, ನಾನಾದೇಶಿ, ಉಭಯ ನಾನಾದೇಶಿ ಮೊದಲಾದವರು ಪ್ರಮುಖರಾಗಿದ್ದರು.[೨]

ವರ್ತಕರಲ್ಲಿ ವಿನಿಮಯ ವೃತ್ತಿಯವರು ಹಾಗೂ ಉತ್ಪದನಾ ವಿನಿಮಯ ವೃತ್ತಿಯವರೆಂದು ಎರಡು ಭಾಗಗಳಿವೆ.[೩] ಉತ್ಪಾದಕರಿಂದ ಉತ್ಪಾದಿಸಲ್ಪಟ್ಟ ವಸ್ತುಗಳನ್ನು ಜನರಿಗೆ ಪೂರೈಕೆ ಮಾಡುವ ಕಾರ್ಯವಿನಿಮಯ ವೃತ್ತಿಗಳದ್ದಾದರೆ, ಉತ್ಪಾದನೆ ಹಾಗೂ ಪೂರೈಕೆ ಎರಡೂ ಕಾರ್ಯಗಳನ್ನು ಜೊತೆಯಾಗಿ ನಿರ್ವಹಿಸುವ ಕಾರ್ಯ ಉತ್ಪಾದನಾ ವಿನಿಮಯ ವೃತ್ತಿಗಳದ್ದಾಗಿದೆ. ಇವರು ತಮ್ಮ ವೃತ್ತಿಯ ಅನುಕೂಲಕ್ಕಾಗಿ ಸಹಕಾರ ಸಂಘ-ಸಂಸ್ಥೆಗಳನ್ನು ಸ್ಥಾಪಿಸಿಕೊಂಡರು. ಆದರೆ ಎಲ್ಲ ವೃತ್ತಿಯವರೂ ಸಂಘಗಳನ್ನು ನಿರ್ಮಿಸಿಕೊಳ್ಳಲಿಲ್ಲ. ಸಮಾನ

ವೃತ್ತಿಯವರು ತಮ್ಮ ಸಮಾಜದ ಅಥವಾ ಸಮುದಾಯದ ಜನರೊಂದಿಗೆ ಸೇರಿ ಕಟ್ಟಿದ ಶ್ರೇಣಿಗಳೇ ಸಂಘಗಳೆಂದು ಕರೆಯಲ್ಪಟ್ಟವು.[9] ಸಹಕಾರ ತತ್ವಕ್ಕಿರುವ ಮಹತ್ವವನ್ನು ಮನಗಂಡು ಈ ಸಂಘಗಳನ್ನು ಸ್ಥಾಪಿಸಿದರೆಂದು ತಿಳಿಯುತ್ತದೆ.

ವೇದಕಾಲದಲ್ಲಿ ಗುಂಪು ಅಥವಾ ಸಮೂಹ ಎಂದು ಗುರುತಿಸಲ್ಪಡುತ್ತಿದ್ದ ಸಂಘಗಳು ಕ್ರಮೇಣ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಟ್ಟವು. ಪ್ರಾಚೀನ ಭಾರತೀಯ ಸಾಹಿತ್ಯದಲ್ಲಿ ಶ್ರೇಣಿ, ಗಣ ವ್ರಾತ ಮೊದಲಾದ ಪರ್ಯಾಯ ಪದಗಳನ್ನು ಬಳಸಿದ್ದಾರೆ.[10] ಹಾಗೆಯೇ ಮಧ್ಯಕಾಲದ ಶಾಸನಗಳು ಕೊತ್ತಳಿ, ಒಕ್ಕಲು, ಹಿಟ್ಟು, ಸಮಯ, ಸೇಣಿ, ಸಂಖ್ಯೆ ಮೊದಲಾದ ಹೆಸರುಗಳನ್ನು ಉಲ್ಲೇಖಿಸುತ್ತವೆ.[11] ಈ ಸಂಘ ಸೂಚಿ ಪದಗಳ ಪೂರ್ವದಲ್ಲಿ ಹೆಚ್ಚಾಗಿ ವೃತ್ತಿಸೂಚಿ ಪದಗಳಿರುವುದು ಕಂಡುಬರುತ್ತದೆ.

ವ್ಯಾಪಾರಿ ಬಣ ಭಾರತದ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಪರಿವರ್ತನೆಗೆ ತನ್ನದೇ ಆದ ಕಾಣಿಕೆಯನ್ನಿತ್ತಿದೆ. ಇತರೇ ವ್ಯವಹಾರಿಕ ಬಣಗಳಿಗೆ ಹೋಲಿಸಿದರೆ ವ್ಯಾಪಾರಿ ಬಣವು ಪ್ರಾಚೀನ ಭಾರತದಲ್ಲಿ ಸಾಮಾಜಿಕ ಆರ್ಥಿಕ ದೃಷ್ಟಿಯಿಂದ ಉತ್ತಮ ಜೀವನ ನಡೆಸುತ್ತಿದ್ದವು. ಅಸ್ಪೃಶ್ಯತೆಯ ಕಾವು ಈ ಬಣಗಳಿಗೆ ತಟ್ಟಿದಂತೆ ಕಂಡುಬರುವುದಿಲ್ಲ. ತಮ್ಮ ವೃತ್ತಿಯಿಂದಾಗಿ ಎಲ್ಲರ ಹಿತಚಿಂತಕರಾಗಿ ಜವಾಬ್ದಾರಿಯ ಜೀವನ ನಡೆಸುತ್ತಿದ್ದರು. ಪ್ರಾಚೀನ ಭಾರತದಲ್ಲಿ ವ್ಯಾಪಾರದಲ್ಲಿ ನಿರತರಾಗಿದ್ದ ಬಣಗಳೆಂದರೆ ವೈಶ್ಯ (Vaisaya), ವಣಿಕ್ (Vanika), ಸಾರ್ಥವಾಹ (Sarthvaha), ಗಾಹಾಪತಿ (Gahapathi), ಶ್ರೇಷ್ಠಿ (Sresthi), ನಿಗಮ (Nigama), ಮತ್ತು ಆರ್ಯ (Arya).

"ಸಾರ್ಥವಾಹರು ಗುಂಪುಗುಂಪಾಗಿ ಸಂಚರಿಸುವ ಒಂದು ವಿಶಿಷ್ಟವಾದ ವ್ಯಾಪಾರಿ ವರ್ಗವಾಗಿತ್ತು. ಈ ವ್ಯಾಪಾರಿ ಸಮುದಾಯವು ಒಂದು ಭಿನ್ನ ಗುಣವಾಗಿ ಕಂಡುಬರುತ್ತದೆ. ಅವರು ಸರಕುಗಳನ್ನು ಕೊಳ್ಳುತ್ತಾ ಮಾರಾಟ ಮಾಡುತ್ತಾ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸಂಚರಿಸುತ್ತಿದ್ದರು. ಎತ್ತಿನಗಾಡಿ ಮತ್ತು ಪ್ರಾಣಿಗಳ ಮೇಲೆ ಹೇರಿಕೊಂಡು ಸೈನ್ಯ ರಕ್ಷಕರಂತೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸರಕುಗಳನ್ನು ಸಾಗಿಸುವುದರಲ್ಲಿ ನಿಸ್ಸೀಮರಾಗಿದ್ದರು. ಹೀಗೆ ಪರಿಣತರಾದವರನ್ನು ಸಾರ್ಥವಾಹ ಎಂದು ಕರೆಯುತ್ತಿದ್ದರು."[12] ಅರುಣ್ ಕುಮಾರ್ ಮಿಶ್ರ ಲೇಖಕರ ಈ ಹೇಳಿಕೆಗಳಿಂದ ಪ್ರಾಚೀನ ಕಾಲದಲ್ಲಿ ವ್ಯಾಪಾರಿ ವರ್ಗದವರು ನಡೆಸುತ್ತಿದ್ದ ವ್ಯಾಪಾರ ಲಕ್ಷಣಗಳು ಸ್ಪಷ್ಟವಾಗಿ ಕಂಡುಬರುತ್ತಿದ್ದು ವ್ಯವಸ್ಥಿತವಾದ ರಸ್ತೆಗಳಿಲ್ಲದ ಅಂದಿನ ದಿನಗಳಲ್ಲಿ ಸ್ಥಳದಿಂದ ಸ್ಥಳಕ್ಕೆ ಸಂಚರಿಸುತ್ತಾ ಯಶಸ್ವಿಯಾಗಿ ವ್ಯಾಪಾರ ಕಾರ್ಯವನ್ನು ನಿರ್ವಹಿಸುತ್ತಿದ್ದರೆಂಬುದು ತಿಳಿದುಬರುತ್ತದೆ.

ಸಾರ್ಥವಾಹರು ವ್ಯಾಪಾರಕ್ಕೆ ಅಣಿಯಾಗುವ ಪೂರ್ವದಲ್ಲಿ ವ್ಯಾಪಾರದ ಸರಕು-ಸರಂಜಾಮು ಹೇರಿರುವ ಎತ್ತುಗಳನ್ನು ಕ್ರಮವಾಗಿ ಗುಂಪು-ಗುಂಪುಗಳಾಗಿ ವಿಂಗಡಿಸಿಕೊಳ್ಳುತ್ತಿದ್ದರು. ಒಂದೊಂದು ಗುಂಪಿನಲ್ಲಿ ಕನಿಷ್ಠ ಐನೂರು ಸಂಖ್ಯೆಯಷ್ಟು ಎತ್ತುಗಳಿರುತ್ತಿದ್ದವು. ಒಂದೊಂದು ಗುಂಪಿನವರು ಒಟ್ಟಿಗೆ ದೊಡ್ಡ ಮರದ ನೆರಳಿನಡಿಯಲ್ಲಿ ಕುಳಿತು ಚರ್ಚಿಸಿ ತಮ್ಮ ತಮ್ಮ ಸೂಕ್ತ ನಾಯಕನನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದರು. ಆಯ್ಕೆಯಾದ ನಾಯಕರು ವ್ಯಾಪಾರಿ ಬಣವನ್ನು ಸುರಕ್ಷಿತವಾಗಿ ಉದ್ದೇಶಿತ ಸ್ಥಳಕ್ಕೆ ತಲುಪಿಸುವಷ್ಟು

ನಿಪುಣನಾಗಿರಬೇಕಾಗಿದ್ದಿತೆಂಬ ವಿಷಯವನ್ನು ಬೌದ್ಧಗ್ರಂಥವಾದ 'ದಿಗ್‌ನಿಕಾ'ದಲ್ಲಿ ವಿವರಿಸಲಾಗಿದೆ. ಅಲ್ಲದೇ ನಾಯಕನು ಕಾಡಿನ ಮಾರ್ಗಗಳ ಬಗ್ಗೆ ಅರಿವುಳ್ಳವನೂ, ಗುಂಪುಗಳನ್ನೂ ನಿಯಂತ್ರಿಸುವ ಸಮರ್ಥಶಾಲಿಯೂ, ಹವಾಮಾನ ವೈಪರೀತ್ಯವನ್ನು ತಿಳಿಯುವಷ್ಟು ಅತ್ಯಂತ ತೀಕ್ಷ್ಣವಾದ ಬುದ್ಧಿಯುಳ್ಳವನಾಗಿರಬೇಕಾಗಿದ್ದಿತು. ಹೊಂದಾಣಿಕೆಯ ಮೂಲಕ ವ್ಯಾಪಾರ ಕಾರ್ಯವನ್ನು ನಿರ್ವಹಿಸುತ್ತಿದ್ದ 'ಸಾರ್ಥವಾಹ' ವ್ಯಾಪಾರಿ ವರ್ಗವು ವಿಶೇಷ ಸಂದರ್ಭಗಳಲ್ಲಿ ನಗಾರಿಯನ್ನು ಬಾರಿಸಿ ಜೊತೆಯ ವ್ಯಾಪಾರಿ ಗುಂಪುಗಳಿಗೆ ಸೂಚನೆಯನ್ನು ನೀಡುತ್ತಿದ್ದರು. ಕಾರ್ವಾನರು ವ್ಯಾಪಾರವನ್ನು ಪ್ರಾರಂಭಿಸುವ ಮುನ್ನ ಸಾರ್ಥನಾಯಕನೂ ಕೂಡ ಬಂಡವಾಳವನ್ನು ಸಂಗ್ರಹಿಸಲು ಇತರೆ ವ್ಯಾಪಾರಿ ಸಮುದಾಯವನ್ನು ಆಹ್ವಾನಿಸುತ್ತಿದ್ದನು. ಅಂತಹ ಸಂದರ್ಭಗಳಲ್ಲಿ ಸಾರ್ಥವಾಹ ನಾಯಕನು ಇತರ ವ್ಯಾಪಾರಿ ಬಣಗಳು ತಮ್ಮ ಸರಕುಗಳೊಂದಿಗೆ ತಮ್ಮ ಸಂಸ್ಥೆಯನ್ನು ಸೇರಿಕೊಳ್ಳಲು ನಗಾರಿ ಗಂಟೆಗಳನ್ನು ಬಾರಿಸಿ ಪ್ರಕಟ ಪಡಿಸುತ್ತಿದ್ದರು.[6]

ಭಾರತದಾದ್ಯಂತ ಪ್ರಾಚೀನ ಕಾಲದಿಂದಲೂ ವ್ಯಾಪಾರಗಳಿತ್ತೆಂದು ತಿಳಿಯುವುದರ ಆಧಾರಗಳಿಗೆ, ಕ್ರಿ.ಶ. ೧೪ನೇ ಶತಮಾನದಲ್ಲಿ ಲಂಬಾಣಿಗರು ಗುಂಪು ಗುಂಪಾಗಿರುತ್ತಿದ್ದು ವ್ಯಾಪಾರವನ್ನು ಮೂಲವೃತ್ತಿಯಾಗಿತ್ತೆಂದು ಕಂಡುಬರುತ್ತದೆ. ಪ್ರತಿಯೊಂದು ಗುಂಪಿಗೂ ಒಬ್ಬ ನಾಯಕನಿದ್ದು, ಅವನನ್ನು ಆಯ್ಕೆ ಮಾಡಲಾಗುತ್ತಿತ್ತು, ವ್ಯಾಪಾರಿ ವೃತ್ತಿಯು ಲಂಬಾಣಿಗಳಿಂದ ದೂರವಾಗಿ ತಾಂಡಾ ನಿವಾಸಿಗಳಾದ ಮೇಲೂ ನಾಯಕನನ್ನು ನೇಮಕ ಮಾಡುವುದು ಸಾರ್ಥವಾಹರ ಕೊಡುಗೆಯಾಗಿರಬೇಕು. ವಿಶೇಷ ಸಂದರ್ಭದಲ್ಲಿ ಇತರೇ ವ್ಯಾಪಾರಿ ಗುಂಪುಗಳಿಗೆ ಸೂಚನೆ ಕೊಡಲು ಬಾರಿಸುತ್ತಿದ್ದ ನಗಾರಿಯು ಲಂಬಾಣಿಗರಲ್ಲಿ ಒಂದು ಸಾಂಸ್ಕೃತಿಕ ವಾದ್ಯವಾಗಿ ಇಂದಿಗೂ ಉಳಿದುಕೊಂಡು ಬಂದಿರುವುದು ಗಮನಾರ್ಹ ಸಂಗತಿಯಾಗಿದೆ. ಸಾಮಗ್ರಿಗಳನ್ನು ಎತ್ತುಗಳ ಮೇಲೆ ಸಾಗಿಸುವುದು ತಂಡೋಪತಂಡವಾಗಿ ಸಂಚರಿಸುವುದು, ಗುಂಪಿನೊಬ್ಬನಂತೆ ನಾಯಕನ ಆಯ್ಕೆ ಮಾಡುವುದು, ನಗಾರಿಯ ಬಳಕೆ ಮುಂತಾದ ವಿಷಯಗಳಲ್ಲಿ ಲಂಬಾಣಿ ವ್ಯಾಪಾರಿ ವರ್ಗಗಳ ಗುಂಪುಗಳಿಗೂ ಸಾರ್ಥವಾಹ ವ್ಯಾಪಾರಿ ವರ್ಗಗಳ ಗುಂಪುಗಳಿಗೂ ಹೋಲಿಕೆಯನ್ನು ಮಾಡಲಾಗಿದೆ.

ಲಂಬಾಣಿಗರು ವ್ಯಾಪಾರ ವೃತ್ತಿಯಿಂದ ಪ್ರಮುಖ ಸ್ಥಾನಮಾನಗಳನ್ನು ಪಡೆದಿದ್ದರೂ ಸಂಕಷ್ಟಗಳಿಂದ ದೂರವೇನೂ ಇರಲಿಲ್ಲ. ವರ್ತಕರು ವ್ಯಾಪಾರಕ್ಕಾಗಿ ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಹೋಗುವುದು ಅನಿವಾರ್ಯವಾಗಿತ್ತು. ಆದರೆ ಮಧ್ಯದಲ್ಲಿ ದಟ್ಟವಾದ ಕಾಡು, ಬೆಟ್ಟ, ಹಳ್ಳಕೊಳ್ಳಗಳನ್ನು ದಾಟಿ ದವಸ ಧಾನ್ಯಗಳನ್ನು ಸಾಗಿಸಬೇಕಾಗಿತ್ತು. ಆದರೆ ಮಾರ್ಗಮಧ್ಯದಲ್ಲಿ ದಾರಿಗಳ್ಳರ ದಾಳಿಗೆ ತುತ್ತಾಗುತ್ತಿದ್ದರು. ಈ ದಾರಿಗಳ್ಳರ ಉಪಟಳದಿಂದ ಸರಕು, ಹಣ, ಪ್ರಾಣರಕ್ಷಣೆ ಮಾಡಿಕೊಳ್ಳಲು ವರ್ತಕರು ಯೋಧ ಪಡೆಯನ್ನು ಹೊಂದಿದ್ದರೆಂದು ತಿಳಿಯುತ್ತದೆ. ಆದರೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ.

ಇರ್ವಿನ್ ಅವರು ಲಂಬಾಣಿಗರ ಮುಂಜಾಗರೂಕತೆಯ ಕ್ರಮವನ್ನು ಹೀಗೆ ಹೇಳಿದ್ದಾರೆ. ''ಒಂದೇ ಕಡೆ ಮುಖಮಾಡಿ ಜೋಡಿಸಿದ ಕಾಳುಗಳ ಚೀಲದಿಂದ ರಚಿಸಿಕೊಂಡ ಚೌಕದಲ್ಲಿ ಅವರು ರಕ್ಷಣೆಗಾಗಿ ಪ್ರತಿದಿನ ಸಂಜೆ ಬೀಡುಬಿಡುತ್ತಿದ್ದರು. ಅವರು ಮತ್ತು ಅವರ ಕುಟುಂಬಗಳು ಮಧ್ಯದಲ್ಲಿರುತ್ತಿದ್ದವು. ಎತ್ತುಗಳನ್ನು ಹೊರಗಡೆ ಭದ್ರವಾಗಿ ಕಟ್ಟುತ್ತಿದ್ದರು. ಆಯಕಟ್ಟಿನ ಜಾಗದಲ್ಲಿ ಬಂದೂಕು ಮತ್ತು ಭರ್ಚಿಗಳೊಂದಿಗೆ ಸಿದ್ಧರಾದ

ಕಾವಲುಗಾರರು ಇರುತ್ತಿದ್ದರು. ಅವರ ನಾಯಿಗಳು ಮೊದಲೇ ನಿರ್ಧರಿಸಿದ ಜಾಗಗಳಲ್ಲಿ ಕಾವಲಿರುತ್ತಿದ್ದವು. ನಾನು ೫,೦೦೦ ಎತ್ತುಗಳೊಂದಿಗೆ ತಂಗಿದ್ದ ತಂಡವನ್ನು ನೋಡಿದ್ದೇನೆ."[೧೫] ಲಂಬಾಣಿ ವ್ಯಾಪಾರಿ ತಂಡಗಳು ತಮ್ಮನ್ನು ರಕ್ಷಿಸಿಕೊಳ್ಳಲು ಮೇಲಿನ ಮಾರ್ಗ ಅನುಸರಿಸುತ್ತಿದ್ದವು.

ಎತ್ತುಗಳ, ಸ್ತ್ರೀಯರ ಅಪಹರಣವಾದಾಗ ಅವುಗಳನ್ನು ರಕ್ಷಿಸಲು ಹೋರಾಡಿ ಹಲ್ಲೆಗೊಳಗಾದ ಬಗ್ಗೆ ಇತಿಹಾಸ ಪುಟಗಳಲ್ಲಿ ಲಂಬಾಣಿ ವ್ಯಾಪಾರಿಗಳು ದಾಖಲಾಗಿವೆ. "ಕ್ರಿ.ಶ.೧೭೫೪ರಲ್ಲಿ ಲಾಲಾನಾಯಕ್ ಹೆಸರಿನ ಅಲೆಮಾರಿ ವ್ಯಾಪಾರಿಯು ಗುಜರಾತ್ ಪ್ರಾಂತ್ಯದ ಪರಗಣ ಉಲ್ಪಾದ್ ಪ್ರದೇಶದಿಂದ ಎತ್ತುಗಳ ಮೇಲೆ ಸರಕುಗಳನ್ನು ಹೇರಿಕೊಂಡು ಹೋಗುತ್ತಿರುವಾಗ ಬೆಟ್ಟಗುಡ್ಡಗಳಿಂದ ಆವೃತ್ತ ಸ್ಥಳದಲ್ಲಿ ಇಬ್ಬರು ಡಕಾಯಿತರು ೪೦೦೦ ರೂಪಾಯಿಗಳನ್ನು ಕಸಿದುಕೊಂಡು ಮತ್ತೆ ೧೫೦೦ ರೂಪಾಯಿಗಳನ್ನು ಕೊಡಬೇಕೆಂದು ಪ್ರಮಾಣ ಮಾಡಿಸಿಕೊಂಡು ಬಿಡುತ್ತಾರೆ."[೧೬] ಮರಾಠರ ಸೈನ್ಯಕ್ಕೆ ಆಹಾರ ಧಾನ್ಯವನ್ನು ಪೂರೈಸುವ ಸಂದರ್ಭದಲ್ಲಿ ಪಿಂಡಾರಿ ದರೋಡೆಕೋರರಿಂದ ಲಂಬಾಣಿ ವ್ಯಾಪಾರಿಗಳು ಲೂಟಿಗೆ ಒಳಗಾಗಿದ್ದಾರೆ. "ಸುಮಾರು ಕ್ರಿ.ಶ. ೧೭೭೬ರಲ್ಲಿ ಹರಿಪಂಥ್ ಫಡ್ಕೆ ಮತ್ತು ಪರಶುರಾಮ್ ಬಾಹು ಮರಾಠರ ಸೈನ್ಯದ ಮುಖ್ಯಸ್ಥರಾಗಿದ್ದಾಗ, ೧೦.೦೦೦ ವ್ಯಾಪಾರಿ ಲಂಬಾಣಿಗರ ಗುಂಪನ್ನು ಗುಜರಾತ್‌ನ ಬಳಿ ಮಾಳ್ವವನ್ನು ದಾಟುತ್ತಿದ್ದಾಗ, ದುರದೃಷ್ಟವಶಾತ್ ರಾಗೋಬನ ಪ್ರೇರಣೆಯಿಂದ ಪಠವರ್ಧನನು ಅವರನ್ನು ರಕ್ಷಣೆ ಮಾಡುವ ಬದಲು ಸುಮಾರು ಏಳುನೂರು ಪಿಂಡಾರಿಗಳೊಂದಿಗೆ ದರೋಡೆ ಮಾಡುತ್ತಾನೆ. ಏಳುನೂರು ಎತ್ತುಗಳನ್ನು ವಶಪಡಿಸಿಕೊಳ್ಳುತ್ತಾನೆ. ಉಪ್ಪು, ಕೊಬ್ಬರಿ, ಬೆಳ್ಳಿ, ಬಂಗಾರ, ಖರ್ಜೂರ ಎಲ್ಲವನ್ನು ಮೂರು ನಾಲ್ಕು ದಿನಗಳವರೆಗೆ ಸತತವಾಗಿ ಲೂಟಿ ಮಾಡಿದರು."[೧೭] ಲಂಬಾಣಿಗರು ತಮ್ಮ ದವಸ ಧಾನ್ಯಗಳನ್ನು ರಕ್ಷಿಸಿಕೊಳ್ಳಲು ತಮ್ಮದೇ ಆದ ಪ್ರತ್ಯೇಕ ವೀರಪಡೆಯನ್ನು ಹೊಂದಿದ್ದರೆಂದು ತಿಳಿಯುತ್ತದೆ.

ಚಾರಿತ್ರಿಕ ಪುಟಗಳಲ್ಲಿ ದಾಖಲಾಗಿರುವಂತೆ ಮೌರ್ಯ ಚಕ್ರಾಧಿಪತ್ಯ ೩೨೪ರಿಂದ ಲಂಬಾಣಿಗರು ಕ್ರಿ.ಪೂ. ವ್ಯಾಪಾರ ವೃತ್ತಿಯಲ್ಲಿ ನಿರತರಾಗಿದ್ದರೆಂಬ ವಿಚಾರ ತಿಳಿದುಬರುತ್ತದೆ. ಯಾವುದೇ ವೃತ್ತಿಯಲ್ಲಿ ಏರಿಳಿತಗಳು ಸರ್ವೇಸಾಮಾನ್ಯ, ಬೌದ್ಧ ಧರ್ಮದ ಪ್ರಾಬಲ್ಯ ದಿನೇ ದಿನೇ ಕ್ಷೀಣಿಸಿ ಅವನತಿ ಹಾದಿಯನ್ನು ಹಿಡಿದಾಗ ಬೌದ್ಧಮಠಗಳು ಅವನತಿಯ ಹಾದಿಯನ್ನು ಹಿಡಿದವು. ಮಠಗಳನ್ನು ನಂಬಿ ಮುನ್ನಡೆಯುತ್ತಿದ್ದ ವ್ಯಾಪಾರಿ ವರ್ಗಗಳಿಗೆ ತೀವ್ರವಾದ ಹಿನ್ನಡೆ ಉಂಟಾಯಿತು.[೧೮] [''This System and the Monosteries that it Supported Passed away when Buddism has become drien Upon rhe economy insead of a Stimulas. The long disrance Luwury trade especially from the North of India and overses from The Romen Empire was Surpassed in valume by predominantly Regional barter in essenticls under a to tolly different Class of Merclants. The interru Ption Pre-dominantly Regional barter in essentials Under a totally different Class of Merchants. The interruption of the Overlond Trade Routes and the Virtual Collapse of The Roman Empire in the third Century A.D. Might have been Supplementory Faeoos. Secondly. The growth of Villages and Towns found the monasteries incoveniently situated for trade and finace on a large scale. They Could all, monastic not finacial. The long

carcevaens gradually devindled to groups of Banjaras (valuis yakara merchant) and l amans (lam Banana) Ther sill exist."] ಡಿ.ಡಿ. ಕೂಸಾಂಬಿ ಎಂಬ ಆರ್ಥಿಕ ಇತಿಹಾಸಜ್ಞರ ಹೇಳಿಕೆ ಲಂಬಾಣಿ ಸಮುದಾಯದ ಚರಿತ್ರೆ ಹಿನ್ನೆಲೆ ಹಾಗೂ ವ್ಯಾಪಾರ ವೃತ್ತಿಯನ್ನು ಗುರುತಿಸಲು ದೊರೆಯುವ ಆಕರವಾಗಿದೆ. ಕ್ರಿ.ಶ. ೨ನೇ ಶತಮಾನದ ವೇಳೆ ದೊಡ್ಡ ದೊಡ್ಡ ವ್ಯಾಪಾರಿ ಗುಂಪುಗಳು ಅವನತಿ ಹೊಂದಿ ಚಿಕ್ಕ ಚಿಕ್ಕ ಗುಂಪುಗಳಾಗಿ ಬಂಜಾರ, ಲಂಬಾಣಿಗರೆಂಬ ಹೆಸರಿನಲ್ಲಿ ಈಗಲೂ ಗುರ್ತಿಸಿಕೊಳ್ಳುತ್ತಿವೆ. ಈ ಆಧಾರಗಳಿಂದ ಲಂಬಾಣಿಗರು ೨ನೇ ಶತಮಾನದಲ್ಲಿ ಇದ್ದರು ಎಂದು ಹೇಳಬಹುದು.

'ಕ್ರಿ.ಶ. ೧೪೧೭ರಲ್ಲಿ ಬಂಜಾರರ ಬೆಂಗಾವಲಿನ ಬಹುದೊಡ್ಡ ಎತ್ತುಗಳ ಗುಂಪೊಂದು ಖಾನ್‌ಕಹನ್‌ನಿಂದ ಸೆರೆ ಹಿಡಿಯಲ್ಪಟ್ಟಿತು. ಮತ್ತು ದಕ್ಷಿಣದ ರಾಜಧಾನಿಯಾಗಿದ್ದ ಗುಲ್ಬರ್ಗಕ್ಕೆ ಕಳುಹಿಸಲ್ಪಟ್ಟಿತು. ಪೆರಿಸ್ತ ಅವರನ್ನು ಕಾಳು ವ್ಯಾಪಾರಿಗಳೆಂದು ಕರೆದಿದ್ದಾನೆ. ಅವರು ದೇಶದ ಒಂದು ಮೂಲೆಯಿಂದ ಮತ್ತೊಂದು ಮೂಲೆಗೆ ಸಂಚರಿಸುತ್ತಿದ್ದರು.''[೧೪] ದಕ್ಷಿಣ ಭಾರತವನ್ನು ಕ್ರಿ.ಶ.೧೪೧೭ರಲ್ಲಿ ಕಾಳು ವ್ಯಾಪಾರಕ್ಕೆ ಪ್ರವೇಶಿಸಿದ ಬಗ್ಗೆ ದಾಖಲೆ ಮಹತ್ವದ್ದಾಗಿದೆ. ಭಾರತಕ್ಕೆ ಭೇಟಿ ನೀಡಿದ ಪ್ರವಾಸಿಗರು ತಮ್ಮ ಅನುಭವಗಳಲ್ಲಿ ಲಂಬಾಣಿಗರ ವೃತ್ತಿಗಳ ಬಗ್ಗೆ ಬರೆದ ಮಾಹಿತಿ ಪ್ರಮುಖವಾಗಿದೆ. ಕ್ರಿ.ಶ. ೧೬೩೨ರಲ್ಲಿ ಭಾರತಕ್ಕೆ ಭೇಟಿ ನೀಡಿದ್ದ ಪೀಟರ್ ಮುಂಡಿ ಹೇಳುವಂತೆ ''ಹೋಗುವ ರಸ್ತೆಯಲ್ಲಿ ಬುರಾನ್‌ಪುರಕ್ಕೆ ದವಸ-ಧಾನ್ಯಗಳನ್ನು ಸಾಗಿಸುವ ಹೇರಿತ್ತು. ಹೇರು ಕೋಣಗಳನ್ನು ಹೊಡೆದುಕೊಂಡು ಹೋಗುತ್ತಿದ್ದು, ಅನೇಕ ಬಣಜಾರರನ್ನು ಕಂಡವು.''[೧೫] ಮುಂದುವರಿದು ಅವರು ಇನ್ನೊಂದು ಅನುಭವವನ್ನು ವಿವರಿಸುತ್ತಾ, ಆಗಸ್ಟ್ ೨೩.ರಂದು ನಮಗೆ ಒಂದು ತಾಂಡಾ, ಅಂದರೆ ಎತ್ತುಗಳ ಬಣಜಾರ ಸಿಕ್ಕಿದ್ದ. ತಾಂಡಾದಲ್ಲಿ ೧೪,೦೦೦ ಎತ್ತುಗಳಿದ್ದವು. ಗೋಧಿ, ಅಕ್ಕಿ ಇತ್ಯಾದಿ ದವಸ-ಧಾನ್ಯಗಳನ್ನು ಹೇರಿದ್ದರು. ಒಂದೊಂದು ಎತ್ತಿನ ಮೇಲೆ ನಾಲ್ಕು ದೊಡ್ಡಮಣಗಳ ಹೇರು ಇತ್ತು. ಇವೆಲ್ಲಾ ಆಗ್ರಾಕ್ಕೆ ಹೋಗುತ್ತಿದ್ದವು. ಈ ಬಣಜಾರರು ತಮ್ಮ ಹೆಂಡತಿ ಮಕ್ಕಳು. ಸಾಮಾನು ಸರಂಜಾಮುಗಳ ಸಮೇತ ಹೊರಡುತ್ತಾರೆ. ಇವರು ಒಂದು ಕಡೆ ನಿಲ್ಲದೇ ಊರಿಂದೂರಿಗೆ ಹೋಗುತ್ತಿರುತ್ತಾರೆ. ಎತ್ತುಗಳು ಅವರವೇ. ಈ ಎತ್ತುಗಳನ್ನು ಕೆಲವು ವೇಳೆ ವರ್ತಕರು ಬಾಡಿಗೆಗೆ ತೆಗೆದುಕೊಳ್ಳುತ್ತಾರೆ. ಆದರೆ ಬಹುತೇಕ ಬಂಜಾರ ವರ್ತಕರು ಅಗ್ಗವಾಗಿರುವ ಕಡೆ ದವಸ-ಧಾನ್ಯಗಳನ್ನು ಕೊಂಡು ತುಟ್ಟಿಯಾಗಿರುವ ಕಡೆಸಾಗಿಸಿ ಮಾರಾಟ ಮಾಡಿ ಅಲ್ಲಿ ದೊರೆಯಬಹುದಾದ ಉಪ್ಪು, ಬೆಲ್ಲ, ಬೆಣ್ಣೆ ಮುಂತಾದವುಗಳನ್ನು ಕೊಂಡುತರುತ್ತಾರೆ. ಹೆಂಗಸರು-ಗಂಡಸರು ಗಟ್ಟಿಮುಟ್ಟಾದ ಜನ; ಸಂದರ್ಭ ಬಂದರೆ ಹೆಂಗಸರೂ ಗಂಡಸರಂತೆ ಹೋರಾಡಬಲ್ಲರು. ದಿನಾ ತಂಪು ಹೊತ್ತಿನಲ್ಲಿ ಆರೇಳು ಮೈಲಿಗಳಂತೆ ದಾರಿ ಸಾಗಿಸುತ್ತಾರೆ. ತಂಗಿದಾಗ ಹೇರನ್ನು ಇಳಿಸಿ ಎತ್ತುಗಳನ್ನು ಮೇಯಲು ಬಿಡುತ್ತಾರೆ.[೧೬]

ಪ್ರಾನ್ಸಿಸ್ ಬೇಕಿನ್ನೇಯವರು ಔರಂಗಜೇಬ್ ಮತ್ತು ದಾರಾನಿಗೂ ಕ್ರಿ.ಶ. ೧೬೫೮ ರಿಂದ ೧೬೬೭ರವರೆ ವಿಗೂ ನಡೆದ ಯುದ್ಧವನ್ನು ಕುರಿತು ವಿವರಿಸುತ್ತಾ ''ಇಷ್ಟವಿಲ್ಲದೇ ಸೈನ್ಯವನ್ನು ಹಿಂಬಾಲಿಸಿಕೊಂಡು ಹೋಗುವ ಬಣಜಾರರ ವರ್ತಕರು ಇತ್ಯಾದಿ ಅಸಂಖ್ಯಾತ ಜನರಿದ್ದರು ಎಂಬ ಮಾತನ್ನು ಹೇಳುತ್ತಾರೆ.''[೧೭]

ಕ್ರಿ.ಶ. ೧೭ನೇ ಶತಮಾನದಲ್ಲಿ ಮರಾಠರ ಕಾಲದಲ್ಲಿ ಲಂಬಾಣಿಗರ ವ್ಯಾಪಾರವು ಉನ್ನತ ಸ್ಥಾನದಲ್ಲಿತ್ತು. ವಿದೇಶಿಯರು ಆಮದು ಮಾಡಿಕೊಳ್ಳುತ್ತಿರುವ ವಸ್ತುಗಳಾದ ಸಕ್ಕರೆ, ಸಾಂಬಾರು ಪದಾರ್ಥಗಳು, ಒಣ ಹಣ್ಣು

ಹಂಪಲು ತಮ್ಮ ಆಳ್ವಿಕೆಯಲ್ಲಿ ಬಂದರುಗಳಿಗೆ ತಲುಪಿಸುವ ಜವಾಬ್ದಾರಿ. ಹಾಗೂ ಬೇರೆ ಬೇರೆ ದೇಶಗಳಿಂದ ಭಾರತದ ಬಂದರುಗಳಿಗೆ ಬಂದ ವಸ್ತುಗಳನ್ನು ದೇಶದ ಮೂಲೆ ಮೂಲೆಗೂ ತಲುಪಿಸುವ ಜವಾಬ್ದಾರಿ ನಿಭಾಯಿಸುತ್ತಿದ್ದರು. "The Goods were Unloded at these parts carried in Land to various Markets Over lang Distences by huge caravars of Lanbanies who same time Nambered as Many ten thousand"[೨೮] ಕೆ.ಎಸ್. ಚಿಟ್ನಿಸ್, ಲೇಖಕರ ಈ ಹೇಳಿಕೆಯಲ್ಲಿ ಲಂಬಾಣಿಗರು ವ್ಯಾಪಾರದಲ್ಲಿ ನಿರತರಾಗಿದ್ದರು ಎಂದು ಹೇಳಬಹುದು.

ಲಂಬಾಣಿಗರ ವೃತ್ತಿಯಲ್ಲಿ ಮತ್ತೊಂದು ತಿರುವನ್ನು ಪಡೆದುಕೊಳ್ಳುತ್ತದೆ. ಅದೇ ಯುದ್ಧನಿರತ ಸೈನಿಕರಿಗೆ ಆಹಾರ ಧಾನ್ಯಗಳನ್ನು ಸರಬರಾಜು ಮಾಡುವುದು. ಮೊಗಲರು, ಸುಲ್ತಾನರು, ಮರಾಠರು ಹಾಗೂ ಬ್ರಿಟಿಷ್ ಸೈನಿಕರಿಗೆ ಆಹಾರ ಧಾನ್ಯಗಳನ್ನು ಬಂಜಾರರು ಸರಬರಾಜು ಮಾಡಲಾರಂಭಿಸುತ್ತಾರೆ. ಕಾರಣ ವ್ಯಾಪಾರಕ್ಕಿಂತ ಹೆಚ್ಚು ಲಾಭದಾಯಕವಾಗಿರಬಹುದು. ಈ ವ್ಯಾಪಾರದಲ್ಲಿ ಸೈನಿಕರಿಂದ ರಕ್ಷಣೆ ಪಡೆದಿರಬಹುದು. ೧೭ನೇ ಶತಮಾನದಲ್ಲಿ ಪೇಶ್ವೆ ಕಾಲದಲ್ಲಿ ಬಂಜಾರಾ ವ್ಯಾಪಾರಿಗಳಾದ ಪೋಮಾಜಿನಾಯಕ್ ಮತ್ತು ಗೋವಿಂದನಾಯ್ಕ ಭೂಕ್ಯಾ ಎಂಬುವರು ೧೫,೦೦೦ ಎತ್ತುಗಳ ಹೇರುಗಳಷ್ಟು ದವಸ ಧಾನ್ಯಗಳನ್ನು ಸೈನಿಕರ ವಸತಿಗಳಿಗೆ ತಲುಪಿಸುವ ಕರಾರು ಮಾಡಿಕೊಂಡಿರುತ್ತಾರೆ. ಅದಕ್ಕಾಗಿ ಅವರು ಆಕ್ಕಾಯಿ ಸುಂಕದಿಂದ ವಿನಾಯಿತಿ ಪಡೆದಿರುತ್ತಾರೆ.[೨೯] ವ್ಯಾಪಾರಗಳಿಗೆ ರಾಜರುಗಳು ರಿಯಾಯ್ತಿಗಳನ್ನು ಕೊಡುತ್ತಿದ್ದರೆಂಬುದು ತಿಳಿದುಬರುತ್ತದೆ.

ಮೊಗಲ್ ಮತ್ತು ಬ್ರಿಟಿಷರ ಒಕ್ಕೂಟ ಮೈಸೂರಿನ ಮೇಲೆ ದಾಳಿ ಮಾಡಿದಾಗ ಆ ಒಕ್ಕೂಟದ ಸೈನ್ಯಕ್ಕೆ ಆಹಾರ ಧಾನ್ಯವನ್ನು ಸರಬರಾಜು ಮಾಡುವ ಕರಾರನ್ನು ಬಂಜಾರರು ಮಾಡಿಕೊಂಡಿರುತ್ತಾರೆ. ಆಗೊಮ್ಮೆ ಅವರು ದಕ್ಷಿಣದ ಕಡೆಗೆ ಬರುತ್ತಾರೆ. ಕ್ರಿ.ಶ.೧೭೬೨ರಲ್ಲಿ ಭೀಮಾನಾಯಕ್‌ನು ಬಂಜಾರ ವ್ಯಾಪಾರಿಗೆ ೨೫,೦೦೦ ಎತ್ತುಗಳ ಹೇರುಗಳಷ್ಟು ಧಾನ್ಯಗಳನ್ನು ಶ್ರೀರಂಗಪಟ್ಟಣಕ್ಕೆ ಸಾಗಿಸಲು ಬ್ರಿಟಿಷರು ೧,೫೦,೦೦೦ ರೂಪಾಯಿಗಳನ್ನು ಮುಂಗಡವಾಗಿ ಕೊಡುತ್ತಾರೆ. ಪಶ್ಚಿಮ ಘಟ್ಟವನ್ನು ದಾಟುವ ಸಮಯದಲ್ಲಿ ಉಂಟಾದ ಅಡಚಣೆಯಿಂದಾಗಿ ನಿಗದಿತ ಸಮಯಕ್ಕೆ ಆಹಾರ ಧಾನ್ಯಗಳನ್ನು ತಲುಪಿಸಲಾಗಲಿಲ್ಲ. ಅನೇಕ ಅಡೆತಡೆಗಳನ್ನು ದಾಟಿ ಲಂಬಾಣಿ ನಾಯಕರು ಕ್ರಿ.ಶ. ೧೭೯೯ರ ವೇಳೆಗೆ ಮೈಸೂರನ್ನು ತಲುಪುತ್ತಾರೆ. ಆ ವೇಳೆಗೆ ಮೈಸೂರು ಬ್ರಿಟಿಷರ ವಶವಾಗಿರುತ್ತದೆ. ಭಾರತ ಸಂಪೂರ್ಣವಾಗಿ ಬ್ರಿಟಿಷರ ಆಳ್ವಿಕೆಗೆ ಒಳಪಡುತ್ತದೆ.[೩೦] ದೇಶದ ಹೊಸ ಹೊಸ ಪರಿವರ್ತನೆಗಳ ಫಲವಾಗಿ ಲಂಬಾಣಿಗರ ವ್ಯಾಪಾರ, ಸರಬರಾಜು ಮಾಡುವ ಕಾರ್ಯ ನಿಂತುಹೋಗಿ ತುಂಬಾ ಕಷ್ಟದ ಪರಿಸ್ಥಿತಿಯನ್ನು ಎದುರಿಸಬೇಕಾಯಿತು.

ಆಧುನಿಕ ಕಾಲದ ಕೈಗಾರೀಕರಣದ ಪ್ರಭಾವದಿಂದಾಗಿ ಲಂಬಾಣಿಗರ ಆರ್ಥಿಕ ಜೀವನ ಪರಿವರ್ತನೆಗೊಂಡಿರುವುದು ಕಂಡುಬರುತ್ತದೆ. ಕೃಷಿ, ಕೃಷಿಕಾರ್ಮಿಕರು, ಬೇಟೆ, ಆಹಾರ ಸಂಗ್ರಹಣೆ ಪಶುಸಾಕಾಣಿಕೆಯೊಂದಿಗೆ ವ್ಯಾಪಾರವನ್ನು ಕೈಗೊಂಡಿದ್ದಾರೆ. ಅನೇಕರು ದಲ್ಲಾಳಿ ವ್ಯಾಪಾರ ಮಾಡುವುದು ಕಂಡುಬರುತ್ತದೆ. ಶ್ರೀ ಸೇವಾಲಾಲ್ ಆಗ್ರೋ ಏಜೆನ್ಸಿ ಕೊಟ್ಟೂರು, ರಾಮನಾಯ್ಕ ಟ್ರೇಡಿಂಗ್ ಕಂಪನಿ,

ಭೀಮನಾಯ್ಕ ಟ್ರೇಡರ್ಸ್ ಕಂಪನಿ ಹಗರಿಬೊಮ್ಮನಹಳ್ಳಿ, ಮರಿಯಮ್ಮ ಟ್ರೇಡಿಂಗ್ ಕಂಪನಿ ಬಳ್ಳಾರಿ, ಸೇವಾಭಾಯ ಟ್ರೇಡಿಂಗ್ ಕಂಪನಿ ಹೂವಿನಹಡಗಲಿ ಮೊದಲಾದ ದಲ್ಲಾಳಿ ಅಂಗಡಿಗಳಿವೆ. ಕೆಲವರು ಎತ್ತು, ಕುರಿ ವ್ಯಾಪಾರ ಮಾಡುತ್ತಾರೆ. ಅದೇ ರೀತಿ ಇತರೆ ಸಣ್ಣ ವ್ಯಾಪಾರಗಳಾದ ಕಿರಾಣಿ, ಕಾಯಿಪಲ್ಲೆ, ಔಷಧಿ, ಹೋಟೆಲ್ ಮೊದಲಾದ ಅಂಗಡಿಗಳನ್ನಿಟ್ಟು ವ್ಯಾಪಾರ ಮಾಡುವುದು ಕಂಡುಬರುತ್ತದೆ. ಕೊಟ್ಟೂರು, ಹಡಗಲಿ ದಲ್ಲಾಳಿ ವ್ಯಾಪಾರ ಮಾಡುವವರ ಸಂಖ್ಯೆ ಅಧಿಕವಾಗಿದ್ದರೆ, ಹಗರಿಬೊಮ್ಮನಹಳ್ಳಿ, ಬಳ್ಳಾರಿಯಲ್ಲಿ ಚಿಕ್ಕಪುಟ್ಟ ವ್ಯಾಪಾರ, ಹೊಸಪೇಟೆ, ಸಂಡೂರು, ಬಳ್ಳಾರಿ ಪ್ರದೇಶಗಳಲ್ಲಿ ಗಣಿಗಾರಿಕೆಯಲ್ಲಿ ವ್ಯವಹಾರ ಮಾಡುವುದು ಕಂಡುಬಂದಿದೆ.

**೨. ವ್ಯವಸಾಯ :** ಇತಿಹಾಸ ಪೂರ್ವಕಾಲದಿಂದಲೂ ಭಾರತದಲ್ಲಿ ವ್ಯವಸಾಯವು ಅನೂಚಾನವಾಗಿ ಬೆಳೆದು ಬಂದಿದೆ. ತನ್ನ ಗರ್ಭದಿಂದ ಹೊರಬಂದು ಧಾನ್ಯಾದಿಗಳಿಂದ ಜನರನ್ನು ಸಾಕುವ ಭೂಮಿಯನ್ನು ತಾಯಿಯೆಂದು, ಬೆಳೆಗಳನ್ನು ಬೆಳೆಯುವ ರೈತರನ್ನು ಭೂದೇವಿಯ ಮಕ್ಕಳೆಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಇದರಿಂದ ಮನುಷ್ಯನು ಕೈಗೊಳ್ಳುವ ಅನೇಕ ವೃತ್ತಿಗಳಲ್ಲಿ ಕೃಷಿಯೇ ಅತ್ಯಂತ ಪ್ರಮುಖವಾದುದೆಂದು ತಿಳಿಯುತ್ತದೆ. ಹೀಗಾಗಿ ವ್ಯವಸಾಯದ ಅಭಿವೃದ್ಧಿ ಎಂದರೆ ಒಂದು ನಾಡಿನ ಅಭಿವೃದ್ಧಿ ಎಂಬ ನಂಬಿಕೆ ಇಂದಿಗೂ ಪ್ರಚಲಿತದಲ್ಲಿದೆ.

ಲಂಬಾಣಿಗರು ಪಶುಪಾಲನೆ, ಆಹಾರ ಧಾನ್ಯಗಳ ಸರಬರಾಜು ನಂತರ ವ್ಯವಸಾಯವು ವೃತ್ತಿ ಪ್ರಾಮುಖ್ಯತೆ ಪಡೆದುಕೊಂಡಿತು. ಭಾರತದಲ್ಲಿ ಸಿಪಾಯಿ ದಂಗೆಯ ತರುವಾಯ ಬ್ರಿಟಿಷ್ ಸರ್ಕಾರ ರಸ್ತೆ ಆಧುನೀಕರಣ, ರೈಲ್ವೆ ಮಾರ್ಗಗಳನ್ನು ವಿಸ್ತರಿಸುವ ಮತ್ತು ಅಭಿವೃದ್ಧಿ ಪಡಿಸುವ ಕಡೆಗೆ ಹೆಚ್ಚು ನಿಗಾ ವಹಿಸಿತು. ಕ್ರಿ.ಶ. ೧೮೫೩ರಲ್ಲಿ ಭಾರತವನ್ನು ಪ್ರವೇಶಿಸಿದ ರೈಲ್ವೆಯು ವಾಣಿಜ್ಯ ಕ್ಷೇತ್ರದಲ್ಲಿ ಹೊಸಕ್ರಾಂತಿಯನ್ನೇ ಮಾಡಿತು. ೧೮೭೦ರ ವೇಳೆಗೆ ವಿವಿಧ ಪ್ರಾಂತ್ಯಗಳ ನಡುವೆ ಸಂಪರ್ಕವನ್ನು ಕಲ್ಪಿಸುವ ಮತ್ತು ಪ್ರತಿ ಬಂದರಿಗೂ ಅದರ ಹಿನ್ನಾಡಿನೊಂದಿಗೆ ಸಂಬಂಧ ಬೆಳೆಸುವ ಒಂದು ಸಾಮಾನ್ಯ ರೈಲ್ವೆ ವ್ಯವಸ್ಥೆಯನ್ನು ಬ್ರಿಟಿಷ್ ಸರ್ಕಾರ ಜಾರಿಗೆ ತಂದಿತು. ಪುರೋಗಾಮಿ ವಿಕೇಂದ್ರಿಕರಣ ಮತ್ತು ಸ್ಥಳೀಯ ಸರ್ಕಾರಗಳ ಆಸಕ್ತಿಯಿಂದಾಗಿ ಸಾರಿಗೆ ಸಂಪರ್ಕವು ತ್ವರಿತಗತಿಯಿಂದ ಬೆಳವಣಿಗೆಯಾಯಿತು. ಸಾರಿಗೆ ಸಂಪರ್ಕ ಜಾಲಗಳ ಅಭಿವೃದ್ಧಿಯು ವ್ಯಾಪಾರ ನಿರತವಾಗಿದ್ದ ಹಲವಾರು ಬುಡಕಟ್ಟು ಜನಾಂಗಗಳ ಮೇಲೆ ವ್ಯತಿರಿಕ್ತ ಪರಿಣಾಮವನ್ನುಂಟುಮಾಡಿ ನಿರುದ್ಯೋಗದ ದವಡೆಗೆ ತಳ್ಳಿತು. ಹೀಗೆ ನಿರುದ್ಯೋಗಿಯಾದ ಬುಡಕಟ್ಟುಗಳಲ್ಲಿ ಲಂಬಾಣಿಗರು ಒಬ್ಬರು.

ಪ್ರಾಚೀನ ಕಾಲದಿಂದಲೂ ಈ ಸಮುದಾಯ ದೊಡ್ಡ ಪ್ರಮಾಣದಲ್ಲಿ ದವಸ ಧಾನ್ಯಗಳನ್ನು ಹೇರಿಕೊಂಡು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸಾಗಿಸಿ ಜೀವನ ನಡೆಸುತ್ತಿದ್ದ ಇವರು ನಾಗರಿಕತೆಯ ಬಳುವಳಿಯಾಗಿ ಬಂದ ಸಾರಿಗೆ ಸಂಪರ್ಕದ ಅಭಿವೃದ್ಧಿಯಿಂದಾಗಿ ವೃತ್ತಿ ಹೀನವಾಯಿತು. ಆಡಳಿತಾರೂಢ ಬ್ರಿಟಿಷ್ ಸರ್ಕಾರಕ್ಕೆ ಇದರ ಅರಿವಿದ್ದರೂ ಆ ಕಡೆಗೆ ಕಿಂಚಿತ್ತೂ ಗಮನಿಸಿದಂತೆ ಕಂಡುಬರುವುದಿಲ್ಲ. ಲಂಬಾಣಿ ಬುಡಕಟ್ಟು ಮತ್ತು ಅದರಂತೆಯೇ ನಿರುದ್ಯೋಗಿಯಾದ ಇತರ ಬುಡಕಟ್ಟುಗಳಿಗೆ ಪರ್ಯಾಯ ಉದ್ಯೋಗ ವ್ಯವಸ್ಥೆಯನ್ನು ಬ್ರಿಟಿಷ್ ಸರ್ಕಾರ ಮಾಡಲಿಲ್ಲ.

ಲಂಬಾಣಿಗರ ವ್ಯಾಪಾರ ನಿಂತ ಮೇಲೆ ತಾವು ವ್ಯಾಪಾರ ನಿಮಿತ್ತ ತೆರಳಿದ್ದ ಭಾಗದಲ್ಲಿಯೇ ವಸತಿ ಮಾಡಿ ಗುಡ್ಡಗಾಡು ಪ್ರದೇಶದಲ್ಲಿ ನೆಲೆಸಿದರು. ಅವರಲ್ಲಿ ಕೆಲವರು ಗ್ರಾಮಗಳಲ್ಲಿ ವಾಸಿಸತೊಡಗಿದರು. ಸಂಚಾರಿಗಳಾದ ಅವರು ಗ್ರಾಮೀಣ ಜನರೊಂದಿಗೆ ಸೇರಿ ಗ್ರಾಮಗಳ ಹತ್ತಿರ ತಾಂಡಗಳನ್ನು ಕಟ್ಟಿಕೊಂಡು ಜೀವಿಸಲು ಪ್ರಾರಂಭ ಮಾಡುತ್ತಾರೆ. ಆ ಸಂಕ್ರಮಣದ ದಿನಗಳಲ್ಲಿ ಲಂಬಾಣಿ ಜನಾಂಗ ಹೊಟ್ಟೆಪಾಡಿಗಾಗಿ ನಿರಂತರವಾಗಿ ತಡಕಾಡಿದಂತೆ ಕಂಡುಬರುತ್ತದೆ. ಕಾಡಿನ ಅನುಭವದ ಫಲವಾಗಿ ಹಣ್ಣು ಹಂಪಲುಗಳನ್ನು ಅಥವಾ ಸೌದೆಯನ್ನು ತಲೆಯ ಮೇಲೆ ಹೊತ್ತೊಯ್ದು ಹತ್ತಿರದ ನಗರ ಪ್ರದೇಶದಲ್ಲಿ ಮಾರಿ ಬಂದ ಪುಡಿಗಾಸಿನಲ್ಲಿ ಒಡಲು ತುಂಬಿಕೊಳ್ಳುವ ಪ್ರಯತ್ನವನ್ನು ಮಾಡುತ್ತಿದ್ದಾರೆ. ವೃತ್ತಿರಹಿತ ಲಂಬಾಣಿಗರು ಕಾಡಿನಲ್ಲಿ ಪ್ರಾಕೃತಿಕವಾಗಿ ಲಭ್ಯವಿರುವ ಸೌದೆ ಹಣ್ಣು ಹಂಪಲುಗಳನ್ನು ಮಾರಿ ಬಹುದಿನಗಳವರೆಗೆ ಜೀವನ ನಿರ್ವಹಣೆ ಮಾಡುವುದು ಸಾಧ್ಯವಿರಲಿಲ್ಲ. ಜನಸಂಖ್ಯೆಯ ಹೆಚ್ಚಳ, ಅರಣ್ಯ ಕಾನೂನುಗಳ ಬಿಗಿ ಕ್ರಮಗಳಿಂದಾಗಿ ದೇಶದಲ್ಲಿನ ಬುಡಕಟ್ಟುಗಳಿಗೆ ಅನೇಕ ಸಮಸ್ಯೆಗಳು ಉದ್ಭವಿಸಿದೆ. ಇಂದು ಬಹುಪಾಲು ಲಂಬಾಣಿಗರು ಕೂಲಿಯಿಂದಲೇ ಜೀವನ ಮಾಡುತ್ತಿದ್ದಾರೆ. ಈ ಮೊದಲೇ ಗ್ರಾಮಗಳಲ್ಲಿದ್ದ ಜನರು ಉತ್ತಮವಾದ ಫಲವತ್ತತೆಯುಳ್ಳ ಜಮೀನುಗಳನ್ನು ವಶಪಡಿಸಿಕೊಂಡಿದ್ದರು. ನಂತರದಲ್ಲಿ ಬಂದು ನೆಲೆಸಿದ ಲಂಬಾಣಿಗರು ಪಾಳು ಬಿದ್ದಿದ್ದ ಭೂಮಿಗಳನ್ನು, ಕೃಷಿಯೋಗ್ಯ ಭೂಮಿಯನ್ನಾಗಿಸಿಕೊಂಡು ವ್ಯವಸಾಯ ಮಾಡತೊಡಗಿದರೆಂಬ ಅಭಿಪ್ರಾಯವಿದೆ.

ಸಾಗುವಳಿಯ ಜಮೀನನ್ನು ದೇವ ಮಾತೃಕೆ ಮತ್ತು ನದಿ ಮಾತೃಕೆಗಳೆಂದು ವಿಂಗಡಿಸಲಾಗಿದೆ. ಕೇವಲ ಮಳೆಯ ನೀರನ್ನೇ ಆಶ್ರಯಿಸಿ ಬೆಳೆಯುವ ಹೊಲಗಳು ದೇವ ಮಾತೃಕೆಗಳೆಂದು, ನದಿ, ಕೆರೆ ಮೊದಲಾದವುಗಳನ್ನು ಆಶ್ರಯಿಸಿರುವ ಹೊಲಗಳು ನದಿ ಮಾತೃಕೆಗಳೆಂದು ಕರೆಯಲಾಗಿದೆ.''[೨೫] ಈ ಎರಡು ರೀತಿಯ ಜಮೀನುಗಳನ್ನು ಇಂದು ಎರೆಭೂಮಿ, ನೀರಾವರಿ ಭೂಮಿ ಎಂದು ಕರೆಯಲಾಗುತ್ತದೆ. ಲಂಬಾಣಿಗರು ಎರಡೂ ರೀತಿಯ ಜಮೀನನ್ನು ಹೊಂದಿರುವುದು ಕಂಡುಬರುತ್ತದೆ.

ವ್ಯವಸಾಯದ ಬಗ್ಗೆ ಶಾಸನಗಳಲ್ಲಿ ಹೆಚ್ಚಿನ ಉಲ್ಲೇಖಗಳು ದೊರೆಯುವುದಿಲ್ಲ. ಬಳ್ಳಾರಿ ಜಿಲ್ಲೆಯಲ್ಲಿ ಎರೆ ಭೂಮಿ, ಎರೆಗದ್ದೆ, ಕೆಂಪು ಭೂಮಿ, ಕೆಯ್‌ಭೂಮಿ, ತೋಟ, ಹೂವಿನ ತೋಟ, ಕಲ್ಲುಭೂಮಿ, ಸವಳುಭೂಮಿ ಮೊದಲಾದ ರೀತಿಯ ಭೂಮಿಗಳಿದ್ದವೆಂದು ಬಳ್ಳಾರಿ ಶಾಸನ ಉಲ್ಲೇಖಿಸುತ್ತದೆ.[೨೨] ಶಾಸನಗಳಲ್ಲಿ ಕೃಷಿ ವರ್ಷವು ಎರಡು ಕಾಲಾವಧಿಗಳಾಗಿ ವಿಭಾಗವಾಗಿತ್ತು. ಅವುಗಳಲ್ಲಿ ೧. ಜೂನ್‌ನಿಂದ ಅಕ್ಟೋಬರ್‌ವರೆಗೆ ನೈಋತ್ಯ ಮುಂಗಾರು ಮಳೆಗೆ ಹೊಂದಿಕೊಳ್ಳುವ ಅವಧಿ. ೨. ಜನವರಿಯಿಂದ ಫೆಬ್ರವರಿ ತಿಂಗಳ ಚಳಿ ಹವೆಯ ಫಸಲು ನೈಋತ್ಯ ದಿಕ್ಕಿನಿಂದ ಬರುವ ಮುಂಗಾರು ಮೊದಲ ಮಳೆಯೊಂದಿಗೆ ಕಾರ್ತಿಕ ಬೆಳೆಯ ಬಿತ್ತುವಿಕೆ ಪ್ರಾರಂಭ. ಅದು ಮುಂಗಾರು ಎಂದು ಕರೆಯಲ್ಪಡುತ್ತದೆ. ವೈಶಾಖ ಬೆಳೆಯ ಬಿತ್ತುವಿಕೆ ಮಾನ್‌ಸೂನ್ ಕೊನೆಯ ವೇಳೆ ಪ್ರಾರಂಭ ಅದು ಹಿಂಗಾರು ಎಂದು ಕರೆಯಲ್ಪಡುತ್ತದೆ. ಇದರಿಂದ ಆಗ ರೈತರಿಗೆ ವರ್ಷದಲ್ಲಿ ಎರಡು ಬೆಳೆ ತೆಗೆಯುವುದು ತಿಳಿದಿತ್ತೆಂಬುದು ಸ್ಪಷ್ಟ.

ಬಳ್ಳಾರಿ ಜಿಲ್ಲೆಯ ಹೊಲಗಳಲ್ಲಿ ಬೆಳೆಯುವ ಜೋಳ, ನವಣೆ, ಸಜ್ಜೆ, ಗದ್ದೆಗಳಲ್ಲಿ ಬೆಳೆಯುವ ಕಬ್ಬು, ತೆಂಗು, ಭತ್ತ ಹಾಗೂ ತೋಟಗಳಲ್ಲಿ ಬೆಳೆಯುವ ಹೂ-ಹಣ್ಣುಗಳು, ಎಲೆ, ಬಾಳೆ, ಮೊದಲಾದವುಗಳ ಕುರಿತು ಉಲ್ಲೇಖಿಸುತ್ತದೆ. ವಿಜಯನಗರ ಕಾಲದ ಪ್ರವಾಸಿಗಳಾದ ನ್ಯೂನಿಜ್, ಅಬ್ದುಲ್ ರಜಾಕ್, ಫೇಸ್ ಮೊದಲಾದವರು, ಗೋಧಿ ಕಾಳು, ಭತ್ತ, ಜೋಳ, ವೀಳ್ಯದೆಲೆ, ಕಬ್ಬು ಮೊದಲಾದವುಗಳಿಗೆ ಬಾರಿ ಬೇಡಿಕೆಯಿತ್ತೆಂದು ತಿಳಿಸುತ್ತಾರೆ.[೨೩] ಇಂದಿಗೂ ಈ ಬೆಳೆಗಳನ್ನು ಬೆಳೆಯುತ್ತಿರುವುದು ಸಾಮಾನ್ಯವಾಗಿ ಕಂಡುಬರುತ್ತದೆ.

ಬಳ್ಳಾರಿ ಪ್ರದೇಶವು ಕೃಷಿ ಪ್ರಧಾನವಾಗಿದೆ. ಕೃಷಿಯನ್ನು ಶೇ.೭೦ರಷ್ಟು ಜನರು ಅವಲಂಬಿತರಾಗಿದ್ದಾರೆ. ಕೃಷಿಯಲ್ಲಿ ನೀರಾವರಿ ಮತ್ತು ಒಣಭೂಮಿ ಬೇಸಾಯ ಎಂದು ವರ್ಗೀಕರಿಸಲಾಗಿದೆ. ಲಂಬಾಣಿಗರು ಎರಡು ರೀತಿಯ ಜಮೀನನ್ನು ಹೊಂದಿದ್ದಾರೆ. ಒಣಭೂಮಿಯೆಂದರೆ ಮಳೆ ಆಶ್ರಿತ ಭೂಮಿಯಾಗಿದ್ದು ಬಳ್ಳಾರಿಯಲ್ಲಿ ಅಧಿಕ ಪ್ರಮಾಣದಲ್ಲಿದೆ. ಜಿಲ್ಲೆಯ ಭೌಗೋಳಿಕ ವಿಸ್ತೀರ್ಣದಲ್ಲಿ ಶೇಕಡಾ ೧೪.೪೪ ಅರಣ್ಯ ಪ್ರದೇಶದಿಂದ ಕೂಡಿದೆ. ಇದು ಸುಮಾರು ೧೧೯. ೨೪೭ ಹೆಕ್ಟೇರುಗಳಾಗಿದೆ ಎಂದು ತಿಳಿದುಬಂದಿದೆ. ಈ ಪ್ರದೇಶವು ಪ್ರಾಕೃತಿಕ ಅನಾನುಕೂಲತೆಗಳಿಂದ ಕೂಡಿದ್ದು. ಅತಿವೃಷ್ಟಿ ಅನಾವೃಷ್ಟಿಗಳಿಗೆ ತುತ್ತಾಗುವುದು ಸಾಮಾನ್ಯವಾಗಿರುತ್ತದೆ.

ಈ ಪ್ರದೇಶದಲ್ಲಿ ನೆಲೆಸಿದ ಲಂಬಾಣಿಗರು ಹತ್ತಿ, ಶೆಂಗಾ, ಕಡ್ಲೆ, ಜೋಳ, ಗೋಧಿ, ಭತ್ತ, ನವಣೆ, ಸಜ್ಜೆ, ಹೆಸರುಕಾಳು, ಗುರಾಳು, ಹುರಳಿಕಾಳು, ಸೂರ್ಯಕಾಂತಿ, ಅಗಸಿ ಮೊದಲಾದ ಧಾನ್ಯಗಳ ಜೊತೆಗೆ ಅನೇಕ ಕಾಯಿಪಲ್ಲೆಗಳನ್ನು ಬೆಳೆಯುತ್ತಾರೆ. ಹತ್ತಿ, ಸೂರ್ಯಕಾಂತಿ, ಶೇಂಗಾ, ತಂಬಾಕು, ಜೋಳ, ಗೋಧಿ ಪ್ರಮುಖ ವಾಣಿಜ್ಯ ಬೆಳೆಗಳಾಗಿವೆ. ಮುಂಗಾರು, ಹಿಂಗಾರು ಎಂಬ ಎರಡು ಬೆಳೆಗಳನ್ನು ಬೆಳೆಯಲಾಗುತ್ತದೆ. ಈ ಪ್ರದೇಶದ ಲಂಬಾಣಿಗರು ಕನಿಷ್ಟವೆಂದರೆ ೧ ಎಕರೆ ಭೂಮಿಯನ್ನು ಹೊಂದಿದ್ದಾರೆ. ಭೂಮಿ ಇದ್ದು ಬೆಳೆ ಹಾನಿಗೊಳಗಾದಾಗ ಬೇರೆ ಊರಿಗೆ ವಲಸೆ (ಗುಳೆ) ಹೋಗುವುದು ಕಂಡುಬರುತ್ತದೆ. ಸರ್ಕಾರದಿಂದ ಅನೇಕ ರೀತಿಯ ಸಾಲ ಸೌಲಭ್ಯವನ್ನು ಪಡೆದವರಿದ್ದಾರೆ.

**ನೀರಾವರಿ :** ಮಳೆಯ ಆಶ್ರಯವಿಲ್ಲದೆ ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ನೀರಾವರಿ ಸಂಪನ್ಮೂಲಗಳು ಅತ್ಯವಶ್ಯಕ. ನೀರಾವರಿಯು ಮುಖ್ಯವಾಗಿ ನದಿ, ಬಾವಿ, ಕೆರೆಗಳನ್ನು ಆಶ್ರಯಿಸಿತ್ತು. ಇಂಥ ಕೆರೆ, ಕಾಲುವೆ ಬಾವಿಗಳನ್ನು ನಿರ್ಮಿಸುವುದು ಪುಣ್ಯ. ಶ್ರೇಯಸ್ಕರವೆಂದು ನಂಬಿದ್ದರಿಂದ ಈ ನಾಡಿನಲ್ಲೆಡೆ ಅನೇಕ ಕೆರೆ, ಕಾಲುವೆ, ಬಾವಿ, ಹಳ್ಳ, ಹೊಂಡಗಳನ್ನು ಕಾಣಬಹುದಾಗಿದೆ. ಕೆರೆ ಕಾಲುವೆಗಳನ್ನು ನಿರ್ಮಿಸುವುದಲ್ಲದೆ, ಅವುಗಳನ್ನು ನಾಶಪಡಿಸುವುದು, ಅತ್ಯಂತ ಪಾಪಕರವೆಂಬ ಭಾವನೆಯಿದ್ದಿತೆಂದು ಶಾಸನಗಳು ಉಲ್ಲೇಖಿಸುತ್ತವೆ.

ಇಂದಿನ ಬಳ್ಳಾರಿ ಜಿಲ್ಲೆಯಲ್ಲಿ ತುಂಗಭದ್ರಾ ನದಿಗೆ ಅಡ್ಡಲಾಗಿ ಅಣೆಕಟ್ಟು ನಿರ್ಮಿಸಿರುವುದನ್ನು ನ್ಯೂನಿಜ್ ತನ್ನ ವರದಿಯಲ್ಲಿ ವರ್ಣಿಸಿದ್ದಾನೆ.[೨೪] ಈ ಅಣೆಕಟ್ಟಿಲ್ಲದೆ ನದಿಯಿಂದ ಹದಿನೈದು ಮೈಲಿ ಉದ್ದದ ಒಂದು ಮೇಲು ಕಾಲುವೆಯನ್ನು ಕಲ್ಲಿನಿಂದ ಕಟ್ಟಿಸಿದರು. ಈ ನದಿಯ ನೀರನ್ನು ಬಳಸಿಕೊಂಡು ನಗರ ಸುತ್ತ ತೋಟ, ಹಣ್ಣಿನ ತೋಟ, ಮರದ ತೋಪುಗಳು, ದ್ರಾಕ್ಷಿ ತೋಟಗಳು ಮೊದಲಾದವುಗಳನ್ನು ಬೆಳೆಸಿದರು. ಈ ನದಿಯ ನೀರನ್ನು

ಸಂಗ್ರಹಿಸಿ ಅಣೆಕಟ್ಟು ನಿರ್ಮಿಸಲು ೨ನೇ ಬುಕ್ಕರಾಯನು ತನ್ನ ತಂದೆಯಿಂದ ಬಂದಿದ್ದ ಸಮಸ್ತ ಐಶ್ವರ್ಯವನ್ನು ವೆಚ್ಚ ಮಾಡಿದರು ಎಂದು ತಿಳಿಯುತ್ತದೆ.[೨೫] ಇದರಿಂದ ಅಂದು ಅಣೆಕಟ್ಟು ಅಥವಾ ಕೆರೆ, ಕಾಲುವೆ ನಿರ್ಮಿಸುವುದು ಕಷ್ಟಕರವಾಗಿತ್ತೆಂದು ಕಾಣುತ್ತದೆ. ಆದರೂ ಶ್ರೀಮಂತರು, ವರ್ತಕರು, ಗೌಡರು ಮೊದಲಾದವರು ಅನೇಕ ಕೆರೆ, ಬಾವಿಗಳನ್ನು ನಿರ್ಮಿಸಿದರೆಂದು ಕಂಡುಬರುತ್ತದೆ. ಅರಸರು ನೀರಾವರಿ ಕಾರ್ಯಗಳನ್ನು ನಡೆಸಿದ ವ್ಯಕ್ತಿಗಳನ್ನು ಪುರಸ್ಕರಿಸುತ್ತಿದ್ದರಿಂದ ಅಂದು ನೀರಾವರಿ ವ್ಯವಸ್ಥೆ ಉತ್ತಮವಾಗಿತ್ತೆಂದು ಸ್ಪಷ್ಟವಾಗುತ್ತದೆ.

ಜಿಲ್ಲೆಯ ಬಹುತೇಕ ಗ್ರಾಮಗಳು, ನೆರೆಯ ಆಂಧ್ರಕ್ಕೂ ಸಹ ತುಂಗಭದ್ರಾ ನದಿಯು ಜೀವನಾಡಿಯಾಗಿ ಪರಿಣಮಿಸಿದೆ. ಈ ನೀರಿನ ಸೌಕರ್ಯ ಪಡೆದ ರೈತರು ಕೃಷಿಗೆ ಮತ್ತು ಕುಡಿಯಲು ಇದೇ ನೀರನ್ನೇ ಬಳಸುತ್ತಿರುವುದು ಗಮನಾರ್ಹವಾದ ಸಂಗತಿ. ತುಂಗಭದ್ರಾ ನದಿಗೆ ಈ ಹಿಂದೆ ಪಂಪ ಸರೋವರ, ಪಂಪಾನದಿ ಎಂದೂ ಕರೆಯಲಾಗುತ್ತಿತ್ತು. ಈ ನದಿ ನೀರು ಪಶ್ಚಿಮ ಹಾಗೂ ಉತ್ತರ ಭಾಗಗಳಾದ ಕರ್ನೂಲ್ ಹತ್ತಿರ ಕೃಷ್ಣನದಿಗೆ ಸೇರುತ್ತದೆ. ಇದರಿಂದ ಶಿವಮೊಗ್ಗದಲ್ಲಿ ಹುಟ್ಟಿ ಬಂದ ತುಂಗಭದ್ರಾ ನದಿ ಜಿಲ್ಲೆಯ ಜನರಿಗೆ ನೀರುಣಿಸಿ ನಂತರ ಕೃಷಿಗೆ ಹೆಚ್ಚು ನೀರು ಬಳಸುತ್ತಿರುವುದು ಕಂಡುಬರುತ್ತದೆ.

ತುಂಗಭದ್ರಾ ಅಣೆಕಟ್ಟು ನಿರ್ಮಾಣ ಮಾಡಲು ಈ ಭಾಗದಲ್ಲಿ ಫಲವತ್ತಾದ ಭೂಮಿ ಮುಳುಗಡೆಯಾಗಿದೆ. ಇದರಲ್ಲಿ ಬಹುಶಃ ೭೭ ಹಳ್ಳಿಗಳು ಮುಳುಗಿರಬಹುದೆಂದು ಅಂದಾಜಿಸಲಾಗಿದೆ. ಮುಳುಗಡೆ ಪ್ರದೇಶದ ಜನರು ಹೊಸಪೇಟೆಯ ಸುತ್ತಮುತ್ತ ಇರುವ ಹಳ್ಳಿಗಳಲ್ಲಿ ವಾಸವಾಗಿರುವರೆಂದು ಸಂಶೋಧನೆಯಿಂದ ಬೆಳಕಿಗೆ ಬಂದ ಅಂಶವಾಗಿದೆ. ಅಲ್ಲಿ ವಾಡಿಕೆಯಲ್ಲಿದ್ದ ಹಲವು ಊರ ಹೆಸರುಗಳು ಹಾಗೂ ಆಚರಣೆ ವಿಧಿ-ವಿಧಾನಗಳು ಈಗಲೂ ಗ್ರಾಮದ ಜನರು ಆಚರಿಸುತ್ತಾ ಬರುತ್ತಿದ್ದಾರೆ. ನದಿಯಲ್ಲಿ ಮುಳುಗಿದ್ದ ಮಲ್ಲಾಪುರ ಎಂಬ ತಾಲ್ಲೂಕು ಈಗ ಹಗರಿಬೊಮ್ಮನಹಳ್ಳಿಗೆ ಸೇರಿದೆ. ಹೀಗೆ ಗ್ರಾಮಗಳ ಪುನರ್ವಸತಿಗಾಗಿ ಸರ್ಕಾರವು ಸುಮಾರು ೩೦ ಕೋಟಿ ರೂಪಾಯಿ ವೆಚ್ಚ ಮಾಡಲಾಗಿದೆ ಎಂದು ತಿಳಿದುಬಂದಿದೆ.

ತುಂಗಭದ್ರಾ ನದಿಯ ನೀರು ಕಾಲುವೆಗಳ ಮೂಲಕ ಕೃಷಿಗಾಗಿ ಬಳಸಲಾಗುತ್ತಿದೆ. ಈ ಭಾಗದ ರೈತರು ಕೃಷಿಗೆ ಮಹತ್ವ ನೀಡಿದಂತೆ ಅದನ್ನು ಉಳಿಸಿ ಬೆಳೆಸಿಕೊಂಡು ಸಾಗಿಬಂದಿದ್ದಾರೆ. ಜಿಲ್ಲೆಯ ೩೮,೦೪೭ ಹೆಕ್ಟೇರು ಪ್ರದೇಶವನ್ನು ಆಹಾರಕ್ಕಾಗಿ ಬಳಕೆ ಮಾಡಿ ೨೪.೦೬೨ ಹೆಕ್ಟೇರ್ ಪ್ರದೇಶದಲ್ಲಿ ಆಹಾರೇತರ ಬೆಳೆಗಳನ್ನು ಬೆಳೆಯುತ್ತಿರುವುದು ಕಂಡುಬರುತ್ತದೆ. ಇದರಲ್ಲಿ ಅತಿ ಹೆಚ್ಚಾಗಿ ಕಡಲೆಕಾಯಿ ೫೮,೩೦೦ ಹಾಗೂ ಹತ್ತಿಯನ್ನು ೪೬.೯೦೨ ಹೆಕ್ಟೇರ್‌ಗಳಲ್ಲಿ ಬೆಳೆಯಲಾಗುತ್ತದೆ. ಭತ್ತ ೨೧.೮೭೬ ಜೋಳ ೧೭,೦೧೪, ಸಜ್ಜೆ ೧೫೦೦೩, ರಾಗಿ ೧೭೧೨೫೩೨, ಕಬ್ಬು ೧೦,೪೪೨ ಹಾಗೂ ತೆಂಗು ಕೇವಲ ೪೬೫ ಹೆಕ್ಟೇರ್‌ಗಳಲ್ಲಿ ಬೆಳೆಯುತ್ತಿದ್ದಾರೆ. ಆದರೆ ತರಕಾರಿ ಬೆಳೆಗಳಾದ ಬದನೆಕಾಯಿ, ಟೊಮ್ಯಾಟೋ, ಮೆಣಸಿನಕಾಯಿ, ಈರುಳ್ಳಿ ಬೆಳೆಗಳನ್ನು ೪೯೨೧ ಹೆಕ್ಟೇರ್‌ಗಳಲ್ಲಿ ಬೆಳೆದರೆ, ಬಾಳೆ, ನಿಂಬೆ ಬೆಳೆಯನ್ನು ೫೮೦೫ ಹೆಕ್ಟೇರ್ ಪ್ರದೇಶದಲ್ಲಿ ಬೆಳೆಯಲಾಗುತ್ತಿದೆ. ಇಷ್ಟು ಬೆಳೆಗಳಿಗೆ ನೀರುಣಿಸುವ ತುಂಗಭದ್ರಾ ನದಿಯ ನೀರಿನ ಸಂಗ್ರಹ ಸಾಮರ್ಥ್ಯವು ೧೩೩ ಟಿ.ಎಂ.ಸಿಗಳಾಗಿದ್ದು, ೧೬೩೩ ಅಡಿಗಳ ಆಳ ಇದೆ. ಈ ಆಳ ಇಂದು ಕಂಡುಬರುವುದಿಲ್ಲ. ಏಕೆಂದರೆ ಈ ಭಾಗದಲ್ಲಿ ಅತಿ ಹೆಚ್ಚು

ರೀತಿಯ ಖನಿಜೋದ್ಯಮ ಸಾಗುತ್ತಿರುವುದರಿಂದ ಮಳೆಗಾಲದಲ್ಲಿ ಖನಿಜ ಮಣ್ಣು ಕೊಚ್ಚಿಕೊಂಡು ಬಂದು ನದಿಯಲ್ಲಿ ಸೇರಿಕೊಂಡಿದೆ. ಬಹಳಷ್ಟು ಪ್ರಮಾಣದಲ್ಲಿ ಹೂಳು ತುಂಬಿಕೊಂಡಿದೆ. ಈಗಲೂ ಹೊಸಪೇಟೆ, ಸಂಡೂರು, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ ಭಾಗದ ಹಲವು ತಾಂಡಾಗಳಲ್ಲಿ ವಾಸವಾಗಿರುವ ಲಂಬಾಣಿ ಜನರು ನದಿಯ ನೀರಿನ ಆಶ್ರಯಿಸಿದ್ದಾರೆ. ಬಹುತೇಕವಾಗಿ ಎರೆಭೂಮಿಯಲ್ಲಿ ಮಳೆಯನ್ನು ನಂಬಿ ಬೆಳೆಯನ್ನು ಪಡೆಯುತ್ತಿರುವುದು ಕಂಡುಬರುತ್ತದೆ.

ಒಟ್ಟಾರೆ ಬಳ್ಳಾರಿ ಜಿಲ್ಲೆಯಾದ್ಯಂತ ಎರಡೂ ರೀತಿಯ ಕೃಷಿ ವ್ಯವಸ್ಥೆಯನ್ನು ಲಂಬಾಣಿಗರು ಅವಲಂಬಿಸಿರುವುದು ಕಂಡುಬರುತ್ತದೆ. ಇದರೊಂದಿಗೆ ದನ, ಕರು, ಎತ್ತು, ಆಡು, ಕುರಿಗಳನ್ನು ಸಾಕುವುದು ಕಂಡುಬರುತ್ತದೆ. ಕಡಿಮೆ ಭೂಮಿಯುಳ್ಳವರು ಅದರಲ್ಲೂ ಎರೆಭೂಮಿ ಹೊಂದಿರುವ ಲಂಬಾಣಿಗರು ಕೃಷಿಕೂಲಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಎರೆಭೂಮಿಯುವರ ಹತ್ತಿರ ಎತ್ತಿನ ಬಂಡಿ, ಕುಂಟೆ ಮೊದಲಾದ ಕೃಷಿ ಉಪಕರಣಗಳಿದ್ದರೆ, ನೀರಾವರಿ ಜಮೀನುಳ್ಳವರ ಹತ್ತಿರ ಟ್ರಾಕ್ಟರ್ ಹಾಗೂ ಆಧುನಿಕ ಉಪಕರಣಗಳಿರುತ್ತವೆ. ಹೀಗಾಗಿ ಮಳೆ ಆಧಾರಿತ ಜಮೀನು ಹೊಂದಿದ ಲಂಬಾಣಿಗರು ಆರ್ಥಿಕ, ರಾಜಕೀಯ, ಸಾಮಾಜಿಕ ಹಾಗೂ ಶೈಕ್ಷಣಿಕ ಜೀವನ ಪದ್ಧತಿಯು ನೀರಾವರಿ ಜಮೀನು ಹೊಂದಿದ ಲಂಬಾಣಿಗರ ಜೀವನ ಪದ್ಧತಿಗಿಂತ ಸ್ವಲ್ಪ ಕೆಳ ಹಂತದಲ್ಲಿರುವುದು ಕಂಡುಬರುತ್ತದೆ.

**೩. ಕೃಷಿ ಕಾರ್ಮಿಕರು :**

ಕೃಷಿ ಕ್ಷೇತ್ರದಲ್ಲಿ ಕೃಷಿ ಕಾರ್ಮಿಕರ ಪಾತ್ರ ಬಹುದೊಡ್ಡದು. ಮೂಲತಃ ಕೃಷಿ ಪ್ರಧಾನವಾದ ಈ ದೇಶದಲ್ಲಿ ಬಹುಸಂಖ್ಯೆಯಲ್ಲಿ ಕೃಷಿ ಕಾರ್ಮಿಕರ ಅವಶ್ಯಕತೆ ಕಂಡುಬರುತ್ತದೆ. ಇಂತಹ ಕೆಲಸಗಳಲ್ಲಿ ತೊಡಗಿಸಿಕೊಳ್ಳುವುದು ಆರ್ಥಿಕವಾಗಿ ಹಿಂದುಳಿದಿರುವ ಲಂಬಾಣಿ ಜನಾಂಗಕ್ಕೆ ಅನಿವಾರ್ಯ. ಕೂಲಿ ದೊರೆಯದೆ ಹೋದರೆ ಜೀವನ ಮಾಡುವುದು ದುಸ್ತರ. ಹೀಗಾಗಿ ಬಹುಸಂಖ್ಯೆಯಲ್ಲಿ ಲಂಬಾಣಿಗರು ಕರ್ನಾಟಕದಾದ್ಯಂತ ಕೃಷಿ ಕೂಲಿಯನ್ನೇ ನಂಬಿಕೊಂಡು ಜೀವನ ಮಾಡುತ್ತಿದ್ದಾರೆ. ಈ ರೀತಿ ಕೃಷಿಗೆ ಸಹಾಯವಾಗುವಂತೆ ಭೂಮಾಲಿಕ ವರ್ಗ ಇವರನ್ನು ಅಂದರೆ ಲಂಬಾಣಿಗರನ್ನೊಳಗೊಂಡಂತೆ ಇತರೆ ಕೆಳಹಂತದ ಜನರನ್ನು ಕೂಲಿಗಾಗಿ ನೇಮಿಸಿಕೊಳ್ಳುತ್ತಿದ್ದುದನ್ನೂ ದಾಖಲೆಗಳು ಸ್ಪಷ್ಟಪಡಿಸುತ್ತದೆ. ಸ್ವಾತಂತ್ರ್ಯಪೂರ್ವದಲ್ಲಿ ಮೈಸೂರು ಸಂಸ್ಥಾನದ ಪ್ರವಾಸ ಕೈಗೊಂಡ ಜೆ.ಎ. ದುಬಾಯ್‌ರವರು ಈ ರೀತಿ ದಾಖಲಿಸುತ್ತಾರೆ, ಪ್ರಾಕೃತಿಕವಾಗಿ ಸಂಪತ್ತಿನ ಗಣಿಯಾಗಿರುವ ಭಾರತದಲ್ಲಿ ನೂರರಲ್ಲಿ ತೊಂಬತ್ತರಷ್ಟು ಜನ ಕೃಷಿಯಾಧಾರಿತ ಜೀವನ ನಡೆಸಿದ್ದಾರೆ. ಇಲ್ಲಿ ಸಾಕಷ್ಟು ಕೃಷಿಭೂಮಿ ಇದೆ. ಇಲ್ಲಿನ ರೈತರು ಎರಡು, ಮೂರು ನೇಗಿಲುಗಳನ್ನು ಹೊಂದಿದ್ದಾರೆ. ಈ ಶೂದ್ರವರ್ಣದಲ್ಲಿ ಮೇಲ್ವರ್ಗದ ಜಾತಿಗಳು ತಮ್ಮ ಕೃಷಿ ನೆರವಿಗೆ ಕೆಳಹಂತದ ಜನರನ್ನು ಸೇವಕರಾಗಿ ಹೊಂದಿದ್ದಾರೆ.[೨೨]

ಹಿಂದಿನಿಂದಲೂ ಲಂಬಾಣಿಗರು ಮತ್ತು ಮಾದಿಗರಲ್ಲಿ ಬಹಳಷ್ಟು ಮಂದಿ ಕೃಷಿಯಾಳುಗಳಾಗಿ ದುಡಿಯುತ್ತಿದ್ದರೆಂದು ೧೮೮೧ರಲ್ಲಿ ಬಿಡುಗಡೆಯಾದ ಜನಗಣತಿ ವರದಿ ಮಾಹಿತಿ ಒದಗಿಸುತ್ತದೆ.[೨೩] ಕರ್ನಾಟಕದ ಲಂಬಾಣಿಗರು ಕೃಷಿಯನ್ನೇ ತಮ್ಮ ಪ್ರಧಾನ ಕಸುಬನ್ನಾಗಿ ಮಾಡಿಕೊಂಡು ಜೀವಿಸುತ್ತಿದ್ದಾರೆ. ಕೃಷಿಕರಲ್ಲಿ ಒಣ

ಬೇಸಾಯದವರೇ ಹೆಚ್ಚು. ಗದ್ದೆ, ತೋಟಗಳಿರುವ ಜನ ತೀರ ಕಡಿಮೆ. ಬಹುತೇಕ ಜನ ತಮಗೆ ಸ್ವಂತ ಜಮೀನು ಇಲ್ಲದೆ ಬೇರೆಯವರ ಜಮೀನಿನಲ್ಲಿ ಕೂಲಿಕಾರರಾಗಿ ಕೆಲಸ ಮಾಡುತ್ತಾರೆ.[೫೪] ೧೯೨೧ರ ಜನಗಣತಿಯ ಪ್ರಕಾರ ಕೃಷಿ ಕೆಲಸಗಾರರ ಒಟ್ಟು ಸಂಖ್ಯೆಯಲ್ಲಿ ಲಂಬಾಣಿ ಜನಾಂಗವು ೫೫.೩೨೩ ಜನ ಎಂದು ತಿಳಿಸಿಕೊಡುತ್ತದೆ.[೫೫] ಈ ಸಮುದಾಯ ಬಹಳ ಹಿಂದಿನಿಂದಲೂ ಕೃಷಿ ಕೂಲಿಯನ್ನು ನಂಬಿ ಜೀವನ ಮಾಡುತ್ತಿದ್ದಾರೆ ಎಂಬುದನ್ನು ತಿಳಿಸುತ್ತದೆ. ಅಧ್ಯಯನದ ವ್ಯಾಪ್ತಿಯಲ್ಲಿ ಬರುವ ಬಳ್ಳಾರಿ ಜಿಲ್ಲೆ ಪ್ರದೇಶಗಳಲ್ಲಿ ಲಂಬಾಣಿಗರು ಪರಿಶಿಷ್ಟ ಜಾತಿಯಲ್ಲಿರುವ ಇತರೆ ಜಾತಿಗಳಿಗಿಂತಲೂ ಹೆಚ್ಚಿನ ಸಂಖ್ಯೆಯನ್ನು ಹೊಂದಿದ್ದು, ಹೆಚ್ಚಿನ ಸಂಖ್ಯೆಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ವಾಸ ಮಾಡುತ್ತಿದ್ದಾರೆ. ಕೃಷಿ ಕೂಲಿಯನ್ನೇ ನಂಬಿ ಬದುಕುತ್ತಿರುವ ಈ ಸಮುದಾಯ ಆಯಾ ಪ್ರದೇಶದ ಭೂಮಾಲಿಕ ವರ್ಗದವರ ಹೊಲಗಳಲ್ಲಿ ತಮ್ಮ ದಿನನಿತ್ಯದ ಜೀವನಕ್ಕಾಗಿ ಪುರುಷರು, ಮಹಿಳೆಯರು ಹಾಗೂ ಮಕ್ಕಳನ್ನೊಳಗೊಂಡಂತೆ ಕೂಲಿ ಮಾಡಿ ಬದುಕುತ್ತಿರುವ ಸಂಖ್ಯೆ ಬಹಳ. ಇದರಿಂದಾಗಿ ಅನೇಕರು ಜೀತ ಪದ್ಧತಿಯಂತೆ ಅಮಾನವೀಯ ಪದ್ಧತಿಗೆ ಬಲಿಯಾಗಿರುವರು. ದಿನವಿಡೀ ದುಡಿದರೂ ಸಿಗುವ ಕೂಲಿ ಮಾತ್ರ ಕಡಿಮೆ. ಕೆಲಸಕ್ಕೆ ಸಮನಾದ ಕೂಲಿ ಕೇಳುವಂಥ ಧೈರ್ಯ ಇವರಲ್ಲಿ ಇರಲಿಲ್ಲ. ಹಾಗೆಯೇ ಕೊಡಬೇಕೆಂದು ಭೂಮಾಲಿಕ ವರ್ಗವು ಮುಂದಾಗುತ್ತಿರಲಿಲ್ಲ. ಜೀತ ಪದ್ಧತಿಯೊಂದಿಗೆ ಜಾರಿಯಲ್ಲಿದ್ದ ಇನ್ನೊಂದು ಅನಿಷ್ಟ ಪದ್ಧತಿ ದುಡಿಮೆಯ ಶೋಷಣೆ. ಭೂಮಿಯಲ್ಲಿ ಹಗಲಿರುಳು ಮೈಮುರಿದು ದುಡಿದ ದುಡಿಮೆಗೆ ಹಿಡಿಕಾಳು ಕೊಡುವ ದುಷ್ಟಪದ್ಧತಿ. ಶ್ರೀಮಂತ ಭೂಮಾಲಿಕ ವರ್ಗ ಬಡ ಕೂಲಿಕಾರನಿಗೆ ನ್ಯಾಯವಾಗಿ ನೀಡಬೇಕಾದ ಕೂಲಿಯನ್ನು ಕೊಡಲು ಸಿದ್ಧರಿರಲಿಲ್ಲ. ಹೀಗಿರುವಾಗಲೂ ಈ ಜನಾಂಗವು ಕೆಲವೊಂದು ಸಾಮಾಜಿಕ ಸಾಂಸ್ಕೃತಿಕ ಸಂದರ್ಭಗಳಲ್ಲಿ ಉಂಟಾಗುವ ಸಮಸ್ಯೆಗಳ ಪರಿಹಾರಕ್ಕೆ ಆಯಾ ಪ್ರದೇಶದ ಭೂಮಾಲಿಕ ವರ್ಗವನ್ನೇ ಹೆಚ್ಚು ಅವಲಂಬಿಸಿಕೊಂಡಿರುವುದರಿಂದ ಬೇರೆ ದಾರಿಯಿಲ್ಲದೆ ಕಡಿಮೆ ಕೂಲಿಗಾಗಿ ದುಡಿಯುತ್ತಾರೆ.

ಬಳ್ಳಾರಿ ಪ್ರದೇಶದಲ್ಲಿ ಹೆಚ್ಚು ಭೂಮಿಯನ್ನು ಹೊಂದಿರುವ ಜಾತಿಗಳೆಂದರೆ ಲಿಂಗಾಯತ, ಒಕ್ಕಲಿಗ, ರೆಡ್ಡಿ, ಕುರುಬರು, ನಾಯಕ ಮುಂತಾದವರು. ಈ ಸಮುದಾಯಕ್ಕೆ ಸೇರಿದ ಭೂಮಿಯ ಕೃಷಿಯಲ್ಲಿ ತೊಡಗಿದ್ದವರು ಲಂಬಾಣಿಗರು. ಒಕ್ಕಲುತನದ ಕೆಲಸಗಳಲ್ಲಿ ಅಂದರೆ ಕುಂಟಿ ರಂಟೆ ಹೊಡೆಯಲು, ಚಕ್ಕಡಿ ನಡೆಸಲು, ಬಿತ್ತಲು, ಬೆಳೆಕೊಯ್ಯಲು ಹಾಗೂ ರಾಶಿಯನ್ನು ಮಾಡಿ ಧಾನ್ಯಗಳನ್ನು ಮನೆಗೆ ತರಲು ಸಾಮಾನ್ಯವಾಗಿ ಕೆಳಹಂತದ ಆಳುಗಳನ್ನೇ ಬಳಸಲಾಗುತ್ತಿತ್ತು. ಹೀಗೆ ಈ ಜನಾಂಗ ಬಹುಸಂಖ್ಯೆಯಲ್ಲಿ ಕೂಲಿ ಮಾಡಿಯೇ ಜೀವನ ಸಾಗಿಸುತ್ತಿದ್ದಾರೆ. ಕೂಲಿ ಸಿಗದೆ ಇದ್ದಾಗ ಅನೇಕರು ತಮ್ಮ ತಾಂಡವನ್ನೂ ಬಿಟ್ಟು ಕೂಲಿಗಾಗಿಯೇ ಮಲೆನಾಡು, ಗೋವಾ, ಮಹಾರಾಷ್ಟ್ರಕ್ಕೆ ಗುಳೇ ಹೋಗುತ್ತಿರುವುದು ಅಧ್ಯಯನದಿಂದ ತಿಳಿಯಲಾಗಿದೆ.

ಈಗಲೂ ಬಳ್ಳಾರಿ ಸೇರಿದಂತೆ ಉತ್ತರ ಕರ್ನಾಟಕದ ಬಹುತೇಕ ಲಂಬಾಣಿ ತಾಂಡಾಗಳಲ್ಲಿಯೇ ಗಂಡಸರು ಮತ್ತು ಹೆಂಗಸರು ದಸರಾ ಮತ್ತು ದೀಪಾವಳಿ ಹಬ್ಬಗಳು ಮುಗಿದ ಮೇಲೆ, ಮಲೆನಾಡು, ಮಹಾರಾಷ್ಟ್ರ ಮತ್ತು ಗೋವಾದ ಕಡೆ ಗುಳೇ ಹೋಗುತ್ತಾರೆ. ಆ ಸಂದರ್ಭದಲ್ಲಿ ಜೊತೆಗೆ ತಮ್ಮ ಮಕ್ಕಳನ್ನು ಕರೆದುಕೊಂಡು ಹೋಗುತ್ತಾರೆ. ಕಾರಣ ನಮ್ಮಲ್ಲಿ ವರ್ಷದುದ್ದಕ್ಕೂ ಕೂಲಿ ಕೆಲಸ ಸಿಗುವುದು ಬಲು ಕಷ್ಟ. ಒಮ್ಮೆ ಮಳೆ ಆದರೆ ನಾಲ್ಕೈದು ವರ್ಷ ಸರಿಯಾಗಿ ಮಳೆ ಆಗುವುದಿಲ್ಲ. ಕುಟುಂಬದಲ್ಲಿ ಹಿಂಡುಗಟ್ಟಲೆ ಮಕ್ಕಳು ಸಾಕುವುದು ಕಷ್ಟ,

ಒಮ್ಮೊಮ್ಮೆ ತುತ್ತು ಊಟಕ್ಕೂ ಗತಿ ಇಲ್ಲದಂತೆ ಆಗುತ್ತದೆ. ಈ ಕೆಲವು ಕಾರಣಗಳಿಂದ ಇವರು ಪ್ರತಿವರ್ಷ ಮಹಾರಾಷ್ಟ್ರ, ಗೋವಾ, ಮಲೆನಾಡಿಗೆ ಗುಳೇ ಹೋಗುವರು. ಇಲ್ಲಿ ಮಣ್ಣಿನ ಕೆಲಸಕ್ಕೆ ಒಂದು ದಿನಕ್ಕೆ ಕೂಲಿ ಅಂದಾಜು ಗಂಡಸರಿಗೆ ನೂರರಿಂದ ನೂರೈವತ್ತು ಮತ್ತು ಹೆಣ್ಣು ಮಕ್ಕಳಿಗೆ ಎಪ್ಪತ್ತೈದು ರೂಪಾಯಿಯಿಂದ ನೂರು ರೂಪಾಯಿಯವರೆಗೆ ಸಿಗುತ್ತದೆ ಎಂದು ಈ ಜನರು ಹೇಳುತ್ತಾರೆ. ಇಂಥ ಪರಿಸ್ಥಿತಿಯಲ್ಲಿ ಮಕ್ಕಳಿಗೆ ಶಿಕ್ಷಣ ಕೊಡುವುದು ಬಲು ಕಷ್ಟ. ಅಕ್ಟೋಬರ್‌ನಿಂದ ಎಪ್ರಿಲ್, ಮೇ ತಿಂಗಳವರೆಗೆ ಇವರು ದುಡಿಯುತ್ತಾರೆ. ಮಳೆಗಾಲ ಆರಂಭವಾಗುತ್ತಲೇ ಮತ್ತೆ 'ಗೂಡಿಗೆ ಮರಳುವ ಹಕ್ಕಿಗಳಂತೆ' ತಮ್ಮ ತಾಂಡಾಕ್ಕೆ ಗಂಟುಮೂಟೆಗಳನ್ನು ಕಟ್ಟಿಕೊಂಡು ಬರುತ್ತಾರೆ.[೧]

೧೯೯೧ ಕೃಷಿ ಅವಲಂಬಿತ ವರ್ಗದಲ್ಲಿ ಕೃಷಿಕಾರ್ಮಿಕ ಸಂಖ್ಯೆ ಬಳ್ಳಾರಿ ಜಿಲ್ಲೆಯಲ್ಲಿ ಪುರುಷರು ೧,೨೭,೯೦೧, ಮಹಿಳೆಯರು ೧,೬೧,೭೦೪ ಕೃಷಿ ಕಾರ್ಮಿಕರು ಇರುವುದು ಕಂಡುಬರುತ್ತದೆ.[೨] ಅಧ್ಯಯನಕ್ಕೊಳಪಡಿಸಿದ ಬಳ್ಳಾರಿ ಜಿಲ್ಲೆಯ ವಿವಿಧ ತಾಲ್ಲೂಕುಗಳ ತಾಂಡಾಗಳಲ್ಲಿ ಕೂಲಿ ಮಾಡುವ ಲಂಬಾಣಿ ಜನಾಂಗದ ಕುಟುಂಬಗಳು ಈ ಕೆಳಗಿನಂತಿವೆ.

| ಕ್ರ.ಸಂ. | ತಾಲೂಕು | ತಾಂಡಾಗಳ ಸಂಖ್ಯೆ | ಕುಟುಂಬಗಳ ಸಂಖ್ಯೆ |
|---|---|---|---|
| ೧. | ಬಳ್ಳಾರಿ | ೨ | ೩೮೦ |
| ೨. | ಕೂಡ್ಲಿಗಿ | ೫ | ೧,೧೭೦ |
| ೩. | ಸಿರಗುಪ್ಪ | ೧ | ೨೧೦ |
| ೪. | ಹೊಸಪೇಟೆ | ೪ | ೫೮೦ |
| ೫. | ಸಂಡೂರು | ೧ | ೧೮೦ |
| ೬. | ಹಗರಿಬೊಮ್ಮನಹಳ್ಳಿ | ೨ | ೩೫೦ |
| ೭. | ಹೂವಿನಹಡಗಲಿ | ೪ | ೧೬೦೦ |
| | ಒಟ್ಟು | ೧೯ | ೪೩೨೦ |

ಬಳ್ಳಾರಿ ಜಿಲ್ಲೆಯ ೧೯ ತಾಂಡಗಳಲ್ಲಿ ೪೩೨೦ ಕುಟುಂಬಗಳು ಕೂಲಿ ನಂಬಿಕೊಂಡು ಜೀವನ ಮಾಡುತ್ತಿದೆ. ಈ ಅಂಕಿ ಅಂಶಗಳ ಹಿನ್ನಲೆಯಲ್ಲಿ ಲಂಬಾಣಿ ಜನಾಂಗ ಶೇ. ೯೦ರಷ್ಟು ಕೂಲಿಯನ್ನೇ ನಂಬಿ ಬದುಕುತ್ತಿದ್ದಾರೆ. ಅದರಲ್ಲೂ ಗ್ರಾಮೀಣ ಪ್ರದೇಶದಲ್ಲಿ ಪುರುಷ ಮಾತ್ರವಲ್ಲದೆ ಮಹಿಳೆ ಹಾಗೂ ಮಕ್ಕಳೂ ಕೃಷಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ.

**ಬೇಟೆ**

ಮಾನವ ನಿಸರ್ಗದೊಂದಿಗೆ ಜೀವನ ಆರಂಭಿಸಿದಾಗ ಅವನ ಬದುಕಿಗೆ ಎರಡು ಬಗೆಯ ವೃತ್ತಿಗಳನ್ನು ಕೈಗೊಂಡ. ಒಂದು ಕಾಡಿನಲ್ಲಿ ಗೆಡ್ಡೆ ಗೆಣಸು ಅಗೆಯುವುದು. ಕಾಡುಪ್ರಾಣಿಗಳನ್ನು ಬೇಟೆಯಾಡುವುದು. ಆಹಾರ ಸಂಗ್ರಹಣೆಯಲ್ಲಿ ಈ ಎರಡು ವೃತ್ತಿಗಳು ಅವನಿಗೆ ಆಹಾರದ ಮೂಲವಾಗಿದ್ದವು. ವ್ಯವಸಾಯ ವಿಧಾನವನ್ನು

ತಿಳಿಯುವ ಮುನ್ನ ಮಾನವ ಹಣ್ಣು-ಹಂಪಲುಗಳನ್ನು ತಿಂದು ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದ. ಇಂದಿಗೂ ಕೆಲವು ಲಂಬಾಣಿಯರು ಗಿರಿ-ಪರ್ವತ, ಅರಣ್ಯ ಪ್ರದೇಶದಲ್ಲಿ ಈ ವಿಧಾನವನ್ನು ಅನುಸರಿಸುತ್ತಾರೆ. ಹಣ್ಣು-ಹಂಪಲು, ಗೆಡ್ಡೆ-ಗೆಣಸು ಎಲ್ಲಾ ಋತುಮಾನಗಳಲ್ಲಿ ದೊರೆಯಲಾರದು. ನಿರ್ದಿಷ್ಟವಾದ ಋತುಮಾನದಲ್ಲಿ ಅಲೆದಾಡಿ ಆಹಾರಕ್ಕಾಗಿ ರುಚಿ ಬದಲಾವಣೆಯಿಂದ ಬೇಟೆಯನ್ನು ಒಂದು ವೃತ್ತಿ ಮಾಡಿಕೊಳ್ಳಬೇಕಾದ ಅನಿವಾರ್ಯ ಸ್ಥಿತಿ ಬಂದಿರಬೇಕು. ಕಾಡಿನ ಗೆಡ್ಡೆ-ಗೆಣಸುಗಳನ್ನು ಅಗೆಯಲು ಬಳಸುವ ಕಲ್ಲು ಆಯುಧಗಳನ್ನು ಅಲ್ಪಸ್ವಲ್ಪ ವಿಕಾಸ ಹೊಂದಿ ಕಾಡುಪ್ರಾಣಿಗಳನ್ನು ಕೊಲ್ಲುವ ಆಯುಧಗಳ ಶೋಧನೆಯಲ್ಲಿ ಬಳಿಕ ಕಾಡು ಮರದ ಚೆಕ್ಕೆಗೆ ದಾರವನ್ನು ಕಟ್ಟುವುದರ ಮೂಲಕ ಬಿಲ್ಲನ್ನು ಮಾಡಿಕೊಳ್ಳುವ ಮೂಲತತ್ವ ಹೊಳೆಯಿತು. ಅದೇ ಬಿಲ್ಲನ್ನು ಬಳಸುವಲ್ಲಿ ಹೊಸ ಪ್ರಯತ್ನ ಮಾಡಿಕೊಂಡು ಅದರಿಂದ ಕಾಡುಪ್ರಾಣಿಗಳನ್ನು ಗುರಿ ಇಟ್ಟು ಹೊಡೆಯುವ ತಂತ್ರ ಕಲಿತು, ಇನ್ನು ಬೇಟೆ ಆಯುಧಗಳ ಅನ್ವೇಷಣೆ ಮುಂದುವರೆಯಿತು. ಯಾವ ಪ್ರಾಣಿ ಬಿಲ್ಲಿನ ಬಾಣಕ್ಕೆ ನಾಟುವುದಿಲ್ಲವೋ ಅಂತಹ ಪ್ರಾಣಿಗೆ ಕಲ್ಲಿನ ಆಯುಧಗಳನ್ನು ಬಳಸಿ ಜತೆಗೆ ಮರದ ಸಲಕರಣೆಗಳ ಮೂಲಕ ಭರ್ಚಿ, ಈಟಿ, ಗಂಡುಗೊಡಲಿ, ಕಂಧ್ಲಿ, ತುರಾಯಿ ಮುಂತಾದ ಆಯುಧಗಳನ್ನು ಬಳಸಿದರು.

ಲಂಬಾಣಿಗರು ಬೇಟೆಯಾಡುವುದನ್ನು 'ಶಿಕಾರಿ', 'ಪಡೋರಮೇರೊ' ಎನ್ನುತ್ತಾರೆ. ಬೇಟೆಯನ್ನು ಅವಲಂಬಿಸಿಕೊಂಡು ಜೀವಿಸುವ ಬುಡಕಟ್ಟು ವರ್ಗಗಳನ್ನು ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ ಮತ್ತು ಕರಾವಳಿ ಪ್ರದೇಶದಲ್ಲಿ ನೋಡಬಹುದು. ಬಳ್ಳಾರಿ ಜಿಲ್ಲೆಗಳ ಕೆಲವು ಲಂಬಾಣಿ ತಾಂಡಾಗಳಲ್ಲಿ ಬೇಟೆ ವಿವಿಧ ಸ್ವರೂಪದಲ್ಲಿ ಚಾಲ್ತಿಯಲ್ಲಿದೆ.

ಬಳ್ಳಾರಿ ಸೇರಿದಂತೆ ಬಯಲು ಸೀಮೆಯಲ್ಲಿ ಬೇಟೆಯ ವೃತ್ತಿ ಅಲ್ಪ ಪ್ರಮಾಣದಲ್ಲಿತ್ತು. ಇಲ್ಲಿ ದಟ್ಟನಾದಂಥ ಕಾಡು ಇಲ್ಲವಿರುವುದರಿಂದ ಕಾಡುಪ್ರಾಣಿಗಳ ಸಂತತಿ ವಿರಳವಾಗಿದೆ. ವ್ಯವಸಾಯದಿಂದ ವಿರಾಮ ದೊರೆತಾಗ ಲಂಬಾಣಿಗರು ಉದ್ದನೆಯ ಬಲೆಯನ್ನು ಒಡ್ಡಿ ಮೊಲವನ್ನು ಕುರುಕಲು ಪ್ರದೇಶದಲ್ಲಿ ಬಲೆಹಾಕಿ ತರುಬಿಕೊಂಡು ಬಂದು ಬಲೆಯಲ್ಲಿ ಬೀಳಿಸಿ ಕೊಂದು ತಿನ್ನುತ್ತಾರೆ. ಇದೇ ಸ್ವರೂಪದಲ್ಲಿ ಕೆಲವು ಬೇಟೆಗಾರರು ಅಕ್ಕಪಕ್ಕದ ಕಬ್ಬಿನ ಗದ್ದೆಗಳಲ್ಲಿ ಸೇರಿರುವ ಕಾಡು ಹಂದಿಗಳನ್ನು ಕೋವಿ ಉಪಯೋಗಿಸಿ ಬೇಟೆಯಾಡಿ ತಿನ್ನುತ್ತಾರೆ.

ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿ ಬರುವ ಬಳ್ಳಾರಿ ಜಿಲ್ಲೆ ಪ್ರದೇಶಗಳಲ್ಲಿ ನಾನಾ ರೀತಿಯಲ್ಲಿ ಬೇಟೆಯಾಡುವುದನ್ನು ನೋಡುತ್ತೇವೆ. ಮೀನು ಬೇಟೆ, ಪ್ರಾಣಿ ಬೇಟೆಯಲ್ಲಿ ಮತ್ತೆ ಹಲವಾರು ಲಕ್ಷಣ ವಿಧಾನ, ಬಗೆಗಳಿರುತ್ತವೆ. ಉದಾ: ಚಿಗರೆ, ಮೊಲ, ಉಡ, ಕಾಡು ಹಂದಿ ಇವುಗಳನ್ನು ಆಹಾರಕ್ಕಾಗಿ ಬೇಟೆಯಾಡುತ್ತಾರೆ.

ಬಳ್ಳಾರಿ ಜಿಲ್ಲೆಯ ಪ್ರದೇಶಗಳಲ್ಲಿ ಪ್ರಚಲಿತವಿರುವ ಬೇಟೆ ಹೆಚ್ಚಾಗಿ ಲಂಬಾಣಿಗರಿಗೆ ಮಾತ್ರ ಮೀಸಲು. ಅವರು ಹಬ್ಬ, ಹರಿದಿನಗಳಲ್ಲದೆ ಕೆಲವು ಸಂದರ್ಭಗಳಲ್ಲಿ ಪ್ರತಿನಿತ್ಯ ಬೇಟೆಗೆ ಹೋಗುವ ಪರಿಸೋಜಿತವಾಗದು. ಬಳ್ಳಾರಿ ಪ್ರದೇಶದಲ್ಲಿಂದು ಪ್ರಾಣಿಗಳನ್ನು ಬೇಟೆಯಾಡುವುದನ್ನು ಈ ಕೆಳಕಂಡಂತೆ ನೋಡಬಹುದು.

೧. ಉಡದ ಬೇಟೆ. ೨. ಚಿಗರೆ ಬೇಟೆ, ೩. ಮೊಲ ಬೇಟೆ. ೪. ಇಲಿ ಬೇಟೆ. ೫. ಅಳಿಲು ಬೇಟೆ. ೬. ಕಾಡುಬೆಕ್ಕಿನ ಬೇಟೆ ಆಡುವರು. ೭. ಗುಬ್ಬಿ ಬೇಟೆ ೮. ಮೀನು ಬೇಟೆ. ೯. ನವಿಲು ಬೇಟೆ ೧೦. ಹಂದಿ ಬೇಟೆ ಆಡುವರು.

೧. ಉಡದ ಬೇಟೆ

ಅತಿ ಚಾಣಾಕ್ಷತನದ ಬೇಟೆ ವಿಧಾನ ಇದಾಗಿದ್ದು, ದಟ್ಟಕಾಡು, ಸರೋವರ, ದೊಡ್ಡಗಾತ್ರದ ಸೇತುವೆ, ಕೆರೆ ಕಟ್ಟೆ, ಕೋಡಿಗಳಲ್ಲಿ ಉಡದ ಬೇಟೆಯನ್ನಾಡುತ್ತಾರೆ. ಉಡದ ಬೇಟೆಯಾಡುವುದು ಹೆಚ್ಚಾಗಿ ಬಿಸಿಲಿನಲ್ಲಿ. ವಿಶೇಷವಾಗಿ ಮಳೆಬಂದಾಗ ಮಾತ್ರ ಉಡ ಹಸೆಮಣ್ಣು, ಕೀಟಗಳನ್ನು ತಿನ್ನಲು ಹೊರಬರುತ್ತದೆ. ಲಂಬಾಣಿಗರಿಗೆ ಇದು ಸಿಕ್ಕಿದರೆ ಮನೆಯಲ್ಲಿ ಹಬ್ಬದ ವಾತಾವರಣವೇ ಸರಿ. ಶಿವಾಜಿ ಮೊದಲಾದ ರಾಜರು ಅನೇಕ ಕೋಟೆ ಕೊತ್ತಲಗಳನ್ನು ತನ್ನ ವಶಕ್ಕೆ ತೆಗೆದುಕೊಂಡಿರುವುದು ಇಂಥ ಪ್ರಾಣಿಯಿಂದಲೇ (ಘೋರ್ಪಡೆ) ಎಂಬ ಹೇಳಿಕೆಗಳಿವೆ. ಇದನ್ನು ಕೇವಲ ಆಹಾರಕ್ಕಾಗಿಯೇ ಅಷ್ಟೇ ಅಲ್ಲ ಆಯುರ್ವೇದ ಔಷಧಿಯನ್ನು ತಯಾರಿಸಲು ಯೋಗ್ಯ. ಇದರ ತಲೆ ಮತ್ತು ಬಾಲಗಳು ವಿಷ ಎಂದು ತಿನ್ನುವುದಿಲ್ಲ. ಇದರ ತುಪ್ಪವನ್ನು ಕಾಲುನೋವು ಇತ್ಯಾದಿ ವ್ಯಾಧಿಗಳಿಗೆ ಬಳಸುತ್ತಾರೆ. ಇದರ ತುಪ್ಪದಲ್ಲಿ ಅರಿಶಿಣ, ಈರುಳ್ಳಿ ಬೆರೆಸಿದರೆ ಸುಮಾರು ವರ್ಷಗಳವರೆಗೆ ಅದರ ಸ್ವಾದ ಬಿಟ್ಟುಕೊಡುವುದಿಲ್ಲ. ಉಡದ ಬಾಲದಿಂದ ಏಟುತಿಂದವರೇ ಬಹಳಮಂದಿ. ಯಾವುದಾದರೂ ಕುಣಿ, ರಂಧ್ರ, ಇಲಿಬೋನುಗಳೊಳಗೆ ಸೇರಿಕೊಂಡಾಗ ಇದು ಅಷ್ಟು ಸುಲಭವಾಗಿ ಸಿಗುವುದಿಲ್ಲ. ಮುಟ್ಟಿದರೆ ಬಾಲದಿಂದ ಬಾರಿಸುತ್ತದೆ. ಬಾಯಿಂದ ಕಚ್ಚುತ್ತದೆ. ಉಡವನ್ನು ಬೇಟೆಗಾರರಿಗಿಂತ ಮೊದಲು ನಾಯಿಗಳು ಕಂಡುಹಿಡಿಯುವುದು ಹೆಚ್ಚು. ಇತ್ತೀಚಿಗೆ ಬಂಡೆ ಸೂರಕೆಗಳಲ್ಲಿ ಸಿಕ್ಕ ಪ್ರಕರಣಗಳೇ ಜಾಸ್ತಿ. ಸೊಂಡೂರಿನಲ್ಲಿ ಈ ಬೇಟೆ ಹೆಚ್ಚು ಪ್ರಚಲಿತದಲ್ಲಿದೆ. ಲಂಬಾಣಿಗರು ಈ ಬೇಟೆಯಲ್ಲಿ ನಿಸ್ಸೀಮರು.

**೨. ಚಿಗರೆ (ಜಿಂಕೆ) ಬೇಟೆ :** ಚಿಗರೆ ಬೇಟೆ ಕರ್ನಾಟಕದಲ್ಲಿ ಅತೀ ಹೆಚ್ಚು ಪ್ರಚಲಿತ. ಲಂಬಾಣಿಗರಿಗೆ ಪ್ರತಿಷ್ಠಿತ ಬೇಟೆ ಇದಾಗಿದ್ದು, ಇತರ ಎಲ್ಲ ವರ್ಗದವರು ಬೇಟೆಯಾಡಿದರೂ ಲಂಬಾಣಿಗರು ಚಿಗರೆಗೆ ಸಿಂಹಸ್ವಪ್ನರಾಗಿರುತ್ತಾರೆ. ಚಿಗರೆ ಅಥವಾ ಜಿಂಕೆಯನ್ನು ಕೊಂದ ವ್ಯಕ್ತಿಗೆ ಅಡ್ಡಹೆಸರು ಜಿಂಕೆನಾಯ್ಕ ಅಥವಾ ಹರಣ್ಯನಾಯ್ಕ ಎಂದು ಕರೆಯುತ್ತಾರೆ. ಬಳ್ಳಾರಿಯ ಅರಣ್ಯದಲ್ಲಿ ಚಿಗರೆ ಬೇಟೆ ಹೆಚ್ಚಾಗಿ ಅರಣ್ಯದಲ್ಲಿ ಪ್ರಚಲಿತದಲ್ಲಿದೆ. ಸೊಂಡೂರು ತಾಲ್ಲೂಕಿನ ಅಕ್ಕಪಕ್ಕದ ಹಳ್ಳಿ ಪ್ರದೇಶದಲ್ಲಿ ಚಿಗರೆಗಳು ಹೆಚ್ಚಿನ ಸಂಖ್ಯೆಯಲ್ಲಿವೆ. ೧೯೮೪ ರಿಂದ ೨೦೦೧ರವರೆಗೆ ಸಾಕಷ್ಟು ಚಿಗರೆಗಳನ್ನು ಕಳ್ಳತನದಿಂದ ಬೇಟೆಯಾಡಿರುವುದು ತಿಳಿದುಬರುತ್ತದೆ. ಇವುಗಳಿಗೆ ಬಲೆಯನ್ನು ಹಾಕುವರು ಮತ್ತು ಆಧುನಿಕವಾಗಿ ಬಂದೂಕಿನಿಂದಲೇ ಹೆಚ್ಚಾಗಿ ಸಾಯಿಸುತ್ತಾರೆ. ಜಿಂಕೆಗಳ ಕೋಡುಗಳನ್ನು ಪ್ರತಿಷ್ಠೆಗಾಗಿ ಲಂಬಾಣಿಗರು ಮನೆಯಲ್ಲಿ ನೋಡಲು, ಚೆಂದಕ್ಕಾಗಿ ಬಾಗಿಲಿನ ಮೇಲೆ ಮತ್ತು ಜಂತೆಗಳ ಅಕ್ಕಪಕ್ಕದಲ್ಲಿ ಇಟ್ಟಿರುತ್ತಾರೆ. ಚಿಕ್ಕ ಜೋಗಿಹಳ್ಳಿ ತಾಂಡದಲ್ಲಿ ಭಗವಂತನಾಯ್ಕ (ಶಿಕ್ಷಕರು), ಹಾಗೂ ಗೋಪಾಲನಾಯ್ಕ (ಶಿಕ್ಷಕರು) ಎಂಬುವವರ ಮನೆಯಲ್ಲಿ ಜಿಂಕೆಯ ಮರಿ ಸಾಕಿರುವುದನ್ನು ನೋಡಬಹುದು. ಸಾಕಿದರೂ ಒಂದಲ್ಲ ಒಂದು ದಿನ ಸಾಯಿಸಿ ತಿನ್ನುತ್ತಾರೆ. ಬಳ್ಳಾರಿ ಜಿಲ್ಲೆಯಲ್ಲಿ ಲಂಬಾಣಿಗರೇ ಅಲ್ಲದೇ ಇತರ ಸಮುದಾಯದವರೂ ಚಿಗರೆ ಬೇಟೆಯಾಡುತ್ತಾರೆ.

**೩. ಮೊಲದ ಬೇಟೆ :** ಮೊಲ ಚುರುಕಾದ, ಜಾಣ್ಮೆಯುಳ್ಳ ಪ್ರಾಣಿ; ಪ್ರಾಚೀನ ಕಾಲದಿಂದಲೂ ಮೊಲದ ಬೇಟೆ ಎಂಬುದು ಬೇಟೆಯ ಒಂದು ವಿಧಾನವಾಗಿ ಪ್ರಚಲಿತದಲ್ಲಿದೆ. ಮೊಲದ ಆಹಾರ ಎಳೆಯ ಹುಲ್ಲು, ಜೊಬ್ಬು,

ಕರಿಕೆ; ಇದು ನೀರು ಕುಡಿಯುವುದಿಲ್ಲವೆಂದು ಹೇಳಲಾಗುತ್ತದೆ. ಮೊಲ ಊರಲ್ಲಿ ಬಂದರೆ ಅಪಶಕುನ, ಮೊಲವನ್ನು ಹಿಡಿದು ತರಬಾರದು; ಊರಿಗೆ ಕೆಟ್ಟದಾಗುತ್ತದೆ ಎಂಬ ನಂಬಿಕೆಯಿದೆ. ಮೊಲಗಳು ಹೆಚ್ಚಾಗಿ ದೊಡ್ಡ ಚಿಕ್ಕ ಪೊದೆಗಳಲ್ಲಿ ವಾಸಿಸುತ್ತವೆ. ಕುರಿಗಳು ಮೇಯುವ ಜಾಗದಲ್ಲಿ ಇವು ಇರುತ್ತವೆ. ಅವುಗಳ ಕಾಲಿನ ಅಡಿಯಲ್ಲಿರುವಾಗ ಇನ್ನೊಂದೆಡೆಗೆ ಓಡುವುದಿಲ್ಲ. ಹೀಗಾಗಿ ಬೇಟೆಗೆ ಅನುಕೂಲವಾದ ಪರಿಸರ ಕಲ್ಪಿಸುತ್ತದೆ. ಮೊಲವು ನಿಶಾಚರ ಪ್ರಾಣಿ, ಕತ್ತಲಲ್ಲಿ ಆಹಾರ ಹುಡುಕುವುದು ಹೆಚ್ಚು. ಹಾಗಾಗಿ ಬ್ಯಾಟರಿಯ ಬೆಳಕಿನ ಸಹಾಯದಿಂದ ಬೇಟೆಯಾಡುತ್ತಾರೆ. ಬ್ಯಾಟರಿಯನ್ನು ತಲೆಗೆ ಕಟ್ಟಿಕೊಂಡು ಅದರ ಬೆಳಕು ಮುಂದೆ ಬಿದ್ದಾಗ ಅದು ಕಿವಿ ನಿಗುರಿಸುತ್ತದೆ. ಕೂಡಲೇ ಬಂದೂಕಿನಿಂದ ಹೊಡೆದು ಇಲ್ಲವೇ ಹಿಂದಿನಿಂದ ಓಡಿ ಬಂದು ಕೋಲಿನಿಂದ ಹೊಡೆದು ಸಾಯಿಸುತ್ತಾರೆ. ಮೊಲವನ್ನು ಕೈಯಿಂದ ಹಿಡಿಯುವುದೇ ಹೆಚ್ಚು; ಚಿನ್ನಹಗರಿ ನದಿ ಪರಿಸರದಲ್ಲಿ ಮೊಲದ ಬೇಟೆ ಹೆಚ್ಚು ಪ್ರಚಲಿತದಲ್ಲಿತ್ತು. ಇಂದು ಕಾಡು ಮತ್ತು ಹುಲ್ಲುಗಾವಲು ಪ್ರದೇಶ ನಾನಾ ರೀತಿಯ ಮಾನವ ಉಪಯೋಗಕ್ಕೆ ಬಳಕೆಯಾಗುವುದರಿಂದ ಮೊಲಗಳ ಸಂತತಿ ಇಳಿಮುಖವಾಗುತ್ತಿದೆ.

೪. **ಇಲಿ ಬೇಟೆ :** ಮೂರು ಅಥವಾ ನಾಲ್ಕು ಜನ ಸೇರಿ ಮಧ್ಯಾಹ್ನದ ಸಮಯದಲ್ಲಿ ನೆಲದೊಳಗಿನ ಬೋನುಗಳನ್ನು ಕೋಲು, ಹಾರೆಕೋಲು, ಚಲಕಿ, ಗುದ್ದಲಿಯಿಂದ ಅಗೆದು ರಂಧ್ರಗಳಿಗೆ ಹೊಗೆ ಹಾಕಿ ಬೇಟೆಯಾಡುತ್ತಾರೆ. ಇಲಿಯೆಂದರೆ ಅಡವಿಯ ಅಥವಾ ಕೆಂಪು ಇಲಿ ಎಂದರ್ಥ. ದಪ್ಪ, ಉದ್ದವಿದ್ದು ನೋಡಲು ತುಂಬಾ ಸುಂದರವಾಗಿರುತ್ತದೆ. ಮಳೆ ಬಂದ ಮರುದಿನ ಈ ಬೇಟೆ ಫಲಕಾರಿಯಾಗುತ್ತದೆ. ಲಂಬಾಣಿಗರು ಗುಂಪು-ಗುಂಪಾಗಿ ಈ ಬೇಟೆಗೆ ಹೋಗುತ್ತಾರೆ. ಚಿಕ್ಕಮಕ್ಕಳಿಂದ ಹಿಡಿದು ವೃದ್ಧರವರೆಗೂ ಅತೀ ಸರಳವಾಗಿ ಈ ಬೇಟೆಯನ್ನಾಡುವುದುಂಟು. ಇಲಿಬೋನಿನಲ್ಲಿ ಹೆಜ್ಜೆ ಗುರುತುಗಳನ್ನು ಗುರುತಿಸಿ, ವಾಸನೆ ಹಿಡಿದು ಕೋಲುಗಳ ಮೂಲಕ ಶಬ್ದ ಮಾಡಿ ಇಲಿಯನ್ನು ಸುಟ್ಟುಕೊಂಡು ತಿನ್ನುತ್ತಾರೆ. ಇಲಿ ಬೋನಿನಲ್ಲಿ ಹಾವಿರುವ ಸಾಧ್ಯತೆಯಿದ್ದು, ಈ ಬೇಟೆಯಲ್ಲಿ ಅನಾಹುತಗಳು ಸಂಭವಿಸಬಹುದು. ಲಂಬಾಣಿಗರು ತಮ್ಮ ಭಾಷೆಯಲ್ಲಿ 'ಉಂದರ್ ರೇ ಏಡೋ' ಎನ್ನುತ್ತಾರೆ.

೫. **ಅಳಿಲು ಬೇಟೆ :** ಅಳಿಲು ಬೇಟೆಯನ್ನು ಲಂಬಾಣಿಗರು 'ಗರೇಲಿ ಏಡೋ' ಎನ್ನುವರು. ಹೆಚ್ಚಾಗಿ ಊರಿನ ಅಕ್ಕಪಕ್ಕದಲ್ಲಿ ಅಳಿಲನ್ನು ಬೇಟೆಯಾಡುತ್ತಾರೆ. ಕೆಮ್ಮು ಜಾಸ್ತಿ ಇದ್ದವರು, ರೋಗಿಗಳು ಈ ಅಳಿಲಿನ ಮಾಂಸ ತಿಂದರೆ ರೋಗವಾಸಿಯಾಗುತ್ತೆಂಬ ನಂಬಿಕೆ ಇದೆ. ಅಲೆಮಾರಿಗಳ ಗುಂಪಿಗೆ ಸೇರಿದ ಲಂಬಾಣಿಗರು ಇಂದಿಗೂ ಅಳಿಲನ್ನು ಹಿಡಿದು ತಿನ್ನುತ್ತಾರೆ. ಅದನ್ನು ಬೇಟೆಯಾಡುವ ತಂತ್ರವೂ ಅತೀ ಜಾಣ್ಮೆಯಿಂದ ಕೂಡಿದೆ. ಅಳಿಲು ಏರಿರುವ ಮರದ ಸುತ್ತ ಬಲೆಯನ್ನು ಒಡ್ಡುತ್ತಾರೆ. ಅಳಿಲಿಗೆ ಕಾಣಿಸದಂತೆ ಒಬ್ಬರು ಮರದಡಿಯಲ್ಲಿ ನಿಂತು ಅಳಿಲಿನಂತೆ ಶಬ್ದ ಮಾಡುತ್ತಾರೆ. ಮೇಲಿರುವ ಅಳಿಲು ತನ್ನ ಸಂಗಾತಿಯ ಶಬ್ದವಿರಬಹುದೆಂದು ಆಲಿಸಿ ಕೆಳಗಿಳಿದು ಬಂದು ಬಲೆಗೆ ಬಿದ್ದು, ಬೇಟೆಗಾರನ ವಶಕ್ಕೆ ಸುಲಭವಾಗಿ ಬೀಳುತ್ತದೆ. ಅಳಿಲನ್ನು ಚಾಟಿಯ ಬಿಲ್ಲಿನಿಂದಲೂ ಹೊಡೆಯುವರು. ಕೂಡ್ಲಿಗಿ ತಾಲ್ಲೂಕಿನ ಚಿಕ್ಕಜೋಗಿಹಳ್ಳಿ ತಾಂಡದಲ್ಲಿ ಅಳಿಲು ಬೇಟೆಯಾಡುವ ಭೀಮನಾಯ್ಕನವರಿಗೆ ಇಂದಿಗೂ ಅವರ ಮನೆತನವನ್ನು ಗರೇಲಿ (ಅಳಿಲು) ಮನೆತನದವರು ಎಂದು ಕರೆಯುತ್ತಾರೆ.

**೬. ಕಾಡು ಬೆಕ್ಕಿನ ಬೇಟೆ :** ಬೆಕ್ಕುಗಳಲ್ಲಿ ಎರಡು ವಿಧ. ಒಂದು ಊರು ಬೆಕ್ಕು, ಎರಡನೆಯದು ಕಾಡುಬೆಕ್ಕು, ಇದು ಊರುಬೆಕ್ಕಿಗಿಂತ ಆಕಾರ, ಗಾತ್ರದಲ್ಲಿ ದೊಡ್ಡದಾಗಿರುತ್ತವೆ. ಹೋಲಿಕೆಯಲ್ಲಿ ಇದು ಮೊಲದ ಬೇಟೆಯನ್ನು ಹೋಲುತ್ತದೆ. ಬಲೆ ಇಲ್ಲವೇ ಮರ ಹತ್ತಿ ಹೊಡೆಯುತ್ತಾರೆ. ಕೆಲವೊಂದು ಹಿಂದುಳಿದ ಸಮುದಾಯದವರು ಮಾತ್ರ ಇದನ್ನು ಬೇಟೆಯಾಡುತ್ತಿದ್ದು, ಅವರಲ್ಲಿ ಲಂಬಾಣಿಗರು ಸಾಹಸದಿಂದ ಗುಡ್ಡ-ಬೆಟ್ಟ ಅಲೆದಾಡಿ ಹಿಡಿಯುತ್ತಾರೆ. ಲಂಬಾಣಿಗರು ಈ ಕಾಡುಬೆಕ್ಕನ್ನು ತಿನ್ನುತ್ತಾರೆ.

**೭. ಗುಬ್ಬಿ ಬೇಟೆ :**

ಇದು ಸಾಕಷ್ಟು ಪ್ರಚಲಿತದಲ್ಲಿರುವ ಬೇಟೆ ಕೌಜುಗ, ಚೆಳವ, ಟ್ರಿವುಕ ಮುಂತಾದ ಪಕ್ಷಿಗಳನ್ನು ಲಂಬಾಣಿಗರು ಬೇಟೆಯಾಡುತ್ತಾರೆ. ಕೌಜುಗ ಬೇಟೆ, ಪೌಜಿ, ಉರುವಲು, 'ಒಡೆಗಲು ಬಂಡೆ' ಮುಂತಾದ ಪರಿಕರಗಳಿಂದ ಪಕ್ಷಿಗಳನ್ನು ಹಿಡಿಯುತ್ತಾರೆ. ಇತ್ತೀಚೆಗೆ ಕವಣೆ ಬಳಸುತ್ತಾರೆ. ಕೋವಿಯಿಂದಲೂ ಬೇಟೆ ಸಾಗುತ್ತಲಿದೆ. ಸಣ್ಣ ಬಲೆಗಳನ್ನು ಹಾಕಿ ಪಕ್ಕದಲ್ಲಿ ಸಾಕಿದ ಕೌಜಗಳನ್ನಾಡುವರು. ಅದರ ಧ್ವನಿ ಕೇಳಿ ಸಂಗಾತಿಯೆಂದು ಉಳಿದ ಕೌಜುಗಗಳು ಬಂದು ಬಲೆಗೆ ಬೀಳುತ್ತವೆ. ಬಳ್ಳಾರಿಯಲ್ಲಿ ಈ ವಿಧಾನ ಪ್ರಚಲಿದಲ್ಲಿವೆ. ಗುಬ್ಬಿ ಬೇಟೆಗೆ ವಿಶೇಷವಾದ ಬಲವಾದ ಆಯುಧಗಳನ್ನು ಬಳಸಿದರೆ ನಗೆಪಾಟಲಾಗುತ್ತದೆ. 'ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರ' ಎಂಬ ಗಾದೆ ಇದನ್ನು ಸಮರ್ಥಿಸುತ್ತದೆ. 'ಚೆಳವ' ಎನ್ನುವ ಪಕ್ಷಿಯನ್ನು ತತ್ತಿಯ ಮೇಲೆ ಕುಳಿತಾಗ ಉಪಾಯದಿಂದ ಉರುಳಿನ ಮೂಲಕ ಹಿಡಿಯುತ್ತಾರೆ. 'ಪಳಕಿ' ಎನ್ನುವ ಪಕ್ಷಿಯನ್ನು ಸಹ ಅಷ್ಟೇ ಉರುಳು ಮುಂತಾದ ಸಲಕರಣೆಯಿಂದ ಬೇಟೆಯಾಡುತ್ತಾರೆ. ಲಂಬಾಣಿ ಸಮುದಾಯದವರು ಇಂಥ ಬೇಟೆಯಲ್ಲಿ ಪ್ರವೀಣರು; ಕಲ್ಲಿನ ಏಟಿನಿಂದ ಗುಬ್ಬಿಗಳ ಬೇಟೆ ನಡೆಯುತ್ತದೆ.

**೮. ಮೀನು ಬೇಟೆ :** ಆದಿಕಾಲದಿಂದಲೂ ಸರಳವಾದ ಬೇಟೆ ಎನಿಸಿದ್ದು ಮೀನು ಬೇಟೆ. ಮೀನನ್ನು ಹೆಚ್ಚಾಗಿ ಕೆರೆ, ಕಟ್ಟೆ, ನದಿ, ಕಾಲುವೆ, ಹಳ್ಳ, ಕೊಳ್ಳ ಮತ್ತು ಬಾವಿಗಳಲ್ಲಿ ಬೇಟೆಯಾಡುತ್ತಾರೆ. ಮೀನುಗಳು ಮೊಟ್ಟೆ ಮತ್ತು ಮರಿಹಾಕುವುದನ್ನು ತಿಳಿಯುತ್ತಾರೆ. ಇವುಗಳನ್ನು ಹಿಡಿಯಲು ಬಲೆ, ಗಾಳ, ಕೊಳೆ ಮುಂತಾದ ಸಲಕರಣೆಗಳನ್ನು ಉಪಯೋಗಿಸುತ್ತಾರೆ. ಬಲೆಯಲ್ಲಿ ಎರಡು ವಿಧ. ಒಂದು ದೊಡ್ಡ ಬಲೆ, ಎರಡು ಕಡೆಗೆ ದೊಡ್ಡ ಕೋಲಗಳನ್ನು ಕಟ್ಟಿ, ಅರ್ಧಚಂದ್ರಾಕಾರದ ಬಲೆಯನ್ನು ಮಾಡಿ ಹಿಡಿಯುತ್ತಾರೆ. ಒಂದು ಕಡೆಯಿಂದ ಇನ್ನೊಂದೆಡೆಗೆ ಶೋಧನೆ ನಡೆಯುತ್ತದೆ. ಇಬ್ಬರು ಬಲೆ ಹಿಡಿದುಕೊಂಡರೆ, ನಾಲ್ಕಾರು ಮಂದಿ ಮಡುವಿನಿಂದ ಸಪ್ಪಳ ಮಾಡಿಕೊಂಡು ಬಂದು ಒಂದೇ ಸಾರಿ ಎಲ್ಲರೂ ಬಲೆಯನ್ನು ಮೇಲಕ್ಕೆ ಎತ್ತುತ್ತಾರೆ. ಬಲೆ ಎತ್ತಿದಾಗ ಬಿದ್ದ ಮೀನನ್ನು ಒಬ್ಬ ವ್ಯಕ್ತಿ ಇಟ್ಟುಕೊಳ್ಳುತ್ತಾನೆ. ಇದರಲ್ಲಿ ಸಣ್ಣ ಪುಟ್ಟ ಮೀನಿನಿಂದ ದೊಡ್ಡ ಗಾತ್ರದ ಮೀನಿನವರೆಗೆ ಬೀಳುತ್ತದೆ.

ಮತ್ತೊಂದು ವಿಧವಾದ ಬಲೆಯೆಂದರೆ: ೩ ಅಡಿ ಅಗಲ, ೨೦-೩೦ ಅಡಿ ಉದ್ದವಿರುವ ಕೊಂಡ್ಲಬಲೆ. ಅದನ್ನು ಆಳವಾದ ನೀರಿನಲ್ಲಿ ಹಾಕುತ್ತಾರೆ. ನೀರಿನಲ್ಲಿ ೨-೩ ಅಡಿ ಗಾತ್ರದ ಎತ್ತರದಲ್ಲಿ ಬಲೆ ಇದ್ದು, ಎರಡು ದಡಗಳಿಗೆ ಕಟ್ಟಿರುತ್ತಾರೆ. ಇದಕ್ಕೆ ಸಣ್ಣ ಮತ್ತು ದೊಡ್ಡ ಗಾತ್ರಗಳ ಮೀನುಗಳು ಬೀಳುತ್ತದೆ. ಬಯಲುಸೀಮೆಯ

ಮೀನುಗಾರರು ಬೇಸಿಗೆ ಕಾಲದಲ್ಲಿ ಮೀನಿನ ಬೇಟೆಗೆ ಹೋಗುವುದು ಹೆಚ್ಚು. ಮಳೆಗಾಲದಲ್ಲಿ ಹೊಸ ನೀರು ಬಂದಾಗ ಮಾತ್ರ ಮೀನು ಮೇಲಕ್ಕೆ ಹತ್ತುವುದನ್ನು ಕಂಡು ತಕ್ಷಣ ತಡೆದು ಹಿಡಿಯುತ್ತಾರೆ. ಮೀನಿನಲ್ಲಿ ನಾನಾ ವಿಧಗಳಿವೆ ಬಳ್ಳಾರಿ ಸೀಮೆಯಲ್ಲಿ ಬಾಳ, ಚಿತ್ತರೆ, ಮೊಟ್ಟು, ಉಸಗ ತಕ್ಕಡಿ, ನತ್ತಿ ಮೇಲೆ ಕಣ್ಣಿರುವ ಮೀನು, ಬುರ್ದೆಮೊಟ್ಟ, ಗೊದ್ಲೆ ಬಿಳಸ ಹೊಟ್ಟುಟ್ಲೆ, ಬತ್ತುಗ, ಹಾವುಮೀನು, ಉಸುಸೆ ಮುಂತಾದವುಗಳನ್ನು ಹೆಸರಿಸಬಹುದು. ಕೊಮೆ ಅಥವಾ ಕೊಳ ಉಪಕರಣದಿಂದ ಹರಿಯುವ ನೀರಿನ ಎದುರಿಗೆ ಕಟ್ಟಿದರೆ ಇದರೊಳಗೆ ನೀರಿಳಿದು ಹೋಗುವಾಗ ಚಿಕ್ಕ ದೊಡ್ಡ ಮೀನನ್ನು ನಿಯಂತ್ರಿಸುತ್ತದೆ. ಈ ಪದ್ಧತಿ ಕೆರೆಕಟ್ಟೆಗಳಲ್ಲಿ ಜಾಸ್ತಿ ಬಳಕೆಯಿದೆ. ನದಿಗಳಲ್ಲಿ ಈಜಾಡುತ್ತಲೇ ಬಲೆಗಳ ಸಹಾಯದಿಂದ ಬೇಟೆಯಾಡುವ ಕ್ರಮ ಮಹತ್ವದ ಸ್ಥಾನ ಪಡೆದಿದೆ. ಬೇಟೆಯಾದ ಮೇಲೆ ಮೀನನ್ನು ಮನೆಗೆ ತರುವಾಗ ರಾವು ಎಂದು ತಿಳಿದು ಹಳ್ಳದಿಂದ ಬರುವಾಗ ತಂಗಟೆ ಸೊಪ್ಪನ್ನು ಜತೆಗೆ ತರಬೇಕೆಂದು ಹಿರಿಯರು ಹೇಳುತ್ತಾರೆ.

ಲಂಬಾಣಿಗರು ಮೀನು ಬೇಟೆಯನ್ನಾಡುವ ಸಂದರ್ಭದಲ್ಲಿ ಬಳಸುವ ತಂತ್ರ ಸ್ವಾರಸ್ಯದಿಂದ ಕೂಡಿದುದು. ಈ ಜನರಿಗೆ ಬಳ್ಳಾರಿ ಪ್ರದೇಶದಲ್ಲಿ ಬಳಸುವಂತಹ ಕುಳಿಗಳಾಗಲೀ ಬಲೆಯಾಗಲಿ ಇರುವುದು ಅಪರೂಪ ಮಳೆಗಾಲದ ಸಂದರ್ಭದಲ್ಲಿ ಸೋಪಿನ ನೊರೆಬರುವ ಕಾಯನ್ನು ಚೆನ್ನಾಗಿ ಜಜ್ಜಿ ಮೀನನ್ನು ಹಿಡಿಯಬೇಕಾಗಿರುವ ನೀರಿನ ಗುಂಡಿಯಲ್ಲಿ ಕದಡುತ್ತಾರೆ. ಈ ನೊರೆಯಿಂದ ಸೊಕ್ಕಿದ ಮೀನು ಸತ್ತು ನೀರಿನ ಮೇಲೆ ತೇಲುತ್ತದೆ. ಈ ಮೀನುಗಳನ್ನು ಆಯ್ದು ಸಂಗ್ರಹಿಸಿ ತಂದು ಲಂಬಾಣಿಗರು ಸುಟ್ಟು ಅಥವಾ ಬೇಯಿಸಿ ತಿನ್ನುತ್ತಾರೆ.

ಮತ್ತೊಂದು ವಿಧವಾದ ಬೇಟೆಯಾಡುವ ಪದ್ಧತಿ ಬಳ್ಳಾರಿ ಜಿಲ್ಲೆಯಲ್ಲಿ ಸಾಮಾನ್ಯ ಕಂಡುಬರುತ್ತದೆ. ಗಾಳವನ್ನು 'ಗಾಣ'ಎಂತಲೂ ಕರೆಯುವರು. ಗಾಳ ಎಂದರೆ ಉದ್ದವಾದ ಒಂದು ಕೋಲಿಗೆ ದಾರ ಕಟ್ಟಿ, ಅದರ ಕೊನೆಗೆ ಪಿನ್ನಿನಂತಿರುವ ತಂತಿಯ ಕೊಂಡಿಯ ತುದಿಗೆ ಎರೆಹುಳು ಏರಿಸಿ ಮೀನಿನ ಬಾಯಿಗೆ ಬಿಡುತ್ತಾರೆ. ಮೀನು ನುಂಗಿದಾಗ ಮೇಲಕ್ಕೆತ್ತಿದರೆ ಗಾಳದ ಒಂದು ಚೂಪಾದ ಮೊನೆ ಮೀನಿಗೆ ಸಿಕ್ಕಿಕೊಂಡು ಮೀನು ಗಡ್ಡೆಗೆ ಬರುತ್ತದೆ. ಬಾವಿ, ಕೊಳ, ಕೆರೆ, ಕಾಲುವೆಗಳಲ್ಲಿ ಗಾಳಗಳನ್ನು ಹೆಚ್ಚಾಗಿ ಹಾಕುತ್ತಾರೆ. ಚಾಣಾಕ್ಷವಾದ ಮೀನುಗಳು ಒಮ್ಮೊಮ್ಮೆ ತಪ್ಪಿಸಿಕೊಳ್ಳುತ್ತವೆ. ಆಹಾರ ಬಯಸಿ ಬಂದ ಮೀನು ತಂತಿಯ ಕೊಂಡಿಗೆ ಬಿದ್ದು ಸಾಯುತ್ತದೆ.

**೯. ಹಂದಿ ಬೇಟೆ :** ಇದನ್ನು ಯುಗಾದಿ ಅಮವಾಸ್ಯೆ ಬೇಟೆಯಂತಲೇ ಕರೆಯುವರು. ಹಿಂದಿನಿಂದಲೂ ಇದು ಖ್ಯಾತಿ ಪಡೆದು ಪ್ರಚಲಿತದಲ್ಲಿದೆ. ಲಕ್ಷ್ಮೀ ಸ್ವರೂಪ, ಸಮೃದ್ಧಿ ಸಂಕೇತವೆಂದು ಹಂದಿ ಬಗ್ಗೆ ನಂಬಿಕೆ ಬಳ್ಳಾರಿ ಜಿಲ್ಲೆಯಲ್ಲಿದೆ. ಆದ್ದರಿಂದ ಕೆಲವು ಲಂಬಾಣಿಗರು ಹಂದಿಯನ್ನು ತಿನ್ನುವುದಿಲ್ಲ. ಇತ್ತೀಚೆಗೆ ಯುಗಾದಿ ಬೇಟೆಯನ್ನು ನೋಡಿದರೆ ಅದು ಕೆಲವೇ ವರ್ಗಕ್ಕೆ ಮಾತ್ರ ಸೀಮಿತವಾದಂತಿದೆ. ಅಂಥವರಲ್ಲಿ ಲಂಬಾಣಿಗರು ಪ್ರಮುಖರು; ಯುಗಾದಿಯ ಅಮಾವಾಸ್ಯೆಯ ದಿನ ಗ್ರಾಮದವರೆಲ್ಲರೂ ಸೇರಿ ಕಾಡಿಗೆ ಹಂದಿ ಬೇಟೆಗೆಂದು ಹೋಗುವುದಕ್ಕೆ ಒಂದುವಾರ ಮೊದಲೇ ಗೊತ್ತುಪಡಿಸುತ್ತಾರೆ. ಆಯಾ ಗ್ರಾಮದ ಮುಖ್ಯಸ್ಥನು ಮತ್ತು ಬೇಟೆ ಗುರಿಕಾರನು ಬೇಟೆಗೆ ಹೋಗಬೇಕೆಂದು ಸಮಾಲೋಚನೆ ನಡೆಸಿ ಒಂದುವಾರ ಮೊದಲೇ ನಿರ್ಧರಿಸುತ್ತಾರೆ. ನಂತರ ತಾಂಡದ ಢಾಲ್ಯಾ ಪಂಗಡದ ವ್ಯಕ್ತಿ ತಮಟೆ ಬಾರಿಸುತ್ತಾ ವಿಷಯ ಸಾರುತ್ತಾನೆ. ಹೀಗೆ ಸಾರುವುದು ವಿಶೇಷವಾಗಿ

ಪ್ರತಿಯೊಬ್ಬರಿಗೂ ಬೇಟೆಯ ವಿಷಯ ತಿಳಿಯಲಿ, ಮೈನವಿರೇಳಿ ಬಹಳಷ್ಟು ಮಂದಿ ಬೇಟೆಗೆ ಬರಲಿ ಎನ್ನುವ ಉತ್ಸುಕತೆಯಿಂದ ತಮಟೆ ಬಾರಿಸುವನು. ತಾಂಡದ ಸೇವಾಲಾಲ್ ದೇವಾಲಯದಿಂದ ಆರಂಭಿಸಿ ತಾಂಡವನ್ನು ಸುತ್ತಿಕೊಂಡು ಬರುತ್ತಾನೆ. ಅವನಿಗೆ ಅಂದು ತಾಂಡನಾಯಕ ಮನೆಯಲ್ಲಿ ಊಟ ಹಾಕಿಸುತ್ತಾರೆ. ಯುಗಾದಿಯ ಅಮವಾಸ್ಯೆ ದಿನ ಲಂಬಾಣಿಗರೆಲ್ಲ ಸೇರಿ ಸಕಲ ಆಯುಧಗಳೊಂದಿಗೆ ತಾಂಡದ ಎಲ್ಲ ದೇವರಿಗೆ ಕೈ ಮುಗಿದು ಸಾರುವವನ ಹಿಂದೆ ಸಾಲಿನೊಂದಿಗೆ ಹೋಗುವರು. ಮೊದಲು ಅಕ್ಕಪಕ್ಕದ ತಮ್ಮ ಕಾಡಿನಲ್ಲಿ ಬೇಟೆಯಾಡುತ್ತಾರೆ. ನಂತರ ಬೇಟೆ ಕಾಣಸಲಿಲ್ಲವೆಂದರೆ ಅವುಗಳು ಎಲ್ಲೇ ವಾಸಿಸಿರಲಿ ಅಲ್ಲಿಯ ಜಾಗವನ್ನು ಭೇದಿಸಿಕೊಂಡು ಗಡಿಪ್ರಾಂತ್ಯ ಮೀರಿ ಹೋಗುವ ಸಾಧ್ಯತೆಯಿದೆ. ಅಲ್ಲಿ ಸಿಕ್ಕಂತಹ ಹಂದಿಯನ್ನು ತರುವಾಗ ಆ ಊರಿನ ಜನಕ್ಕೂ ಇವರಿಗೂ ಘರ್ಷಣೆಗಳಾಗುವುದುಂಟು. ಕಡಿದ ಹಂದಿಯನ್ನು ಕೂಡ ಅವರು ಕಸಿದುಕೊಳ್ಳಬಹುದು. (ಹಂದಿ ಬೇಟೆಯಲ್ಲಿ ದೊಡ್ಡ ವ್ಯಾಜ್ಯವಾದ ಬಗೆಗೆ ಹುಟ್ಟಿಕೊಂಡ ಜನಪದ ಗೀತೆಯನ್ನು ಅನುಬಂಧದಲ್ಲಿ ಕೊಡಲಾಗಿದೆ.) ಹೀಗಾಗಿ ಸಂಘರ್ಷಗಳಿಂದ ಕಟ್ಟೆಮನೆ, ಗ್ರಾಮಪಂಚಾಯ್ತಿ, ಪೋಲೀಸ್‌ಠಾಣೆ, ಕೋರ್ಟ್, ಕಛೇರಿಗಳೆಂದು ಅಲೆದಾಡುವುದುಂಟು. ತೀರ್ಪು ಸಿಗದೆ ಹಗೆತನವನ್ನು ಕೊನೆಯವರೆಗೂ ವಿವಿಧ ರೀತಿಯಲ್ಲಿ ತೀರಿಸಿಕೊಳ್ಳಲು ಪ್ರಯತ್ನಿಸುತ್ತಾರೆ.

ಯುಗಾದಿ ಹಬ್ಬದ ಹಂದಿಬೇಟೆಯಲ್ಲಿ ಹಂದಿ ಸಿಕ್ಕರೆ ಅದನ್ನು ತಾಂಡದ ಹೊರಗಿನವರೆಗೆ ತಂದು ಗಾಡಿಯಲ್ಲಿ ಕುಳ್ಳಿರಿಸಿ ಸರ್ವಾಲಂಕೃತ ಮಾಡಿ ಮೆರವಣಿಗೆಗೆ ಸಿದ್ಧಪಡಿಸುತ್ತಾರೆ. ಮೆರವಣಿಗೆಯ ಸಂದರ್ಭದಲ್ಲಿ ತಮ್ಮ ಆಯುಧಗಳಿಗೆ ಕುಂಕುಮ, ವಿಭೂತಿಗಳನ್ನಿಡುತ್ತಾರೆ. ಮೆರವಣಿಗೆ ತಾಂಡದ ಬಾಗಿಲತ್ತ ಬಂದಾಗ ಮುತ್ತೈದೆಯರು ಅಥವಾ ಸುಮಂಗಲೆಯರು, ಹರೆಯದ ತರುಣಿಯರು ತಾಂಡದ ಬಾಗಿಲಿನತ್ತ ನಿಂತುಕೊಂಡು ಬೇಟೆ ಹೊಡೆದುಕೊಂಡು ಬಂದ ತಮ್ಮವರಿಗೆ ಆರತಿಯನ್ನು ಬೆಳಗುವರು. ಬೇಟೆಗಾರರು ತಮಗಿಷ್ಟ ಬಂದಷ್ಟು ಹಣವನ್ನು ಆರತಿ ತಟ್ಟೆಗೆ ಹಾಕುತ್ತಾರೆ. ತಾಂಡಾದ ಬಾಗಿಲನ್ನು ಪ್ರವೇಶಿಸುವ ಮುನ್ನ ಹಂದಿಯ ದೇಹಕ್ಕೆ ಎಣ್ಣೆ, ಕುಂಕುಮ ಸವರಿ ಪೂಜೆ ಮಾಡಿ ಏಳು ಸಾರಿ ಕೊಡಗಳಿಂದ ನೀರನ್ನು ಸುರಿಯುತ್ತಾರೆ. ತಾಂಡದಲ್ಲಿ ಮೆರವಣಿಗೆ ಮಾಡಿದ ನಂತರ ಎಲ್ಲರ ಅಪ್ಪಣೆ ಮೇರೆಗೆ ಪಾಲುಹಾಕಿ ಪ್ರತಿಮನೆಗೆ ಕಳಿಸುತ್ತಾರೆ. ಹೀಗೆ ಬಳ್ಳಾರಿ ಪ್ರದೇಶದಲ್ಲಿ ಬೇಟೆಯ ಪ್ರಸಂಗ ತುಂಬಾ ವೈವಿಧ್ಯವಾಗಿರುವುದು.

ಬಳ್ಳಾರಿ ಪ್ರದೇಶದಲ್ಲಿ ಬೇಟೆಯ ಸ್ಥಾನಮಾನವನ್ನು ಅವಲೋಕಿಸುವಲ್ಲಿ ನಾಗರಿಕತೆ ಮತ್ತು ವೈಜ್ಞಾನಿಕತೆಯ ಪ್ರಭಾವದಿಂದ ಬೇಟೆಯು ಸಡಿಲಗೊಂಡು ಮಾಯವಾಗುತ್ತದೆ. ಆಹಾರಕ್ಕಾಗಿ ಮತ್ತು ಹಬ್ಬ ಹರಿದಿನಗಳಲ್ಲಿ ಏಕಾಂಗಿಯಾಗಿ ಮತ್ತು ಗುಂಪುಗುಂಪಾಗಿ ಬೇಟೆಯಾಡುವುದು ಕಂಡುಬರುತ್ತದೆ. ಬೇಟೆಯಿಂದ ಆರ್ಥಿಕವಾಗಿ ಮುಂದುವರೆಯದಿದ್ದರೂ ಕೆಲವರು ಆಹಾರವಾಗಿ ಮಾಡಿಕೊಂಡರೆ, ಕೆಲವು ಲಂಬಾಣಿಗರು ಹೆಚ್ಚಿನ ಹಣಕ್ಕೆ ಮಾರುವುದನ್ನು ನೋಡಬಹುದು.

**೫. ಭಟ್ಟಿ ಸಾರಾಯಿ ತಯಾರಿಕೆ :** ಪ್ರಾಚೀನ ಕಾಲದಲ್ಲಿ ಲಂಬಾಣಿಗರು ಸಾಮಾನುಗಳನ್ನು ಸರಬರಾಜು ಮಾಡಲು

ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಹೋಗುವುದು ಅನಿವಾರ್ಯವಾಗಿತ್ತು. ಆ ಸಂದರ್ಭದಲ್ಲಿ ಕಾಡುಗಳಲ್ಲಿ ಸಿಕ್ಕ ಪ್ರಾಣಿಯನ್ನು ಬೇಟೆಯಾಡಿ ಭಟ್ಟಿ ಸಾರಾಯಿ ತಯಾರಿಸಿಕೊಂಡು ಕುಡಿಯುತ್ತಿದ್ದರು. ಭಟ್ಟಿ ಸಾರಾಯಿಯಿಂದ ಅವರಿಗೆ ಅರಣ್ಯಗಳಲ್ಲಿ ಹೋಗುವ ಧೈರ್ಯ, ಸಾಹಸ ಹಾಗೂ ಶಕ್ತಿ ದೊರಕತಂತಿತ್ತು. ಹೀಗಾಗಿ ಒಂದು ಕಾಲದಲ್ಲಿ ಲಂಬಾಣಿಗರು ತಮಗಾಗಿ ಕುಡಿಯಲು ಭಟ್ಟಿ ಸಾರಾಯಿಯನ್ನು ತಯಾರಿಸಿಕೊಳ್ಳುತ್ತಿದ್ದರು. ಇದಕ್ಕೆ ಯಾವುದೇ ನಿರ್ಬಂಧಗಳೂ ಅವರಿಗಿರಲಿಲ್ಲ. ನಂತರದ ದಿನಗಳಲ್ಲಿ ಭಟ್ಟಿ ಸಾರಾಯಿ ಕಳ್ಳಭಟ್ಟಿ ಸಾರಾಯಿಯಾಗಿ ವ್ಯಾಪಾರ ಮಾಡಲು ಪ್ರಾರಂಭಿಸಿದರು. ಅಕ್ಕಪಕ್ಕದಲ್ಲಿನ ಸಮುದಾಯದವರು ಕಡಿಮೆ ದರದಲ್ಲಿ ಸಿಗುವ ಈ ಸಾರಾಯಿಯನ್ನು ಕಳ್ಳತನದಿಂದ ಕುಡಿಯಲು ಪ್ರಾರಂಭಿಸಿದರು. ಪ್ರಾರಂಭದಲ್ಲಿ ತಮಗಷ್ಟೇ ಕುಡಿಯಲು ಒಳ್ಳೆ ಸಾರಾಯಿಯನ್ನು ತಯಾರಿಸಿಕೊಳ್ಳುತ್ತಿದ್ದರು. ಇನ್ನುಳಿದವರ ಬೇಡಿಕೆಯಿಂದ ಹಾಗೂ ಹಣ ಗಳಿಕೆಗಾಗಿ ಕೆಟ್ಟಸಾರಾಯಿಯನ್ನು ಲಂಬಾಣಿಗರು ತಯಾರಿಸಲು ಪ್ರಾರಂಭಿಸಿದರು.[೬೬] ಇದರಿಂದ ಹಲವಾರು ಜನರು ಅನಾರೋಗ್ಯಕ್ಕೀಡಾ ಮೃತಹೊಂದಿದರು. ಸರ್ಕಾರ ಕಾನೂನು ಕ್ರಮಗಳಿಂದ ಪ್ರತಿಬಂಧಿಸಿ ಮುಟ್ಟುಗೋಲು ಹಾಕಿತು. ಅಬಕಾರಿ ಇಲಾಖೆಯ ಕಾರ್ಯಾಚರಣೆಯಿಂದ ಭಟ್ಟಿ ಸಾರಾಯಿ ಮಾಡುವುದು ನಿಂತುಹೋಯಿತು. ಅಂದಿನಿಂದ ಇದು ಕಳ್ಳ ಭಟ್ಟಿಸಾರಾಯಿಯಾಗಿಯೇ ಮುಂದುವರೆದಿದೆ. ಕಳ್ಳಭಟ್ಟಿ ತಯಾರಿಸುವಿಕೆ ಕೆಲವು ಲಂಬಾಣಿಗರು ಉಪಜೀವನದ ಕಸುಬಾಗಿಯೂ ಪರಿಣಮಿಸಿತು. ಇಂದು ಈ ವೃತ್ತಿ ಅವಸಾನದತ್ತ ಸಾಗಿದೆ. ಬದಲಾದ ಕಾಲಕ್ಕನುಗುಣವಾಗಿ ಇತ್ತೀಚೆಗೆ ಬೇರೆ ಬೇರೆ ಸಮುದಾಯಗಳಂತೆ ಇವರೂ ಸಹ ತಮ್ಮ ಕಸುಬುಗಳನ್ನು ಬಿಡುತ್ತಾ ಬೇರೆ ಬೇರೆ ಉದ್ಯೋಗಗಳಲ್ಲಿ ತೊಡಗಿಸಿಕೊಳ್ಳುತ್ತಲಿದ್ದಾರೆ.

೬. ಇತರ ವೃತ್ತಿಗಳು : ಲಂಬಾಣಿಗರು ಬೇಟೆಯ ಮೂಲಕ ಆಹಾರ ಸಂಗ್ರಹಿಸಿ, ಉಪ ಮೂಲ ಕಸಬು ಸರಕು ಸಾಗಾಣಿಕೆ ಹಾಗೂ ಪಶುಪಾಲನೆಗಳನ್ನು ಹೊಂದಿ ಸಮೃದ್ಧರಾಗಿ ಬೆಳೆದದ್ದು ಸ್ಪಷ್ಟವಾದರೂ ಕಾಲ ಸರಿದಂತೆ ಕೃಷಿಯಲ್ಲಿ ನಿರತರಾಗಿ ಸ್ವತಂತ್ರವಾದ ಬದುಕು ಕಂಡುಕೊಂಡರು. ಅಧ್ಯಯನದ ವ್ಯಾಪ್ತಿಯಲ್ಲಿ ಬರುವ ಬಳ್ಳಾರಿ ಪ್ರದೇಶದಲ್ಲಿ ಅನೇಕ ಲಂಬಾಣಿ ಕುಟುಂಬಗಳು ಬಡತನದಿಂದ ನರಳುತ್ತಿದ್ದು, ಕೆಲವರು ಮಾತ್ರ ಸರ್ಕಾರದ ಸೌಲಭ್ಯ ಪಡೆಯುತ್ತಾರೆ. ದೊಡ್ಡ ರೈತ ಕುಟುಂಬಗಳಿರುವುದು ಕಡಿಮೆ. ಇಂದು ಹೆಚ್ಚಾಗಿ ಕಾಡನ್ನು ಕಡಿದು ಉಳುಮೆ ಮಾಡುವುದರಿಂದ ಪರಿಸರ, ವನ್ಯಜೀವಿಗಳ ನಾಶದಿಂದ ಮಳೆ ಪ್ರಮಾಣ ಇಳಿತಕ್ಕೆ ಕಾರಣವಾಗಿದೆ. ಹೀಗಾಗಿ ಒಣಭೂಮಿ, ಗುಡ್ಡಗಾಡು, ಬಂಜರು ಭೂಮಿ ಇತ್ಯಾದಿ ನಿರ್ಲಕ್ಷ್ಯ ಜಾಗದಲ್ಲಿ ಇವರು ನೆಲೆಸುತ್ತಿದ್ದು, ವಾಣಿಜ್ಯ ಬೆಳೆಗಳಾದ ಅಡಿಕೆ, ತೆಂಗು, ಬಾಳೆ, ದ್ರಾಕ್ಷಿ, ಹತ್ತಿ ಬೆಳೆಯಲು ವಿಫಲರಾಗುವುದು ಸ್ಪಷ್ಟ. ಈವರೆಗೆ ಲಂಬಾಣಿಗರ ಕಸುಬು ಜೀತ ಪದ್ಧತಿಗೆ ದುಡಿಯುವುದಾಗಿತ್ತು. ಆಧುನಿಕತೆ ಬೆಳೆದಂತೆ ವೃತ್ತಿಗಳಲ್ಲಿ ಬದಲಾಗಿದ್ದಾರೆ. 'ಈಗಲೂ ಲಂಬಾಣಿಗರು ಸಾಮಾನ್ಯವಾಗಿ ಪಶುಪಾಲನೆ ಮಾಡಿಕೊಂಡು ಬರುತ್ತಿರುವುದು ಕಂಡುಬರುತ್ತದೆ. ಕುರಿ, ಕೋಳಿ, ಮೇಕೆ, ದನಗಳನ್ನು ಸಾಕುವ ಕೆಲವರು ಅವುಗಳ ಉತ್ಪನ್ನದಿಂದ ಬದುಕು ನಿರ್ವಹಣೆ ಮಾಡುತ್ತಾರೆ. ಪಶುಪಾಲನೆಯಿಂದ ಬರುವ ಹಾಲು, ತುಪ್ಪ, ಬೆಣ್ಣೆ ಇತ್ಯಾದಿಗಳನ್ನು ತಮಗೆ ಬೇಕಾದಷ್ಟನ್ನು ಇಟ್ಟುಕೊಂಡು ಹೆಚ್ಚಾದುದನ್ನು ಇತರರಿಗೆ ಮಾರಾಟ ಮಾಡುತ್ತಾರೆ.[೬೭]

ಲಂಬಾಣಿಗರು ಉಪಜೀವನಕ್ಕಾಗಿ ಕೆಲವರು ಕಾಡಿನಲ್ಲಿಯ ಕಟ್ಟಿಗೆ ಕಡಿದು ತಲೆ ಮೇಲೆ ಹೊತ್ತು ನಗರಗಳಿಗೆ ತಂದು ಮಾರಾಟ ಮಾಡುವುದು. ಊರು ಬಿಟ್ಟು ಗುಳೆ ಹೋಗಿ ಕಲ್ಲು ಒಡೆಯುವುದು, ಕಟ್ಟಡ ಕಟ್ಟುವ ಕೆಲಸ ಮಾಡುವುದು. ಗಾರೆ ಹಾಕುವುದು. ರಸ್ತೆ ಕೆಲಸಮಾಡುವುದು. ಗಣಿಕೆಲಸ ಮಾಡುವುದು ಭಾರಹೊರುವುದು, ಇತ್ಯಾದಿ ಕೆಲಸಗಳಲ್ಲಿ ನಿರತರಾಗಿದ್ದಾರೆ.[೬೫]

ಲಂಬಾಣಿ ಸ್ತ್ರೀಯರು ಕಸೂತಿ ಕೆಲಸಗಳನ್ನು ಮಾಡುತ್ತಾರೆ. ತಮ್ಮ ಸಾಂಪ್ರದಾಯಿಕ ಕಸೂತಿ ಕಲೆಯಲ್ಲಿ ಹತ್ತಾರು ಬಗೆಯ ಬಣ್ಣದ ದಾರಗಳನ್ನು ಉಪಯೋಗಿಸಿ ತಮ್ಮ ಪೋಷಾಕುಗಳಿಗೆ ಕನ್ನಡಿ ಹಾಕಿ ವಸ್ತ್ರಗಳನ್ನು ತಯಾರಿಸುತ್ತಾರೆ. ಕೆಲವರು ಕಸೂತಿ ಕೆಲಸವನ್ನು ಉಪ ಜೀವನದ ಸಾಧನವನ್ನಾಗಿ ಮಾಡಿಕೊಂಡಿದ್ದಾರೆ. ಬಳ್ಳಾರಿ ಜಿಲ್ಲೆಯ ಸೊಂಡೂರುನಲ್ಲಿ ಲಂಬಾಣಿ ಕುಶಲಕಲಾ ಕೇಂದ್ರದಲ್ಲಿ ಉಡುಪುಗಳನ್ನು ತಯಾರಿಸಿ ವಿದೇಶಗಳಿಗೆ ರಫ್ತು ಮಾಡುತ್ತಿರುವುದು ಕಂಡುಬರುತ್ತದೆ. ಕಸೂತಿ ಕಲೆಯಿಂದ ಆರ್ಥಿಕವಾಗಿ ಸಬಲರಾಗುತ್ತಿದ್ದಾರೆ. ಕೆಲವರು ಕಸೂತಿ ಹಾಕಿ ಜೀವನ ಮಾಡುತ್ತಿದ್ದಾರೆ.

ಆಧುನಿಕ ಕಾಲದ ಕೈಗಾರೀಕರಣದ ಪ್ರಭಾವದಿಂದಾಗಿ ಲಂಬಾಣಿಗರು ಆರ್ಥಿಕ ಜೀವನ ಪರಿವರ್ತನೆಗೊಂಡಿರುವುದು ಕಂಡುಬರುತ್ತದೆ. ವ್ಯಾಪಾರ, ವ್ಯವಸಾಯ, ಕೃಷಿ ಕಾರ್ಮಿಕರು, ಬೇಟೆ, ಭಟ್ಟಿ ಸಾರಾಯಿ ತಯಾರಿಕೆ ಇನ್ನಿತರ ವೃತ್ತಿಗಳನ್ನು ಕೈಗೊಂಡಿದ್ದಾರೆ. ಅನೇಕ ದಲ್ಲಾಳಿ ವ್ಯಾಪಾರವನ್ನು ಮಾಡುವುದು ಕಂಡುಬರುತ್ತದೆ. ಸಣ್ಣ ವ್ಯಾಪಾರಗಳಾದ ಕಿರಾಣಿ, ಕಾಯಿಪಲ್ಲೆ, ಔಷಧಿ, ಹೋಟೆಲ್ ಮೊದಲಾದ ಅಂಗಡಿಗಳನ್ನಿಟ್ಟು ವ್ಯಾಪಾರ ಮಾಡುವುದು ಕಂಡುಬರುತ್ತದೆ. ಹಗರಿಬೊಮ್ಮನಹಳ್ಳಿ, ಹಡಗಲಿ, ಹಾಗೂ ಹೊಸಪೇಟೆಗಳಲ್ಲಿ ದಲ್ಲಾಳಿ ವ್ಯಾಪಾರ ಮಾಡುವವರ ಸಂಖ್ಯೆ ಹೆಚ್ಚಾಗಿದ್ದರೆ, ಕೂಡ್ಲಿಗಿ, ಸಿರಗುಪ್ಪ ಸೊಂಡೂರು ಭಾಗಗಳಲ್ಲಿ ಚಿಕ್ಕಪುಟ್ಟ ವ್ಯಾಪಾರ ಮಾಡುವುದು ಕಂಡುಬರುತ್ತದೆ. ಕ್ಷೇತ್ರಕಾರ್ಯದಲ್ಲಿ ಲಭಿಸಿದ ಮಾಹಿತಿಯ ಆಧಾರದ ಮೇಲೆ ಪ್ರತೀ ಶತ ಅಂಕಿ -ಸಂಖ್ಯೆಯನ್ನು ಈ ಕೆಳಗಿನ ಕೋಷ್ಟಕದಲ್ಲಿ ನೀಡಲಾಗಿದೆ.

| ಕ್ರ.ಸಂ. | ತಾಲ್ಲೂಕು | ವ್ಯವಸಾಯ | ವ್ಯಾಪಾರ | ಕೃಷಿ ಕಾರ್ಮಿಕರು | ಬೇಟೆ | ಇತರೇ ವೃತ್ತಿ |
|---|---|---|---|---|---|---|
| ೧. | ಬಳ್ಳಾರಿ | ೪೦% | ೨೦% | ೩೯.೩% | ೦೧% | ೩೦.೭% |
| ೨. | ಹೊಸಪೇಟೆ | ೪೫% | ೩೦.೩% | ೩೯.೧% | ೦೧% | ೪೪.೩% |
| ೩. | ಸಿರಗುಪ್ಪ | ೩೮% | ೨೧.೧% | ೫೬.೧% | ೦೫% | ೧೬.೪% |
| ೪. | ಹಗರಿಬೊಮ್ಮನ ಹಳ್ಳಿ | ೪೨% | ೩೫.೦೦% | ೩೬.೧% | ೦೨% | ೧೭.೨% |
| ೫. | ಹೂವಿನಹಡಗಲಿ | ೪೮% | ೧೯.೦೦% | ೫೨.೩% | ೧.೫% | ೧೬.೪% |
| ೬. | ಕೂಡ್ಲಿಗಿ | ೪೬% | ೧೮.೦೦% | ೩೬.೨% | ೨.೫% | ೧೬.೩% |
| ೭. | ಸೊಂಡೂರು | ೪೧% | ೨೫.೦೦% | ೩೨.೮% | ೦೨% | ೩೪.೯% |

ಬಳ್ಳಾರಿ ಜಿಲ್ಲೆಯ ಹಲವು ಗ್ರಾಮಗಳಲ್ಲಿ ಗ್ರಾಮಪಂಚಾಯಿತಿ ಸ್ಥಾನಗಳಲ್ಲಿ ತಾವು ನೆಲೆನಿಂತರೂ ಜೆಸ್ಕಾಂ, ಸೈನಿಕರಾಗಿ, ಪೋಲೀಸ್, ಸಾರಿಗೆ, ಅಬಕಾರಿ, ಶಿಕ್ಷಣ, ಕಂದಾಯ ಹಾಗೂ ದೇಶಸೇವೆ ಇತ್ಯಾದಿ ಔದ್ಯೋಗಿಕ

ಕ್ಷೇತ್ರಗಳಲ್ಲಿ ಸೇವೆಸಲ್ಲಿಸುವವರು. ಜಿಲ್ಲೆಯಲ್ಲೂ ಕಂಡುಬರುತ್ತಾರೆ. ಇವರೆಲ್ಲರ ನಿತ್ಯ ಸೇವೆಯೂ ಸಹ ಆರ್ಥಿಕಾಂಶಕ್ಕೆ ನೀಡಿದ ಕೊಡುಗೆಯನ್ನು ಗುರುತಿಸಬಹುದಾಗಿದೆ.

ಶಿಕ್ಷಣ ಇಲಾಖೆಯಲ್ಲಿ ಶಿಕ್ಷಕನಿಂದ ಹಿಡಿದು ಪ್ರಾಧ್ಯಾಪಕರುಗಳವರೆಗಿನ ಹುದ್ದೆಯಲ್ಲಿದ್ದಾರೆ. ಶಿಕ್ಷಣಾಧಿಕಾರಿ ಹಾಗೂ ಉನ್ನತ ಶಿಕ್ಷಣವನ್ನು ಪೂರೈಸಿ ಕಾಲೇಜು, ವಿಶ್ವವಿದ್ಯಾಲಯದಲ್ಲೂ ತಮ್ಮ ಕೊಡುಗೆ ನೀಡುತ್ತಿದ್ದಾರೆ. ಇವರಲ್ಲಿ ಜಿಲ್ಲೆಗೆ ನೀಡಿದ ಕೊಡುಗೆ ಕಡಿಮೆ ಎನ್ನಬಹುದು. ಕೇವಲ ಶಿಕ್ಷಕರ ಸಂಖ್ಯೆ ಹೆಚ್ಚಾಗಿ ಕಂಡುಬಂದರೂ ಇತ್ತೀಚೆಗೆ ಸಂಶೋಧನಾ ವಿಷಯಗಳಲ್ಲೂ ಬೆರಳೆಣಿಕೆಯಷ್ಟು ಲಂಬಾಣಿ ವಿದ್ಯಾರ್ಥಿಗಳು ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಬೇರೆ ಜಿಲ್ಲೆಗೆ ಹೋಲಿಸಿದರೆ ಈ ಕ್ಷೇತ್ರದ ಬೆಳವಣಿಗೆ ಕಡಿಮೆ ಎನ್ನಬಹುದು.

ಪೋಲಿಸ್ ಇಲಾಖೆಯಲ್ಲಿ ಪೇದೆಯಿಂದ ಹಿಡಿದು ಪೋಲಿಸ್ ವರಿಷ್ಠಾಧಿಕಾರಿಯವರೆಗಿನ ಹುದ್ದೆ ಇತ್ತೀಚೆಗೆ ಈ ಸಮುದಾಯದ ಕೆಲವರಿಗೆ ದೊರಕಿದೆ.

ಸಾರಿಗೆ ಇಲಾಖೆಯಲ್ಲಿ ನಿರ್ವಾಹಕ, ಚಾಲಕ, ಉದ್ಯೋಗಿಗಳು ಕಂಡುಬರುತ್ತದೆ. ಈ ಇಲಾಖೆಯಲ್ಲಿ ಉನ್ನತಾಧಿಕಾರಿಗಳು ಬಹಳ ಕಡಿಮೆ ಎಂಬುವುದು ಕ್ಷೇತ್ರ ಅಧ್ಯಯನದಿಂದ ತಿಳಿದುಬರುತ್ತದೆ. ಹೀಗೆ ಇನ್ನುಳಿದ ಹತ್ತು ಹಲವು ಇಲಾಖೆಗಳೊಂದಿಗೆ ಅಲ್ಲಲ್ಲಿ ದೇಶಕ್ಕೆ ಸೇವೆ ಸಲ್ಲಿಸುವವರನ್ನು ಕಾಣಬಹುದಾಗಿದೆ. ಈ ಹಿನ್ನೆಲೆಯಲ್ಲಿ ಲಂಬಾಣಿ ಸಮುದಾಯ ಆರ್ಥಿಕ ಮಟ್ಟವನ್ನು ಗುರುತಿಸಿಕೊಳ್ಳುತ್ತಿದ್ದಾರೆ ಎನ್ನಬಹುದು.

**ಟಿಪ್ಪಣಿಗಳು**

೧. ಕುರುಗೋಡು ಸಿಂಧರು ಒಂದು ಅಧ್ಯಯನ, ಚನ್ನಬಸವಯ್ಯ ಹಿರೇಮಠ, ಪ್ರ: ಸಂಗಣ್ಣನವರು, ಅಗಡಿ ಸಂಸ್ಕೃತಿ ಪ್ರತಿಷ್ಠಾನ, ಕೊಪ್ಪಳ - ೧೯೯೫ ಪುಟ-೨೧೮

೨. ಅದೇ, ಪುಟ ೨೧೮

೩. ಶಾಸನಗಳಲ್ಲಿ ಕರ್ನಾಟಕ ವರ್ತಕರು, ಸಂ: ಬಿ.ಆರ್ ಹಿರೇಮಠ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೧೯೮೬, ಪುಟ-೮

೪. ಅದೇ, ಪುಟ - ೬೧

೫. ಅದೇ, ಪುಟ - ೬೧

೬. ಕೊಪ್ಪಳ ಜಿಲ್ಲೆಯ ಶಾಸನಗಳು ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ ಪಿಎಚ್.ಡಿ ಪ್ರಬಂಧ), ಸಂ.: ಸಾಯಿಬಣ್ಣ ಕೆ. ಮೇಲಕಾರ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೨೦೦೨, ಪುಟ-೧೫೨

೭. ಟ್ರೇಡಿಂಗ್ ಕಮ್ಯುನಿಟೀಸ್ ಇನ್ ಇಂಡಿಯಾ ಫ್ರಂ ಅರ್ಲಿಯಸ್ಟ್ ಟೈಂ ಟು ೩೦೦ ಎ.ಡಿ, ಅರುಣ್‌ಕುಮಾರ್ ಮಿಶ್ರ, ನ್ಯೂಡೆಲ್ಲಿ - ೧೯೯೦, ಪುಟ-೩೬

೮. ಅದೇ

೯. ಶಾಸನಗಳಲ್ಲಿ ಕರ್ನಾಟಕ ವರ್ತಕರು, ಹಿರೇಮಠ ಬಿ.ಆರ್., ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೧೯೮೬, ಪುಟ-೧೫೩

೧೦. ದಿ. ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ಸ್, ವ್ಯಾಲ್ಯೂಂ - II, ನಂಜುಂಡಯ್ಯ ಹೆಚ್.ವಿ., ಮತ್ತು ಅನಂತಕೃಷ್ಣ ಅಯ್ಯರ್ ಎಲ್.ಕೆ., ಬೆಂಗಳೂರು - ೧೯೨೮ ಪುಟ-೧೪೭.

೧೧. ಸೋಸಿಯಲ್ ಎಕಾನಮಿಕ್ ಡಿಸ್ಟ್ರೀ ಆಫ್ ಮೆಡಿವಲ್ ಇಂಡಿಯಾ, ಚಿಟ್ನಿಸ್ ಕೆ.ಎನ್., ಮಹರ್ ಆಫ್ಸೆಟ್ ಪ್ರೆಸ್, ಡೆಲ್ಲಿ - ೧೯೯೦ ಪುಟ-೩೬೩

೧೨. ಅದೇ, ಪುಟ-೩೬೫

೧೩. ದಿ. ಕಲ್ಚರಲ್ ಅಂಡ್ ಸಿವಿಲೈಜೇಷನ್ ಆಫ್ ಏನ್ಷಿಯಂಟ್ ಇಂಡಿಯಾ ದಿ. ಇನ್ ಹಿಸ್ಟೋರಿಕಲ್ ಔಟ್‌ಲೈನ್, ಕೊಸಾಂಬಿ ಡಿ.ಡಿ., ವಿಕಾಸ ಪಬ್ಲಿಕೇಶನ್ ಹೌಸ್, ನ್ಯೂಡೆಲ್ಲಿ - ೧೯೭೦ ಪುಟ-೧೮೫,೧೮೬

೧೪. ಪೂರ್ವೋಕ್ತ, ವ್ಯಾಲ್ಯೂಂ - II, ನಂಜುಂಡಯ್ಯ ಹೆಚ್.ವಿ., ಮತ್ತು ಅನಂತಕೃಷ್ಣ ಅಯ್ಯರ್ ಎಲ್.ಕೆ., ಪುಟ-೧೩೮.

೧೫. ಪ್ರವಾಸಿ ಕಂಡ ಇಂಡಿಯಾ, ಸಂಪುಟ-೪, ನಾಗೇಗೌಡ ಹೆಚ್.ಎಲ್., ಲೇಖಿನ: ಪೀಟರ್‌ಮಂಡಿ, ಮೈಸೂರು, - ೧೯೭೨ ಪುಟ-೩೦೧

೧೬. ಅದೇ, ಪುಟ-೩೦೬

೧೭. ಲಂಬಾಣಿ ಸಂಸ್ಕೃತಿ, ಸಣ್ಣರಾಮ, ಮಲ್ನಾಡ್ ಆಫ್‌ಸೆಟ್ ಪ್ರಿಂಟರ್ಸ್, ಶಿವಮೊಗ್ಗ - ೧೯೯೯, ಪುಟ-೪೦

೧೮. ಪೂರ್ವೋಕ್ತ, ಚಿಟ್ನಿಸ್ ಕೆ.ಎನ್., ಪುಟ-೩೫೨

೧೯. ದಿ. ಟ್ರೈಬ್ಸ್ ಅಂಡ್ ಕ್ಯಾಸ್ಟ್ ಆಫ್ ದಿ ನಾರ್ತ್ ವೆಸ್ಟ್ರನ್ ಇಂಡಿಯಾ, ವ್ಯಾಲ್ಯೂಂ - ೧೬(1) ಲ್ಯಾಂಡ್ ಮಾರ್ಕ ಇನ್ ಇಂಡಿಯನ್ ಅಂಥ್ರೋಪಲಾಜಿ - ೧೯೮೭ ಪುಟ-೧೫೦.

೨೦. ಪೂರ್ವೋಕ್ತ, ಸಣ್ಣರಾಮ, ಪುಟ-೩೭

೨೧. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಚಿದಾನಂದಮೂರ್ತಿ ಎಂ. ಸಪ್ನ ಬುಕ್‌ಹೌಸ್, ಬೆಂಗಳೂರು - ೨೦೦೨ ಪುಟ - ೪೦೪

೨೨. ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ-೨ (ಬಳ್ಳಾರಿ ಜಿಲ್ಲೆ), ಸಂ: ದೇವರಕೊಂಡಾರೆಡ್ಡಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೧೯೯೭, ಪುಟ-೯೧

೨೩. ಕರ್ನಾಟಕ ಚರಿತ್ರೆ, ಸಂಪುಟ-೩ ಪ್ರ.ಸಂ: ಷೇಕ್ ಅಲಿ ಬಿ., ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೧೯೯೭ ಪುಟ - ೧೫೭

೨೪. ಪೂರ್ವೋಕ್ತ, ಚಿದಾನಂದಮೂರ್ತಿ ಪುಟ - ೪೦೭

೨೫. ಕರ್ನಾಟಕ ಚರಿತ್ರೆ, ಸಂಪುಟ-೩ ಪ್ರ.ಸಂ: ಷೇಕ್ ಅಲಿ ಬಿ., ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೧೯೯೭, ಪುಟ - ೧೬೧

೨೬. ಚಿತ್ರದುರ್ಗ ಪ್ರದೇಶದ ಭೂ ಹಿಡುವಳಿಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ, ಬಸವರಾಜಪ್ಪ ಎಚ್.ಇ., ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೦, ಪುಟ-೧೫೯

೨೭. ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು, ಲಕ್ಷ್ಮಣ್ ತೆಲಗಾವಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೧೯೯೯, ಪುಟ-೭೩

೨೮. ಕರ್ನಾಟಕ ಬುಡಕಟ್ಟಿನ ಲಂಬಾಣಿಗಳು, ಖಂಡೋಬಾ ಪಿ.ಕೆ., ಶ್ರೀ ಸಿದ್ದಲಿಂಗೇಶ್ವರ ಬುಕ್ ಡಿಪೋ ಗುಲಬರ್ಗಾ - ೨೦೦೦, ಪುಟ-೮೫

೨೯. ಪೂರ್ವೋಕ್ತ, ಲಕ್ಷ್ಮಣ್ ತೆಲಗಾವಿ, ಪುಟ-೭೪

೩೦. ಸಾಧನೆಗಳ ಸರದಾರ, ದೇವರಾಜ ಅರಸು ಡಿ., ದೇವರಾಜ ಅರಸು ಸಂಶೋಧನ ಸಂಸ್ಥೆ ಬೆಂಗಳೂರು - ೧೯೯೭, ಪುಟ-೯೫

೩೧. ಸಂಸ್ಕೃತಿ ಮಹಿಳಾ ಮಾಲಿಕೆ, ಸಂಪುಟ-೫, ಸಂಪಾದಕರು ಮಲ್ಲಿಕಾ ಘಂಟಿ, ಹರಿಲಾಲ್ ಪವಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು - ೨೦೦೮, ಪುಟ-೧೭೮

೩೨. ಕರ್ನಾಟಕ ಅಭಿವೃದ್ಧಿ ಮಾಹಿತಿ ಕೋಶ, ಚಂದ್ರಶೇಖರ್ ಟಿ.ಆರ್., ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೧೯೯೯, ಪುಟ ೫೩.

೩೩. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ-೮೭

೩೪. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ-೯೧

೩೫. ಅದೇ, ಪುಟ-೯೧

•••

## ಅಧ್ಯಾಯ ಎಂಟು

# ಲಂಬಾಣಿ ಸಮುದಾಯದ ಶೈಕ್ಷಣಿಕ ಸ್ಥಿತಿ

೮.೧ ವಸಾಹತು ಕಾಲಘಟ್ಟದಲ್ಲಿ ಅಸ್ಪೃಶ್ಯರ ಸ್ಥಿತಿ

೮.೨ ವಸಾಹತೋತ್ತರ ಕಾಲಘಟ್ಟದಲ್ಲಿ ಲಂಬಾಣಿ ಸಮುದಾಯದ ಶೈಕ್ಷಣಿಕ ಪ್ರಗತಿ

೮.೩ ಲಂಬಾಣಿಗರ ಶೈಕ್ಷಣಿಕ ಅಭಿವೃದ್ಧಿಯಲ್ಲಿ ವಿದ್ಯಾರ್ಥಿ ನಿಲಯಗಳ ಪಾತ್ರ

೮.೪ ಸಮಾಜ ಕಲ್ಯಾಣ ಇಲಾಖೆಯ ವಿಶೇಷ ಕಾರ್ಯಕ್ರಮಗಳು ಮತ್ತು ಲಂಬಾಣಿಗರು

೮.೫ ಖಾಸಗಿ ಶಿಕ್ಷಣ ಸಂಸ್ಥೆಗಳು ಮತ್ತು ಲಂಬಾಣಿಗರು

## ಲಂಬಾಣಿ ಸಮುದಾಯದ ಶೈಕ್ಷಣಿಕ ಸ್ಥಿತಿ

ಶಿಕ್ಷಣ ಮಾನವನ ಮೂಲಭೂತ ಅವಶ್ಯಕತೆಗಳಲ್ಲೊಂದು. ಇದು ಅವನಲ್ಲಿ ಜ್ಞಾನವನ್ನು ವೃದ್ಧಿಸುವುದರೊಂದಿಗೆ ಜೀವನ ಮೌಲ್ಯಗಳನ್ನು ಬೆಳೆಸಿಕೊಳ್ಳಲು ಸಹಕಾರಿಯಾಗಿದೆ. ಪ್ರಾಚೀನ ಭಾರತದ ವಿದ್ಯಾಭ್ಯಾಸ ಪದ್ಧತಿಯು ಧಾರ್ಮಿಕವಾಗಿತ್ತು. ಪ್ರಾಚೀನರು ಮೋಕ್ಷವನ್ನು ಪಡೆಯಲು ವಿದ್ಯಾಭ್ಯಾಸ ಪ್ರಮುಖವಾದ ಮಾರ್ಗವೆಂದು ನಂಬಿದ್ದರು. ಮನುಷ್ಯನಿಗೆ ವಿದ್ಯೆಯಿಂದಲೇ ವಿನಯ, ವಿನಯದಿಂದ ಪಾಂಡಿತ್ಯ ಪಾಂಡಿತ್ಯತೆಯಿಂದ ಧನ ಧನದಿಂದ ಧರ್ಮ, ಧರ್ಮದಿಂದ ಸುಖ ಲಭಿಸುತ್ತದೆ.[1] ವಿದ್ಯೆಯು ಕಲ್ಪಲತೆಯಂತೆ, ಪ್ರತಿಯೊಂದನ್ನು ತಾನೇ ಕೊಡುವುದಿಲ್ಲ. ಆದರೆ ತಾಯಿಯಂತೆ ಕಾಪಾಡುತ್ತದೆ. ತಂದೆಯಂತೆ ಸರಿಯಾದ ಮಾರ್ಗದಲ್ಲಿ ನಿಯೋಜಿಸುತ್ತದೆ. ಪ್ರಿಯೆಯಂತೆ ಕಷ್ಟಗಳನ್ನು ಹೋಗಲಾಡಿಸಿ ಸಂತೋಷಗೊಳಿಸುತ್ತದೆ. ಐಶ್ವರ್ಯವನ್ನು ತರುತ್ತದೆ. ಕೀರ್ತಿಯನ್ನು ನೀಡುತ್ತದೆ.[2] ಶಿಕ್ಷಣವು ಮನುಷ್ಯನಲ್ಲಿರುವ ಮೌಢ್ಯತೆ, ಅಂಧಕಾರಗಳನ್ನು ಹೊಡೆದೋಡಿಸಿ ಅವರಲ್ಲಿ ವೈಜ್ಞಾನಿಕ ಹಾಗೂ ವೈಚಾರಿಕವಾಗಿ ಆಲೋಚನೆ ಮಾಡುವ ಸಾಮರ್ಥ್ಯವನ್ನು ಒದಗಿಸುತ್ತದೆ. ಇದು ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸಿಕೊಳ್ಳಲು ಸಹಾಯ ಮಾಡುತ್ತದೆ. ಈ ಹಿನ್ನೆಲೆಯಲ್ಲಿ ಪ್ರತಿಯೊಬ್ಬ ವ್ಯಕ್ತಿಗೂ ಶಿಕ್ಷಣದ ಅವಶ್ಯಕತೆ ಅನಿವಾರ್ಯ.

ಒಂದು ಕಾಲದಲ್ಲಿ ಶಿಕ್ಷಣವು ಕೇವಲ ಬ್ರಾಹ್ಮಣ ವರ್ಗದವರಿಗೆ ಮಾತ್ರವೇ ಸೀಮಿತವಾಗಿದ್ದು, ಶಿಕ್ಷಣ ಕಲಿಯುವ ಮತ್ತು ಬೋಧಿಸುವ ಹಕ್ಕು ಇವರಿಗೆ ಮಾತ್ರವೇ ಸೇರಿತ್ತು. ವರ್ಣಾಶ್ರಮ ಧರ್ಮದೊಂದಿಗೆ ಅಂದು ಅಸ್ತಿತ್ವದಲ್ಲಿದ್ದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಹಾಗೂ ಶೂದ್ರ ವರ್ಗಗಳಿಗೆ ಮನು ಧರ್ಮಶಾಸ್ತ್ರವು ನಿರ್ದಿಷ್ಟ ವೃತ್ತಿಗಳನ್ನು ಕೈಗೊಳ್ಳುವಂತೆ ನಿರ್ದೇಶನ ಮಾಡಲಾಗಿತ್ತು. ಬ್ರಾಹ್ಮಣರು ಪೂಜೆ ಪುನಸ್ಕಾರ ಹಾಗೂ ವೇದಾಧ್ಯಯನ ಮಾಡಲು ತೊಡಗುವುದು, ಕ್ಷತ್ರಿಯರು ರಾಷ್ಟ್ರ ರಕ್ಷಣೆಯಲ್ಲಿ, ವೈಶ್ಯರು ವ್ಯಾಪಾರ ವಾಣಿಜ್ಯ ಹಾಗೂ ಶೂದ್ರರು ಕೃಷಿಯಲ್ಲಿ ತೊಡಗುವಂತೆಯೂ ಮಾಡಿದ್ದರಿಂದ ಈ ನಾಲ್ಕು ವರ್ಣಗಳು ತಾವು ಕೈಗೊಳ್ಳಬೇಕಾದ ವೃತ್ತಿಯನ್ನು ತಮ್ಮ ಹಕ್ಕುಗಳೆಂದು ಭಾವಿಸಿಕೊಂಡಿದ್ದವು. ಈ ನಾಲ್ಕು ವರ್ಣಗಳ ಆಚೆಗೆ ಮತ್ತೊಂದು ವರ್ಗ ಇದ್ದು ಅದು ಅಸ್ಪೃಶ್ಯ ವರ್ಗವೆಂದು ಪರಿಗಣಿಸಲಾಗಿತ್ತು. ಈ ಮೇಲಿನ ನಾಲ್ಕು ವರ್ಗಗಳ ಸೇವೆಯನ್ನು ಮಾಡುವ ಕರ್ತವ್ಯವನ್ನು ಇವರ ಮೇಲೆ ಹೇರಲಾಗಿತ್ತು. ಈ ರೀತಿ ಪ್ರತಿಯೊಂದು ವರ್ಗವೂ ಒಂದೊಂದು ವೃತ್ತಿಯನ್ನು ಕೈಗೊಂಡಿದ್ದರಿಂದ ಒಂದು ವರ್ಗ ಮತ್ತೊಂದು ವರ್ಗದ ವೃತ್ತಿಯನ್ನು ಕೈಗೊಳ್ಳದಂತೆ ನಿರ್ಬಂಧ ಹೇರಲಾಗಿತ್ತು. ಪರಿಣಾಮವಾಗಿ

ಬ್ರಾಹ್ಮಣ ಹೊರತಾಗಿ ಉಳಿದ ವರ್ಗಗಳು ಬಹುಕಾಲ ಶಿಕ್ಷಣದಿಂದ ವಂಚಿತವಾಗಿದ್ದವು. ಕೆಲವು ರಿಯಾಯಿತಿಗಳು ರಾಜವಂಶದವರಿಗೆ ಇದ್ದು ಅವರು ಮಾತ್ರವೇ ಶಿಕ್ಷಣ ಕಲಿಯುವ ಅವಕಾಶ ಪಡೆದಿದ್ದರು. ಈ ರೀತಿಯ ವೃತ್ತಿ ವಿಭಜನೆಯೊಂದಿಗೆ ಅಸ್ಪೃಶ್ಯ ವರ್ಗ ಮತ್ತು ಮಹಿಳೆಯರು ಅಂದಿನ ಸಮಾಜದಲ್ಲಿ ಹೆಚ್ಚು ಶೋಷಣೆಗೆ ಒಳಗಾಗಿದ್ದರು. ಈ ಬಗೆಯಲ್ಲಿ ಶೋಷಣೆಗೆ ಒಳಗಾದ ಶೋಷಿತರು ಮತ್ತು ಮಹಿಳೆಯರಿಗೆ ಸಾಮಾಜಿಕ ಸಮಾನತೆಯನ್ನು ತಂದುಕೊಡಬೇಕೆನ್ನುವ ನಿಟ್ಟಿನಲ್ಲಿ ಪ್ರಯತ್ನಗಳು ಬುದ್ಧನ ಕಾಲದಿಂದ ಆರಂಭಗೊಂಡ ಈ ಪ್ರಯತ್ನ ಇಂದಿನವರೆಗೂ ಮುಂದುವರಿದುಕೊಂಡು ಬಂದಿದೆ. ಈ ಅವಧಿಯ ವಿವಿಧ ಕಾಲಘಟ್ಟಗಳಲ್ಲಿ ಶೋಷಿತರ ಮತ್ತು ಮಹಿಳೆಯರ ಪರ ಧ್ವನಿಗಳು ಬುದ್ಧ, ಬಸವ, ಅಂಬೇಡ್ಕರ್ ಮೂಲಕ ಹೊರಟವು. ಸಾಮಾಜಿಕ ಸಮಾನತೆಯ ಜೊತೆಯಲ್ಲಿ ಸಾವಿರಾರು ವರುಷಗಳಿಂದ ಶಿಕ್ಷಣದಿಂದ ವಂಚಿತರಾಗಿದ್ದ ಇವರಿಗೆ ಅವುಗಳನ್ನು ದೊರಕಿಸುವ ನಿಟ್ಟಿನಲ್ಲಿ ಪ್ರಯತ್ನ ಮಾಡಿದರು. ಇವರಲ್ಲದೇ ಜ್ಯೋತಿರಾವ್ ಬಾಪುಲೆ, ಶಾಹು ಮಹಾರಾಜ್, ಗಾಂಧಿ ಮುಂತಾದವರು ಕೂಡ ಮಾಡಿರುವ ಕಾರ್ಯಗಳು ಕೂಡ ಶ್ಲಾಘನೀಯ. ಈ ರೀತಿ ದೊರೆತ ಶೈಕ್ಷಣಿಕ ಅವಕಾಶಗಳನ್ನು ಶೋಷಿತ ಜಾತಿಗಳಲ್ಲಿ ಒಂದಾದ ಲಂಬಾಣಿ ಸಮುದಾಯ ಎಷ್ಟರಮಟ್ಟಿಗೆ ಪಡೆಯಲು ಸಾಧ್ಯವಾಗಿದೆ ಎಂಬ ಅಂಶವನ್ನು ಇಲ್ಲಿ ಮುಖ್ಯವಾಗಿ ಗಮನಿಸಲಾಗಿದೆ.

ಆಧುನಿಕ ಶಿಕ್ಷಣ ಪದ್ಧತಿಯು ವಸಾಹತುಶಾಹಿ ಕಾಲಘಟ್ಟದಿಂದ ಆರಂಭವಾಯಿತೆನ್ನಬಹುದು. ಈ ಆಧುನಿಕ ಶಿಕ್ಷಣ ಆರಂಭಗೊಳ್ಳುವ ಮೊದಲು ಸಾಂಪ್ರದಾಯಿಕ ಶಿಕ್ಷಣ ಪದ್ಧತಿ ಅಸ್ತಿತ್ವದಲ್ಲಿದ್ದುದು ಕಂಡುಬರುತ್ತದೆ. ಅಂದಿನ ಶಿಕ್ಷಣ ಕೇಂದ್ರಗಳಿಂದ ಅಗ್ರಹಾರ, ಮಠಮಾನ್ಯ, ಚರ್ಚ್, ಮಸೀದಿ ಮುಂತಾದವು ಕೇವಲ ಧಾರ್ಮಿಕ ವಿಷಯಗಳ ಕುರಿತಾದ ಶಿಕ್ಷಣ ನೀಡುತ್ತಿದ್ದವು. ವಸಾಹತುಶಾಹಿ ಆಡಳಿತ ಸಂದರ್ಭದಲ್ಲಿ ಭಾರತವು ವಿವಿಧ ಪ್ರಾಂತ್ಯಗಳ ಆಡಳಿತಕ್ಕೆ ಒಳಪಟ್ಟಿದ್ದವು. ಕರ್ನಾಟಕದಲ್ಲಿ ಪ್ರಮುಖ ಪ್ರದೇಶವಾಗಿದ್ದ ಮೈಸೂರು ಪ್ರಾಂತ್ಯದಲ್ಲಿ ಸಾರ್ ಚಾರ್ಲ್ಸ್‌ವುಡ್‌ನ ವರದಿಯ ಫಲವಾಗಿ ಭಾರತದ ಇತರ ಭಾಗಗಳಂತೆ ಇಲ್ಲಿಯೂ ಆಧುನಿಕ ಶಿಕ್ಷಣ ವ್ಯವಸ್ಥಿತವಾಗಿ ಆರಂಭಿಸಲಾಯಿತು. ಈ ವರದಿಯ ಆಧಾರದ ಮೇಲೆ ಈಸ್ಟ್ ಇಂಡಿಯಾ ಕಂಪನಿಯ ನಿರ್ದೇಶಕರು ಆಧುನಿಕ ಶಿಕ್ಷಣವನ್ನು ರೂಪಿಸಿದ್ದರು.[೬] ಹೀಗೆ ಆರಂಭಗೊಂಡ ಆಧುನಿಕ ಶಿಕ್ಷಣ ವಿಸ್ತಾರಗೊಳ್ಳುತ್ತಾ ಹೋಯಿತು. ಆ ಕಾಲಕ್ಕೆ ಕರ್ನಾಟಕ ವಿವಿಧ ಭಾಗಗಳು ವಿವಿಧ ಪ್ರಾಂತ್ಯಗಳಲ್ಲಿ ಹಂಚಿ ಹೋಗಿದ್ದರಿಂದ ಇದು ಒಂದು ಏಕರೂಪವಾದ ಶಿಕ್ಷಣ ಪದ್ಧತಿಯನ್ನು ಎಲ್ಲಾ ಭಾಗಗಳಲ್ಲಿ ಜಾರಿಗೆ ತರಲು ಅಡ್ಡಿಯಾಗಿತ್ತು. ಸ್ವಾತಂತ್ರ್ಯ ನಂತರ ಅದರಲ್ಲೂ ಏಕೀಕರಣ ಕರ್ನಾಟಕ ನಿರ್ಮಾಣವಾದ ನಂತರದಲ್ಲಿ ಈ ಸಮಸ್ಯೆಯನ್ನು ಬಗೆಹರಿಸಲು ಸರ್ಕಾರ ಮುಂದಾಯಿತು. ಕರ್ನಾಟಕ ರಾಜ್ಯದ ಎಲ್ಲಾ ಭಾಗಗಳಲ್ಲಿ ಏಕರೂಪವಾದ ಶಿಕ್ಷಣ ಪದ್ಧತಿಯನ್ನು ಜಾರಿಗೆ ತಂದಿತು. ಅಲ್ಲಿಂದ ಶಿಕ್ಷಣದ ಸ್ವರೂಪ, ಪಠ್ಯಪುಸ್ತಕ, ಆಡಳಿತ ವ್ಯವಸ್ಥೆ ಮುಂತಾದವುಗಳಲ್ಲಿ ಅಗಾಧವಾದ ಬದಲಾವಣೆ ಕಂಡು ಬಂದಿತು. ಒಂದು ಕ್ರಮವಾಗಿ ಶಿಕ್ಷಣ ರೂಪುಗೊಂಡು ಪೂರ್ವ ಪ್ರಾಥಮಿಕ, ಪ್ರಾಥಮಿಕ, ಪ್ರೌಢಶಾಲಾ, ಕಾಲೇಜು ಹಾಗೂ ಉನ್ನತ ಶಿಕ್ಷಣವಲ್ಲದೆ ಅನೇಕ ವೃತ್ತಿ ತರಬೇತಿ ಶಿಕ್ಷಣ ಮುಂತಾದವುಗಳನ್ನು ಜಾರಿಗೊಳಿಸಿತು.

ಈ ರೀತಿ ಆಧುನಿಕ ಶಿಕ್ಷಣ ಪದ್ಧತಿಯೊಂದಿಗೆ ಸಾವಿರಾರು ವರುಷಗಳಿಂದ ಶೈಕ್ಷಣಿಕವಾಗಿ ಅವಕಾಶಗಳಿಂದ ವಂಚಿತರಾದ ಅಸ್ಪೃಶ್ಯ ಜಾತಿಗಳಿಗೆ ಶಿಕ್ಷಣ ಕಲಿಯಲು ಅವಕಾಶವಾದುದ್ದು ಮುಖ್ಯ ಬೆಳವಣಿಗೆಯಾಗಿದೆ. ಆ ವರ್ಗಕ್ಕೆ ೧೯ನೇ ಶತಮಾನದ ಆರಂಭದಲ್ಲಿ ಶಿಕ್ಷಣ ಪಡೆಯುವ ಅವಕಾಶವನ್ನು ನೀಡಲಾಗಿದ್ದರೂ ಈ ಹಕ್ಕನ್ನು ಸಂವಿಧಾನಾತ್ಮಕಗೊಳಿಸಿದ ನಂತರವೇ ಹೆಚ್ಚಿನ ಪ್ರೋತ್ಸಾಹ ದೊರೆಯಿತು. ಅಲ್ಲಿಂದ ಅಸ್ಪೃಶ್ಯ ಜಾತಿಗಳಲ್ಲಿ ಒಂದಾದ ಲಂಬಾಣಿ ಸಮುದಾಯವು ಶಿಕ್ಷಣ ಪಡೆಯಲು ಮುಂದಾಯಿತು. ಆದರೆ ಹೆಚ್ಚಿನ ಪ್ರಮಾಣದಲ್ಲಿ ಇವರು ಶಿಕ್ಷಣ ಪಡೆಯಲು ಮುಂದಾಗಿದ್ದು ೭೦ರ ದಶಕದ ನಂತರವೇ ಆಧುನಿಕ ಶಿಕ್ಷಣವನ್ನು ಲಂಬಾಣಿ ಸಮುದಾಯವು ಎಷ್ಟರಮಟ್ಟಿಗೆ ಪಡೆಯಲು ಸಾಧ್ಯವಾಯಿತು, ಆ ಮೂಲಕ ಲಂಬಾಣಿಗರ ಶೈಕ್ಷಣಿಕ ಪ್ರಗತಿ ಹೇಗಿದೆ ಎಂಬುದನ್ನು ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ. ಶೈಕ್ಷಣಿಕ ಪ್ರಗತಿಯು ದುರ್ಬಲ ವರ್ಗದವರಿಗೆ ಶೋಷಣೆಯನ್ನು ಪ್ರತಿಭಟಿಸುವ ಸಾಮರ್ಥ್ಯವನ್ನು ನೀಡುತ್ತದೆ. ಕೇರಳ ರಾಜ್ಯದಲ್ಲಿನ ಜನರು ಜಾತಿ, ಲಿಂಗ, ವರ್ಗಾಧಾರಿತ ಅಸಮಾನತೆಯನ್ನು ನಿವಾರಿಸುವ ಪ್ರಯತ್ನದಲ್ಲಿ ಮಹತ್ವದ ಪಾತ್ರ ವಹಿಸುತ್ತಿದ್ದಾರೆ. ಈ ಮಹತ್ವದ ಪಾತ್ರದ ಹಿಂದಿರುವ ಪ್ರೇರಕ ಶಕ್ತಿಯೆಂದರೆ ಸಾಕ್ಷರತೆಯೇ ಆಗಿದೆ. ಕೆಳವರ್ಗದ ಜನತೆ ಆರ್ಥಿಕ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳಲು ರಾಜಕೀಯ ಸಂಘಟನೆ ಅಗತ್ಯವಾಗಿದೆ. ರಾಜಕೀಯ ಸಂಘಟನೆಗೆ ಸಾಕ್ಷರತೆಯು ಅತ್ಯಾವಶ್ಯಕವಾಗಿದೆ.[೪] ಎಂಬ ಅಮರ್ತ್ಯ ಸೇನ್‌ರ ಮಾತುಗಳು ಅರ್ಥಗರ್ಭಿತವಾಗಿದೆ. ಈ ಹಿನ್ನೆಲೆಯಲ್ಲಿ ಲಂಬಾಣಿಗರ ಶೈಕ್ಷಣಿಕ ಅಭಿವೃದ್ಧಿಯನ್ನು ಸಮಗ್ರವಾಗಿ ತಿಳಿಯುವ ಸಲುವಾಗಿ ಅವುಗಳನ್ನು ವಿಭಾಗಿಸಿಕೊಂಡು ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ.

**ವಸಾಹತು ಕಾಲಘಟ್ಟದಲ್ಲಿ ಅಸ್ಪೃಶ್ಯರ ಶೈಕ್ಷಣಿಕ ಸ್ಥಿತಿ**

ಬ್ರಿಟಿಷರ ಕಾಲದಲ್ಲಿ ಆಧುನಿಕ ಶಿಕ್ಷಣವನ್ನು ಭಾರತೀಯರಿಗೆ ನೀಡಿದ್ದು ತಮ್ಮ ಆಡಳಿತದ ಅನುಕೂಲಕ್ಕಾಗಿ ಎಂಬುದಂತೂ ಸತ್ಯ. ಬ್ರಿಟೀಷರು ಅನೇಕ ಶಾಲೆಗಳನ್ನು ತೆರೆದು ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಟ್ಟರು. ಅನೇಕ ಅವಕಾಶವನ್ನು ಮೊದಲು ಬಳಸಿಕೊಂಡಿದ್ದು ಬ್ರಾಹ್ಮಣರು ಹಾಗೂ ಮೇಲು ಜಾತಿಗಳು ಮಾತ್ರ. ಆದರೆ ಹಿಂದುಳಿದ ಮತ್ತು ಶೋಷಿತ ಕೆಳಜಾತಿ ಹಾಗೂ ಮಹಿಳೆಯರಿಗೆ ಶಿಕ್ಷಣ ಕಲಿಯುವ ಅವಕಾಶ ಒದಗಿಬರಲಿಲ್ಲ. ಅದರಲ್ಲೂ ಲಂಬಾಣಿ, ಮಾದಿಗ, ಹೊಲೆಯರು ಶಿಕ್ಷಣ ಕಲಿಯುವುದಿರಲಿ ಅದರಿಂದ ಮಾರುದೂರ ಇದ್ದರು. ಆಗ ಎಂತಹ ಸ್ಥಿತಿ ಇತ್ತೆಂದರೆ ಲಂಬಾಣಿಗರು, ಹೊಲೆಯರು, ಮಾದಿಗಳು, ಛಲವಾದಿ, ಬೇಡರು, ಮುಂತಾದ ಕೆಳ ಕುಲದವರ ಮಕ್ಕಳು ಸರ್ಕಾರದವರೇ ನಡೆಸುತ್ತಿದ್ದ ಪ್ರೈಮರಿ ಶಾಲೆಗಳಿಗೆ ಹೋಗುವುದಿರಲಿ ಅವುಗಳ ಮೆಟ್ಟಿಲನ್ನು ಹತ್ತುವಂತಿರಲಿಲ್ಲ.''[೫] ಸಾಮಾಜಿಕ ಸ್ಥಿತಿ ಹೀಗಿರುವಾಗ ಲಂಬಾಣಿರು ಹೇಗೆ ಶಿಕ್ಷಣ ಕಲಿಯಲು ಸಾಧ್ಯ. ಆದರೂ ಅಸ್ಪೃಶ್ಯರಿಗೆ ಶಿಕ್ಷಣ ಕಲಿಯಲು ಅವಕಾಶ ನೀಡಿದ್ದು ೧೯ ನೇ ಶತಮಾನದ ಕೊನೆಯ ಎರಡು ದಶಕಗಳಿಂದ ಎನ್ನಬಹುದು. ಆ ಕಾಲಘಟ್ಟಗಳಲ್ಲಿ ದಕ್ಷಿಣ ಭಾರತದ ವಿವಿಧ ರಾಜ್ಯಗಳಲ್ಲಿ ಸರ್ಕಾರದಿಂದ ಕ್ರೈಸ್ತ ಮಿಷನರಿ ಮತ್ತು ಸಮಾಜ ಸುಧಾರಕರು ಅಸ್ಪೃಶ್ಯರಿಗೆ ಶಿಕ್ಷಣ ದೊರಕಿಸಿಕೊಡಲು ಪ್ರಯತ್ನಿಸಿದರು. ಈ ನಿಟ್ಟಿನಲ್ಲಿ ಕ್ರಮ ಕೈಗೊಂಡ ರಾಜ್ಯಗಳಲ್ಲಿ ಮೊದಲನೆಯದು ಮೈಸೂರು ಎನ್ನಬಹುದು. ಪರಿಣಾಮವಾಗಿ ೧೮೮೧ರಲ್ಲಿ ಅಸ್ಪೃಶ್ಯರಿಗಾಗಿ

ಕೇವಲ ೩ ಶಾಲೆಗಳಿದ್ದು ೧೯೦೦ ರ ವೇಳೆಗೆ ೬೫ ಆಗಿದ್ದು ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಿನ ಶಾಲೆಗಳನ್ನು ಸ್ಥಾಪಿಸಿ ರಿಯಾತಿ ಮತ್ತು ವೇತನಗಳನ್ನು ಕೊಟ್ಟಿದ್ದನ್ನು''[೬] ಕಾಣಬಹುದು. ಅಸ್ಪೃಶ್ಯರಿಗಾಗಿ ಕೇವಲ ೩ ಶಾಲೆಗಳಿದ್ದು ಶಿಕ್ಷಣ ಒದಗಿಸಿಕೊಡಲು ಮೈಸೂರು ಅರಸರು ಆಸಕ್ತಿ ತಳೆದರು. ಜೊತೆಗೆ ಶಿಕ್ಷಣದ ಬಗ್ಗೆ ಅರಿವು ಮೂಡಿಸಿ ಶಿಕ್ಷಣ ಕಲಿಯಲು ಮುಂದಾಗುವಂಥ ಪ್ರಚಾರ ಮಾಡುವ ಸಂಸ್ಥೆಯೊಂದು ಮೈಸೂರು ಭಾಗದಲ್ಲಿ ಹುಟ್ಟಿಕೊಂಡಿತು. ''೧೯೧೩ರಲ್ಲಿ ಮೈಸೂರು ನಗರದಲ್ಲಿ ಆರಂಭವಾದ 'ನಿಮ್ನ ವರ್ಗಗಳ ಶಿಕ್ಷಣ ಪ್ರಚಾರ ಸಂಸ್ಥೆ' ಆ ಜನ ಸಮುದಾಯಕ್ಕೆ ತಮ್ಮ ಸ್ಥಿತಿ ಸುಧಾರಿಸಿಕೊಳ್ಳಲು ಸೇವಾಕಾರ್ಯ ಆರಂಭಿಸಿತು. ೧೯೧೫ರ ವೇಳೆಗೆ ಈ ಸಂಸ್ಥೆ ೧೨ ಶಾಲೆಗಳನ್ನು ತೆರೆದಿತ್ತು.[೭] ಹೀಗೆ ಸರ್ಕಾರಿ ಮತ್ತು ಖಾಸಗಿಯವರು ಶಾಲೆಗಳನ್ನು ತೆರೆದುದರ ಪರಿಣಾಮವಾಗಿ ಅಸ್ಪೃಶ್ಯರು ಶಿಕ್ಷಣ ಕಲಿಯಲು ಮುಂದಾದರು. ಈ ಪ್ರಯೋಜನವನ್ನು ಮೊದಲು ಪಡೆದುಕೊಂಡವರು ನಗರ ಪ್ರದೇಶದ ಅಸ್ಪೃಶ್ಯರು ನಂತರ ಗ್ರಾಮೀಣ ಪ್ರದೇಶದಲ್ಲಿಯೂ ಅದರ ಪ್ರಯೋಜನ ಪಡೆಯಲು ಮುಂದಾಗಲು ಅಲ್ಲಿ ಅನೇಕ ಸಾಮಾಜಿಕ ನಿರ್ಬಂಧಗಳು ಅಡ್ಡಿಯಾಗಿದ್ದವು.

ಮೈಸೂರು ರಾಜ್ಯದಲ್ಲಿ ೧೯೧೦-೧೧ರಲ್ಲಿ ಪಂಚಮರಿಗಾಗಿ ೬೭ ಸರ್ಕಾರಿ ಶಾಲೆಗಳು ಮತ್ತು ೩೭ ಅನುಧಾನಿತ ಶಾಲೆಗಳು ಹಾಗೂ ೪ ಅನುದಾನರಹಿತ ಶಾಲೆಗಳಿದ್ದರೆ ೧೯೧೫-೧೬ ರಲ್ಲಿ ೧೭೧ ಸರ್ಕಾರಿ ಶಾಲೆಗಳು ಮತ್ತು ೧೦೮ ಅನುದಾನಿತ ಶಾಲೆಗಳು ಹಾಗೂ ೫೮ ಅನುದಾರಹಿತ ಶಾಲೆಗಳಿದ್ದವು.[೮] ಹೀಗೆ ಇವರಿಗಾಗಿ ತೆರೆದ ಶಾಲೆಗಳ ಸಂಖ್ಯೆ ಹೆಚ್ಚಾಗುತ್ತಲೇ ಹೋಯಿತು. ೧೯೧೫ರಲ್ಲಿ ಸರ್ಕಾರವು ಆಜ್ಞೆ ಹೊರಡಿಸಿ ಅಸ್ಪೃಶ್ಯರಿಗೆ ರಾಜ್ಯದ ಎಲ್ಲಾ ಶಾಲೆಗಳಲ್ಲಿ ಪ್ರವೇಶಾವಕಾಶವನ್ನು ನೀಡಬೇಕೆಂದು ಸಾರಿತು.[೯] ಇದು ಅಸ್ಪೃಶ್ಯರ ಶೈಕ್ಷಣಿಕ ಚರಿತ್ರೆಯಲ್ಲಿ ಅತ್ಯಂತ ಮಹತ್ವ ಪಡೆದುಕೊಂಡ ಘಟನೆಯಾಗಿದೆ. ಈ ಘಟನೆ ಶೃಂಗೇರಿ ಆಜ್ಞೆಯೆಂದೇ ಖ್ಯಾತಿಗಳಿಸಿದೆ. ಸರ್ಕಾರದ ಈ ಕ್ರಮ ಮೇಲ್ವರ್ಗಗಳಿಗೆ ಸಹಿಸಲು ಅಸಾಧ್ಯವಾಯಿತು. ಅದರಲ್ಲಿ ಪುರೋಹಿತ ವರ್ಗವಂತೂ ಕೆಂಡಮಂಡಲವಾಯಿತು. ಈ ಆಜ್ಞೆಯನ್ನು ವಿರೋಧಿಸಿದ ಸಂಪ್ರದಾಯವಾದಿಗಳು ಪ್ರತಿಭಟನೆ ಮಾಡಿದಾಗ ಮೈಸೂರು ಅರಸರು ತಮ್ಮ ಸರ್ಕಾರದ ಕ್ರಮವನ್ನು ಸಮರ್ಥಿಸಿಕೊಂಡರು. ಹಾಗೆಯೇ ಈ ಆಜ್ಞೆಗೆ ತಿದ್ದುಪಡಿ ಮಾಡಿ ಅಂಥವರಿಗೆ ಶಾಲೆಗಳನ್ನು ಪ್ರತ್ಯೇಕವಾಗಿ ನಡೆಸಲು ಅನುಮತಿ ನೀಡಿದರು. ಆದರೆ ಸರ್ಕಾರ ಅನುದಾನವನ್ನು ಕೊಡಲು ನಿರಾಕರಿಸಿದರು.[೧೦] ಸರ್ಕಾರದ ಕ್ರಮವನ್ನು ವಿರೋಧಿಸಿ ಪ್ರತಿಭಟನೆಯಲ್ಲಿ ಮುಸ್ಲಿಮರು ಸೇರಿದಂತೆ ಇತರರು ಚಳವಳಿ ನಡೆಸಿ ಈ ಶಾಲೆಯಿಂದ ತಮ್ಮ ಮಕ್ಕಳನ್ನು ಹಿಂತೆಗೆದುಕೊಂಡರು. ರಾಷ್ಟ್ರೀಯ ಶಾಲೆಗಳನ್ನು ಮೇಲ್ವರ್ಗಗಳಿಗಾಗಿ ಸ್ಥಾಪಿಸಿದರು. ಆಗ ಬಹುತೇಕ ಸವರ್ಣೀಯರು ಈ ಪ್ರತಿಭಟನೆಯಲ್ಲಿ ಸೇರಿದ್ದರು.[೧೧] ಅವರು ಸರ್ಕಾರಕ್ಕೆ ಸಲ್ಲಿಸಿದ ಮನವಿಯಲ್ಲಿ ಹೊಲೆಯರು, ಮಾದಿಗರು, ಲಂಬಾಣಿಗರನ್ನು ಬಿಟ್ಟು ಸವರ್ಣೀಯರಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಲಿಂಗಾಯತ, ರಂಗಾರೆ, ಚಿತ್ರಗಾರ, ಲಾಡ, ಒಕ್ಕಲಿಗ, ಹಾಲುಮತ, ಗಂಗೆಯಮಕ್ಕಳು, ಕುಂಬಾರ, ಈ ಯಾವ ಪಂಗಡದವರನ್ನು ಶಾಲೆಗೆ ಸೇರಿಸಲು ಅಭ್ಯಂತರವಿಲ್ಲವೆಂದು ತಿಳಿಸಲಾಗಿತ್ತು.[೧೨] ಹೀಗೆ ಅಸ್ಪೃಶ್ಯರಿಗೆ ಎಲ್ಲರಂತೆ ಸಮಾನವಾಗಿ ಶಿಕ್ಷಣ ಪಡೆಯಲು ಅವಕಾಶ ಕಲ್ಪಿಸಿದ್ದನ್ನು ಮೇಲ್ವರ್ಗದ ಜನತೆ ವಿರೋಧಿಸಿರುವುದು ತಿಳಿಯುತ್ತದೆ.

ಅಸ್ಪೃಶ್ಯರಗೆ ನೀಡುತ್ತಿರುವ ಶಿಕ್ಷಣ ಸೌಲಭ್ಯಗಳು ಮತ್ತಷ್ಟು ಹೆಚ್ಚುವಂತಾಗಲು ಮಿಲ್ಲರ್ ಸಮಿತಿಯನ್ನು ಮೈಸೂರು ಅರಸರು ಕ್ರಿ.ಶ.೧೯೧೮ರಲ್ಲಿ ನೇಮಿಸಿದರು. ೧೯೧೮ರಲ್ಲಿ ಸರ್ಕಾರವು ಹಿಂದುಳಿದ ವರ್ಗಗಳನ್ನು ಕುರಿತು ಅಧ್ಯಯನ ಕೈಗೊಂಡು ಸರ್ಕಾರಿ ಕ್ಷೇತ್ರದಲ್ಲಿ ಇವರ ಪ್ರಾತಿನಿಧ್ಯ ಇಲ್ಲದಿರುವುದನ್ನು ತಿಳಿಸಿತು. ಈ ಹಿನ್ನೆಲೆಯಲ್ಲಿ ಆ ಸಮಿತಿ ಅಸ್ಪೃಶ್ಯರಿಗೆ ಹೆಚ್ಚಿನ ಶಿಕ್ಷಣ ಸೌಲಭ್ಯ ದೊರಕಬೇಕೆಂದು ನೀಡಿದ ಸಲಹೆಗಳಲ್ಲಿ ಅತಿ ಹಿಂದುಳಿದ ಲಂಬಾಣಿ ಜನರಿಗಾಗಿಯೇ ಪ್ರತ್ಯೇಕವಾಗಿ ಪಂಚಮಶಾಲೆಗಳನ್ನು ಆರಂಭಿಸಬೇಕು; ಅವರೆಲ್ಲರಿಗೂ ವಿದ್ಯಾರ್ಥಿ ವೇತನ ನೀಡಬೇಕು ಎನ್ನುವುದು ಒಂದಾಗಿತ್ತು. ಇದರ ಪರಿಣಾಮವಾಗಿ ಪಂಚಮ ಬೋರ್ಡಿಂಗ್ ಹಾಸ್ಟೆಲ್‌ಗಳು ತೆರೆಯುವಂತಾಯಿತು. ದಿವಾನ್ ಶೇಷಾದ್ರಿ ಅಯ್ಯರ್ ಅವರ ಕಾಲದಲ್ಲಿ ಮರಿ ಪಂಚಮರಿಗೆ ಪ್ರತ್ಯೇಕ ಶಾಲೆಯನ್ನು ತೆರೆಯಲಾಗಿತ್ತು. ಮುಂದೆ ಸೆಂಟ್ರಲ್ ಪಂಚಮ ಇನ್ಸ್‌ಟಿಟ್ಯೂಟ್‌ನ್ನು ಮೈಸೂರಿನಲ್ಲಿ ಸ್ಥಾಪಿಸಿ ಪಂಚಮ ವಿದ್ಯಾರ್ಥಿಗಳಿಗಾಗಿ ಹಾಸ್ಟಲ್ ಸೌಲಭ್ಯ ನೀಡಲು ಯೋಜನೆ ಹಾಕಲಾಗಿತ್ತು. ಮೈಸೂರು, ಬೆಂಗಳೂರು, ತುಮಕೂರು, ಚಿಕ್ಕಮಗಳೂರುಗಳಲ್ಲಿ ಶಾಲಾ ಬೋರ್ಡಿಂಗ್ ತೆರೆಯಲಾಗಿತ್ತು. ಕನಿಷ್ಠ ೬೫ ವಿದ್ಯಾರ್ಥಿಗಳಿರುವಲ್ಲಿ ಪಂಚಮರಿಗಾಗಿ ಪ್ರತ್ಯೇಕ ಶಾಲೆಗಳನ್ನು ತೆರೆಯುವ ಅಧಿಕಾರ ಇನ್ಸಪೆಕ್ಟರ್ ಜನರಲ್ ಆಫ್ ಎಜುಕೇಶನ್ ಅವರಿಗೆ ನೀಡಲಾಗಿತ್ತು. ಜೊತೆಗೆ ಹೆಚ್ಚು ಜನ ಪಂಚಮರನ್ನು ಶಾಲೆಗಳಿಗೆ ಆಕರ್ಷಿಸಲು ಸರ್ಕಾರ ತಲಾ ೫ ರೂಪಾಯಿಗಳಷ್ಟು ಭತ್ಯೆ ಕೊಡಲು ಮುಂದೆ ಬಂದಿತು. ಬೇರೆಯವರಿಗೆ ಮಧ್ಯಮಿಕ ಹಂತದವರಿಗೆ ಉಚಿತ ವಿದ್ಯಾಭ್ಯಾಸ ವಸತಿ ಕೊಡಲಾಯಿತು. ಹೀಗೆ ಪ್ರತ್ಯೇಕ ಹಾಗೂ ಸಾರ್ವಜನಿಕ ಶಾಲೆಗಳಲ್ಲಿ ಪ್ರವೇಶ ನೀಡಲು ಮಾಡಿದ ಆಜ್ಞೆಯಿಂದಾಗಿ "ಆ ಹೊತ್ತಿಗೆ ದಲಿತರಿಗೆ ಪ್ರತ್ಯೇಕ ಶಾಲೆಗಳಲ್ಲಿ ಸುಮಾರು ೧೬೫೭೫ ವಿದ್ಯಾರ್ಥಿಗಳೂ, ಉಳಿದ ಶಾಲೆಗಳಲ್ಲಿ ४೩೦೯ ವಿದ್ಯಾರ್ಥಿಗಳು ಏಕಕಾಲಕ್ಕೆ ಕಲಿಯತೊಡಗಿದರು."

ಅಂದಿನ ಸರ್ಕಾರ ಹೀಗೆ ಅಸ್ಪೃಶ್ಯರ ಶೈಕ್ಷಣಿಕ ಅಭಿವೃದ್ಧಿಗಾಗಿ ಪ್ರತ್ಯೇಕ ಶಾಲೆಗಳ ವಸತಿ ವ್ಯವಸ್ಥೆ, ಫೀ ರೀಯಾಯಿತಿ ಹಾಗೂ ಇತರೆ ಶಾಲೆಗಳಲ್ಲಿ ಅವರಿಗೆ ಪ್ರವೇಶ ಕೊಡಲು ಆಜ್ಞೆ ಹೀಗೆ ಸರ್ಕಾರ ಕೈಗೊಂಡ ಅನೇಕ ಕ್ರಮಗಳು ಅಸ್ಪೃಶ್ಯರು ವಿದ್ಯಾವಂತರಾಗಲು ಅವಕಾಶ ಮಾಡಿಕೊಟ್ಟಿವೆ. ಮೈಸೂರು ರಾಜ್ಯದಲ್ಲಿ ೧೯೩೧-೩೨ರಲ್ಲಿ ನಿಮ್ನ ವರ್ಗದವರಿಗಾಗಿಯೇ ಆರಂಭಿಸಲಾಗಿದ್ದ ವಿಶೇಷ ಶಾಲೆಗಳ ಸಂಖ್ಯೆ ೬೭೦, ೧೯೪೦-೪೧ ರಲ್ಲಿ ಅವುಗಳ ಸಂಖ್ಯೆ ४೧೯, ೧೯४೩-४४ರ ಸಮಯದಲ್ಲಿ ಆ ಶಾಲೆಗಳ ಸಂಖ್ಯೆ ४೦೬ ಆಗಿದ್ದಿತು." ಹೀಗೆ ಇತರೆ ಶಾಲೆಗಳಲ್ಲಿ ಪ್ರವೇಶ ದೊರೆತಿರುವ ಇವರಿಗಾಗಿಯೇ ಇದ್ದಂತಹ ಪ್ರತ್ಯೇಕ ಶಾಲೆಗಳು ಕಡಿಮೆಯಾಗತೊಡಗಿದವು. ಪಂಚಮ ಬೋರ್ಡಿಂಗ್ ಎಂಬುದಾಗಿ ಕರೆಯುವುದರಿಂದ ಅವರನ್ನು ಇನ್ನು ಕೆಳಮಟ್ಟದಲ್ಲೇ ಗುರುತಿಸುವಂತಾಗುತ್ತದೆಂದು ತಿಳಿದು ಪಂಚಮ ಎಂಬ ಹೆಸರನ್ನು ತೆಗೆದು ಹಾಕಿ ಜನರಲ್ ಸ್ಕೂಲ್ ಮತ್ತು ಜನರಲ್ ಹಾಸ್ಟೆಲ್ ಎಂಬುದಾಗಿ ಬದಲಾವಣೆ ಮಾಡಿದರು. ೧೯೩೩-೩४ರಲ್ಲಿ ಒಂದು ನಿರ್ಣಯ ಮಾಡಿ ಪಂಚಮ ಸ್ಕೂಲ್‌ಗಳನ್ನು ಅಬಾಲಿಷ್ ಮಾಡಿದರು. ಆ ನಂತರ ಎಲ್ಲ ಅಸ್ಪೃಶ್ಯರಿಗೆ ಪ್ರವೇಶ ನೀಡಿದ ಶಾಲೆಗಳಲ್ಲಿ ಮತ್ತೊಂದು ರೀತಿಯ ತಾರತಮ್ಯ ಭಾವ ಇದ್ದುದು ತಿಳಿದುಬರುತ್ತದೆ. ಅಸ್ಪೃಶ್ಯರಿಗೆ ಪ್ರವೇಶ ನೀಡಿರುವ ಶಾಲೆಗಳಲ್ಲಿ ಅವರನ್ನು ಪ್ರತ್ಯೇಕವಾಗಿ ಕೂಡಿಸಲಾಗುತಿತ್ತು. "ಬಳ್ಳಾರಿ ಜಿಲ್ಲೆಯ ಸ್ಕೂಲ್‌ಗಳಲ್ಲಿ ಲಂಬಾಣಿ ಜನಾಂಗದ ಹುಡುಗರು ಕೆಳಗಡೆ

ಕುಳಿತುಕೊಳ್ಳಬೇಕಿತ್ತು. ಅದಕ್ಕೆ ಸ್ಕೂಲ್‌ಗೆ ಕೆಲವರು ಹೋಗಲೇ ಇಲ್ಲ. ನಾನು ಕೂಡ ಆ ಕಾರಣದಿಂದ ಹೋಗಲಿಲ್ಲ'' ಎಂದು ಚಿಕ್ಕ ಜೋಗೀನಹಳ್ಳಿ ತಾಂಡದ ಎಲ್. ರಾಮನಾಯ್ಕ್ ಅವರು ತಿಳಿಸುತ್ತಾರೆ. ಹಾಗೆಯೇ ಪಂಚಮ ಸ್ಕೂಲ್‌ಗಳನ್ನು ಅಬಾಲಿಷ್ ಮಾಡಿದಾಗ ಅನೇಕ ಹರಿಜನ, ಗಿರಿಜನ, ಲಂಬಾಣಿಜನ ಇತ್ಯಾದಿಗಳು ಗುಡಿಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದವರು ಶಾಲೆಗಳನ್ನು ಬಿಟ್ಟು ಊರಿನಲ್ಲಿ ದನಕಾಯುವುದಕ್ಕೆ ಸೇರಿಕೊಂಡರು. ಏಕೆಂದರೆ ಇವರು ಬೇರೆ ಊರಿಗೆ ಹೋಗಿ ವಿದ್ಯಾಭ್ಯಾಸವನ್ನು ಮಾಡಬೇಕಿತ್ತು. ಇದು ಅವರಿಗೆ ಕಷ್ಟದ ಕೆಲಸವಾಗಿತ್ತು.[೨೦] ಆದರೂ ಅಸ್ಪೃಶ್ಯರ ಶಿಕ್ಷಣ ಕಲಿಯುವ ಪ್ರಮಾಣ ಹೆಚ್ಚಾಗುತ್ತಾ ನಡೆದಿರುವುದು ಕಾಣುತ್ತದೆ. ಮೈಸೂರು ರಾಜ್ಯದಲ್ಲಿ ೧೯೪೧ರಲ್ಲಿ ಪ್ರಾಥಮಿಕ ಶಿಕ್ಷಣವನ್ನು ಸ್ಥಳೀಯ ಸಂಸ್ಥೆಗಳಿಂದ ಬೇರ್ಪಡಿಸಿ ಶಿಕ್ಷಣ ಇಲಾಖೆಯ ನಿಯಂತ್ರಣಕ್ಕೆ ಒಳಪಡಿಸಿದಾಗ ನಿಮ್ನವರ್ಗದ ವಿದ್ಯಾರ್ಥಿಗಳಾರೂ ಇಲ್ಲದ ಶಾಲೆಗಳ ಸಂಖ್ಯೆ ೧೪೮೨ ಆಗಿತ್ತು. ೧೯೪೪ರಲ್ಲಿ ಇಂತಹ ಶಾಲೆಗಳ ಸಂಖ್ಯೆ ೧೭೪ಕ್ಕೆ ಇಳಿಯಿತು. ಈ ಶಾಲೆಗಳು ದೇವಸ್ಥಾನ ಮತ್ತು ಇತರ ಸ್ಥಳಗಳಲ್ಲಿ ನಡೆಯುತ್ತಿದ್ದವು.''[೨೧] ಅಸ್ಪೃಶ್ಯರಿಗೆ ಸಾರ್ವಜನಿಕ ಶಾಲೆಗಳಲ್ಲಿ ಪ್ರವೇಶ ನೀಡುತ್ತಾ ಹೋದರೂ ಅಸ್ಪೃಶ್ಯತೆಯ ಆಚರಣೆ ಶಾಲೆಗಳಲ್ಲಿ ತಾಂಡವವಾಡುತ್ತಿತ್ತು. ದೇವಾಲಯಗಳಿಗೆ ಪ್ರವೇಶವೇ ಇರಲಿಲ್ಲವಾದ್ದರಿಂದ ಅಲ್ಲಿ ನಡೆಯುವಂತಹ ಶಾಲೆಗಳಲ್ಲಿ ಶಿಕ್ಷಣ ಕಲಿಯುವ ಅವಕಾಶ ಎಲ್ಲಿಂದ ಬರುತ್ತದೆ.

ಅಸ್ಪೃಶ್ಯರಿಗೆ ಶಿಕ್ಷಣ ಒದಗಿಸುವ ಸಲುವಾಗಿ ಮದ್ರಾಸ್ ಪ್ರಾಂತ್ಯದಲ್ಲಿ ನಿಮ್ನ ವರ್ಗಗಳ ವಿದ್ಯಾರ್ಥಿಗಳಿಗೋಸ್ಕರ ಪ್ರತ್ಯೇಕ ಶಾಲೆಗಳನ್ನು ತೆರೆಯಲಾಯಿತು. ೧೯೨೧-೪೭ ರ ಕಾಲಾವಧಿಯಲ್ಲಿ ಕಾರ್ಮಿಕ ಇಲಾಖೆಯು ನಿಮ್ನವರ್ಗದ ವಿದ್ಯಾರ್ಥಿಗಳ ಶಿಕ್ಷಣದ ಮೇಲ್ವಿಚಾರಣೆಯ ಹೊಣೆ ಹೊತ್ತಿದ್ದರಿಂದ ಅದು ಆ ಜನಗಳ ಮಕ್ಕಳಿಗೆ ಪ್ರತ್ಯೇಕ ಶಾಲೆಗಳನ್ನು ತೆರೆಯಿತು.[೨೨] ಹೀಗೆ ಮದ್ರಾಸ್ ಪ್ರಾಂತ್ಯದಲ್ಲಿಯೂ ಕೂಡ ಸ್ವಾತಂತ್ರ್ಯಪೂರ್ವದಲ್ಲಿ ಅಸ್ಪೃಶ್ಯರಿಗೆ ಶಿಕ್ಷಣ ಒದಗಿಸಲು ಮುಂದಾಗಿರುವುದು ಕಂಡುಬರುತ್ತದೆ. ಬಳ್ಳಾರಿಯ ೪೭ ಶಾಲೆಗಳಲ್ಲಿ ೧.೨೬೯ ವಿದ್ಯಾರ್ಥಿಗಳಿದ್ದರು. ಇದೇ ಕಾಲದಲ್ಲಿ ಖಾಸಗಿಯಾಗಿ ಮತ್ತು ಸ್ಥಳೀಯ ಸಂಸ್ಥೆಗಳ ಆಶ್ರಯದಲ್ಲಿ ಅನೇಕ ಶಾಲೆಗಳು ನಿಮ್ನ ವರ್ಗಗಳಿಗಾಗಿ ಪ್ರಾರಂಭವಾದವು. ಈ ಜಾತಿಯ ವಿದ್ಯಾರ್ಥಿಗಳಿಗೆ ಪ್ರವೇಶ ನೀಡಲು ನಿರಾಕರಿಸಿದ ಶಾಲೆಗಳಿಗೆ ಸರ್ಕಾರ ಸಹಾಯ ಧನವನ್ನು ತಡೆಹಿಡಿಯಿತು.[೨೩] ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಚಿಕ್ಕಜೋಗೀಹಳ್ಳಿ ತಾಂಡದಲ್ಲಿ ಸರ್ಕಾರವೇ ನಡೆಸುತ್ತಿದ್ದ ಒಂದು ಲೇಬರ್‌ಸ್ಕೂಲು ಇತ್ತು ಅದಕ್ಕೆ ಬೇಕಾದ ಭೂಮಿ ಕಟ್ಟಡವನ್ನು ಇವರೇ (ಲಂಬಾಣಿ ಸಮುದಾಯದ ದಮಾಳು ಭಾವಸಿಂಗ್ ನಾಯ್ಕ್) ಕಟ್ಟಿಸಿಕೊಟ್ಟಿದ್ದರೆಂದು ತಿಳಿದುಬರುತ್ತದೆ. ಇದೇ ರೀತಿ ಹೂವಿನಹಡಗಲಿ ತಾಲ್ಲೂಕು ಕುಮಾರನಹಳ್ಳಿ ತಾಂಡದಲ್ಲಿ ಲಂಬಾಣಿ ಸಮುದಾಯದವರು ಕಟ್ಟಿಸಿದ ಶಾಲಾ ಕಟ್ಟಡ ಅವಶೇಷವನ್ನು ಇಂದಿಗೂ ಕಾಣಬಹುದು. ಹೀಗೆ ಮೈಸೂರು ಮತ್ತು ಮದ್ರಾಸ್ ಪ್ರದೇಶಗಳೆರಡರಲ್ಲಿ ಅಸ್ಪೃಶ್ಯರಿಗೆ ಶಿಕ್ಷಣ ನೀಡಲು ಸರ್ಕಾರದೊಂದಿಗೆ ಖಾಸಗಿಯವರು ಸಹ ಶಾಲೆಗಳನ್ನು ತೆರೆದು ಸಹಾಯ ಮಾಡಿರುವುದು ತಿಳಿದುಬರುತ್ತದೆ.

ಈ ಮೊದಲು ಲಂಬಾಣಿ ವಿದ್ಯಾರ್ಥಿಗಳಿಗಾಗಿ ತೆರೆದ ಶಾಲೆಗಳಿಗೆ ಕಲಿಸುವ ಶಿಕ್ಷಕರೇ ಸಿಗುವುದು ಕಷ್ಟವಾಯಿತು. ಹರಿಜನ, ಗಿರಿಜನಗಳ ಶಾಲೆಗಳಲ್ಲಿ ಕಲಿಸುವವರಿಗೆ ಹೆಚ್ಚು ಸಂಬಳವನ್ನು ಕೊಡಬೇಕೆಂಬ

ಒತ್ತಾಯವನ್ನು ಸರಕಾರಕ್ಕೆ ಮಾಡಲಾಯಿತು.[೨೪] ಈ ಅಂಶದಿಂದ ಅಸ್ಪೃಶ್ಯರಿಗಾಗಿಯೇ ತೆರೆದ ಶಾಲೆಗಳಿಗೆ ಮೇಲುಜಾತಿಯ ಶಿಕ್ಷಕರು ಬರಲು ಹಿಂಜರಿಯುತ್ತಿದ್ದುದು ತಿಳಿದುಬರುತ್ತದೆ. ಮದ್ರಾಸ್ ಪ್ರಾಂತ್ಯದಲ್ಲಿ ಪ್ರೌಢಶಾಲೆಗಳಲ್ಲಿ ಮಾತ್ರವೇ ದೈಹಿಕ ಶಿಕ್ಷಣ ಶಿಕ್ಷಕರ ನೇಮಕವಾಗಿ ಕೆಳವರ್ಗದ ಶಾಲೆಗಳಲ್ಲಿ ಸಾಮಾನ್ಯ ಶಿಕ್ಷಕರೇ ಈ ಕಾರ್ಯನಿರ್ವಹಿಸುವಂತೆ ನಿಗದಿಪಡಿಸಲಾಯಿತು.[೨೫] ಇದರಿಂದಾಗಿ ಕೆಲವೊಂದು ವಿಶೇಷ ಶಿಕ್ಷಕರ ಕೊರತೆಯನ್ನು ಕೆಳವರ್ಗದ ಶಾಲೆಗಳು ಅನುಭವಿಸುತ್ತಿದ್ದವು. ೧೯೩೧ರಲ್ಲಿ ನಡೆದ ಜನಗಣತಿಯು ಸಹ ಪಂಚಮರನ್ನು ಎಲ್ಲ ಶಾಲೆಗಳಿಗೆ ಸೇರಿಸಿಕೊಳ್ಳಲು ಇನ್ನೂ ಸಾಧ್ಯವಾಗಿಲ್ಲ[೨೬] ಎಂದು ತಿಳಿಸುತ್ತದೆ. ಈಗಾಗಲೇ ಈ ಹಿಂದೆ ಸಾರ್ವಜನಿಕ ಶಾಲೆಗಳಲ್ಲಿ ಅಸ್ಪೃಶ್ಯರಿಗೆ ಪ್ರವೇಶ ನಿರಾಕರಿಸಬಾರದೆಂದು ಆಜ್ಞೆಮಾಡಿದ್ದರೂ ಅದು ಪರಿಣಾಮಕಾರಿಯಾಗಿ ಜಾರಿಯಾಗಿಲ್ಲ ಎಂಬ ಸತ್ಯವನ್ನು ಜನಗಣತಿ ತಿಳಿಸಿದೆ. ಈ ಎಲ್ಲಾ ತಾರತಮ್ಯ, ಕೊರತೆಗಳನ್ನು ಮನಗಂಡು, ಅಸ್ಪೃಶ್ಯರು ಕೀಳರಿಮೆಯನ್ನು ತೊರೆದು ಎಲ್ಲರಂತೆ ಶಿಕ್ಷಣ ಪಡೆಯಲು ಸರ್ಕಾರ ಸಾರ್ವತ್ರಿಕ ಶಾಲೆಗಳಲ್ಲಿ ಅಸ್ಪೃಶ್ಯರಿಗೆ ಪ್ರವೇಶವನ್ನು ಕಟ್ಟುನಿಟ್ಟಾಗಿ ಜಾರಿಗೆ ತರುವಂತೆ ಪ್ರಯತ್ನಿಸಿತು. ಈ ಹಿನ್ನೆಲೆಯಲ್ಲಿ ೧೯೩೯ರ ವೇಳೆಗೆ ಪಂಚಮರ ಶಾಲೆಗಳೆಲ್ಲಾ ಮುಚ್ಚಿದವು. ಆ ವಿದ್ಯಾರ್ಥಿಗಳೆಲ್ಲಾ ಇತರರಿಗೆ ನಡೆಸುವ ಶಾಲೆಗಳಲ್ಲೇ ಮುಕ್ತ ಪ್ರವೇಶ ಪಡೆದರು. ಸರ್ಕಾರದಿಂದ ವಿದ್ಯಾರ್ಥಿಗಳಿಗೆ ಉಡುಪು ಮತ್ತು ಪುಸ್ತಕಗಳು ಕೊಡಲ್ಪಟ್ಟವು. ಅವರಲ್ಲಿ ಅರ್ಹರಿಗೆ ವಿದ್ಯಾರ್ಥಿ ವೇತನವೂ ಮಂಜೂರಾಯಿತು.[೨೭]

ಹೀಗೆ ಸರ್ಕಾರವು ಅಸ್ಪೃಶ್ಯರಿಗೆ ಶಿಕ್ಷಣ ಒದಗಿಸಿಕೊಡಲು ಸ್ವಾತಂತ್ರ್ಯಪೂರ್ವದಲ್ಲಿ ವಿವಿಧ ಬಗೆಯ ಕ್ರಮಗಳನ್ನು ಕೈಗೊಂಡಿತು. ಆದರೆ ಮೌಢ್ಯತೆ, ಬಡತನ, ಶೋಷಣೆಯಿಂದ ನರಳುತ್ತಿರುವ ಲಂಬಾಣಿಗರು ಹೊಲೆಯರು, ಮಾದಿಗರು, ಬೇಡರು ಇತ್ಯಾದಿ ಜಾತಿ ಜನರು ಶಿಕ್ಷಣ ಕಲಿಯಲು ಮುಂದಾದಾಗ ಶಾಲೆಗಳಲ್ಲಿನ ತಾರತಮ್ಯ ಅವರ ಉತ್ಸಾಹವನ್ನು ಕುಗ್ಗಿಸುತ್ತಿತ್ತು. ಆದರೂ ಹೆಚ್ಚಿನ ಪ್ರಮಾಣದಲ್ಲಿ ಶಿಕ್ಷಣ ಪಡೆಯದೆ ಹೋದರೂ ಸ್ವಲ್ಪಮಟ್ಟಿನ ಸುಧಾರಣೆ ಕಾಣುತ್ತದೆ. ಮಿಲ್ಲರ್ ವರದಿಯಲ್ಲಿ ದಾಖಲಾಗಿರುವಂತೆ ೧೯೧೮-೧೯ರ ಸಮಯದಲ್ಲಿ ಮೈಸೂರು ರಾಜ್ಯದಲ್ಲಿ ನಿಮ್ನವರ್ಗಗಳಲ್ಲಿ ೩೧೪೬೭ ಜನ ಅಕ್ಷರಸ್ಥರು ಇದ್ದರೆಂಬ ಆ ವರದಿ ತಿಳಿಸುತ್ತದೆ.[೨೮] ೧೯೩೫ರ ಹೊತ್ತಿಗೆ ಹೈಸ್ಕೂಲು ತರಗತಿಗಳಲ್ಲಿ ಕೇವಲ ೫೦ಕ್ಕೂ ಕಡಿಮೆಯಿದ್ದ ಸಂಖ್ಯೆ ೫೫೦ಕ್ಕೆ ಏರಿತು.[೨೯]

ಮದ್ರಾಸ್ ಅಧಿಪತ್ಯದ ರಾಜ್ಯಪಾಲನಾದ ಲಾರ್ಡ್ ಸ್ಟಾನ್ಲಿಯವರು ಹೊಸಪೇಟೆಗೆ ಭೇಟಿ ಕೊಟ್ಟು ೧೯೩೧ನೇ ಜುಲೈ ರಂದು ಮುನಿಸಿಪಲ್ ಹೈಸ್ಕೂಲಿನ ಕಟ್ಟಡಗಳ ಶಂಕು ಸ್ಥಾಪನೆ ಮಾಡಿದರು. ಕಟ್ಟಡಗಳ ನಿರ್ಮಾಣ ಕಾರ್ಯಕ್ಕೆ ಸರ್ಕಾರ ಧನಸಹಾಯ ನೀಡಿತು. ಆಂಗ್ಲ ವಾಸ್ತುಶೈಲಿಯನ್ನು ಹೊಂದಿದ ಈ ಕಟ್ಟಡವನ್ನು ೧೯೩೫ನೇ ನವೆಂಬರ್ ೯ ರಂದು ಆಗ ಜಿಲ್ಲಾ ಕಲೆಕ್ಟರ್ ಆದ ಶ್ರೀ ಟಿ.ಭಾಸ್ಕರ್‌ರಾವ್ ನಾಯ್ಡು ಉದ್ಘಾಟಿಸಿದರು. ಈ ಶಾಲೆ ಮೊದಲು ಲೋಯರ್ ಸೆಕೆಂಡರಿ ಶಾಲೆಯಾಗಿದ್ದು, ೧೯೬೫ರಲ್ಲಿ ಪ್ರಾರಂಭವಾಯಿತೆಂದು ಹೇಳಬಹುದು. ೧೯೧೩ರಲ್ಲಿ ಪುರಸಭೆಯ ಹತೋಟಿಗೆ ವರ್ಗಾಯಿಸಲ್ಪಟ್ಟಿತು. ಹೊಸಪೇಟೆಯಲ್ಲಿ ೧೯೨೦-೨೧ರಲ್ಲಿ ಪ್ರೌಢಶಾಲೆಯ ತರಗತಿಯನ್ನು ಪ್ರಾರಂಭಿಸಲಾಯಿತು. ೧೯೪೭ನೇ ಇಸವಿ ಫೆಬ್ರವರಿ ೨೭ರಂದು ಈ ಶಾಲೆಯಲ್ಲಿ ಬೆಳ್ಳಿಹಬ್ಬವನ್ನು ಡಾ. ಶಿವರಾಮ ಕಾರಂತರ ಅತಿಥ್ಯದಲ್ಲಿ ನೆರವೇರಿಸಲಾಯಿತು.

೧೯೩೪ರಲ್ಲಿ ತಾಲ್ಲೂಕು ಮಂಡಳಿಗಳು ರದ್ದಾಗಿ, ಪ್ರಾಥಮಿಕ ಶಿಕ್ಷಣ ಜಿಲ್ಲಾ ಮಂಡಳಿಗೆ ವರ್ಗಾಯಿಸಿತು. ೧೯೩೭ರಲ್ಲಿ ಭಾರತ ಸರ್ಕಾರದ ಅಧಿನಿಯಮದಲ್ಲಿ ತಿದ್ದುಪಡಿ ಮಾಡಲಾಯಿತು. ೧೯೩೭ರಲ್ಲಿ ಭಾರತ ಸರ್ಕಾರದ ಅಧಿನಿಯಮದ ಪ್ರಕಾರ ಶೈಕ್ಷಣಿಕ ಸೌಲಭ್ಯಗಳು ಮತ್ತು ನಿಯಂತ್ರಣದ ಪೂರ್ವ ಅಧಿಕಾರ ಸಿಕ್ಕಿತು. ಜಿಲ್ಲಾ ಶಿಕ್ಷಣ ಮಂಡಳಿಗಳು, ಪ್ರೌಢಶಾಲೆಯು ನೀಡುವ ವೃತ್ತಿ ತರಬೇತಿ ವೈದ್ಯಕೀಯ ಶಿಕ್ಷಣ, ನೀತಿಶಿಕ್ಷಣವನ್ನು ಸ್ಥಾಪಿಸಲು ಶಿಕ್ಷಣ ಇಲಾಖೆಗೆ ತಿಳಿಸಿತು. ಆಗ ೧೪೮ ರಾತ್ರಿ ಶಾಲೆಗಳನ್ನು ಪ್ರಾಥಮಿಕ ಶಿಕ್ಷಣದ ಪ್ರಸರಣ ಕಾರ್ಯಕ್ಕೆ ಬಳಸಿಕೊಳ್ಳಲಾಯಿತು. ೧೯೩೮ರಲ್ಲಿ ತಾಲ್ಲೂಕು ಮಂಡಳಿಗಳು ರದ್ದುಗೊಂಡು ಶಿಕ್ಷಣದ ವ್ಯವಸ್ಥೆಯಾಗಿ ಮತ್ತೊಂದಕ್ಕೆ ವರ್ಗಾಯಿಸಲಾಯಿತು. ೧೯೩೭ರ ಸಂದರ್ಭದಲ್ಲಿ ೧೩೪೧ ಶಾಲೆಗಳು ಬಳ್ಳಾರಿ ಜಿಲ್ಲೆಯಲ್ಲಿದ್ದವು. ೧೯೩೮ ರಲ್ಲಿ ಜಿಲ್ಲಾ ವಿದ್ಯಾಭ್ಯಾಸ ಸಮಿತಿಗಳನ್ನು ವಜಾ ಮಾಡಲಾಯಿತು. ಅದೇ ವರ್ಷದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಮಾಪಿಳ್ಳೆ ಮಕ್ಕಳಿಗೆ, ಬಳ್ಳಾರಿಯಲ್ಲಿ ಲಂಬಾಣಿಗರ ಮಕ್ಕಳಿಗೆ ಪ್ರತ್ಯೇಕ ೧೧ ಶಾಲೆಗಳು ಸ್ಥಾಪನೆಯಾಗಿದ್ದವು.[೨೨]

ಪ್ರಾಥಮಿಕ, ಮಾಧ್ಯಮಿಕ ಶಿಕ್ಷಣ ಜಿಲ್ಲಾ ಬೋರ್ಡಿನ ಕೆಳಗೆ ನಡೆಯುತ್ತಿದ್ದವು. ೧೯೪೫-೪೬ರಲ್ಲಿ ೪೩೩ ಪ್ರಾಥಮಿಕ ಶಾಲೆಗಳಿದ್ದವು.[೨೩] ಮಾಧ್ಯಮಿಕ ಶಿಕ್ಷಣವನ್ನು ಹರಪನಹಳ್ಳಿ, ರಾಯದುರ್ಗ, ಎಮ್ಮಿಗನೂರು, ಕೊಟ್ಟೂರು, ಕಂಪ್ಲಿ, ಹಡಗಲಿ, ಕೂಡ್ಲಿಗಿ, ಆಲೂರು, ಕೋಸಗಿ, ಸಿರಗುಪ್ಪ, ಸಂಡೂರುಗಳಲ್ಲಿ ಕೊಡುತ್ತಿದ್ದರು. ಸ್ವಾತಂತ್ರ್ಯ ಸಂದರ್ಭದಲ್ಲಿ ಸುಮಾರು ೧೧ ಪ್ರೌಢಶಾಲೆಗಳು ಈ ಭಾಗದಲ್ಲಿ ಸ್ಥಾಪನೆಯಾದವು. ಲಂಬಾಣಿಗರಿಗೆ ಆರ್ಥಿಕ, ಸಾಮಾಜಿಕ ಪರಿಸ್ಥಿತಿಯನ್ನು ಸುಧಾರಿಸಲು ಶಿಕ್ಷಣಕ್ಕೆ ಸರ್ಕಾರ ಪ್ರೋತ್ಸಾಹಿಸಿತು.

**೮.೨ ವಸಾಹತೋತ್ತರ ಕಾಲಘಟ್ಟದಲ್ಲಿ ಲಂಬಾಣಿ ಸಮುದಾಯದ ಶೈಕ್ಷಣಿಕ ಪ್ರಗತಿ :**

**ಪೂರ್ವಪ್ರಾಥಮಿಕ ಶಿಕ್ಷಣ ಮತ್ತು ಲಂಬಾಣಿಗರು**

ಪೂರ್ವಪ್ರಾಥಮಿಕ ಶಿಕ್ಷಣವು ಮಕ್ಕಳ ಪ್ರಾರಂಭದ ಹಂತ; ಇಂತಹ ಶಿಕ್ಷಣವನ್ನು ನೀಡಲು ಸರ್ಕಾರ ಮೊದಲು ಆಸಕ್ತಿ ತಳೆದಿರಲಿಲ್ಲ. ಸ್ವಾತಂತ್ರ್ಯ ನಂತರದಲ್ಲಿ ಕೆಲವೊಂದು ಖಾಸಗಿ ಸಂಸ್ಥೆಗಳಿಗೆ ಪೂರ್ವಪ್ರಾಥಮಿಕ ಶಿಕ್ಷಣ ನೀಡಲು ಶಾಲೆಗಳನ್ನು ತೆರೆಯಲು ಸರ್ಕಾರ ಅನುಮತಿ ನೀಡಿತ್ತು. ಇದರಿಂದಾಗಿ ಖಾಸಗಿ ಸಂಸ್ಥೆಗಳು ಅನೇಕ ಪ್ರಮುಖ ಭಾಗಗಳಲ್ಲಿ ಶಾಲೆಗಳನ್ನು ತೆರೆದವು. ಹೀಗೆ ಪೂರ್ವಪ್ರಾಥಮಿಕ ಶಿಕ್ಷಣವು ಮೊದಲು ಖಾಸಗಿಯವರಿಂದ ಆರಂಭಗೊಂಡು ನಂತರದಲ್ಲಿ ಸರ್ಕಾರ ಈ ಬಗ್ಗೆ ಆಸಕ್ತಿ ತಾಳಿ ಮಕ್ಕಳಿಗೆ ಆರಂಭಿಕ ಶಿಕ್ಷಣ ನೀಡುವ ಪೂರ್ವಪ್ರಾಥಮಿಕ ಶಾಲೆ ಅಥವಾ ಶಿಶು ವಿಹಾರಗಳನ್ನು ತೆರೆಯಲು ಮುಂದಾಯಿತು. ಈ ಹಿಂದೆ ಶಿಕ್ಷಣಕ್ಕೆ ಸಂಬಂಧಿಸಿದಂತೆ ಶಾಲೆಗಳನ್ನು ಸರ್ಕಾರ ತೆರೆಯದೆ ಹೋದರೂ ಅಂತಹ ಶಿಕ್ಷಣ ನೀಡುವ ಸಂಸ್ಥೆಗಳಿಗೆ ಅನುದಾನ ನೀಡುವುದರ ಮೂಲಕ ಪರೋಕ್ಷವಾಗಿ ಶಿಕ್ಷಣಕ್ಕೆ ಬೆಂಬಲ ನೀಡಿದೆ. ಇದರ ಪರಿಣಾಮ ಬಳ್ಳಾರಿ ಜಿಲ್ಲೆಯಲ್ಲಿ ೧೯೭೦-೭೧ರ ವೇಳೆಗೆ ೭೦ ನರ್ಸರಿ ಶಾಲೆಗಳಲ್ಲಿ ಪೂರ್ವಪ್ರಾಥಮಿಕ ಶಿಕ್ಷಣವನ್ನು ನೀಡಲಾಗುತ್ತಿತ್ತು.[೨೪] ಮೊದಲು ಖಾಸಗಿ ಸಂಸ್ಥೆಗಳಿಂದ ಆರಂಭಗೊಂಡ ನರ್ಸರಿ ಶಾಲೆಗಳು ಕೇವಲ ಆರ್ಥಿಕವಾಗಿ ಪ್ರಬಲವಾಗಿರುವಂತಹ ವರ್ಗದ ಮಕ್ಕಳಿಗೆ ಮಾತ್ರವೇ ಅವಕಾಶ ಮಾಡಿಕೊಟ್ಟವು. ಅಲ್ಲದೇ ಇವುಗಳು ಪ್ರಮುಖ ನಗರ ಪ್ರದೇಶಗಳಲ್ಲಿ

ಮಾತ್ರವೇ ಸ್ಥಾಪನೆಗೊಂಡಿದ್ದವು. ಈ ರೀತಿ ಶಿಕ್ಷಣ ನೀಡುವ ಸಂಸ್ಥೆಗಳಿಗೆ ಫೀಯನ್ನು ನೀಡಲು ಆರ್ಥಿಕವಾಗಿ ದುರ್ಬಲವಾಗಿರುವ ಲಂಬಾಣಿ ಸಮುದಾಯದವರಿಗೆ ಭರಿಸಲು ಸಾಧ್ಯವಾಗುತ್ತಿರಲಿಲ್ಲ. ಆದರೂ ಸರ್ಕಾರವು ಅನುದಾನ ನೀಡುವಾಗ ಕೆಲವೊಂದು ಷರತ್ತುಗಳನ್ನು ಖಾಸಗಿ ಸಂಸ್ಥೆಯವರ ಮೇಲೆ ವಿಧಿಸಿತ್ತು. ನರ್ಸರಿ ಶಾಲೆಗಳ ಒಟ್ಟು ಸಂಖ್ಯೆಯಲ್ಲಿ ೩/೧ ಬಡತನದಲ್ಲಿರುವ ಮಕ್ಕಳಿಗೆ ಮೀಸಲುಗೊಳಿಸಬೇಕೆಂದು ತಿಳಿಸಿತ್ತು.[೩೩] ಇದರಿಂದಾಗಿ ದುರ್ಬಲ ವರ್ಗದ ಮಕ್ಕಳಿಗೆ ಪ್ರವೇಶ ಪಡೆಯಲು ಅವಕಾಶ ದೊರಕಿದೆ. ಇಂತಹ ಅವಕಾಶವನ್ನು ಬಳಸಿಕೊಂಡರು ಮಕ್ಕಳಿಗೆ ಶಿಕ್ಷಣ ಕಲಿಯಲು ಅವಶ್ಯಕವಾಗಿ ಬೇಕಾಗುವ ವಸ್ತುಗಳನ್ನು ಖರೀದಿ ಮಾಡಲು ಸಾಮರ್ಥ್ಯ ಇರುವಂತಹವರು ಮಾತ್ರ. ಅಂಥವರಲ್ಲಿ ಲಂಬಾಣಿ ಸಮುದಾಯದವರು ಅಪರೂಪವೆಂದೇ ಹೇಳಬಹುದು.

ಪಂಚವಾರ್ಷಿಕ ಯೋಜನೆಗಳು ಶಿಕ್ಷಣಕ್ಕೆ ನೀಡಿದ ವಿಶೇಷ ಮಹತ್ವದಿಂದಾಗಿ ರಾಜ್ಯ ಸರ್ಕಾರಗಳು ಸಹ ಆಯೋಜನೆ ಅನ್ವಯ ಶೈಕ್ಷಣಿಕ ಪ್ರಗತಿ ಸಾಧಿಸಲು ಮುಂದಾದವು. ಆಗ ಸರ್ಕಾರವು ಪೂರ್ವಪ್ರಾಥಮಿಕ ಶಿಕ್ಷಣಕ್ಕೂ ಗಮನಹರಿಸಿತು. ರಾಜ್ಯದಲ್ಲಿ ೧೯೫೮ರಲ್ಲಿ ಪರಿಶಿಷ್ಟ ಜಾತಿಗಳ ಶಿಕ್ಷಣಕ್ಕೂ ಗಮನಹರಿಸಿತು. ರಾಜ್ಯದಲ್ಲಿ ೧೯೫೮ರಲ್ಲಿ ಪರಿಶಿಷ್ಟ ಜಾತಿಗಳ ಮಕ್ಕಳ ಕಲ್ಯಾಣಕ್ಕಾಗಿ ಶಿಶುವಿಹಾರಗಳನ್ನೊಳಗೊಂಡ ಮಹಿಳಾ ಕಲ್ಯಾಣ ಕೇಂದ್ರಗಳು ಆರಂಭವಾದವು.[೩೪] ಅಲ್ಲಿಂದ ಲಂಬಾಣಿ ಸಮುದಾಯ ಸಹ ತಮ್ಮ ಮಕ್ಕಳಿಗೆ ಪೂರ್ವಪ್ರಾಥಮಿಕ ಶಿಕ್ಷಣ ಕೊಡಿಸಲು ಅವಕಾಶ ಪಡೆಯಿತು. ಈ ರೀತಿ ಸರ್ಕಾರ ಪೂರ್ವಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚು ಒತ್ತು ಕೊಟ್ಟಿದ್ದರಿಂದ ಎರಡನೆಯ ಯೋಜನೆಯಲ್ಲಿ ೧೯೫೬-೬೧ರಲ್ಲಿ ೧೬೫ ಶಿಶುವಿಹಾರಗಳನ್ನೊಳಗೊಂಡ ಮಹಿಳಾ ಕಲ್ಯಾಣ ಕೇಂದ್ರಗಳನ್ನು ಪರಿಶಿಷ್ಟ ಜಾತಿಗಳ ಅನುಕೂಲಕ್ಕೆ ತೆರೆಯಲಾಯಿತು. ನಾಲ್ಕನೆಯ ಯೋಜನೆಯ (೧೯೬೯-೭೪) ಮುಕ್ತಾಯ ವೇಳೆ ೧೯೭೩-೭೪ರಲ್ಲಿ ರಾಜ್ಯದಲ್ಲಿ ೩೪೧ ಶಿಶುವಿಹಾರಗಳನ್ನೊಳಗೊಂಡ ಮಹಿಳಾ ಕೇಂದ್ರಗಳು ಕಾರ್ಯನಿರತವಾಗಿದ್ದವು.[೩೫] ಇಂತಹ ಕೇಂದ್ರಗಳನ್ನು ಪ್ರಮುಖವಾಗಿ ಆ ವರ್ಗದವರು ವಾಸಿಸುವ ಸ್ಥಳದಲ್ಲಿ ಇಲ್ಲವೇ ಅದಕ್ಕೆ ಹತ್ತಿರದ ಸ್ಥಳಗಳಲ್ಲಿ ತೆರೆಯುವಂತೆ ತಿಳಿಸಿತು. ಇದರಿಂದಾಗಿ ಆ ವರ್ಗದ ಮಕ್ಕಳು ಶಿಶುವಿಹಾರಗಳಿಗೆ ಹೋಗಲು ಅನುಕೂಲವಾಯಿತು. ಹೀಗೆ ಮಕ್ಕಳಿಗೆ ಪ್ರಾಥಮಿಕ ಪೂರ್ವಶಿಕ್ಷಣ ನೀಡಲು ತೆರೆದ ಕೇಂದ್ರಗಳಲ್ಲಿ ಕೆಲವು ಬಳ್ಳಾರಿ ಜಿಲ್ಲೆಯಲ್ಲಿದ್ದವು. ಇದರಿಂದಾಗಿ ಈ ಭಾಗದಲ್ಲಿ ಲಂಬಾಣಿ ಜನಾಂಗದ ಮಕ್ಕಳು ಆರಂಭಿಕ ಶಿಕ್ಷಣ ಪಡೆಯಲು ಸಾಧ್ಯವಾಯಿತು. ಈ ಹಂತದ ಶಿಕ್ಷಣವನ್ನು ಸರ್ಕಾರದಿಂದ ತೆರೆದಿರುವ ಕೇಂದ್ರಗಳಲ್ಲಿ ಬಹುಸಂಖ್ಯೆಯಲ್ಲಿ ಲಂಬಾಣಿ ಸಮುದಾಯದ ಮಕ್ಕಳು ಪಡೆಯುತ್ತಿದ್ದರೆ, ಇದೇ ಶಿಕ್ಷಣವನ್ನು ಖಾಸಗಿ ಸಂಸ್ಥೆಗಳು ನಡೆಸುತ್ತಿರುವ ಕೇಂದ್ರಗಳಲ್ಲಿ ಪ್ರಮುಖವಾಗಿ ಈ ಸಮುದಾಯದ ಮಧ್ಯಮ ವರ್ಗದ ಮಕ್ಕಳು ಕಡಿಮೆ ಸಂಖ್ಯೆಯಲ್ಲಿ ಶಿಕ್ಷಣ ಪಡೆಯುತ್ತಿದ್ದಾರೆ. ಸಮಾಜ ಕಲ್ಯಾಣ ಇಲಾಖೆಯ ಪರಿಶಿಷ್ಟ ಜಾತಿಯ ಮಹಿಳೆ ಮತ್ತು ಮಕ್ಕಳ ಕಲ್ಯಾಣಕ್ಕಾಗಿ ೨೦೦೦-೦೧ ನೇ ಸಾಲಿನ ಹೊತ್ತಿಗೆ ರಾಜ್ಯದಲ್ಲಿ ೪೫೦ ಶಿಶುವಿಹಾರಗಳನ್ನೊಳಗೊಂಡ ಮಹಿಳಾ ಕೇಂದ್ರಗಳು ಅಸ್ತಿತ್ವದಲ್ಲಿದ್ದರೆ ಅವುಗಳಲ್ಲಿ ೨೨ ಬಳ್ಳಾರಿ ಜಿಲ್ಲೆಯಲ್ಲಿವೆ.[೩೬]

ಸಮಾಜ ಕಲ್ಯಾಣ ಇಲಾಖೆಯ ಪರಿಶಿಷ್ಟ ಜಾತಿಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಕಲ್ಯಾಣಕ್ಕಾಗಿ ೨೦೧೨-೧೩ನೇ ಸಾಲಿನ ಹೊತ್ತಿಗೆ ಬಳ್ಳಾರಿ ಜಿಲ್ಲೆಯಲ್ಲಿ ೨೩೧೪ ಅಂಗನವಾಡಿ ಕೇಂದ್ರಗಳು/ಮಿನಿಅಂಗನವಾಡಿ

ಕೇಂದ್ರಗಳಿದ್ದು, ಸಂಡೂರು ತಾಲ್ಲೂಕಿನಲ್ಲಿ ಅಂಗನವಾಡಿ ೨೩೫, ಮಿನಿಅಂಗನವಾಡಿ ೪, ಒಟ್ಟು ೨೩೯, ಕೂಡ್ಲಿಗಿಯಲ್ಲಿ ಅಂಗನವಾಡಿ ೩೩೬, ಮಿನಿ ಅಂಗನವಾಡಿ ೨೦, ಒಟ್ಟು ೩೫೬. ಹೊಸಪೇಟೆಯಲ್ಲಿ ಅಂಗನವಾಡಿ ೪೩೯ ಒಟ್ಟು ೪೩೯. ಹೂವಿನಹಡಗಲಿಯಲ್ಲಿ ಅಂಗನವಾಡಿ ೨೨೪, ಒಟ್ಟು ೨೨೪. ಬಳ್ಳಾರಿ ನಗರದಲ್ಲಿ ಅಂಗನವಾಡಿ ೧೭೬, ಒಟ್ಟು ೧೭೬. ಸಿರುಗುಪ್ಪದಲ್ಲಿ ಅಂಗನವಾಡಿ ೨೬೭, ಮಿನಿ ಅಂಗನವಾಡಿ ೧೬, ಒಟ್ಟು ೩೮೩. ಬಳ್ಳಾರಿ ಗ್ರಾಮಾಂತರದಲ್ಲಿ ಅಂಗನವಾಡಿ ೩೭೯, ಮಿನಿ ಅಂಗನವಾಡಿ ೮, ಒಟ್ಟು ೩೮೭. ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ಅಂಗನವಾಡಿ ೨೧೦, ಒಟ್ಟು ೨೧೦ ಅಂಗನವಾಡಿ ಕೇಂದ್ರಗಳು ಇದ್ದವು.[೩೭]

**ಪ್ರಾಥಮಿಕ ಶಿಕ್ಷಣ ಮತ್ತು ಲಂಬಾಣಿ ಸಮುದಾಯ**

ಸ್ವಾತಂತ್ರ್ಯ ನಂತರದಲ್ಲಿ ಪಂಚವಾರ್ಷಿಕ ಯೋಜನೆಗಳ ಅನ್ವಯ ರಾಜ್ಯ ಸರ್ಕಾರವು ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚು ಮಹತ್ವ ನೀಡಲಾರಂಭಿಸಿತು. ರಾಜ್ಯದ ಅನೇಕ ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚು ಹೆಚ್ಚು ಪ್ರಾಥಮಿಕ ಶಾಲೆಗಳನ್ನು ತೆರೆದು ಆಯಾ ಭಾಗದ ಜನರಿಗೆ ಶಿಕ್ಷಣ ಕಲಿಯಲು ಅವಕಾಶ ಮಾಡಿಕೊಟ್ಟಿತು. ಪ್ರಾಥಮಿಕ ಶಿಕ್ಷಣ ಕಲಿಯಲು ಅನುಕೂಲವಾಗುವಂತೆ ದುರ್ಬಲ ವರ್ಗದ ಮಕ್ಕಳಿಗೆ ಕೆಲವೊಂದು ವಿಶೇಷ ಶಾಲೆಗಳನ್ನು ತೆರೆಯಿತು. ಮೈಸೂರು ರಾಜ್ಯದಲ್ಲಿ ಪರಿಶಿಷ್ಟ ವರ್ಗದ ಜನರಿಗಾಗಿ ೧೯೪೭-೪೮ ರಿಂದ ೧೩೪೭ ಪ್ರಾಥಮಿಕ ಶಾಲೆಗಳನ್ನು ೬ ಮಾಧ್ಯಮಿಕ ಶಾಲೆಗಳನ್ನು ತೆರೆಯಲಾಗಿತ್ತು. ಬಡ ಮಕ್ಕಳಿಗೆ ಶಾಲೆಗಳಲ್ಲಿ ಉಚಿತವಾಗಿ ಪುಸ್ತಕ ಮತ್ತು ಹಲಗೆಗಳನ್ನು ಒದಗಿಸಲಾಗುತ್ತಿತ್ತು. ಇಂತಹ ಶಾಲೆಗಳು ಮೊದಲು ನಗರ ಪ್ರಮುಖ ಪ್ರದೇಶಗಳಿಂದ ಆರಂಭಗೊಂಡು ಗ್ರಾಮೀಣ ಪ್ರದೇಶಗಳಲ್ಲಿ ವಿಸ್ತಾರಗೊಂಡವು. ಅಲ್ಲದೇ ಅನೇಕ ಸೌಲಭ್ಯಗಳನ್ನು ಈ ವರ್ಗದ ಜನರಿಗೆ ಒದಗಿಸಿದ್ದರಿಂದ ಆ ವರ್ಗದಲ್ಲಿ ಒಂದಾದ ಲಂಬಾಣಿಗರ ಸಮುದಾಯದವರು ಸಹ ಪ್ರಾಥಮಿಕ ಶಿಕ್ಷಣ ಕಲಿಯಲು ಅನುಕೂಲವಾಯಿತು. ಬಳ್ಳಾರಿ ಜಿಲ್ಲೆ ೧೯೫೩ರವರೆಗೂ ಮೈಸೂರು ರಾಜ್ಯಕ್ಕೆ ಸೇರ್ಪಡೆಗೊಂಡಿರಲಿಲ್ಲ. ಸೇರ್ಪಡೆಗೊಂಡ ನಂತರದಲ್ಲಿ ಲಂಬಾಣಿಗರ, ಮಾದಿಗ, ಹೊಲೆಯ ಅಭಿವೃದ್ಧಿಗೆಂದೇ ಸ್ಥಾಪಿತಗೊಂಡಿದ್ದ ಹರಿಜನ ಅಥವಾ ಗಿರಿಜನ ಕಲ್ಯಾಣ ಇಲಾಖೆಯು ಇವರಿಗಾಗಿ ಪ್ರತ್ಯೇಕ ಶಾಲೆಗಳನ್ನು ನಡೆಸುತ್ತಿತ್ತು. ಅವುಗಳನ್ನು ''ವೆಲ್‌ಫೇರ್ ಬೋರ್ಡ್ ಸ್ಕೂಲು'' ಗಳೆಂದು ಕರೆಯಲಾಗುತ್ತಿದ್ದು, ಇಂತಹ ಶಾಲೆಗಳು ೧೯೫೩-೫೪ರ ಹೊತ್ತಿಗೆ ಬಳ್ಳಾರಿ ಜಿಲ್ಲೆಯಲ್ಲಿ ೧೮ ವೆಲ್‌ಫೇರ್ ಬೋರ್ಡ್ ಪ್ರೈಮರಿ ಶಾಲೆಗಳಿದ್ದವು. ಅದರಲ್ಲಿ ೮೧೭ ಬಾಲಕರು ಮತ್ತು ೨೬೮ ಬಾಲಕಿಯರು ವಿದ್ಯಾಭ್ಯಾಸ ಮಾಡುತ್ತಿದ್ದರು. ಅದರ ಸಂಖ್ಯೆ ೧೯೫೬-೫೭ರ ಹೊತ್ತಿಗೆ ೮೪೭ ಜನ ಬಾಲಕರು ಮತ್ತು ೩೧೧ ಬಾಲಕಿಯರು ಪ್ರಾಥಮಿಕ ಶಾಲಾ ಶಿಕ್ಷಣ ಪಡೆಯುತ್ತಿದ್ದರು. ೧೯೬೨ರ ಹೊತ್ತಿಗೆ ಬಳ್ಳಾರಿ ಜಿಲ್ಲೆಯಲ್ಲಿದ್ದ ೩೯ ವೆಲ್‌ಫೇರ್ ಬೋರ್ಡ್ ಶಾಲೆಗಳಲ್ಲಿ ೧೯೪೩ ಬಾಲಕರು ಮತ್ತು ೯೯೭ ಬಾಲಕಿಯರು ವಿದ್ಯಾಭ್ಯಾಸ ಮಾಡುತ್ತಿದ್ದರು.[೩೮] ಹೀಗೆ ಸರ್ಕಾರವು ಇವರಿಗಾಗಿ ಪ್ರತ್ಯೇಕ ಶಾಲೆಗಳನ್ನು ತೆರೆಯುವುದರ ಮೂಲಕ ಅವರ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಟ್ಟಿತು. ಇದರಿಂದಾಗಿ ಈ ಭಾಗದಲ್ಲಿ ಲಂಬಾಣಿ ಸಮುದಾಯದ ಮಕ್ಕಳು ಪ್ರಾಥಮಿಕ ಶಾಲಾ ಶಿಕ್ಷಣ ಕಲಿಯಲು ಅವಕಾಶವಾಯಿತು. ಹಾಗಿದ್ದೂ ಪ್ರಾಥಮಿಕ ಶಾಲಾ ಶಿಕ್ಷಣ ಪಡೆಯುವಲ್ಲಿ ಲಂಬಾಣಿ ಸಮುದಾಯದವರು ಮುಂದೆ ಬಂದಿದ್ದು ಅಗ ಸ್ವಲ್ಪ ಪ್ರಮಾಣದಲ್ಲಿ ಮಾತ್ರ ಎನ್ನಬಹುದು.

ಕಡ್ಡಾಯ ಪ್ರಾಥಮಿಕ ಶಿಕ್ಷಣ ನೀತಿ ಜಾರಿಗೆ ಬರುವುದರೊಂದಿಗೆ ಎಲ್ಲ ವರ್ಗದ ಮಕ್ಕಳಿಗೂ ಶಿಕ್ಷಣ ಒದಗಿಸುವ ನಿಟ್ಟಿನಲ್ಲಿ ಸರ್ಕರ ಕ್ರಮ ಕೈಗೊಂಡಿತು. ಅಸ್ಪೃಶ್ಯರಿಗೆ ಎಲ್ಲರಂತೆ ಸಮಾನ ಅವಕಾಶ ನೀಡಲು ಸರ್ಕಾರ ಮುಂದಾದಾಗ ಸವರ್ಣಿಯರು ಪ್ರತಿಭಟನೆ ನಡೆಸಿದರು. ಆದರೆ ಸರ್ಕಾರ ಕಠಿಣ ಕ್ರಮ ಕೈಗೊಳ್ಳುವುದನ್ನು ಮುಂದುವರಿಸಿದಂತೆ ಲಂಬಾಣಿಗರು ಸಾರ್ವಜನಿಕ ಶಾಲೆಗಳಲ್ಲಿಯೇ ಶಿಕ್ಷಣ ಪಡೆಯಲು ಅವಕಾಶವಾಯಿತು. ಬಹುಶಃ ಆ ಸಂದರ್ಭದ ಅಸ್ಪೃಶ್ಯರಿಗಾಗಿಯೇ ಪ್ರತ್ಯೇಕವಾಗಿ ತೆರೆದಿದ್ದ ಶಾಲೆಗಳನ್ನು ರದ್ದುಪಡಿಸಿರಬೇಕೆನಿಸುತ್ತದೆ. ಇಂತಹ ಸಂದರ್ಭದಲ್ಲಿ ಇತರೆ ಶಾಲೆಗಳಿಗೆ ಎಲ್ಲರಂತೆ ಸಮಾನವಾಗಿ ಶಿಕ್ಷಣ ಕಲಿಯಲು ಮುಂದಾಗಲು ಹೊರಟರೆ, ಮೇಲು ಜಾತಿಯ ಜನರ ವಕ್ರ ದೃಷ್ಟಿಗೆ ಬೀಳುತ್ತೇವೆ ಎಂದು ಮೊದಮೊದಲು ಹಿಂಜರಿದರೂ. ಆ ನಂತರದಲ್ಲಿ ಎಲ್ಲರೂ ಒಂದು ಕಡೆ ಕುಳಿತು ಶಿಕ್ಷಣ ಕಲಿಯಲು ಆರಂಭವಾಯಿತು. ಆದರೂ ಶಿಕ್ಷಣ ಕಲಿಸಲು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುವ ಪೋಷಕರನ್ನು ಒಂದು ರೀತಿಯಲ್ಲಿ ನೋಡುವುದು ಗ್ರಾಮೀಣ ಪ್ರದೇಶದಲ್ಲಿ ಇಂದಿಗೂ ಕಂಡುಬರುತ್ತದೆ. ಶಿಕ್ಷಣ ಕಲಿಯುವವರ ಸಂಖ್ಯೆ ಹೆಚ್ಚಾಗುತ್ತಾ ನಡೆದಂತೆ ಹೊಸ ಹೊಸ ಶಾಲೆಗಳು ಅನೇಕ ಗ್ರಾಮೀಣ ಪ್ರದೇಶದಲ್ಲಿ ಸ್ಥಾಪನೆಗೊಂಡವು. ಈ ರೀತಿಯ ಬೆಳವಣಿಗೆಯಿಂದಾಗಿ ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪ್ರಾಥಮಿಕ ಶಾಲೆಗಳನ್ನು ಹೊಂದುವಂತಾಯಿತು.

ಈ ರೀತಿ ಸ್ಥಾಪಿತಗೊಂಡ ಶಾಲೆಗಳಲ್ಲಿ ಶಿಕ್ಷಣ ಕಲಿಯಲು ಸರ್ಕಾರ ಪರಿಶಿಷ್ಟ ಜಾತಿ, ವರ್ಗದ ಮಕ್ಕಳಿಗೆ ಫೀ ರಿಯಾಯಿತಿ, ಪಠ್ಯಪುಸ್ತಕ ವಿತರಣೆ, ಬಟ್ಟೆ ವಿತರಣೆ ಮುಂತಾದ ಕ್ರಮಗಳನ್ನು ಕೈಗೊಳ್ಳುತ್ತಾ ಹೋದಂತೆ ವಿದ್ಯಾಭ್ಯಾಸ ಮಾಡಲು ಈ ವರ್ಗಕ್ಕೆ ಅನುಕೂಲವಾಯಿತು. ಈ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಶಿಕ್ಷಣ ಕಲಿಯಲು ಲಂಬಾಣಿ ಜನಾಂಗವು ಹೆಚ್ಚಿನ ಪ್ರಮಾಣದಲ್ಲಿ ಮುನ್ನುಗ್ಗಲು ಸಹಾಯವಾಯಿತು. ೧೯೯೮ರಲ್ಲಿ ೧ ರಿಂದ ೭ ನೆಯ ತರಗತಿಯವರೆಗೆ ದಾಖಲಾದ ಪರಿಶಿಷ್ಟ ಜಾತಿಯ ಮಕ್ಕಳ ಸಂಖ್ಯೆ ಈ ರೀತಿ ಇದೆ. ಬಳ್ಳಾರಿ ಜಿಲ್ಲೆಯಲ್ಲಿ ಬಾಲಕರು ೬೩,೦೩೭ ಬಾಲಕಿಯರು ೨೬,೮೨೦” ಇದ್ದರು. ಇವುಗಳಲ್ಲಿ ಲಂಬಾಣಿ ಸಮುದಾಯದವರು ಸೇರಿದ್ದಾರೆ.

೧೯೯೯-೨೦೦೦ರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ೧೪೯೭ ಪ್ರಾಥಮಿಕ ಶಾಲೆಗಳಿದ್ದು, ಬಳ್ಳಾರಿ ತಾಲ್ಲೂಕಿನಲ್ಲಿ ೩೪೯, ಹಡಗಲಿ ೧೫೨, ಹಗರಿಬೊಮ್ಮನಹಳ್ಳಿ ೧೩೦, ಹೊಸಪೇಟೆ ೨೩೯, ಕೂಡ್ಲಿಗಿ ೨೮೩, ಸಂಡೂರು ೧೫೭ ಹಾಗೂ ಸಿರುಗುಪ್ಪ ತಾಲ್ಲೂಕಿನಲ್ಲಿ ೧೭೨ ಪ್ರಾಥಮಿಕ ಶಾಲೆಗಳು ಇದ್ದವು.

೨೦೧೨-೨೦೧೩ ರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ, ೧೯೫೬ರ ಸರ್ಕಾರಿ, ೬೦ ಸರ್ಕಾರಿ ಅನುದಾನಿತ, ೪೪೮ ಅನುದಾನರಹಿತ ಒಟ್ಟು ೨೪೬೪ ಪ್ರಾಥಮಿಕ ಶಾಲೆಗಳಿದ್ದವು ಬಳ್ಳಾರಿ ತಾಲ್ಲೂಕಿನ, ಪೂರ್ವಭಾಗದಲ್ಲಿ ೨೮೧ ಸರ್ಕಾರಿ ೧೪ ಅನುದಾನಿತ, ೭೯ ಅನುದಾನರಹಿತ ಒಟ್ಟು ೩೭೪, ಬಳ್ಳಾರಿ ತಾಲೂಕಿನ ಪಶ್ಚಿಮಭಾಗದಲ್ಲಿ ೨೪೨ ಸರ್ಕಾರಿ ೫, ಸರ್ಕಾರಿ ಅನುದಾನಿತ, ೮೫ ಅನುದಾನರಹಿತ ಒಟ್ಟು ೩೩೨, ಹೂವಿನ ಹಡಗಲಿ ೧೪೯ ಸರ್ಕಾರಿ, ೪ ಸರ್ಕಾರಿ ಅನುದಾನಿತ ೨೮ ಅನುದಾನರಹಿತ, ಒಟ್ಟು ೧೮೧, ಹಗರಿಬೊಮ್ಮನಹಳ್ಳಿ ೧೭೨ ಸರ್ಕಾರಿ, ೬ ಸರ್ಕಾರಿ ಅನುದಾನಿತ, ೨೭ ಅನುದಾನರಹಿತ, ಒಟ್ಟು ೨೦೫, ಹೊಸಪೇಟೆ ೩೧೨ ಸರ್ಕಾರಿ ೧೫ ಅನುದಾನಿತ ೯೫

ಅನುದಾನರಹಿತ ಒಟ್ಟು ೪೨೨, ಸಂಡೂರು ಸರ್ಕಾರಿ ೨೦೪, ಸರ್ಕಾರಿ ಅನುದಾನಿತ ೩ ಅನುದಾನರಹಿತ ೩೫, ಒಟ್ಟು ೨೪೨, ಕೂಡ್ಲಿಗಿ ಸರ್ಕಾರಿ ೩೩೭ ಸರ್ಕಾರಿ ಅನುದಾನಿತ ೬, ಅನುದಾನರಹಿತ ೪೫, ಒಟ್ಟು ೩೮೮, ಹಾಗೂ ಸಿರುಗುಪ್ಪ ಸರ್ಕಾರಿ ೨೩೮, ಅನುದಾನಿತ ೭, ಅನುದಾನ ರಹಿತ ೫೪ ಒಟ್ಟು ೨೯೯. ಪ್ರಾಥಮಿಕ ಶಾಲೆಗಳು ಇದ್ದವು.[೪೦]

೨೦೧೨-೧೩ರಲ್ಲಿ ೧ ರಿಂದ ೭ ನೆಯ ತರಗತಿಯವರೆಗೆ ದಾಖಲಾದ ಪರಿಶಿಷ್ಟ ಜಾತಿಯ ಮಕ್ಕಳ ಸಂಖ್ಯೆ ಬಾಲಕರು ೫೨,೨೮೬, ಬಾಲಕಿಯರು ೪೬,೧೬೦, ಒಟ್ಟು ೯೮,೪೪೬[೪೧] ಇದ್ದರೆ ಇವುಗಳಲ್ಲಿ ಲಂಬಾಣಿ ಸಮುದಾಯದವರು ಸಹ ಇದ್ದಾರೆ. ಇನ್ನೂ ಅನೇಕ ಭಾಗಗಳಲ್ಲಿ ಪ್ರಾಥಮಿಕ ಶಾಲೆಗಳನ್ನು ಕಲಿಯಲಾಗದ ಸ್ಥಿತಿಯಲ್ಲಿದ್ದಾರೆ.

**ಪ್ರೌಢ ಶಿಕ್ಷಣ ಮತ್ತು ಲಂಬಾಣಿ ಸಮುದಾಯ**

ಪ್ರೌಢಶಿಕ್ಷಣ ರಾಜ್ಯದಲ್ಲಿ ಮೊದಲು ಆರಂಭಗೊಂಡಿದ್ದು ಬೆಂಗಳೂರಿನಲ್ಲಿ ಸ್ವಾತಂತ್ರ್ಯಪೂರ್ವದಲ್ಲಿ ಖಾಸಗಿ ಸಂಸ್ಥೆಯವರು ಪ್ರೌಢಶಾಲಾ ಶಿಕ್ಷಣ ಆರಂಭಿಸಿತು. ಹಾಗೆಯೇ ೧೯೪೮ರಲ್ಲಿ ಜಿಲ್ಲಾ ಬೋರ್ಡ್‌ಗಳು ಪ್ರೌಢಶಾಲೆಗಳನ್ನು ಆರಂಭಿಸಿದವು. ರಾಜ್ಯದಲ್ಲಿ ಪ್ರೌಢ ಶಿಕ್ಷಣ ವಿಸ್ತರಿಸಲು ಇದು ಕಾರಣವಾಯಿತು.[೪೨] ಹೀಗೆ ಸರ್ಕಾರ ಖಾಸಗಿ ಸಂಸ್ಥೆಗಳು ಹಾಗೂ ಸ್ಥಳೀಯ ಸಂಸ್ಥೆಗಳು ಪ್ರೌಢಶಾಲೆಗಳನ್ನು ತೆರೆಯುವುದರ ಮೂಲಕ ಪ್ರೌಢ ಶಿಕ್ಷಣಕ್ಕೆ ಅವಕಾಶ ಮಾಡಿಕೊಟ್ಟರು. ಆನಂತರದ ಪ್ರೌಢಶಿಕ್ಷಣವು ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಮಹತ್ವವನ್ನು ಪಡೆಯಿತು. ಮೈಸೂರು ರಾಜ್ಯದಲ್ಲಿ ''೧೯೫೧-೫೨ ರಲ್ಲಿ ಬಾಲಕರಿಗಾಗಿ ೧೮೧, ಬಾಲಕಿಯರಿಗಾಗಿ ೩೭ ಪ್ರೌಢಶಾಲೆಗಳಿದ್ದು ೧೯೫೫-೫೬ರ ಹೊತ್ತಿಗೆ ಇವು ಕ್ರಮವಾಗಿ ೨೯೯ ಮತ್ತು ೪೭ ಆಗಿದ್ದವು.[೪೩] ಹೀಗೆ ಪ್ರೌಢಶಾಲೆಗಳು ಪ್ರಮುಖವಾಗಿ ನಗರ ಪ್ರದೇಶಗಳಲ್ಲಿ ಮಾತ್ರವೇ ಮೊದಲು ತೆರೆಯಲಾಯಿತು. ಈ ರೀತಿ ಸ್ಥಾಪನೆಗೊಂಡ ಪ್ರೌಢಶಾಲೆಗಳಲ್ಲಿ ೧೯೫೬ರ ಹೊತ್ತಿಗೆ ಬಳ್ಳಾರಿ ಜಿಲ್ಲೆಯಲ್ಲಿ ಸರ್ಕಾರ, ಖಾಸಗಿ ಸಂಸ್ಥೆ ಹಾಗೂ ಸ್ಥಳೀಯ ಬೋರ್ಡ್‌ಗಳು ಪ್ರೌಢಶಾಲೆಗಳನ್ನು ಬಾಲಕ-ಬಾಲಕಿಯರಿಗಾಗಿ ಕೆಲವೊಂದು ಪ್ರದೇಶದಲ್ಲಿ ತೆರೆದಿದ್ದಾರೆ. ಇಂತಹ ಶಾಲೆಗಳಲ್ಲಿ ಶಿಕ್ಷಣ ಪಡೆಯಲು ಅನುಕೂಲವಾಗುವಂತೆ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ಫೀ ರೀಯಾಯಿತಿಯೊಂದಿಗೆ ಹಾಸ್ಟೆಲ್ ಮತ್ತು ವಿದ್ಯಾರ್ಥಿ ವೇತನದ ಸೌಲಭ್ಯಗಳನ್ನು ಸರ್ಕಾರ ಒದಗಿಸಿಕೊಟ್ಟಿದೆ.

ಮೈಸೂರು ರಾಜ್ಯ ಏಕೀಕರಣಗೊಂಡು ಬಳ್ಳಾರಿ ಜಿಲ್ಲೆಯು ಮೈಸೂರು ರಾಜ್ಯಕ್ಕೆ ಸೇರ್ಪಡೆಯಾಗುವುದರ ಮೂಲಕ ಅದು ಮೈಸೂರು ರಾಜ್ಯದ ಆಡಳಿತಕ್ಕೆ ಒಳಪಟ್ಟಿತು. ಈ ರೀತಿ ಸೇರ್ಪಡೆಗೊಂಡ ಪ್ರದೇಶಗಳು ಮತ್ತು ಹಳೆಯ ಮೈಸೂರು ಪ್ರದೇಶದಲ್ಲಿ ಪ್ರೌಢಶಿಕ್ಷಣ ಪದ್ಧತಿಯಲ್ಲಿ ಭಿನ್ನತೆ ಇದ್ದು ಇದನ್ನು ಹೋಗಲಾಡಿಸಲು ಸರ್ಕಾರ ಕೈಗೊಂಡ ಕ್ರಮದಿಂದ ೧೯೬೨-೬೩ರ ಹೊತ್ತಿಗೆ ಪ್ರೌಢ ಶಾಲಾ ಶಿಕ್ಷಣದಲ್ಲಿ ಏಕರೂಪತೆ ಬಂದು ಪಠ್ಯವಸ್ತು ಮತ್ತು ಪರೀಕ್ಷೆಯು ಎಲ್ಲಾ ಶಾಲೆಗಳಿಗೂ ಒಂದೇ ಆದವು.[೪೪] ಹೀಗೆ ಪ್ರೌಢಶಾಲಾ ಶಿಕ್ಷಣ ಪದ್ಧತಿಯಲ್ಲಿ ಕೆಲವು ಬದಲಾವಣೆಯೊಂದಿಗೆ ೧೯೫೬-೫೭ರಲ್ಲಿ ೫೩೫ ಇದ್ದ ಪ್ರೌಢಶಾಲೆಗಳು ೧೯೬೮-೬೯ರಲ್ಲಿ ೧.೮೩೩ ಆದವು.[೪೫] ಈ ಸಂಖ್ಯೆಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿರುವ ಪ್ರೌಢಶಾಲೆಗಳು ಸಹ ಸೇರಿಕೊಂಡಿವೆ. ೧೯೬೨ರ ಹೊತ್ತಿಗೆ

ಬಳ್ಳಾರಿ ಜಿಲ್ಲೆಯಲ್ಲಿ ಪ್ರೌಢಶಿಕ್ಷಣ ನೀಡುತ್ತಿದ್ದ ಹೈಯರ್ ಎಲಿಮೆಂಟರಿ ಶಾಲೆಗಳು ಒಟ್ಟು ೯೨ ಶಾಲೆಗಳು ಈ ಜಿಲ್ಲೆಯಲ್ಲಿದ್ದವು.[೫೬]

ಹೀಗೆ ಸ್ಥಾಪಿತಗೊಂಡು ನಡೆಯುತ್ತಿದ್ದ ಪ್ರೌಢಶಾಲೆಗಳಲ್ಲಿ ಸರ್ಕಾರಿ ಶಾಲೆಗಳಲ್ಲಿ ಮಾತ್ರವೇ ಹೆಚ್ಚಿನ ಸಂಖ್ಯೆಯಲ್ಲಿ ಲಂಬಾಣಿ ಸಮುದಾಯದ ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದರು. ಖಾಸಗಿ ಸಂಸ್ಥೆಗಳಲ್ಲಿ ಕೆಲವೊಂದು ಫೀ ರೀಯಾಯಿತಿ ಇದ್ದರೂ ಖಾಸಗಿ ಸಂಸ್ಥೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾಭ್ಯಾಸ ನಡೆಸಿಲ್ಲವೆಂದೇ ಹೇಳಬಹುದು. ಅಲ್ಲದೆ ಪ್ರೌಢಶಾಲಾ ಶಿಕ್ಷಣ ಕಲಿಯುತ್ತಿದ್ದವರ ಸಂಖ್ಯೆ ಬಹಳ ಕಡಿಮೆ. ಕೇವಲ ಪ್ರಾಥಮಿಕ ಶಾಲಾ ಶಿಕ್ಷಣವನ್ನು ಮಾತ್ರವೇ ಹೆಚ್ಚಿನ ಪ್ರಮಾಣದಲ್ಲಿ ಪಡೆಯಲು ಸಾಧ್ಯವಾಗಿದೆ. ಅದಕ್ಕೆ ಅನೇಕ ಕಾರಣಗಳಿದ್ದು, ಸಾಮಾಜಿಕ ಸಂದರ್ಭ, ಬಡತನ, ಅನಾರೋಗ್ಯ, ಮೌಢ್ಯತೆ ಮುಂತಾದವುಗಳು. ಒಟ್ಟಾರೆಯಾಗಿ ಲಂಬಾಣಿ ಸಮುದಾಯದ ಅನೇಕ ವಿದ್ಯಾರ್ಥಿಗಳು ಬಹುಸಂಖ್ಯೆಯಲ್ಲಿ ಪ್ರೌಢ ಶಿಕ್ಷಣವನ್ನು ಪಡೆಯುತ್ತಿರುವುದು ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬರುತ್ತದೆ.

ಸರ್ಕಾರ ಮತ್ತು ಸರ್ಕಾರೇತರ ಸಂಘ ಸಂಸ್ಥೆಗಳು ಶೈಕ್ಷಣಿಕ ಸೇವಾ ಉದ್ದೇಶದಿಂದ ಸ್ಥಾಪಿಸಿದ ಅನೇಕ ಪ್ರೌಢಶಾಲೆಗಳು ನಗರ ಪ್ರದೇಶದಲ್ಲಿ ಮಾತ್ರವಲ್ಲದೇ ಗ್ರಾಮೀಣ ಪ್ರದೇಶದ ಕೆಲವು ಭಾಗಗಳಿಗೂ ವಿಸ್ತರಿಸುತ್ತಾ ಹೋದವು. ಪರಿಣಾಮವಾಗಿ ಬಳ್ಳಾರಿ ಜಿಲ್ಲೆಯಲ್ಲಿ ೧೯೯೯-೨೦೦೦ ಸಾಲಿಗೆ ಒಟ್ಟು ೧೯೯ ಪ್ರೌಢಶಾಲೆಗಳನ್ನು ಸ್ಥಾಪಿಸಲಾಗಿತ್ತು. ಅವುಗಳಲ್ಲಿ ಬಳ್ಳಾರಿ ತಾಲ್ಲೂಕಿನಲ್ಲಿ ೫೦, ಹಡಗಲಿ ೨೨, ಹಗರಿಬೊಮ್ಮನಹಳ್ಳಿ ೨೦, ಹೊಸಪೇಟೆ ೩೭, ಕೂಡ್ಲಿಗಿ ೩೭, ಸಂಡೂರು ೧೭ ಹಾಗೂ ಸಿರಗುಪ್ಪ ತಾಲ್ಲೂಕಿನಲ್ಲಿ ೧೬ ಪ್ರೌಢಶಾಲೆಗಳು ಇರುವುದು ಕಂಡು ಬರುತ್ತದೆ. ಈ ಅಂಕಿ-ಅಂಶಗಳು ಪ್ರೌಢ ಶಾಲಾ ಶಿಕ್ಷಣಕ್ಕೆ ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚಿನ ಮಹತ್ವ ನೀಡಿರುವದನ್ನು ಸೂಚಿಸುತ್ತದೆ. ಈ ರೀತಿ ಸ್ಥಾಪನೆಗೊಂಡ ಶಾಲೆಗಳಲ್ಲಿ ಪ್ರೌಢ ಶಿಕ್ಷಣವನ್ನು ಕಲಿಯಲು ಮುಂದಾದ ಲಂಬಾಣಿಗೆ ಸಮುದಾಯದ ವಿದ್ಯಾರ್ಥಿಗಳು ತಮ್ಮ ಗ್ರಾಮದಲ್ಲಿ ಇಲ್ಲವೇ ಅಕ್ಕಪಕ್ಕದ ಗ್ರಾಮಗಳಲ್ಲಿ ಸ್ಥಾಪಿತಗೊಂಡ ಶಾಲೆಗಳಿಗೆ ಮಾತ್ರವೆ ಅವರ ಪೋಷಕರು ಕಳುಹಿಸಿಕೊಡುತ್ತಾರೆ. ಕೆಲವೊಂದು ಪ್ರದೇಶಗಳಲ್ಲಿ ಹಾಸ್ಟೆಲ್ ಸೌಲಭ್ಯ ಇರುವ ಕಡೆ ಹೆಚ್ಚು ಜನ ತಮ್ಮ ಮಕ್ಕಳನ್ನು ಸೇರಿಸಲು ಇಷ್ಟಪಡುತ್ತಾರೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಬಳ್ಳಾರಿ ಜಿಲ್ಲೆಯಲ್ಲಿ ಮೆಟ್ರಿಕ್‌ಪೂರ್ವ ಬಾಲಕರ ಮತ್ತು ಬಾಲಕಿಯರ ಹಾಸ್ಟೆಲ್‌ಗಳು ಇದ್ದು ಇಂತಹ ಹಾಸ್ಟೆಲ್ ಸೌಲಭ್ಯ ಪಡೆದು ಲಂಬಾಣಿಗರು ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಕಲಿಯಲು ಮುಂದಾಗಿದ್ದಾರೆ. ಅಂತಹ ಹಾಸ್ಟೆಲ್‌ಗಳಲ್ಲಿ ಸಿರಗುಪ್ಪ ಮತ್ತು ಸಂಡೂರು ಒಟ್ಟಾರೆ ಹೆಚ್ಚಿನ ಪ್ರಮಾಣದಲ್ಲಿ ಲಂಬಾಣಿ ಸಮುದಾಯದ ವಿದ್ಯಾರ್ಥಿಗಳು ಪ್ರೌಢಶಾಲಾ ಶಿಕ್ಷಣ ಪಡೆಯುತ್ತಿದಾರೆ.

೨೦೧೨-೧೩ರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಸರ್ಕಾರಿ ೧೬೭, ಸರ್ಕಾರಿ ಅನುದಾನಿತ ೮೩, ಅನುದಾನ ರಹಿತ ೧೯೬, ಒಟ್ಟು ೪೪೬; ಪ್ರೌಢ ಶಾಲೆಗಳಿದ್ದು ಅವುಗಳಲ್ಲಿ ಬಳ್ಳಾರಿ ತಾಲ್ಲೂಕಿನ ಪೂರ್ವಭಾಗದಲ್ಲಿ ಸರ್ಕಾರಿ ೨೫, ಸರ್ಕಾರಿ ಅನುದಾನಿತ ೦೫, ಅನುದಾನ ರಹಿತ ೨೬, ಒಟ್ಟು ೫೬; ಬಳ್ಳಾರಿ ತಾಲ್ಲೂಕಿನ ಪಶ್ಚಿಮಭಾಗದಲ್ಲಿ

ಸರ್ಕಾರಿ ೧೮, ಸರ್ಕಾರಿ ಅನುದಾನಿತ ೧೫, ಅನುದಾನ ರಹಿತ ೪೦, ಒಟ್ಟು ೭೩; ಹೂವಿನ ಹಡಗಲಿ ಸರ್ಕಾರಿ ೨೫, ಸರ್ಕಾರಿ ಅನುದಾನಿತ ೬, ಅನುದಾನ ರಹಿತ ೧೨, ಒಟ್ಟು ೪೩; ಹಗರಿಬೊಮ್ಮನಹಳ್ಳಿ ಸರ್ಕಾರಿ ೧೮, ಅನುದಾನಿತ ೧೨, ಅನುದಾನ ರಹಿತ ೧೭, ಒಟ್ಟು ೪೭; ಹೊಸಪೇಟೆ ಸರ್ಕಾರಿ ೨೧, ಅನುದಾನಿತ ೧೧, ಅನುದಾನ ರಹಿತ ೫೫, ಒಟ್ಟು ೮೭; ಸಂಡೂರು ಸರ್ಕಾರಿ ೧೬, ಅನುದಾನಿತ ೧೦, ಅನುದಾನ ರಹಿತ ೧೪, ಒಟ್ಟು ೪೦; ಕೂಡ್ಲಿಗಿ ಸರ್ಕಾರಿ ೨೫, ಅನುದಾನಿತ ೨೨, ಅನುದಾನ ರಹಿತ ೧೬, ಒಟ್ಟು ೬೩; ಹಾಗೂ ಸಿರಗುಪ್ಪ ಸರ್ಕಾರಿ ೧೯, ಅನುದಾನಿತ ೨, ಅನುದಾನ ರಹಿತ ೧೬, ಒಟ್ಟು ೩೭; ಪ್ರೌಢಶಾಲೆಗಳು ಇರುವುದು ಕಂಡುಬರುತ್ತದೆ.[೪೭] ಈ ಶಾಲೆಗಳಲ್ಲಿ ಲಂಬಾಣಿ ಸಮುದಾಯದ ಬಾಲಕ ಬಾಲಕಿಯರು ವಿದ್ಯಾಭ್ಯಾಸ ಮಾಡುತ್ತಿರುವುದು ಕಂಡು ಬರುತ್ತದೆ.

ಗ್ರಾಮೀಣ ಪ್ರದೇಶದಲ್ಲಿ ಮಾತ್ರವಲ್ಲದೇ ಪಟ್ಟಣ ಪ್ರದೇಶದಲ್ಲಿ ಅನೇಕ ಲಂಬಾಣಿಗರು ತಮ್ಮ ಮಕ್ಕಳನ್ನು ವಿದ್ಯಾಭ್ಯಾಸ ಮಾಡಲು ತೊಡಗಿಸಿದ್ದಾರೆ. ಅವರಲ್ಲಿ ಮಧ್ಯಮ ವರ್ಗದ ಲಂಬಾಣಿ ಸಮುದಾಯಗಳೇ ಹೆಚ್ಚಿನ ಪ್ರಮಾಣದಲ್ಲಿರುತ್ತಾರೆ. ಏಕೆಂದರೆ ಪಟ್ಟಣ ಪ್ರದೇಶದಲ್ಲಿ ನೆಲೆಸಿರುವ ವಿದ್ಯಾರ್ಥಿಗಳಿಗೆ ಹಾಸ್ಟೆಲ್ ಸೌಲಭ್ಯ ಇಲ್ಲದಿರುವುದು ಒಂದು ಪ್ರಮುಖ ಕಾರಣ ಎನ್ನಬಹುದಾಗಿದೆ. ಇದರಿಂದಾಗಿ ಪಟ್ಟಣ ಪ್ರದೇಶದಲ್ಲಿ ಬಡತನದಿಂದ ನರಳುತ್ತಿರುವ ಈ ಸಮುದಾಯದ ಅನೇಕರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುವುದರ ಬದಲು ದುಡಿಮೆಗೆ ಕಳುಹಿಸುತ್ತಾರೆ. ಅದರಿಂದ ದಿನನಿತ್ಯದ ಜೀವನ ನಿರ್ವಹಣೆಗೆ ಹೆಚ್ಚು ಸಹಾಯವಾಗುತ್ತದೆ ಎಂಬ ದೃಷ್ಟಿ ಅವರದು. ಇನ್ನು ಅನೇಕ ಅಂಶಗಳು ಇವರು ಶಿಕ್ಷಣ ಪಡೆಯಲು ಅಡ್ಡಿಯಾದರೂ ಪ್ರೌಢ ಶಿಕ್ಷಣಕ್ಕೆ ಪ್ರಾಥಮಿಕ ಶಾಲೆಗಳ ಸಂಖ್ಯೆಗಿಂತ ಕಡಿಮೆಯಾಗಿದೆ. ಜನ ಸಂಖ್ಯಾ ದೃಷ್ಟಿಯಿಂದ ನೋಡಿದರೆ ಈಗ ಕಲಿಯುತ್ತಿರುವವರ ಸಂಖ್ಯೆ ತುಂಬಾ ಕಡಿಮೆಯೇ. ಇನ್ನು ಹೆಚ್ಚಿನ ರೀತಿಯಲ್ಲಿ ಸರ್ಕಾರ, ಪೋಷಕರು ಹಾಗೂ ಸಂಘ ಸಂಸ್ಥೆಗಳು ಪ್ರಯತ್ನ ಮಾಡಿದರೆ ಪ್ರೌಢ ಶಾಲಾ ಶಿಕ್ಷಣದಲ್ಲಿ ಈ ಸಮುದಾಯ ಹೆಚ್ಚಿನ ಪ್ರಗತಿ ಸಾಧಿಸಲು ಸಾಧ್ಯವಾಗುತ್ತದೆ.

**ಕಾಲೇಜು ಶಿಕ್ಷಣ ಮತ್ತು ಲಂಬಾಣಿಗರು**

ಬಳ್ಳಾರಿ ಜಿಲ್ಲೆಯಲ್ಲಿ ಕಾಲೇಜು ಶಿಕ್ಷಣಕ್ಕೆ ಹೆಚ್ಚು ಮಹತ್ವ ನೀಡಿ ಹೆಚ್ಚಿನ ಸಂಖ್ಯೆಯಲ್ಲಿ ಸರ್ಕಾರ ಮತ್ತು ಖಾಸಗಿಯವರು ತೆರೆಯಲು ಆರಂಭಿಸಿದ್ದು ೭೦ರ ದಶಕದ ಕೊನೆಯಲ್ಲಿ. ಅಲ್ಲಿಯವರೆಗೆ ಕಾಲೇಜು ಶಿಕ್ಷಣ ನೀಡುತ್ತಿದ್ದ ಕಾಲೇಜುಗಳ ಸಂಖ್ಯೆ ತುಂಬಾ ಕಡಿಮೆ. ದಿನಾಂಕ ೧. ೧೧. ೧೯೫೬ರ ಪೂರ್ವ ಮೈಸೂರು ರಾಜ್ಯದ ೧೦ ಜಿಲ್ಲೆಗಳಲ್ಲಿ ವಿಶ್ವವಿದ್ಯಾನಿಲಯದ ಕಾಲೇಜು ಮತ್ತು ಸಂಸ್ಥೆಗಳು ಮೊದಲನೆಯದಾಗಿ ಸಾಮಾನ್ಯ ವಿದ್ಯಾಭ್ಯಾಸದ ಪದವೀಧರ ದರ್ಜೆ ಸಂಸ್ಥೆಗಳು ೮ ಪುರುಷರಿಗೆ, ೩ ಮಹಿಳೆಯರಿಗೆ, ಇಂಟರ್ ಮಿಡಿಯಟ್‌ದರ್ಜೆ ೧೦ ಪುರುಷರಿಗೆ, ಮಹಿಳೆಯರಿಗೆ ಇಲ್ಲ. ಎರಡನೆಯದಾಗಿ ಉದ್ಯೋಗ ಮತ್ತು ವಿಶೇಷ ರೀತಿಯ ವಿದ್ಯಾಭ್ಯಾಸದ ಕಾಲೇಜುಗಳು ಒಟ್ಟು, ೧೨ ಬಾಲಕರಿಗೆ, ೧ ಮಹಿಳೆಯರಿಗೆ ಮಾತ್ರವೇ ಇದ್ದವು.[೪೮] ಈ ಹಿನ್ನೆಲೆಯಲ್ಲಿ ಪೂರ್ವದ ಹತ್ತು ಜಿಲ್ಲೆಗಳಲ್ಲಿ ಬಳ್ಳಾರಿ ಜಿಲ್ಲೆಗಳು ಸೇರಿಕೊಂಡಿವೆ.

೨೦೧೨-೧೩ನೇ ಸಾಲಿನಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ೪೦ ಸರ್ಕಾರಿ, ೧೪ ಅನುದಾನಿತ, ೭೪ ಅನುದಾನ ರಹಿತ, ಒಟ್ಟು ೧೨೮; ಪದವಿಪೂರ್ವ ಕಾಲೇಜುಗಳಿದ್ದು ಬಳ್ಳಾರಿ ತಾಲ್ಲೂಕಿನಲ್ಲಿ ೯ ಸರ್ಕಾರಿ, ೬ ಅನುದಾನಿತ, ೨೩ ಅನುದಾನ ರಹಿತ, ಒಟ್ಟು ೩೮; ಹೂವಿನ ಹಡಗಲಿ ೮ ಸರ್ಕಾರಿ, ೧ ಅನುದಾನಿತ, ೩ ಅನುದಾನ ರಹಿತ, ಒಟ್ಟು ೧೨; ಹಗರಿಬೊಮ್ಮನಹಳ್ಳಿ ೫ ಸರ್ಕಾರಿ, ೧ ಅನುದಾನಿತ, ೬ ಅನುದಾನ ರಹಿತ, ಒಟ್ಟು ೧೧; ಹೊಸಪೇಟೆ ೮ ಸರ್ಕಾರಿ, ೧ ಅನುದಾನಿತ, ೧೬ ಅನುದಾನ ರಹಿತ, ಒಟ್ಟು ೨೩; ಸೊಂಡೂರು ೪ ಸರ್ಕಾರಿ, ೧ ಅನುದಾನಿತ, ೫ ಅನುದಾನ ರಹಿತ, ಒಟ್ಟು ೧೦; ಕೂಡ್ಲಿಗಿ ೩ ಸರ್ಕಾರಿ, ೪ ಅನುದಾನಿತ, ೭ ಅನುದಾನ ರಹಿತ, ಒಟ್ಟು ೨೩; ಹಾಗೂ ಸಿರಗುಪ್ಪ ೩ ಸರ್ಕಾರಿ, ೧ ಅನುದಾನಿತ, ೭ ಅನುದಾನ ರಹಿತ, ಒಟ್ಟು ೧೧; ಪದವಿಪೂರ್ವ ಕಾಲೇಜು ಇರುವುದು ಕಂಡು ಬರುತ್ತದೆ.[೪೪] ಇವುಗಳು ಕಾಲೇಜು ಶಿಕ್ಷಣ ಪಡೆಯಲು ಅವಕಾಶ ಮಾಡಿಕೊಟ್ಟಿವೆ.

ಸರ್ಕಾರವು ಕಾಲೇಜು ಶಿಕ್ಷಣ ಪಡೆಯುತ್ತಿರುವ ಪರಿಶಿಷ್ಟ ಜಾತಿ ೧ ವರ್ಗದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ, ಕೆಲವು ಮುಖ್ಯ ಭಾಗಗಳಲ್ಲಿ ಹಾಸ್ಟೆಲ್ ವ್ಯವಸ್ಥೆ ಮಾಡಿಕೊಟ್ಟಿರುವುದರಿಂದ ಈ ಸೌಲಭ್ಯ ಪಡೆದಿರುವ ಅನೇಕರು ಕಂಡುಬರುತ್ತಾರಾದರೂ ಅವರ ಸಂಖ್ಯೆ ಕಡಿಮೆ. ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ೭ ಸರ್ಕಾರಿ ಕಾಲೇಜ್ ಮತ್ತು ೩ ಅನುದಾನಿತ ಕಾಲೇಜು, ೭ ಅನುದಾನ ರಹಿತ ಕಾಲೇಜುಗಳಿದ್ದು ಈ ಕಾಲೇಜುಗಳಲ್ಲಿ ಲಂಬಾಣಿಗರ ಸಮುದಾಯದ ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿರುವುದು ಕಂಡುಬರುತ್ತದೆ.

## ಉನ್ನತ ಶಿಕ್ಷಣ ಮತ್ತು ಲಂಬಾಣಿಗರು

ಸ್ವಾತಂತ್ರ್ಯಪೂರ್ವದಲ್ಲಿ ಆರಂಭಗೊಂಡ ಕಾಲೇಜು ಶಿಕ್ಷಣ ಸ್ನಾತಕೋತ್ತರ ಶಿಕ್ಷಣಕ್ಕೆ ದಾರಿ ಹಾಕಿಕೊಟ್ಟಿತು. ಮೈಸೂರು ವಿಶ್ವವಿದ್ಯಾನಿಲಯದ (೧೯೧೬) ಸ್ಥಾಪನೆ ಕಾಲೇಜು ಮತ್ತು ಸ್ನಾತಕೋತ್ತರ ಶಿಕ್ಷಣಕ್ಕೆ ಪ್ರೇರಣೆಯಾಗಿತ್ತು. ಇದರ ಆಶ್ರಯದಲ್ಲಿ ಆರಂಭಗೊಂಡ ಉನ್ನತ ಶಿಕ್ಷಣವು ಹೆಚ್ಚು ಮಹತ್ವ ಪಡೆದಿದ್ದು ಸ್ವಾತಂತ್ರ್ಯನಂತರ ಸಂದರ್ಭದಲ್ಲಿಯೇ ಕೆಲವು ವಿಷಯಗಳ ಮೇಲೆ ಸ್ನಾತಕೋತ್ತರ ಶಿಕ್ಷಣ ನೀಡಲು ಆರಂಭಿಸಿತು. ಮೊದಲು ಈ ವಿಶ್ವವಿದ್ಯಾಲಯವೊಂದೇ ಉನ್ನತ ಶಿಕ್ಷಣ ನೀಡುವ ಕೇಂದ್ರವಾಗಿದ್ದು ಅನಂತರ ವಿವಿಧ ಭಾಗಗಳಲ್ಲಿ ಅನೇಕ ವಿಶ್ವವಿದ್ಯಾಲಯಗಳು ಅಸ್ತಿತ್ವಕ್ಕೆ ಬಂದವು. ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾಲಯ (೧೯೫೨), ಬೆಂಗಳೂರು ವಿಶ್ವವಿದ್ಯಾಲಯ (೧೯೬೪), ಕೃಷಿ ವಿಶ್ವವಿದ್ಯಾಲಯ (೧೯೬೪-೬೫), ಗುಲ್ಬರ್ಗಾ ವಿಶ್ವವಿದ್ಯಾಲಯ (೧೯೮೦), ಮಂಗಳೂರು ವಿಶ್ವವಿದ್ಯಾಲಯ (೧೯೮೦), ಕುವೆಂಪು ವಿಶ್ವವಿದ್ಯಾಲಯ (೧೯೮೯-೯೦), ಹಂಪಿ ಕನ್ನಡ ವಿಶ್ವವಿದ್ಯಾಲಯ (೧೯೯೧-೯೨), ದಾವಣಗೆರೆ ವಿಶ್ವವಿದ್ಯಾಲಯ (೨೦೧೦), ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯ (೨೦೧೦), ಜನಪದ ವಿಶ್ವವಿದ್ಯಾಲಯ ಹಾಗೂ ಸಂಸ್ಕೃತ ವಿಶ್ವವಿದ್ಯಾಲಯ (೨೦೧೦) ಹಾಗೂ ವಿಜಾಪುರ ಮಹಿಳಾ ವಿಶ್ವವಿದ್ಯಾಲಯ (೨೦೧೦)ಗಳು ಅವಕಾಶ ಮಾಡಿಕೊಟ್ಟವು. ಇಂತಹ ಅವಕಾಶವನ್ನು ಬಳಸಿಕೊಂಡು ಉನ್ನತ ಶಿಕ್ಷಣವನ್ನು ಬಳ್ಳಾರಿ ಜಿಲ್ಲೆಯಲ್ಲಿ ನೆಲೆಸಿರುವ ಲಂಬಾಣಿ ಸಮುದಾಯವು ಯಾವ ಬಗೆಯಲ್ಲಿ ಉನ್ನತ ಶಿಕ್ಷಣದಲ್ಲಿ ಪ್ರಗತಿಯನ್ನು ಸಾಧಿಸಿದೆ ಎಂದು ತಿಳಿಯಲು ಇಲ್ಲಿ ಪ್ರಯತ್ನಿಸಲಾಗಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಸ್ನಾತಕೋತ್ತರ ಪದವಿ ಶಿಕ್ಷಣ ಪಡೆಯಲು ಈ ಸಮುದಾಯ ಮುಂದಾಗಿದ್ದು ೨೦ರ ದಶಕದಲ್ಲಿ. ಈ ಅವಧಿಯಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದವರು

ಬಳ್ಳಾರಿ, ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ, ಸಂಡೂರು, ಸಿರುಗುಪ್ಪ, ಹಡಗಲಿ ಮುಂತಾದ ಕಡೆಗಳಲ್ಲಿ ಕೆಲವು ಕಂಡುಬರುತ್ತಾರೆ. ಮೈಸೂರಿನಲ್ಲಿ ಹಾಸ್ಟೆಲ್ ವ್ಯವಸ್ಥೆಯನ್ನು ಹೊಂದಿದ್ದರ ಪರಿಣಾಮವಾಗಿ ಇವರು ಅಲ್ಲಿ ಹೋಗಿ ಶಿಕ್ಷಣ ಪಡೆಯಲು ಅವಕಾಶವಾಯಿತು. ಈ ಸೌಲಭ್ಯ ಪಡೆದು ಶಿಕ್ಷಣ ಪಡೆದವರು ಈಗ ಕೇವಲ ಬೆರಳೆಣಿಕೆ ಮಾತ್ರ. ಇಂದು ಅನೇಕರು ಮೈಸೂರು, ಬೆಂಗಳೂರು, ಶಿವಮೊಗ್ಗ, ಗುಲ್ಬರ್ಗ, ಕುವೆಂಪು ವಿಶ್ವವಿದ್ಯಾಲಯ ಹಾಗೂ ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಉನ್ನತ ಶಿಕ್ಷಣ ಪಡೆದು ಹೊರಬಂದಿದ್ದಾರೆ. ಕನ್ನಡ, ಚರಿತ್ರೆ, ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ಇಂಗ್ಲೀಷ್ ಮುಂತಾದ ವಿಷಯಗಳ ಮೇಲೆ ಪದವಿ ಪಡೆದವರು ಬಳ್ಳಾರಿಯ ಎಲ್ಲಾ ತಾಲ್ಲೂಕುಗಳಲ್ಲಿಯೂ ಕಂಡುಬರುತ್ತಾರೆ. ಹೊರ ರಾಜ್ಯಕ್ಕೆ ಹೋಗಿ ಶಿವಾಜಿ ವಿಶ್ವವಿದ್ಯಾಲಯದಲ್ಲಿ ಸ್ನಾತಕೋತ್ತರ ಶಿಕ್ಷಣ ಪಡೆದ ೨೦ಕ್ಕೂ ಹೆಚ್ಚು ಜನರು ಈ ಸಮುದಾಯದವರು ಕಂಡುಬರುತ್ತಾರೆ. ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯವು ಸಂಡೂರಿನ ಬಳಿ ನಂದಿಹಳ್ಳಿಯಲ್ಲಿ ಸ್ಥಾಪನೆ ಮಾಡಿದ ಸ್ನಾತಕೋತ್ತರ ಕೇಂದ್ರದ ಅನುಕೂಲತೆಯಿಂದಾಗಿ ಈ ಸಮುದಾಯದವರು ೩೦ಕ್ಕೂ ಹೆಚ್ಚು ಜನರು ಕನ್ನಡ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆದಿರುವುದು ಕಂಡುಬರುತ್ತದೆ.

ಉನ್ನತ ಶಿಕ್ಷಣ ಮಾತ್ರವಲ್ಲದೇ ಅನೇಕ ವೃತ್ತಿಪರ ಕೋರ್ಸ್‌ಗಳ ಶಿಕ್ಷಣವನ್ನು ಸಹ ಈ ಸಮುದಾಯದವರು ಪಡೆದುಕೊಂಡಿರುವುದು ಕಂಡುಬರುತ್ತದೆ. ೨೦೧೫-೧೬ನೇ ಅವಧಿಯಲ್ಲಿ ಬಿ.ಇಡಿ, ಡಿ.ಇಡಿ, ಇಂಜಿನಿಯರಿಂಗ್, ಡಿಪ್ಲೋಮಾ, ಎಂ.ಬಿ.ಬಿ.ಎಸ್ ಕೋರ್ಸ್‌ಗಳಿಗೆ ಪ್ರವೇಶ ಪಡೆಯಲು ಸಿಂಧುತ್ವ ಪ್ರಮಾಣಕ್ಕೆ ಅರ್ಜಿಸಲ್ಲಿಸಿದವರು ಲಂಬಾಣಿ ಸಮುದಾಯದವರು ಕಂಡುಬರುತ್ತಾರೆ.

### ೮.೩ ಲಂಬಾಣಿಗರ ಶೈಕ್ಷಣಿಕ ಅಭಿವೃದ್ಧಿಯಲ್ಲಿ ವಿದ್ಯಾರ್ಥಿನಿಲಯಗಳ ಪಾತ್ರ

ಲಂಬಾಣಿ ಸಮುದಾಯವು ಶೈಕ್ಷಣಿಕ ಪ್ರಗತಿಯು ಸಾಧಿಸುವಲ್ಲಿ ಸರ್ಕಾರ ಮತ್ತು ಸರ್ಕಾರೇತರ ಸಂಘ ಸಂಸ್ಥೆಗಳು ಸ್ಥಾಪಿಸಿದ ವಿದ್ಯಾರ್ಥಿನಿಲಯಗಳ ಪಾತ್ರ ಗಮನಾರ್ಹ. ಆರ್ಥಿಕವಾಗಿ ತೀರ ಹಿಂದುಳಿದ ಕಡುಬಡತನದಲ್ಲಿ ಬದುಕುತ್ತಿದ್ದ ಕೆಳ ಜಾತಿಗಳಿಗೆ ತಮ್ಮ ಮಕ್ಕಳನ್ನು ಶಿಕ್ಷಣಕ್ಕೆ ಕಳುಹಿಸಲು ಪ್ರೇರಣೆ ಹಾಸ್ಟೆಲ್‌ಗಳಾಗಿವೆ. ಅಸ್ಪೃಶ್ಯರಿಗೆ ಶಿಕ್ಷಣ ಕಲಿಯಲು ಅವಕಾಶ ನೀಡಿದ ನಂತರದಲ್ಲಿ ಇವರಿಗಾಗಿ ಪಂಚಮಶಾಲೆಗಳು ಆರಂಭಗೊಂಡವು. ಆದರೆ ಇಂತಹ ಶಾಲೆಗಳು ಬೆರಳೆಣಿಕೆಯಷ್ಟು ಮಾತ್ರವೇ ಇದ್ದವು. ಈ ಶಾಲೆಗಳು ಸ್ಥಾಪಿತಗೊಂಡ ಪ್ರದೇಶದಲ್ಲಿ ನೆಲೆಸಿರುವ ಈ ವರ್ಗದ ಮಕ್ಕಳು ವಿದ್ಯಾಭ್ಯಾಸ ಮಾಡಲು ಮುಂದಾದರು. ಆದರೆ ಉಳಿದ ಪ್ರದೇಶಗಳಲ್ಲಿ ನೆಲೆಸಿರುವವರು ತಮ್ಮ ಮಕ್ಕಳನ್ನು ಪರಸ್ಥಳಕ್ಕೆ ಕಳುಹಿಸಿ ವಿದ್ಯಾಭ್ಯಾಸ ಮಾಡಿಸಲು ಸಾಧ್ಯವಾಗುತ್ತಿರಲಿಲ್ಲ; ಅದಕ್ಕೆ ಕಾರಣವೂ ಇತ್ತು. ಸರ್ಕಾರ ಇವರಿಗೆ ಶಿಕ್ಷಣ ಕಲಿಯಲು ಅನೇಕ ರಿಯಾಯಿತಿಗಳನ್ನು ನೀಡಿದ್ದರೂ. ಬೇರೆ ಸ್ಥಳಕ್ಕೆ ತಮ್ಮ ಮಕ್ಕಳನ್ನು ಕಳುಹಿಸುವಷ್ಟು ಆರ್ಥಿಕ ಸಾಮರ್ಥ್ಯದ ಜೊತೆಯಲ್ಲಿ ಸಾಮಾಜಿಕ ಸ್ಥಿತಿ ಇನ್ನೂ ಸುಧಾರಿಸಿರಲಿಲ್ಲ. ಈ ಪರಿಸ್ಥಿತಿಯನ್ನು ಮನಗಂಡ ಜಾಗೃತ ಅಸ್ಪೃಶ್ಯರು ಸರ್ಕಾರಕ್ಕೆ ಮನವಿ ನೀಡಿ ಇವರಿಗಾಗಿ ಪ್ರತ್ಯೇಕ ಹಾಸ್ಟೆಲ್ ನಡೆಸಲು ಕೇಳಿಕೊಂಡಾಗ ಪ್ರತ್ಯೇಕ ಹಾಸ್ಟೆಲ್‌ಗಳು ಆರಂಭಗೊಂಡವು. ಅಲ್ಲಿ ಊಟ, ಬಟ್ಟೆ, ವಸತಿ ವ್ಯವಸ್ಥೆಯನ್ನು ನೀಡಲು ಮುಂದಾದಾಗ ಈ ವರ್ಗದ ಜನರು ತಮ್ಮ ಮಕ್ಕಳನ್ನೂ ಶಿಕ್ಷಣ

ಕಲಿಯಲು ಹಾಸ್ಟೆಲ್‌ಗೆ ಸೇರಿಸಲು ಮುಂದಾದರು. ಅಲ್ಲಿಂದ ಹಾಸ್ಟೆಲ್‌ಗಳ ಚರಿತ್ರೆ ಆರಂಭಗೊಳ್ಳುತ್ತದೆ. ಹಿಂದೊಮ್ಮೆ ಈ ವರ್ಗದ ಮಕ್ಕಳಿಗಾಗಿಯೇ ಸ್ಥಾಪಿತಗೊಂಡ ಸಮುದಾಯ ಹಾಸ್ಟೆಲ್‌ಗಳು ಇಂದು ಸಾರ್ವಜನಿಕ ಹಾಸ್ಟೆಲ್‌ಗಳಾಗಿ ಪರಿವರ್ತನೆಗೊಂಡು ಆ ಹಾಸ್ಟೆಲ್‌ನ ಸಂಖ್ಯೆಯಲ್ಲಿ ಶೇ ೭೫ರಷ್ಟು ಪರಿಶಿಷ್ಟ ಜಾತಿಯವರಿಗೆ ಉಳಿದ ಶೇ ೨೫ರಷ್ಟು ಇತರೆಯವರಿಗೆ ನೀಡಲಾಗುತ್ತಿದೆ. ಆದರೆ ಇಂದಿಗೂ ಅಂತಹ ಹಾಸ್ಟೆಲ್‌ಗಳಲ್ಲಿ ಲಂಬಾಣಿಗರೇ ಹೆಚ್ಚಿನ ಸಂಖ್ಯೆಯಲ್ಲಿ ಇರುವುದು ಕಂಡುಬರುತ್ತದೆ. ಸ್ವಾತಂತ್ರ್ಯಪೂರ್ವದಲ್ಲಿ ಕೇವಲ ಬೆರಳೆಣಿಕೆಯಷ್ಟು ವಿದ್ಯಾರ್ಥಿನಿಲಯಗಳು ಇದ್ದು ಸ್ವಾತಂತ್ರ್ಯನಂತರದ ಸುಮಾರು ೭೦ರ ದಶಕದವರೆಗೂ ಅವುಗಳ ಸಂಖ್ಯೆ ಕಡಿಮೆ. ಅನಂತರದಲ್ಲಿ ಪರಿಶಿಷ್ಟ ಜಾತಿ ಮತ್ತು ಬುಡಕಟ್ಟು ಜನರ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಡಲು ಅನೇಕ ವಿದ್ಯಾರ್ಥಿನಿಲಯಗಳು ಸರ್ಕಾರ ಮತ್ತು ಖಾಸಗಿಯವರ ಪ್ರಯತ್ನದಿಂದ ಹೆಚ್ಚು ಸ್ಥಾಪಿತಗೊಂಡವು. ಇಂತಹ ಪ್ರಯತ್ನಗಳ ಫಲವಾಗಿ ಇಂದು ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿ ನಿಲಯಗಳು ನಗರ ಪ್ರದೇಶಗಳಲ್ಲಿ ಮಾತ್ರವಲ್ಲದೇ ಗ್ರಾಮೀಣ ಪ್ರದೇಶದಲ್ಲಿಯೂ ಸ್ಥಾಪಿತಗೊಂಡಿವೆ. ಈ ರೀತಿಯ ಹಾಸ್ಟೆಲ್‌ಗಳು ಈ ಭಾಗದಲ್ಲಿ ಪರಿಶಿಷ್ಟ ಜಾತಿಯ ಇತರೆ ಸಮುದಾಯಗಳಿಗಿಂತಲೂ ಹೆಚ್ಚಿನ ಸಂಖ್ಯೆಯ ನೆಲೆಸಿರುವ ಲಂಬಾಣಿ ಸಮುದಾಯು ಶೈಕ್ಷಣಿಕ ಪ್ರಗತಿಯನ್ನು ಸಾಧಿಸುವಲ್ಲಿ ಪ್ರಮುಖ ಪಾತ್ರವಹಿಸಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಸ್ಥಾಪನೆಗೊಂಡ ವಿದ್ಯಾರ್ಥಿನಿಲಯಗಳನ್ನು ಎರಡು ಭಾಗವಾಗಿ ವಿಂಗಡಿಸಿ ಇಲ್ಲಿ ಚರ್ಚಿಸಲಾಗಿದೆ.

**ವಸಾಹತು ಕಾಲಘಟ್ಟದಲ್ಲಿ ಸ್ಥಾಪನೆಗೊಂಡ ವಿದ್ಯಾರ್ಥಿ ನಿಲಯಗಳು**

ಸ್ವಾತಂತ್ರ್ಯಪೂರ್ವದಲ್ಲಿ ಅಥವಾ ವಸಾಹತು ಕಾಲಘಟ್ಟದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಜಾಗೃತ ಲಂಬಾಣಿ ಸಮುದಾಯದ ಮುಖಂಡರು ಇತರೆ ಸಮುದಾಯದ ಮುಖಂಡರ ಸಹಕಾರದೊಂದಿಗೆ ಹಾಸ್ಟೆಲ್ ಸ್ಥಾಪನೆ ಮಾಡಿರುವುದು ಕಂಡುಬರುತ್ತದೆ. ೧೯೪೪ ರಲ್ಲಿ ಕೆ. ವೆಂಕಟಸ್ವಾಮಿ ಹಾಗೂ ಇಜಾರಿ ನರಸಪ್ಪನವರ ಸಹಾಯದಿಂದ ಎಂ. ಲೋಪಸಾಯ್ಯ ಮತ್ತು ತೌಡೂರಿನ ಜೋಜ್ಯಾನಾಯ್ಕ್ ಇಬ್ಬರು ಜೊತೆಯಾಗಿ ಕೊಟ್ಟೂರಿನಲ್ಲಿ ಲಂಬಾಣಿ ಹಾಸ್ಟೆಲ್ ತೆರೆದರು. ತದನಂತರ ಹರಪನಹಳ್ಳಿಯಲ್ಲಿ ಲಂಬಾಣಿ ಹಾಸ್ಟೆಲ್ ತೆರೆದರು.[೧೦] ಈ ರೀತಿ ಹಾಸ್ಟೆಲ್ ಸ್ಥಾಪನೆಯು ಈ ಜಿಲ್ಲೆಯಲ್ಲಿ ಲಂಬಾಣಿಗರ ಸಮುದಾಯದ ಅನೇಕರು ಶಿಕ್ಷಣ ಕಲಿಯುವ ಅನುಕೂಲ ಮಾಡಿಕೊಟ್ಟಿದೆ. ಈ ಜಿಲ್ಲೆಯಲ್ಲಿ ಲಂಬಾಣಿಗರಿಗಾಗಿ ತೆರೆದ ಮೊದಲ ಹಾಸ್ಟೆಲ್ ಇದು. ಸ್ವಾತಂತ್ರ್ಯ ಪೂರ್ವದ ಬಳ್ಳಾರಿಯು ಮದ್ರಾಸ್ ಪ್ರಾಂತ್ಯದಲ್ಲಿದ್ದು ಸತ್ಯವಂತರಾವ್ ಮಲೆಬೆನ್ನೂರು ಎಂಬುವರು ಬಳ್ಳಾರಿ ನಗರ ಮಿಲ್ಲರ್ ಪೇಟೆಯಲ್ಲಿ ೧೯೨೯ರಲ್ಲಿ ಹರಿಜನ ಬಾಲಕಿಯರಿಗಾಗಿ ಹಾಸ್ಟೆಲ್ ಸ್ಥಾಪಿಸಿದರೆ[೧೧] ಈದರಲ್ಲಿ ಲಂಬಾಣಿ ಬಾಲಕಿಯರಿಗೂ ಹಾಸ್ಟೆಲ್‌ನಲ್ಲಿ ಪ್ರವೇಶ ಕಲ್ಪಿಸಲಾಗಿತ್ತು. ಬಳ್ಳಾರಿ ಜಿಲ್ಲೆಯಲ್ಲಿ ಈ ವರ್ಗದ ವಿದ್ಯಾರ್ಥಿಗಳಿಗೆ ಅದರಲ್ಲೂ ಮಹಿಳೆಯರಿಗಾಗಿ ಮೊದಲ ಹಾಸ್ಟೆಲ್ ತೆರೆದಿರುವುದನ್ನು ತಿಳಿಸುತ್ತದೆ. ಈ ರೀತಿಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಸರ್ಕಾರದ ಅನುದಾನದಿಂದ ಲಂಬಾಣಿಗರು ಮತ್ತು ಇತರರ ಸಹಾಯ ಸಹಕಾರದಿಂದ ಅಸ್ಪೃಶ್ಯರು ಶಿಕ್ಷಣ ಕಲಿಯಲು ಅನುಕೂಲವಾಗಿದ್ದರಿಂದ ಈ ಸಂದರ್ಭದಲ್ಲಿ ವಿದ್ಯೆ ಕಲಿತವರ ಸಂಖ್ಯೆಯಲ್ಲಿ ಹೆಚ್ಚಿನ

ಪ್ರಮಾಣದಲ್ಲಿ ಲಂಬಾಣಿಗರು ಇರುವರು. ವಿದ್ಯಾಭ್ಯಾಸ ಮಾಡಲಾಗಿದೆ. ಇದಕ್ಕೆ ಕಾರಣಗಳು ಇಲ್ಲದಿಲ್ಲ. ಆಗ ಈ ಸಮುದಾಯದಲ್ಲಿದ್ದ ಅನಕ್ಷರತೆ, ಮೌಢ್ಯತೆ ತುಂಬಿದ್ದರಿಂದ ಶಿಕ್ಷಣ ಕಲಿತು ಏನಾಗಬೇಕು ಎಂಬ ಅಭಿಪ್ರಾಯ ಇವರಲ್ಲಿತ್ತು. ಅಲ್ಲದೇ ತಮ್ಮ ಮಕ್ಕಳನ್ನು ವಿದ್ಯಾಭ್ಯಾಸಕ್ಕೆ ಕಳುಹಿಸಲು ಆರಂಭಿಸುತ್ತಿದ್ದಂತೆ ಮೇಲು ಜಾತಿಗಳ ವಕ್ರದೃಷ್ಟಿ ಅವರ ಮೇಲೆ ಬೀಳುತ್ತಿತ್ತು. ಈ ಕಾರಣಗಳಿಂದಾಗಿ ಅವರು ಶಿಕ್ಷಣ ಕಲಿಯಲು ತಮ್ಮ ಮಕ್ಕಳನ್ನು ಕಳುಹಿಸಲು ಮುಂದಾಗಲಿಲ್ಲ. ಅದರಲ್ಲಿಯೇ ಕೆಲವರು ತಮ್ಮ ಮಕ್ಕಳನ್ನು ವಿದ್ಯಾಭ್ಯಾಸ ಮಾಡಿಸಲು ಕಳುಹಿಸಿದರು.

ಸ್ವಾತಂತ್ರ್ಯ ಚಳವಳಿಯ ಕಾಲದಲ್ಲಿ ಅದರಲ್ಲೂ 'ಪೂನಾ ಒಪ್ಪಂದ'ದ ನಂತರದಲ್ಲಿ ಅಸ್ಪೃಶ್ಯರ ಬಗ್ಗೆ ಹೆಚ್ಚಿನ ಗಮನಹರಿಸಿ ಅವರ ಅಭಿವೃದ್ಧಿಗೆ ಶ್ರಮಿಸಲು ಗಾಂಧಿ ಮತ್ತು ಕಾಂಗ್ರೆಸ್ ಮುಂದಾಯಿತು. ಅದಕ್ಕೂ ಮೊದಲು ಈ ರಾಜ್ಯದ ರಾಜಧಾನಿ ಬೆಂಗಳೂರಿನಲ್ಲಿ ಆದಿಜಾಂಬವ ವಿದ್ಯಾರ್ಥಿನಿಲಯ ೧೯೩೦ರಲ್ಲಿ ಅಯ್ಯರ್ ಅವರಿಂದ ಆರಂಭಗೊಂಡು ನಂತರ ೧೯೩೪ರಲ್ಲಿ ಗಾಂಧೀಜಿ ಶಿಲಾನ್ಯಾಸ ಮಾಡಿದ ನಂತರ ಬಾಪುರವರ ಹೆಸರನ್ನು ಪಡೆಯಿತು.[೨೮] ಮುಂದೆ ಬಾಪೂಜಿ ವಿದ್ಯಾಸಂಸ್ಥೆಯೆಂದೇ ಹೆಸರಾಗಿದೆ. ಈ ಹಾಸ್ಟೆಲ್‌ನಲ್ಲಿ ಬಳ್ಳಾರಿ ಜಿಲ್ಲೆಯ ಅನೇಕರು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಈ ಹಾಸ್ಟೆಲ್‌ನಲ್ಲಿ ಸೇರಿಕೊಂಡು ವಿದ್ಯಾಭ್ಯಾಸ ಮಾಡಿದ್ದಾರೆ. ಈ ರೀತಿ ಬೆಂಗಳೂರಿನಲ್ಲಿ ಸ್ಥಾಪನೆಗೊಂಡ ಆದಿಜಾಂಬವರ ವಿದ್ಯಾರ್ಥಿನಿಲಯದ ಸ್ಥಾಪನೆ ಕಾಲದಲ್ಲಿಯೇ ಪ್ರತಿ ಜಿಲ್ಲಾ ಕೇಂದ್ರಗಳಲ್ಲಿ (ಮಂಡ್ಯ ಮತ್ತು ಚಿತ್ರದುರ್ಗವನ್ನು ಬಿಟ್ಟು) ೧೯೩೩-೩೪ರ ವೇಳೆಗೆ ಊಟದ ವ್ಯವಸ್ಥೆಯನ್ನು ಹೊಂದಿದ ಒಂದು ಶಾಲೆಯೇ ಅಥವಾ ಸರ್ಕಾರಿ ವಿದ್ಯಾರ್ಥಿ ನಿಲಯವು ಆರಂಭಿಸಲ್ಪಟ್ಟವು.[೨೯] ಇವು ಬೇರೆ ಭಾಗದಲ್ಲಿರುವ ಅನೇಕ ಅಸ್ಪೃಶ್ಯರಿಗೆ ವಿದ್ಯಾಭ್ಯಾಸ ಮಾಡಲು ಅನುಕೂಲ ಮಾಡಿಕೊಟ್ಟವು. ೧೯೩೪ರ ವೇಳೆಯಲ್ಲಿಯೇ ಬಳ್ಳಾರಿ ಜಿಲ್ಲೆಯಲ್ಲಿ ಮತ್ತೊಂದು ಹಾಸ್ಟೆಲ್ ಸ್ಥಾಪನೆಗೊಂಡಿರುವುದು ಕಂಡು ಬರುತ್ತದೆ. ದಾವಣಗೆರೆಯಲ್ಲಿ ಮಹಾತ್ಮಗಾಂಧಿಯವರಿಂದ ೧೯೩೪ರಲ್ಲಿ ಶಂಕು ಸ್ಥಾಪನೆಗೊಂಡು ಮಹಾತ್ಮಾಗಾಂಧಿ ಹಾಸ್ಟೆಲ್ (ಎಂ.ಜಿ ಹಾಸ್ಟೆಲ್) ಎಂದೇ ಖ್ಯಾತಿ ಹೊಂದಿದೆ. ಇದು ಕೂಡ ಈ ಜಿಲ್ಲೆಯಲ್ಲಿ ಲಂಬಾಣಿ ಸಮುದಾಯದವರ ವಿದ್ಯಾಭ್ಯಾಸಕ್ಕೆ ಹೆಚ್ಚು ಅನುಕೂಲ ಮಾಡಿಕೊಟ್ಟಿದೆ. ಈ ರೀತಿಯಲ್ಲಿ ಬಳ್ಳಾರಿ ಜಿಲ್ಲೆಯ ಹಾಸ್ಟೆಲ್‌ಗಳಲ್ಲಿ ವಿದ್ಯಾಭ್ಯಾಸ ಮಾಡಿದ ಅನೇಕರು ಪ್ರಮುಖ ರಾಜಕಾರಣಿಗಳು ಮತ್ತು ಅಧಿಕಾರಿಗಳು ಆಗಿಹೋಗಿದ್ದಾರೆ. ಲಂಬಾಣಿ ಸಮುದಾಯಕ್ಕೆ ಸೇರಿದ ಎಂ. ಲೋಕನಾಯ್ಕ, ಎಂ. ಮುನಿಯನಾಯ್ಕ, ಜೆ.ಎಂ ರತ್ನನಾಯ್ಕ, ಜಗನ್ನನಾಯ್ಕ, ಪೂರ‍್ಯನಾಯ್ಕ ಜೆ.ಎಂ, ತಿಪ್ಪೇಸ್ವಾಮಿ ನಾಯ್ಕ, ಡಿ.ಕೆ ಚಂದ್ರನಾಯ್ಕ, ಪೂರ‍್ಯನಾಯ್ಕ, ಡಕಣನಾಯ್ಕ ಎಸ್ ಮುಂತಾದವರು ಉನ್ನತ ವಿದ್ಯಾಭ್ಯಾಸ ಮಾಡಿದ ಹಾಸ್ಟೆಲ್ ಇದಾಗಿದೆ. ಬೆಂಗಳೂರಿನ ಆದಿಜಾಂಬವ ಹಾಸ್ಟೆಲ್ ಸಹ ಸೇರಿಕೊಂಡು ವಿದ್ಯಾಭ್ಯಾಸ ಮಾಡಿದವರಲ್ಲಿ ಬಳ್ಳಾರಿ ಜಿಲ್ಲೆಯ ಲಂಬಾಣಿಗರನೇಕರು ಇದ್ದಾರೆ.

ಮೈಸೂರು ಪ್ರಾಂತ್ಯದಲ್ಲಿ ನಿಮ್ನ ವರ್ಗದವರ ಕಲ್ಯಾಣಕ್ಕೋಸ್ಕರ ಒಂದು ಸಲಹಾ ಸಮಿತಿ ಸಾರ್ವಜನಿಕ ಶಿಕ್ಷಣ ಇಲಾಖೆಯ ನಿರ್ದೇಶಕರ ಅಧ್ಯಕ್ಷತೆಯಲ್ಲಿ ೧೯೩೫ರಲ್ಲಿ ಅಸ್ತಿತ್ವಕ್ಕೆ ಬಂದಿತು. ನಿಮ್ನ ವರ್ಗದ ಜನಗಳೂ ಇತರರೂ ಈ ಸಮಿತಿಯ ಸದಸ್ಯರಾಗಿದ್ದರು. ವರ್ಷಕ್ಕೆ ಮೂರು ಬಾರಿ ಈ ಸಲಹಾ ಸಮಿತಿ ಸಭೆ ಸೇರಿ ನಿಮ್ನ ವರ್ಗಗಳ ಸಮಸ್ಯೆಗಳನ್ನು ಕುರಿತು ಚರ್ಚಿಸುತ್ತಿತ್ತು. ರಾಜ್ಯದಲ್ಲಿ ಈ ವರ್ಗದ ಶಿಕ್ಷಣಕ್ಕೆ ಸಂಬಂಧಿಸಿದಂತೆ

ಸಲಹೆಗಳನ್ನು, ಕಾಯಿದೆಗಳನ್ನು ಕುರಿತ ಪ್ರಶ್ನೆಗಳ ಬಗೆಗೆ ಅಭಿಪ್ರಾಯವನ್ನು ವ್ಯಕ್ತಪಡಿಸುವ ಕಾರ್ಯ ಸಲಹಾ ಸಮಿತಿಯದಾಗಿತ್ತು.[೯೪] ಈ ರೀತಿಯಲ್ಲಿ ನಿಮ್ನ ವರ್ಗದ ಶಿಕ್ಷಣಕ್ಕಾಗಿ ಹಲವು ರೀತಿಯಲ್ಲಿ ಸರ್ಕಾರ ಪ್ರಯತ್ನಿಸುತ್ತಿತ್ತೆಂದು ತಿಳಿದು ಬರುತ್ತದೆ.

ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲೂಕಿನ ಹಂಪಸಾಗರದಲ್ಲಿ ಈ ಭಾಗದ ಲಂಬಾಣಿಗರ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಡಬೇಕೆನ್ನುವ ಉದ್ದೇಶದಿಂದ ಲಂಬಾಣಿ ಸಮುದಾಯದ ಮುಖಂಡರಾದ ನಾಣಕಿ ನಾಯ್ಕ, ದೂದಾನಾಯ್ಕ, ಚಂದ್ರಿಕಾ ಬಾಯಿ ಮುಂತಾದವರು ಪ್ರಯತ್ನಿಸಿದರು. ಆ ಪ್ರಯತ್ನದ ಫಲವಾಗಿ ಶ್ರೀ ಮಂಜುನಾಥ ಬಂಜಾರ ಎಜ್ಯುಕೇಶನ್ ಟ್ರಸ್ಟ್ ಆರಂಭಗೊಂಡು ಅದರಡಿಯಲ್ಲಿ ಬಂಜಾರ ವಿದ್ಯಾರ್ಥಿ ನಿಲಯವೊಂದು ಕೂಡ್ಲಿಗಿಯಲ್ಲಿ ಸ್ಥಾಪನೆಗೊಂಡಿತು. ಈ ಹಾಸ್ಟೆಲ್ ಸ್ಥಾಪನೆ ಕೂಡ್ಲಿಗಿ ತಾಲ್ಲೂಕಿನ ಲಂಬಾಣಿಗರ ಸಮುದಾಯದವರಿಗೆ ಶಿಕ್ಷಣ ಪಡೆಯಲು ತುಂಬಾ ಅನುಕೂಲ ಮಾಡಿಕೊಟ್ಟಿದೆ. ಈ ರೀತಿಯಲ್ಲಿ ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಸಿರಗುಪ್ಪ, ಹರಪನಹಳ್ಳಿ ಪಟ್ಟಣಗಳಲ್ಲಿನ ಹಾಸ್ಟೆಲ್‌ಗಳು ಮತ್ತು ಬಳ್ಳಾರಿಯಲ್ಲಿ ಸ್ಥಾಪನೆಗೊಂಡ ಬಾಲಕಿಯರ ಹಾಸ್ಟೆಲ್ ಸ್ಥಾಪನೆ ಲಂಬಾಣಿ ಸಮುದಾಯದ ಬಾಲಕ ಬಾಲಕಿಯರು ವಿದ್ಯಾಭ್ಯಾಸ ಮಾಡುವಲ್ಲಿ ಪ್ರಮುಖ ಪಾತ್ರವಹಿಸಿವೆ.

**ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ವಿದ್ಯಾರ್ಥಿ ನಿಲಯ**

ಸ್ವಾತಂತ್ರ್ಯ ನಂತರದಲ್ಲಿ ಸರ್ಕಾರವು ಅಸ್ಪೃಶ್ಯರ ಕಲ್ಯಾಣಕ್ಕಾಗಿ ವಿವಿಧ ಕಾರ್ಯಕ್ರಮಗಳನ್ನು ರೂಪಿಸಿತು. ಇವರು ಅಭಿವೃದ್ಧಿಗೆ ಸಂಬಂಧಿಸಿದಂತೆ ಪಂಚವಾರ್ಷಿಕ ಯೋಜನೆಗಳಲ್ಲಿ ವಿಶೇಷ ಮಹತ್ವ ನೀಡಿದ್ದರಿಂದ ಎಲ್ಲ ಕಡೆಗಳಲ್ಲಿ ಸರ್ಕಾರ ಇವರ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಮಹತ್ವ ನೀಡಲಾರಂಭಿಸಿತು. ಈ ಹಿನ್ನೆಲೆಯಲ್ಲಿ ಕರ್ನಾಟಕದ ಹಲವು ಪ್ರದೇಶಗಳಲ್ಲಿ ಹಾಸ್ಟೆಲ್‌ಗಳು ಸ್ಥಾಪಿತವಾದವು. ಇದರಿಂದಾಗಿ ೧೯೫೧-೫೨ರಲ್ಲಿ ೧೧ ಸರ್ಕಾರಿ ನಿಮ್ನ ವರ್ಗದ ವಿದ್ಯಾರ್ಥಿ ನಿಲಯಗಳು ಹಾಗೂ ೧,೮೧,೪೯೯ ರೂಗಳ ಅನುದಾನ ಪಡೆದ ೫೬ ಖಾಸಗಿ ವಿದ್ಯಾರ್ಥಿ ನಿಲಯಗಳೂ ಕಾರ್ಯ ನಿರ್ವಹಿಸುತ್ತಿದ್ದವು.[೯೫] ಆನಂತರದಲ್ಲಿ ಹಳೆಯ ಮೈಸೂರು ಭಾಗದಲ್ಲಿ ೧೯೫೫-೫೬ರಲ್ಲಿದ್ದ ೯೧ ವಿದ್ಯಾರ್ಥಿ ನಿಲಯಗಳ ಪೈಕಿ ೧೧ ಸರ್ಕಾರದಿಂದ ಆರಂಭಿಸಲ್ಪಟ್ಟವು. ಅವುಗಳಲ್ಲಿ ೧೦ ಬಾಲಕರಿಗೂ, ಉಳಿದ ಒಂದು ಬಾಲಕಿಯರಿಗೂ ಸೇರಿತ್ತು. ಇನ್ನುಳಿದ ನಿಲಯಗಳು ಸಹಾಯಧನದ ಮೂಲಕ ನಡೆಯುತ್ತಿದ್ದವು.[೯೬] ಈ ಅಂಶಗಳಿಂದ ಸರ್ಕಾರದ ಅನುದಾನದಿಂದ ನಡೆಯುತ್ತಿದ್ದ ಹಾಸ್ಟೆಲ್‌ಗಳೇ ಹೆಚ್ಚಾಗಿದ್ದುದು ತಿಳಿದು ಬರುತ್ತದೆ.

ಮದ್ರಾಸ್ ಪ್ರಾಂತ್ಯದಲ್ಲಿದ್ದ ಬಳ್ಳಾರಿ ಜಿಲ್ಲೆಯು ೧೯೫೩ರಲ್ಲಿ ಮೈಸೂರು ರಾಜ್ಯಕ್ಕೆ ಸೇರ್ಪಡೆಯಾಯಿತು. ಅದಕ್ಕೂ ಮುಂಚೆ ಸ್ವಾತಂತ್ರ್ಯನಂತರದಲ್ಲಿ ಅಸ್ಪೃಶ್ಯರ ಕಲ್ಯಾಣಕ್ಕಾಗಿ ಅಲ್ಲಿಯ ಸರ್ಕಾರ ೧೯೪೯ರಲ್ಲಿ ಪ್ರತ್ಯೇಕ ಹರಿಜನ ಕಲ್ಯಾಣ ಇಲಾಖೆ ರಚಿಸಿತು. ಅದು ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳ ಕಲ್ಯಾಣವನ್ನು ಜಿಲ್ಲಾಣ ಅಧಿಕಾರಿಯೇ (ಜಿಲ್ಲೆಯ ಆಡಳಿತ ಅಧಿಕಾರಿಯನ್ನು ಆ ರೀತಿ ಕರೆಯಲಾಗಿದೆ.) ನೋಡಿಕೊಳ್ಳುವಂತಾಯಿತು.[೯೭] ಈ ರೀತಿ ಸ್ಥಾಪನೆಯಾದ ಹರಿಜನ ಕಲ್ಯಾಣ ಇಲಾಖೆಯು ಈ ಭಾಗದ ಜನರ ಕಲ್ಯಾಣಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ನಿರ್ವಹಿಸುತ್ತಾ ಬಂದಿದೆ. ೧೯೫೬ಕ್ಕೆ ಮುನ್ನ ಸೇರ್ಪಡೆಯಾದ ಪ್ರದೇಶದಲ್ಲಿ ಖಾಸಗಿ

ಅನುದಾನ ವಸತಿ ನಿಲಯಗಳಿಗೆ ಸರ್ಕಾರ ಭಿನ್ನ ಪ್ರಮಾಣದಲ್ಲಿ ಸಹಾಯವನ್ನು ಮಾಡುತ್ತಿತ್ತು. ೧೯೭೨ರಿಂದ ೩೦ ರೂಗಳ ಒಂದೇ ಪ್ರಮಾಣದ ತಿಂಗಳ ವೆಚ್ಚವನ್ನು ಪ್ರತಿ ವಿದ್ಯಾರ್ಥಿಯು ಊಟಕ್ಕಾಗಿ ಹತ್ತು ತಿಂಗಳ ವೆಚ್ಚವು ೪೦ ರೂಗಳಿಗೆ ಹೆಚ್ಚಿಸಲ್ಪಟ್ಟಿದೆ. ವಸತಿ ನಿಲಯಗಳಲ್ಲಿ ವಿದ್ಯಾರ್ಥಿಗಳ ಊಟದ ವೆಚ್ಚಕ್ಕೆ ೫೦ರೂಗಳ ಅನುದಾನ ನೀಡಲು ಸರ್ಕಾರ ಮುಂದಾಯಿತು. ಪೀಠೋಪಕರಣ, ಪಾತ್ರೆಗಳು, ಗ್ರಂಥಾಲಯದ ಪುಸ್ತಕಗಳು ಮುಂತಾದ ವೆಚ್ಚಕ್ಕೆಂದು ವಾಪಸ್ಸು ಪಡೆಯದ ಸಹಾಯಧನವನ್ನು ಐದು ವರ್ಷಕ್ಕೊಮ್ಮೆ ಗರಿಷ್ಠ ೧೦೦೦ ರೂಗಳಂತೆ ಖಾಸಗಿ ವಿದ್ಯಾರ್ಥಿ ನಿಲಯಗಳಿಗೆ ಒದಗಿಸಲಾಯಿತು.[೫೮] ಹೀಗೆ ಸರ್ಕಾರ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗಾಗಿ ನಡೆಸುತ್ತಿರುವ ಹಾಸ್ಟೆಲ್‌ಗಳಿಗೆ ವಿವಿಧ ರೀತಿಯ ಸಹಾಯ ಮಾಡುತ್ತಾ ಬಂದಿದೆ.

ಎರಡನೆಯ ಯೋಜನೆಯ ಮಧ್ಯಭಾಗದಲ್ಲಿ ಶೈಕ್ಷಣಿಕ ಕಾರ್ಯಕ್ರಮಗಳಿಗೆ ಪ್ರಾಧಾನ್ಯತೆ ಕೊಟ್ಟಿದ್ದರಿಂದ ಅನೇಕ ವಸತಿ ನಿಲಯಗಳು ಆರಂಭಿಸಲ್ಪಟ್ಟವು. ಮಾರ್ಚ್ ೩೧,೧೯೭೪ ವೇಳೆಗೆ ಸರ್ಕಾರ ೩೧೦ ವಸತಿ ನಿಲಯಗಳನ್ನು ಆರಂಭಿಸಿತ್ತು. ಅವುಗಳಲ್ಲಿ ೧೧೦ ಬಾಲಕಿಯರ ವಸತಿ ನಿಲಯಗಳಾಗಿದ್ದವು. ಎಲ್ಲಾ ವಸತಿ ನಿಲಯಗಳಿಂದ ೧೮೯೬೮ ವಿದ್ಯಾರ್ಥಿಗಳಿಗೆ ಊಟದ ವ್ಯವಸ್ಥೆಯಾಗಿತ್ತು.[೫೯] ಇಂತಹ ವ್ಯವಸ್ಥೆಯಿಂದ ಕೂಡಿದ್ದ ಹಾಸ್ಟೆಲ್‌ಗಳಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ವಿದ್ಯಾರ್ಥಿ ನಿಲಯಗಳಲ್ಲಿ ಲಂಬಾಣಿ ಸಮುದಾಯದ ಅನೇಕ ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸ ಮಾಡಲು ಅನುಕೂಲವಾಗಿದೆ.

ಈ ಹಿಂದೆ ಶಿಕ್ಷಣ ಇಲಾಖೆಯಿಂದ ನಡೆಸಲ್ಪಟ್ಟ ವಸತಿ ನಿಲಯಗಳನ್ನು ೧೯೭೪ನೇ ಸಾಲಿನಿಂದ ಸಮಾಜ ಕಲ್ಯಾಣ ಇಲಾಖೆಗೆ ವರ್ಗಾಯಿಸಲ್ಪಟ್ಟಿದ್ದು ಇವುಗಳನ್ನು ನಿಮ್ನ ವರ್ಗದ ವಸತಿ ನಿಲಯಗಳ ಬದಲಾಗಿ ಸಾಮಾನ್ಯ ವಸತಿ ನಿಲಯಗಳೆಂದು ಪರಿಗಣಿಸಿ ಶೇಕಡ ೭೫ರಷ್ಟು ವಸತಿಯನ್ನು ಪರಿಶಿಷ್ಟ ಜಾತಿಗಳಿಗೆ ಕೊಡಲಾಗುತ್ತಿದೆ. ಇವುಗಳಿಗೆ ಸಮಾಜ ಕಲ್ಯಾಣ ಇಲಾಖೆಯಿಂದ ಅನುದಾನ ಕೊಡಲಾಗುತ್ತಿದೆ. ೧. ಬೆಂಗಳೂರು ನಗರ ೨. ಬೆಂಗಳೂರು ಗ್ರಾಮಾಂತರ ೩. ಚಿತ್ರದುರ್ಗ, ೪. ಶಿವಮೊಗ್ಗ, ೫. ತುಮಕೂರು, ೬. ಕೋಲಾರ, ೭. ಮೈಸೂರು, ೮. ದಕ್ಷಿಣ ಕನ್ನಡ ೯. ಹಾಸನ, ೧೦. ಮಂಡ್ಯ, ೧೧. ಬಿಜಾಪುರ, ೧೨. ರಾಯಚೂರು ಈ ಜಿಲ್ಲೆಗಳಲ್ಲಿ ಒಟ್ಟು ೫೫ ನಿಮ್ನ ವರ್ಗದ ವಿದ್ಯಾರ್ಥಿ ನಿಲಯಗಳನ್ನು ಸಮಾಜ ಕಲ್ಯಾಣ ಇಲಾಖೆ ವತಿಯಿಂದ ನಡೆಸಲಾಗುತ್ತಿದೆ.[೬೦] ಅಲ್ಲಿಂದ ನಿಮ್ನ ವರ್ಗಗಳಿಗಾಗಿಯೇ ಸ್ಥಾಪನೆಗೊಂಡ ಶಾಲೆಗಳನ್ನು ಸಾರ್ವಜನಿಕ ವಸತಿ ನಿಲಯಗಳೆಂದು ಪರಿಗಣಿಸಲಾಯಿತು. ಅಲ್ಲಿ ಇರುವ ಒಟ್ಟು ಸಂಖ್ಯೆಯಲ್ಲಿ ೭೫ರಷ್ಟು ಮಾತ್ರವೇ ಅವಕಾಶ ಇದ್ದುದರಿಂದ ಪರಿಶಿಷ್ಟ ಜಾತಿಯ ಶೇ- ೨೫ ರಷ್ಟು ಸೀಟುಗಳು ಕಡಿಮೆಯಾದವು. ಇದರಿಂದ ಅಷ್ಟು ಪ್ರಮಾಣದಲ್ಲಿ ಪ. ಜಾತಿಯ ಈ ಅವಕಾಶವನ್ನು ಅವರು ಬಳಸಿಕೊಂಡು ಶೈಕ್ಷಣಿಕ ಅಭಿವೃದ್ಧಿ ಸಾಧಿಸಲು ಸಹಾಯವಾಯಿತು.

ಪಂಚವಾರ್ಷಿಕ ಯೋಜನೆಯಲ್ಲಿ ಪರಿಶಿಷ್ಟ ಜಾತಿ ಮತ್ತು ವರ್ಗದ ಕಲ್ಯಾಣಕ್ಕಾಗಿ ಸರ್ಕಾರ ಅವರ ಶೈಕ್ಷಣಿಕ ಅಭಿವೃದ್ಧಿಗೆ ಸಂಬಂಧಿಸಿದಂತೆ ಕೈಗೊಂಡ ಕ್ರಮಗಳು ಶೈಕ್ಷಣಿಕ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸಿವೆ. ಪರಿಶಿಷ್ಟ ಜಾತಿ ಮತ್ತು ಬುಡಕಟ್ಟು ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಅನುಕೂಲತೆಗಾಗಿ ಸ್ಥಾಪನೆಗೊಂಡಿರುವ ಸಮಾಜ ಕಲ್ಯಾಣ ಇಲಾಖೆ ಆ ನಿಟ್ಟಿನಲ್ಲಿ ಶ್ರಮಿಸುತ್ತಿದೆ. ಇದು ಸರ್ಕಾರ ಮತ್ತು ಅನುದಾನಿತ ಹಾಸ್ಟೆಲ್‌ಗಳ ಮೇಲ್ವಿಚಾರಣೆ

ಮಾಡುತ್ತದೆ. ೨೦೦೧-೦೨ ನೇ ಸಾಲಿನಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಈ ಇಲಾಖೆ ವತಿಯಿಂದ ನಡೆಸುತ್ತಿರುವ ಹಾಸ್ಟೆಲ್‌ಗಳ ವಿವರ ಹೀಗಿದೆ. ಬಳ್ಳಾರಿ ತಾಲ್ಲೂಕಿನಲ್ಲಿ ಬಾಲಕರಿಗಾಗಿ ೭ ಬಾಲಕಿಯರಿಗೆ ೧, ಹಡಗಲಿಯಲ್ಲಿ ಬಾಲಕರಿಗೆ ೧೦ ಬಾಲಕಿಯರಿಗೆ ೨, ಹಗರಿಬೊಮ್ಮನಹಳ್ಳಿಯಲ್ಲಿ ಬಾಲಕರಿಗೆ ೧ ಬಾಲಕಿಯರಿಗೆ ೧, ಹೊಸಪೇಟೆಯಲ್ಲಿ ಬಾಲಕರಿಗಾಗಿ ೫ ಬಾಲಕಿಯರಿಗೆ ೨, ಕೂಡ್ಲಿಗಿಯಲ್ಲಿ ಬಾಲಕರಿಗೆ ೬, ಬಾಲಕಿಯರಿಗೆ ೩, ಸಿರಗುಪ್ಪದಲ್ಲಿ ಬಾಲಕರಿಗೆ ೪ ಬಾಲಕಿಯರಿಗೆ ೧, ಮತ್ತು ಸಂಡೂರು ತಾಲ್ಲೂಕಿನಲ್ಲಿ ಬಾಲಕರಿಗೆ ೪ ಬಾಲಕಿಯರಿಗೆ ೧ ವಿದ್ಯಾರ್ಥಿ ನಿಲಯಗಳು ಇರುವುದು ಕಂಡುಬರುತ್ತದೆ.

೨೦೧೨-೧೩ ನೇ ಸಾಲಿಗೆ ಬಳ್ಳಾರಿ ಜಿಲ್ಲೆಯಲ್ಲಿ ಈ ಇಲಾಖೆ ವತಿಯಿಂದ ನಡೆಯುತ್ತಿರುವವ ಹಾಸ್ಟೆಲ್‌ಗಳು ಒಟ್ಟು - ೮೧, ವಿದ್ಯಾರ್ಥಿಗಳು ನಿಲಯ ಸೌಲಭ್ಯವನ್ನು ಪಡೆದವರ ಸಂಖ್ಯೆ ೮೩ ಗಳಿದ್ದು, ಬಳ್ಳಾರಿ ತಾಲ್ಲೂಕಿನಲ್ಲಿ ಒಟ್ಟು - ೧೪, ಬಾಲಕರ ೧೧, ಬಾಲಕಿಯರ ೩, ಹಡಗಲಿಯಲ್ಲಿ ಒಟ್ಟು;೧೭ ಬಾಲಕರ ೧೫, ಬಾಲಕಿಯರ ೨, ಹಗರಿಬೊಮ್ಮನಹಳ್ಳಿಯಲ್ಲಿ ಒಟ್ಟು - ೧೧ ಬಾಲಕರ ೯, ಬಾಲಕಿಯ ೨, ಹೊಸಪೇಟೆ ಒಟ್ಟು - ೧೩ ಬಾಲಕರ ೧೦, ಬಾಲಕಿಯ ೩, ಕೂಡ್ಲಿಗಿ ಒಟ್ಟು - ೧೦ ಬಾಲಕರ ೭, ಬಾಲಕಿಯರ ೩, ಸಿರಗುಪ್ಪ ಒಟ್ಟು - ೯ ಬಾಲಕರ ೮, ಬಾಲಕಿಯರ ೧, ಸಂಡೂರು ಒಟ್ಟು - ೭ ಬಾಲಕರ ೬ ಬಾಲಕಿಯರ ೧, ವಿದ್ಯಾರ್ಥಿನಿಲಯಗಳ ಇರುವುದು ಕಂಡುಬರುತ್ತದೆ.[೧] ಈ ರೀತಿಯಲ್ಲಿ ಹಾಸ್ಟೆಲ್ ಸ್ಥಾಪನೆಯು ಹೆಚ್ಚಾಗಿ ೧೯೪೦ರ ದಶಕದ ನಂತರ ಹೆಚ್ಚಾಗಿ ಸ್ಥಾಪನೆಗೊಂಡಿವೆ.

ಈ ರೀತಿಯಾಗಿ ಪರಿಶಿಷ್ಟ ಜಾತಿ ಮತ್ತು ವರ್ಗದ ವಿದ್ಯಾರ್ಥಿಗಳ ಶಿಕ್ಷಣಕ್ಕೆ ಅನುಕೂಲವಾಗಲೆಂದು ಸ್ಥಾಪನೆಗೊಂಡಿರುವ ಹಾಸ್ಟೆಲ್‌ಗಳಲ್ಲಿ ಕೆಲವೊಂದು ಇತರೆ ಜನಾಂಗದ ಹೆಸರಲ್ಲಿ ಸ್ಥಾಪಿತವಾಗಿರುವ ಹಾಸ್ಟಲ್‌ಗಳಲ್ಲಿ ಲಂಬಾಣಿ ಸಮುದಾಯದ ವಿದ್ಯಾರ್ಥಿಗಳು ಕಂಡುಬರುವುದಿಲ್ಲ (ಮಾದಿಗ, ಚಲವಾದಿ ಹಾಗೂ ಬೋವಿ ಇತರೆ) ಕಂಡುಬಂದರೂ ಅದು ಒಂದೆರಡು ಇಲ್ಲವೇ ವಿದ್ಯಾರ್ಥಿ ನಿಲಯಗಳು ಮಾತ್ರ ಈ ಜನಾಂಗದ ಹೆಸರಲ್ಲಿ ಸ್ಥಾಪಿತವಾಗಿರುವ ವಿದ್ಯಾರ್ಥಿ ನಿಲಯಗಳಲ್ಲಿ ಶೇ ೭೫ ಅವರೇ ತುಂಬಿರುತ್ತಾರೆ. ಉಳಿದಂತೆ ಇತರೆ ಸರ್ಕಾರಿ ಮತ್ತು ಖಾಸಗಿ ಹಾಸ್ಟೆಲ್‌ಗಳಲ್ಲಿ ಪರಿಶಿಷ್ಟ ಜಾತಿಗೆ ಮೀಸಲಿರುವ ಶೇ ೭೫ರಷ್ಟು ಅರ್ಧದಷ್ಟು ವಿದ್ಯಾರ್ಥಿಗಳು ಈ ಸಮುದಾಯದವರೇ ಇರುತ್ತಾರೆ. ಈ ಹಿನ್ನೆಲೆಯಲ್ಲಿ ಹಾಸ್ಟೆಲ್‌ಗಳು ಲಂಬಾಣಿ ಸಮುದಾಯದ ವಿದ್ಯಾರ್ಥಿಗಳ ಶಿಕ್ಷಣ ಪ್ರಗತಿಯಲ್ಲಿ ಪ್ರಮುಖ ಪಾತ್ರವಹಿಸಿರುವುದನ್ನು ಅಲ್ಲಗಳೆಯಲಾಗದು.

## ಕಾಲೇಜು ವಿದ್ಯಾರ್ಥಿ ನಿಲಯಗಳು

ಕಾಲೇಜು ಶಿಕ್ಷಣ ತುಂಬಾ ತಡವಾಗಿ ಬಳ್ಳಾರಿ ಜಿಲ್ಲೆಯಲ್ಲಿ ಆರಂಭಗೊಂಡಿತು. ಅದಕ್ಕೆ ಕಾರಣ ಇಲ್ಲದಿಲ್ಲ. ಸ್ವಾತಂತ್ರ್ಯಾನಂತರದಲ್ಲಿ ಕಾಲೇಜು ಕಲಿಯಲು ಲಂಬಾಣಿಗರು ಹೆಚ್ಚು ಆಸಕ್ತರಾದದ್ದು ೭೦ರ ದಶಕದಲ್ಲಿ ಎನ್ನಬಹುದು. ಏಕೆಂದರೆ ಆ ಸಂದರ್ಭದಲ್ಲಿ ಕಾಲೇಜು ಶಿಕ್ಷಣ ಪಡೆಯುತ್ತಿದ್ದ ಎಂ. ಜಯರಾಮ್‌ನಾಯ್ಕನವರ ಪ್ರಕಾರ ಸುಮಾರು ೧೯೭೪ರ ವರೆಗೂ ಬಳ್ಳಾರಿಯಲ್ಲಿ ಒಂದೇ ಒಂದು ಕಾಲೇಜು ಹಾಸ್ಟಲ್ ಇದ್ದು ಚಿತ್ರದುರ್ಗ,

ರಾಯಚೂರು ಹಾಗೂ ದಾವಣಗೆರೆ ಜಿಲ್ಲೆಗಳ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ಅಂದರೆ ಕಾಲೇಜು ಶಿಕ್ಷಣ ಪಡೆಯಲು ಬಳ್ಳಾರಿಗೆ ಆಗಮಿಸಿದವರಿಗೆ ನೀಡಲಾಗುತ್ತಿತ್ತು. ಇದರಿಂದಾಗಿ ಆ ಸಂದರ್ಭದ ಕಾಲೇಜು ಶಿಕ್ಷಣ ಕಲಿತ ಲಂಬಾಣಿಗರ ಸಂಖ್ಯೆ ಕಡಿಮೆಯಿದ್ದು ಆನಂತರದ ಬೆಳವಣಿಗೆಯಿಂದ ಆರಂಭಗೊಂಡ ವಿದ್ಯಾರ್ಥಿನಿಲಯಗಳು ೨೦೦೧-೦೨ರ ಹೊತ್ತಿಗೆ ಹೆಚ್ಚಿನ ಸಂಖ್ಯೆಯಲ್ಲಿ ಸರ್ಕಾರಿ ಮತ್ತು ಖಾಸಗಿ ಅನುದಾನಿತ ಕಾಲೇಜು ಹಾಸ್ಟೆಲ್‌ಗಳು ಆರಂಭಗೊಂಡಿರುವುದು ಕಂಡುಬರುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿ ಸರ್ಕಾರಿ ಮತ್ತು ಅನುದಾನಿತ ಕಾಲೇಜು ಹಾಸ್ಟೆಲ್‌ಗಳ ಸಂಖ್ಯೆ ಈ ರೀತಿ ಇದೆ. ಬಳ್ಳಾರಿ ತಾಲ್ಲೂಕಿನಲ್ಲಿ ೪, ಹಡಗಲಿ ೨, ಸಂಡೂರು ೧ ಹಾಸ್ಟೆಲ್ ಕಂಡುಬರುತ್ತದೆ.

೨೦೧೩-೧೪ರ ಹೊತ್ತಿಗೆ ಬಳ್ಳಾರಿ ಜಿಲ್ಲೆಯ ಬಳ್ಳಾರಿ ತಾಲ್ಲೂಕಿನಲ್ಲಿ ೨, ಹಡಗಲಿ ೨, ಹಗರಿಬೊಮ್ಮನಹಳ್ಳಿ ೨, ಹೊಸಪೇಟೆ ೨, ಕೂಡ್ಲಿಗಿ ೨, ಸಿರಗುಪ್ಪ ೨, ಸಂಡೂರು ೨ ಹಾಸ್ಟೆಲ್‌ಗಳಿದ್ದುದು ಕಂಡುಬರುತ್ತದೆ.[೨೨] ಈ ಅಂಕಿ ಸಂಖ್ಯೆಗಳನ್ನು ಗಮನಿಸಿದರೆ ಕಾಲೇಜು ಶಿಕ್ಷಣ ಕಲಿಯುವ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳ ಸಂಖ್ಯೆ ಬಳ್ಳಾರಿ ಜಿಲ್ಲೆಯಲ್ಲಿಯೇ ಕಡಿಮೆ ಎನ್ನಬಹುದು. ಏಕೆಂದರೆ ಹಾಸ್ಟೆಲ್ ವ್ಯವಸ್ಥೆ ಇರುವ ಕಡೆ ಲಂಬಾಣಿ ಸಮುದಾಯ ಶಿಕ್ಷಣ ಕಲಿಯಲು ಮುಂದಾದರೆ ಈ ವ್ಯವಸ್ಥೆ ಇಲ್ಲದಿರುವ ಕಡೆ ಬೇರೆ ಕಡೆ ಹೋಗಿ ಶಿಕ್ಷಣ ಕಲಿಯಲು ಮನೆಯಲ್ಲಿ ಸಮ್ಮತಿಸುವುದು ಕಡಿಮೆ. ಬಾಲಕಿಯರು ಕಾಲೇಜು ಶಿಕ್ಷಣ ಬಳ್ಳಾರಿ ಜಿಲ್ಲೆಯಲ್ಲಿ ಅತ್ಯಂತ ಕಡಿಮೆ ಎನ್ನಬಹುದು. ಒಟ್ಟಾರೆಯಾಗಿ ಮಹಾಹತು ಮತ್ತು ನಂತರದಲ್ಲಿ ಸ್ಥಾಪಿತಗೊಂಡ ವಿದ್ಯಾರ್ಥಿ ನಿಲಯಗಳು ಲಂಬಾಣಿ ಸಮುದಾಯದ ಶೈಕ್ಷಣಿಕ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸಿವೆ.

ಭಾರತದಾದ್ಯಂತ ನೆಲೆಸಿರುವ ಲಂಬಾಣಿಗರಲ್ಲಿ, ಕರ್ನಾಟಕದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಸಾಕ್ಷರರಾಗಿದ್ದಾರೆ. ಆದರೆ ಕರ್ನಾಟಕದಲ್ಲಿ ಅಧಿಕವಾಗಿ ಅನಕ್ಷರಸ್ಥರನ್ನು ಪಡೆದಿರುವ ಜಿಲ್ಲೆಗಳಲ್ಲಿ ಹೈದರಾಬಾದ್ ಕರ್ನಾಟಕ ಭಾಗದ ಜಿಲ್ಲೆಗಳಾದ ಬಳ್ಳಾರಿ, ಬೀದರ, ಗುಲ್ಬರ್ಗ, ಕೊಪ್ಪಳ, ರಾಯಚೂರು, ಯಾದಗಿರಿ ಪ್ರಮುಖವಾಗಿವೆ. ಬೆಂಗಳೂರು ನಗರ ಮತ್ತು ಗ್ರಾಮಾಂತರ, ಕೋಲಾರ, ಶಿವಮೊಗ್ಗ ದಾವಣಗೆರೆ ಮೊದಲಾದ ದಕ್ಷಿಣ ಕರ್ನಾಟಕದ ಲಂಬಾಣಿಗರಲ್ಲಿ ಶಿಕ್ಷಣದ ಪ್ರಮಾಣ ಅಧಿಕವಿದೆ. ಉತ್ತರ ಕರ್ನಾಟಕದಲ್ಲಿ ಶಿಕ್ಷಣದ ಕುರಿತ ಅರಿವು ಕಾಳಜಿ ಕಡಿಮೆ ಎನ್ನಬಹುದು.

ಬಳ್ಳಾರಿ ಜಿಲ್ಲೆಯಾದ್ಯಂತ ನೆಲೆಸಿರುವ ಲಂಬಾಣಿಗರು ಜನಸಂಖ್ಯೆ ಪ್ರಮಾಣದಲ್ಲಿ ಎರಡನೇ ಸ್ಥಾನ ಹೊಂದಿದ್ದಾರೆ. ಆದರೆ ಜನಸಂಖ್ಯೆ ಪ್ರಮಾಣ ಏರಿಕೆ ಕಂಡಿಲ್ಲ. ಲಂಬಾಣಿಗರು ಕೃಷಿಕಾರ್ಮಿಕ, ಕಟ್ಟಡ ಕಾರ್ಮಿಕ, ಇನ್ನಿತರ ಕಾರ್ಯಗಳಲ್ಲಿ ಆಸಕ್ತಿ ಅಧಿಕವಾಗಿ ಶಿಕ್ಷಣ ಒಲವು ಕಡಿಮೆಯಾಗಿರುವುದೇ ಇದಕ್ಕೆ ಕಾರಣ. ಅದರಲ್ಲೂ ಲಂಬಾಣಿಗರ ಶಿಕ್ಷಣ ಸಂಸ್ಥೆಗಳು ಕಡಿಮೆ ಸಂಖ್ಯೆಯಲ್ಲಿವೆ. ಇಂದಿಗೂ ಲಂಬಾಣಿಗರು ಅಧಿಕವಾಗಿದ್ದರಿಂದ ನೆಲೆಸಿರುವುದು ಗ್ರಾಮೀಣ ಪ್ರದೇಶಗಳಾದ ತಾಂಡಗಳಲ್ಲಿ ಗ್ರಾಮ ಶಿಕ್ಷಣದ ಆಸಕ್ತಿ ಕಡಿಮೆಯಾಗಿರುತ್ತದೆ. ಲಂಬಾಣಿಗರು ಕೂಲಿ ಮಾಡುತ್ತ ತಮ್ಮ ಪರಿವಾರದೊಂದಿಗೆ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಹೋಗುತ್ತಾರೆ. ಸುಮಾರು ೫ ರಿಂದ ೬ ತಿಂಗಳವರೆಗೆ ವಲಸೆ ಹೋಗುವುದು ಕಂಡುಬರುತ್ತದೆ. ಹೀಗಾಗಿ

ಒಂದೆಡೆ ನಿಲ್ಲುವುದು ಕಠಿಣವಾದ್ದರಿಂದ ಮಕ್ಕಳಿಗೆ ಶಿಕ್ಷಣ ನೀಡುವುದು ಸಾಧ್ಯವಾಗುತ್ತಿಲ್ಲ. ಆರ್ಥಿಕ ಸ್ಥಿತಿಯ ಅನಾನುಕೂಲತೆಯಿಂದಾಗಿ ಶಿಕ್ಷಣದಿಂದ ವಂಚಿತರಾಗಿರುವುದು ಕಂಡುಬರುತ್ತದೆ.

ಬಳ್ಳಾರಿಯ ಏಳು ತಾಲೂಕುಗಳಲ್ಲಿ ನೆಲೆಸಿರುವ ಲಂಬಾಣಿಗರು ಶಿಕ್ಷಣ ಪ್ರಮಾಣದಲ್ಲಿ ವ್ಯತ್ಯಾಸವಿರುವುದು ಕಂಡುಬರುತ್ತದೆ. ಬಳ್ಳಾರಿ, ಸಿರುಗುಪ್ಪ, ಸಂಡೂರು ತಾಲೂಕುಗಳಲ್ಲಿ ಶಿಕ್ಷಣ ಪ್ರಮಾಣ ಕಡಿಮೆಯಿದ್ದರೆ, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ಹೂವಿನಹಡಗಲಿ, ಹೊಸಪೇಟೆ ತಾಲೂಕುಗಳಲ್ಲಿ ಶಿಕ್ಷಣ ಪ್ರಮಾಣ ಅಧಿಕವಾಗಿದೆ. ಲಂಬಾಣಿಗರೆಲ್ಲ ಶಿಕ್ಷಣದ ಅಧಿಕ ಮಟ್ಟವೆಂದರೆ ಪ್ರೌಢಶಾಲೆ ಎಂದು ಹೇಳಬಹುದಾಗಿದೆ. ಪ್ರೌಢ ಶಿಕ್ಷಣವನ್ನು ಮುಗಿಸಿ ಕಾಲೇಜು ಶಿಕ್ಷಣ ಪಡೆಯುವವರ ಸಂಖ್ಯೆ ಕಡಿಮೆ ಪ್ರಮಾಣದಲ್ಲಿದೆ. ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿ ಹಾಗೂ ಬಳ್ಳಾರಿ ಜಿಲ್ಲೆಯ ಡಿ.ಡಿ.ಪಿ.ಐ. ನೀಡಿದ ಮಾಹಿತಿಯ ಆಧಾರದ ಮೇಲೆ ಈ ಕೆಳಗಿನ ಕೋಷ್ಟಕವನ್ನು ನೀಡಲಾಗಿದೆ.

| ಕ್ರ.ಸಂ. | ತಾಲೂಕು | ಪ್ರಾಥಮಿಕ ಶಿಕ್ಷಣ | ಪ್ರೌಢ ಶಿಕ್ಷಣ | ಪದವಿ | ಉನ್ನತ ಪದವಿ |
|---|---|---|---|---|---|
| ೧. | ಬಳ್ಳಾರಿ | ೨೦% | ೧೩% | ೯% | ೦೮% |
| ೨. | ಹೂವಿನ ಹಡಗಲಿ | ೨೬% | ೧೫% | ೧೧% | ೧೧% |
| ೩. | ಹಗರಿಬೊಮ್ಮನಹಳ್ಳಿ | ೨೭% | ೧೬% | ೧೨% | ೧೦% |
| ೪. | ಹೊಸಪೇಟೆ | ೨೪% | ೧೨% | ೧೦% | ೦೭% |
| ೫. | ಸಂಡೂರು | ೨೩% | ೧೦% | ೮% | ೦೬% |
| ೬. | ಕೂಡ್ಲಿಗಿ | ೨೬% | ೧೫% | ೧೩% | ೧೨% |
| ೭. | ಸಿರಗುಪ್ಪ | ೧೯% | ೦೯% | ೮% | ೦೫% |

ಪಶುಪಾಲನೆ, ಕೃಷಿಯನ್ನು ವೃತ್ತಿಯನ್ನಾಗಿಸಿಕೊಂಡು ಜೀವನ ನಡೆಸುತ್ತಿದ್ದ ಲಂಬಾಣಿಗರು ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ. ಇದನ್ನು ಮನಗಂಡ ಪ್ರಮುಖ ವ್ಯಕ್ತಿಗಳು ಅನೇಕ ಶಾಲೆ, ಕಾಲೇಜುಗಳನ್ನು ಪ್ರಾರಂಭಿಸಲು ಮುಂದಾದರು. ಕರ್ನಾಟಕದಾದ್ಯಂತ ಅನೇಕ ಶಿಕ್ಷಣ ಸಂಸ್ಥೆಗಳು ಸ್ಥಾಪನೆಯಾಗಿ ಲಂಬಾಣಿಗರ ಶಿಕ್ಷಣಕ್ಕೆ ಸಹಾಯಕವಾದವು. ಅದೇ ರೀತಿ ಬಳ್ಳಾರಿ ಭಾಗದಲ್ಲೂ ಕೆಲವು ಶಿಕ್ಷಣ ಸಂಸ್ಥೆಗಳು ಸ್ಥಾಪನೆಗೊಂಡವು.

### ೪. ಸಮಾಜ ಕಲ್ಯಾಣ ಇಲಾಖೆಯ ವಿಶೇಷ ಕಾರ್ಯಕ್ರಮಗಳು ಮತ್ತು ಲಂಬಾಣಿಗರು

ಸಮಾಜ ಕಲ್ಯಾಣ ಇಲಾಖೆಯು ಪರಿಶಿಷ್ಟ ಜಾತಿಯ ಶೈಕ್ಷಣಿಕ ಅಭಿವೃದ್ಧಿಗೆ ಸಂಬಂಧಿಸಿದ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸುವ ಜೊತೆಗೆ ವಿಶೇಷವಾದ ಕಾರ್ಯಕ್ರಮವನ್ನು ಪಂಚವಾರ್ಷಿಕ ಯೋಜನೆಯ ಅಡಿಯಲ್ಲಿ ರೂಪಿಸಿದೆ. ಅವುಗಳಲ್ಲಿ ಪ್ರಮುಖವಾಗಿ ವಿದ್ಯಾರ್ಥಿ ವೇತನ, ವಸತಿ ಯೋಜನೆ, ಸಹಾಯಧನ ಮುಂತಾದವು ಸೇರಿವೆ. ಇವು ಎಷ್ಟರಮಟ್ಟಿಗೆ ಲಂಬಾಣಿ ಸಮುದಾಯದ ಶೈಕ್ಷಣಿಕ ಅಭಿವೃದ್ಧಿಗೆ ಸಹಕರಿಸಿವೆ ಎಂಬುದನ್ನು ತಿಳಿಯಲು ಇಲ್ಲಿ ಪ್ರಯತ್ನಿಸಲಾಗುವುದು.

**ವಿದ್ಯಾರ್ಥಿ ವೇತನ**

ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ಶಿಕ್ಷಣ ಕಲಿಯುವಲ್ಲಿ ಸಹಾಯವಾಗಬೇಕೆನ್ನುವ ದೃಷ್ಟಿಯಿಂದ ವಿದ್ಯಾರ್ಥಿ ವೇತನ ನೀಡಲಾಗುವುದು. ಕೇವಲ ವಸತಿ ಸೌಲಭ್ಯ ಪಡೆದಿರುವವರಿಗೆ ಮಾತ್ರವಲ್ಲದೆ, ಬಡತನದಲ್ಲಿ ನರಳುತ್ತಿರುವ, ಹಾಸ್ಟೆಲ್ ಸೌಲಭ್ಯ ಬಳಸಿಕೊಳ್ಳದೆ ಇರುವವರಿಗೂ ಕೂಡ ವಿದ್ಯಾರ್ಥಿ ವೇತನವನ್ನು ಸರ್ಕಾರ ಕೊಡಲು ಮುಂದಾಗಿದೆ. ಈ ವೇತನವನ್ನು ಹಣ ರೂಪದಲ್ಲಿ ವಿದ್ಯಾರ್ಥಿಗಳಿಗೆ ಶಿಕ್ಷಣ ಪಡೆಯುತ್ತಿರುವ ಆಯಾ ಶಿಕ್ಷಣ ಸಂಸ್ಥೆಯ ಮೂಲಕ ನೀಡಲಾಗುತ್ತದೆ. ಹಿರಿಯ ಪ್ರಾಥಮಿಕ ಶಾಲೆ ಹಾಗೂ ಪ್ರೌಢಶಾಲೆಗಳಲ್ಲಿ ಕಲಿಯುವ ಈ ವರ್ಗಗಳ ವಿದ್ಯಾರ್ಥಿಗಳಿಗಾಗಿ ಪ್ರೌಢ ಶಿಕ್ಷಣದ ಮುಂಚಿನ ವಿದ್ಯಾರ್ಥಿ ವೇತನವನ್ನು ಮೂರನೆಯ ಯೋಜನೆಯನ್ನೂ (೧೯೬೧-೬೬) ನೀಡಲಾಗುತ್ತಿದೆ.[೬೬] ಈ ರೀತಿ ವಿದ್ಯಾರ್ಥಿ ವೇತನ ನೀಡುವುದರ ಮೂಲಕ ಅವರ ವಿದ್ಯಾಭ್ಯಾಸಕ್ಕೆ ಸಹಾಯ ಮಾಡಿತು. ಆದರೆ ಕರ್ನಾಟಕ ಏಕೀಕರಣಕ್ಕೆ ಮೊದಲು ಹಿಂದಿನ ಮತ್ತು ಹೊಸದಾಗಿ ಸೇರ್ಪಡೆಯಾದ ಪ್ರದೇಶಗಳಲ್ಲಿ ಈ ವರ್ಗದ ಮಕ್ಕಳಿಗಾಗಿ ನೀಡುತ್ತಿರುವ ವಿದ್ಯಾರ್ಥಿ ವೇತನ ಏಕರೂಪವಾಗಿರಲಿಲ್ಲ. ಅದನ್ನು ಸರಿಪಡಿಸಿ ೧೯೬೪ರ ನಂತರ ರಾಜ್ಯದಲ್ಲೆಲ್ಲಾ ಪ್ರೌಢ ಶಿಕ್ಷಣ ಪೂರ್ವ ವಿದ್ಯಾರ್ಥಿ ವೇತನದ ಮೊತ್ತವನ್ನು ಏಕರೂಪಕ್ಕೆ ತರಲಾಯಿತು.[೬೭] ಹೀಗೆ ಏಕರೂಪಗೊಳಿಸಿದ ನಂತರದಿಂದ ಬಾಲಕ ಬಾಲಕಿಯರಿಬ್ಬರಿಗೂ ವಿದ್ಯಾರ್ಥಿ ವೇತನ ನೀಡಲಾಗುತ್ತಿತ್ತು. ಹಿರಿಯ ಪ್ರಾಥಮಿಕ ಪಾಠಶಾಲೆಗಳಲ್ಲಿ ಕಲಿಯುವ ಬಾಲಕ ಬಾಲಕಿಯರಿಗಾಗಿ ೫೦ರೂ. ಗಳ ವೇತನವನ್ನು ಪ್ರೌಢಶಾಲೆಯ ವಿದ್ಯಾರ್ಥಿಗಳಿಗೆ ೭೫ರೂ.ಗಳ ವೇತನವನ್ನು ವರ್ಷಕ್ಕೊಮ್ಮೆ ನೀಡಲಾಗುತ್ತಿದೆ. ವಾರ್ಷಿಕ ಯೋಜನೆಯಲ್ಲಿ (೧೯೬೬-೬೯) ೩೪.೭೫೪ ವಿದ್ಯಾರ್ಥಿಗಳಿಗೂ ನಾಲ್ಕನೆಯ ಯೋಜನೆಯಲ್ಲಿ (೧೯೬೯-೭೪) ೧,೮೯,೭೯೭ ವಿದ್ಯಾರ್ಥಿಗಳು. ಪ್ರೌಢಶಿಕ್ಷಣ ಪೂರ್ವ ವಿದ್ಯಾರ್ಥಿ ವೇತನ ಪಡೆದರು. ೧೯೭೮-೭೯ರಲ್ಲಿ ೧,೧೧,೦೯೩ ವಿದ್ಯಾರ್ಥಿಗಳ ಪ್ರೌಢಶಿಕ್ಷಣ ವಿದ್ಯಾರ್ಥಿ ವೇತನವನ್ನು ಪಡೆದರೆ, ೧೯೮೧-೮೨ರಲ್ಲಿ ಈ ಸೌಲಭ್ಯವನ್ನು ಪಡೆದ ವಿದ್ಯಾರ್ಥಿಗಳ ಸಂಖ್ಯೆ ೧,೬೩,೭೬೨ ಆಗಿದೆ.[೬೮] ನಂತರ ೨೦೧೨-೧೩ರಲ್ಲಿ ಬಳ್ಳಾರಿ ಜಿಲ್ಲೆಯ ಪ.ಜಾತಿ ಪ್ರೀ ಮೆಟ್ರಿಕ್ ಒಟ್ಟು ೫೬೪೭೨ ವಿದ್ಯಾರ್ಥಿಗಳು ಹಾಗೂ ಪೋಸ್ಟ್ ಮೆಟ್ರಿಕ್ ಒಟ್ಟು ೩೯೯೦ ವಿದ್ಯಾರ್ಥಿಗಳು ವಿದ್ಯಾರ್ಥಿ ವೇತನ ಪಡೆಯುವುದು ಕಂಡುಬರುತ್ತದೆ. ಇದರಲ್ಲಿ ಲಂಬಾಣಿಗರು ಹೆಚ್ಚಿನ ಸೌಲಭ್ಯ ಪಡೆದುಕೊಂಡಿದ್ದಾರೆ.[೬೯]

ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ ಪೋಷಕರ ಆದಾಯವನ್ನು ಮಿತಗೊಳಿಸಿ ''ವಾರ್ಷಿಕ ಆದಾಯ ೭೫೦ರೂ ಗಿಂತ ಕಡಿಮೆ ಇದ್ದರೆ ಅವರ ಮಕ್ಕಳಿಗೆ ಭಾರತ ಸರ್ಕಾರದಿಂದ ಪ್ರೌಢಶಾಲೆಯ ನಂತರದ ವಿದ್ಯಾರ್ಥಿ ವೇತನವು ದೊರೆಯುತ್ತದೆ. ಈ ಸೌಲಭ್ಯವನ್ನು ಭಾರತ ಸರ್ಕಾರ ೧೯೪೪ರಲ್ಲೇ ಜಾರಿಗೆ ತಂದಿತು. ಈ ಕಾರ್ಯಕ್ರಮವನ್ನು ವಿಕೇಂದ್ರಿಕರಿಸಿ ೧೯೫೯-೬೦ ರಿಂದ ರಾಜ್ಯಗಳೇ ಅದನ್ನು ನಿರ್ವಹಿಸುವಂತಾಯಿತು.[೭೦] ಈ ರೀತಿ ಭಾರತ ಸರ್ಕಾರ ಮತ್ತು ಕರ್ನಾಟಕ ರಾಜ್ಯ ಸರ್ಕಾರಗಳು ರಾಜ್ಯದಲ್ಲಿ ೧೯೮೧-೮೨ ಈ ರೀತಿ ಭಾರತ ಸರ್ಕಾರ ೨೨೫.೪೪ ಲಕ್ಷರೂ.ಗಳ ವಿದ್ಯಾರ್ಥಿ ವೇತನವನ್ನು ಪರಿಶಿಷ್ಟ ಜನಾಂಗಗಳ ೨೪.೯೯೩ ವಿದ್ಯಾರ್ಥಿಗಳಿಗೆ ದೊರಕಿಸಿತು. ರಾಜ್ಯ ಸರ್ಕಾರ ೦.೯೮ ಲಕ್ಷ ರೂ.ಗಳ ವಿದ್ಯಾರ್ಥಿ ವೇತನವನ್ನು ೨೫೨ ವಿದ್ಯಾರ್ಥಿಗಳಿಗೆ ನೀಡಲಾಯತು.[೭೧] ಹೀಗೆ

ಪ್ರತಿವರ್ಷವು ಪ್ರೌಢಶಾಲಾ ನಂತರ ಶೈಕ್ಷಣಿಕ ವಿದ್ಯಾರ್ಥಿ ವೇತನ ಸರ್ಕಾರ ನೀಡುತ್ತಾ ಪರಿಶಿಷ್ಟ ಜಾತಿಯ ಜನರ ಶೈಕ್ಷಣಿಕ ಅಭಿವೃದ್ಧಿ ಸಾಧಿಸಲು ಶ್ರಮಿಸಿದೆ. ಇದರೊಂದಿಗೆ ಐದನೆಯ ಯೋಜನೆಯಲ್ಲಿ (೧೯೭೪-೭೮) ಉನ್ನತ ವ್ಯಾಸಂಗ ಮಾಡಲು ವಿದ್ಯಾರ್ಥಿ ವೇತನ ನೀಡಲು ಯೋಜಿಸಿದೆ. ಹೀಗೆ ಕೇವಲ ವಸತಿ ವ್ಯವಸ್ಥೆ ಮಾತ್ರ ಮಾಡದೇ ಆ ಸೌಲಭ್ಯ ಪಡೆಯದೆ ಇರುವವರಿಗೂ ಸಹ ವಿದ್ಯಾಭ್ಯಾಸಕ್ಕೆ ಅನುಕೂಲವಾಗಲೆಂದು ವಿದ್ಯಾರ್ಥಿ ವೇತನ ನೀಡುತ್ತಾ ಬಂದಿದೆ. ಇಂತಹ ಸಂದರ್ಭಗಳಲ್ಲಿ ರಾಜ್ಯದಾದ್ಯಂತ ಲಂಬಾಣಿ ಸಮುದಾಯದ ಅನೇಕ ವಿದ್ಯಾರ್ಥಿಗಳು ಈ ಸೌಲಭ್ಯ ಪಡೆದಿರುವರು; ಅದರಲ್ಲೂ ಬಳ್ಳಾರಿ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ನೀಡುತ್ತಿರುವ ವಿದ್ಯಾರ್ಥಿ ವೇತನವನ್ನು ಹೆಚ್ಚಿನ ಪ್ರಮಾಣದಲ್ಲಿ ಪಡೆದಿದ್ದಾರೆ.

**ಪ್ರತಿಭಾ ವಿದ್ಯಾರ್ಥಿ ವೇತನ**

ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳು ವಾರ್ಷಿಕ ಪರೀಕ್ಷೆಯಲ್ಲಿ ಹೆಚ್ಚು ಅಂಕಗಳನ್ನು ತೆಗೆದು ಉತ್ತೀರ್ಣರಾದವರಿಗೆ ಪ್ರೋತ್ಸಾಹ ನೀಡುವ ಉದ್ದೇಶದಿಂದ ಪ್ರತಿಭಾ ವಿದ್ಯಾರ್ಥಿವೇತನ ನೀಡಲಾಗುತ್ತಿದೆ. ಇದು ಅವರಲ್ಲಿ ಸ್ಪರ್ಧಾ ಮನೋಭಾವನೆ ಬೆಳೆಸಿಕೊಂಡು ಉತ್ತಮ ಅಂಕಗಳಿಸಲು ಪ್ರಯತ್ನಿಸಲು ಪ್ರೇರಣೆ ನೀಡಿದೆ. ಈ ರೀತಿಯಲ್ಲಿ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ನೀಡುವ ಉದ್ದೇಶದಿಂದ ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ (೧೯೬೧-೬೬) ಪ್ರತಿಭಾ ವಿದ್ಯಾರ್ಥಿ ವೇತನವು ೨೬.೫೮೫ ವಿದ್ಯಾರ್ಥಿಗಳಿಗೆ ದೊರೆತರೆ, ೧೯೭೪-೭೫ ಸಾಲಿನಲ್ಲಿ ಈ ವಿದ್ಯಾರ್ಥಿ ವೇತನವನ್ನು ಪಡೆದವರ ಸಂಖ್ಯೆ ೩.೦೫೦ ಆಗಿದ್ದಿತು. ೧೯೮೧-೮೨ರ ವೇಳೆಗೆ ಪ್ರತಿಭಾ ವಿದ್ಯಾರ್ಥಿ ವೇತನವನ್ನು ಪಡೆದವರ ಸಂಖ್ಯೆ ೧೮.೮೬೯ಕ್ಕೆ ಏರಿತು.[೧೯] ಇದೇ ರೀತಿ ಎಸ್.ಎಸ್.ಎಲ್.ಸಿ.ಯಲ್ಲಿ ಮೊದಲ ಬಾರಿಗೆ ತೇರ್ಗಡೆಯಾದವರಿಗೆ ರೂ ೫೦೦ ಮತ್ತು ರ್‍ಯಾಂಕ್ ಹೊಂದಿದವರಿಗೆ ರೂ ೧೦೦೦ಗಳನ್ನು ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳು ಯಾವ ಕಾರಣಕ್ಕೂ ವ್ಯಾಸಂಗವನ್ನು ನಿಲ್ಲಿಸದಂತೆ ಪ್ರೋತ್ಸಾಹ ಪೂರ್ವಕ ನಗದು ಬಹುಮಾನ ಯೋಜನೆಯಲ್ಲಿ (೧೯೭೪-೭೮) ನೀಡುವ ಈ ಕಾರ್ಯಕ್ರಮ ಆರಂಭವಾಯಿತು. ೧೯೮೧-೮೨ರಲ್ಲಿ ೧೭೮ ವಿದ್ಯಾರ್ಥಿಗಳು ಈ ಕಾರ್ಯಕ್ರಮದ ಪ್ರಯೋಜನ ಪಡೆದಿದ್ದಾರೆ.[೨೦] ಪ್ರೌಢ ಶಿಕ್ಷಣ ನಂತರ ಪಿ.ಯು.ಸಿ., ಪದವಿ, ಸ್ನಾತಕೋತ್ತರ ಪದವಿ, ಕೃಷಿ, ಪಶುವೈದ್ಯಕೀಯ, ವಿಜ್ಞಾನ, ಇಂಜಿನಿಯರಿಂಗ್, ವೈದ್ಯಕೀಯ ಸೇವೆಗಳ ಅಂತಿಮ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದವರಿಗೆ ನಿಗದಿ ಪಡಿಸಿದ ಹಣವನ್ನು 'ಪ್ರೋತ್ಸಾಹಧನ'ವಾಗಿ ಪರಿಶಿಷ್ಟ ಜಾತಿಗಳಿಗೆ ನೀಡಲಾಗುತ್ತಿದ್ದು ಅದರ ಪ್ರಯೋಜನೆಯನ್ನು ಲಂಬಾಣಿ ಸಮುದಾಯದ ಅನೇಕರು ಪಡೆದಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ಕೆಲವೊಂದು ಕೋರ್ಸ್‌ಗಳನ್ನು ಹೊರತುಪಡಿಸಿದರೆ ಉಳಿದವುಗಳಲ್ಲಿ 'ಪ್ರೋತ್ಸಾಹ ಧನ' ಅಥವಾ ಪ್ರತಿಭಾ ವಿದ್ಯಾರ್ಥಿ ವೇತನ ಪಡೆದಿದ್ದಾರೆ. ಆದರೆ ನಿರ್ದಿಷ್ಟ ಸಂಖ್ಯೆಯ ಬಗ್ಗೆ ಮಾಹಿತಿ ದೊರೆತಿರುವುದಿಲ್ಲ.

**ವಸತಿ ಶಾಲೆಗಳು**

ಪರಿಶಿಷ್ಟ ಜಾತಿಯ ಬಡವರ ಮಕ್ಕಳಿಗಾಗಿ ಶೈಕ್ಷಣಿಕ ಅಭಿವೃದ್ಧಿಗಾಗಿ ಸಮಾಜ ಕಲ್ಯಾಣ ಇಲಾಖೆಯಿಂದ ವಸತಿ ಶಾಲೆ ವ್ಯವಸ್ಥೆಯನ್ನು ಕೈಗೊಳ್ಳಲಾಗಿದ್ದು, ಒಂದರಿಂದ ನಾಲ್ಕನೆಯ ತರಗತಿಯವರೆಗೆ ಶಿಕ್ಷಣದ ಜೊತೆಗೆ

ಉಚಿತ ಊಟ-ವಸತಿ ಸೌಲಭ್ಯ ಒದಗಿಸಲಾಗುವುದು. ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ (೧೯೬೧-೬೬) ಒಟ್ಟು ೧೨ ವಸತಿ ಶಾಲೆಗಳು ಆರಂಭವಾದವು. ಮುಂದಿನ ಯೋಜನೆಗಳಲ್ಲಿ ಈ ಶಾಲೆಗಳನ್ನು ನಡೆಸಲು ಹಣವನ್ನು ಒದಗಿಸಲಾಗಿದೆ. ೧೯೮೦-೮೧ರಲ್ಲಿ ಹೊಸದಾಗಿ ಎರಡು ಶಾಲೆಗಳಿದ್ದು, ೧೯೮೧-೮೨ರಲ್ಲಿ ಇನ್ನು ಒಂಬತ್ತು ಶಾಲೆಗಳು ತೆರೆಯಲ್ಪಟ್ಟಿವೆ. ಒಟ್ಟು ೨೩ ಶಾಲೆಗಳು ರಾಜ್ಯದಲ್ಲಿ ನಿರತವಾಗಿದ್ದವು.[೮] ೨೦೦೦-೦೧ನೇ ಸಾಲಿನ ಹೊತ್ತಿಗೆ ಒಟ್ಟು ೮೮ ವಸತಿ ಶಾಲೆಗಳಿದ್ದು ಬಳ್ಳಾರಿ ಜಿಲ್ಲೆ ೩ನ್ನು ಹೊಂದಿದೆ. ಕೂಡ್ಲಿಗಿ ಹೊಸಪೇಟೆ ಮತ್ತು ಬಳ್ಳಾರಿಯಲ್ಲಿ ತಲಾ ಒಂದು ಇದೆ.

೨೦೧೨-೧೩ನೇ ಸಾಲಿನ ಹೊತ್ತಿಗೆ ಬಳ್ಳಾರಿ ಜಿಲ್ಲೆಯಲ್ಲಿ ೫ ವಸತಿ ಶಾಲೆಗಳು ಪ್ರಾರಂಭವಾಗಿದೆ. ಈ ವಸತಿ ನಿಲಯಗಳಲ್ಲಿ ಲಂಬಾಣಿ ಸಮುದಾಯದ ಅನೇಕ ವಿದ್ಯಾರ್ಥಿಗಳು ಇದ್ದು ಈ ಸೌಲಭ್ಯವನ್ನು ಬಳಸಿಕೊಂಡಿರುವುದು ಕಂಡುಬರುತ್ತದೆ.

**ಮೊರಾರ್ಜಿ ದೇಸಾಯಿ, ಕಿತ್ತೂರು ರಾಣಿ ಚೆನ್ನಮ್ಮ ಮತ್ತು ನವೋದಯ ವಸತಿ ಶಾಲೆಗಳು**

ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಕೊಡುವ ಉದ್ದೇಶದಿಂದ ಮೊರಾರ್ಜಿ ದೇಸಾಯಿ, ಕಿತ್ತೂರು ರಾಣಿ ಚೆನ್ನಮ್ಮ ಮತ್ತು ನವೋದಯ ವಸತಿ ಶಾಲೆಗಳು ಆರಂಭಗೊಂಡವು. ಅಲ್ಲಿ ಶಿಕ್ಷಣದ ಜೊತೆ ಉಚಿತ ಊಟ, ವಸತಿ, ಬಟ್ಟೆ, ಪುಸ್ತಕ ಹಾಗೂ ಇತರೆ ಸೌಲಭ್ಯಗಳನ್ನು ಸಮಾಜ ಕಲ್ಯಾಣ ಇಲಾಖೆಯಿಂದ ನೀಡಲಾಗುತ್ತದೆ. ಇಂತಹ ಸೌಲಭ್ಯ ಪಡೆಯಲು ಪರೀಕ್ಷೆಯನ್ನು ಏರ್ಪಡಿಸಿ ಉತ್ತಮ ಅಂಕಗಳಿಸಿದವರನ್ನು ಆಯ್ಕೆ ಮಾಡಲಾಗುವುದು.

೨೦೧೨-೧೩ನೇ ಸಾಲಿನಲ್ಲಿ ಪರಿಶಿಷ್ಟ ಜಾತಿಯ ಮೊರಾರ್ಜಿ ದೇಸಾಯಿ ಮಾದರಿ ವಸತಿ ಶಾಲೆಗಳು ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ೮ಇದ್ದು ಹಡಗಲಿ ತಾಲೂಕಿನ ಮೀರಕೊರನಹಳ್ಳಿ ಮೊರಾರ್ಜಿ ದೇಸಾಯಿ ಮಾದರಿ ವಸತಿ ಶಾಲೆ, ವರಕನಹಳ್ಳಿ ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ, ಹಗರಿಬೊಮ್ಮನಹಳ್ಳಿ ತಾಲೂಕಿನ ವಲ್ಲಭಾಪುರ ಮೊರಾರ್ಜಿ ದೇಸಾಯಿ ವಸತಿಶಾಲೆ, ಹೆಚ್.ಬಿ. ಹಳ್ಳಿಯ ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ, ಹೊಸಪೇಟೆ ತಾಲೂಕಿನ ತಿಮ್ಮಲಾಪುರ ಮೊರಾರ್ಜಿ ದೇಸಾಯಿ ವಸತಿ ಶಾಲೆ, ರಾಮಸಾಗರ (ಶಿಕ್ಷಣ) ಮೊರಾರ್ಜಿ ದೇಸಾಯಿ ವಸತಿ ಶಾಲೆ, ಕೂಡ್ಲಿಗಿ ತಾಲೂಕಿನ ಕಂದಗಲ್ಲು ಗ್ರಾಮದ ವಸತಿ ಶಾಲೆ, ಸಿರುಗುಪ್ಪದಲ್ಲಿ ಮೊರಾರ್ಜಿ ದೇಸಾಯಿ ವಸತಿ ಶಾಲೆ.[೨] ಹಾಗೂ ಚಿಕ್ಕಜೋಗಿಹಳ್ಳಿಯಲ್ಲಿ ಕೇಂದ್ರ ಸರ್ಕಾರದ ವ್ಯಾಪ್ತಿಗೆ ಬರುವ ಜವಹಾರ ನವೋದಯ ಶಾಲೆಯ ಪ್ರವೇಶಕ್ಕಾಗಿ ಗ್ರಾಮೀಣ ಭಾಗದ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಆಯ್ಕೆ ಮಾಡಲಾಗುತ್ತಿದೆ. ಈ ಶಾಲೆಯಲ್ಲಿ ಲಂಬಾಣಿ ಸಮುದಾಯದ ಕೆಲವು ಬಾಲಕ-ಬಾಲಕಿಯರು ಶಿಕ್ಷಣ ಪಡೆದಿದ್ದಾರೆ.

**ಸಹಾಯ ಧನ**

**ಎಂ.ಫಿಲ್ ಮತ್ತು ಪಿಎಚ್.ಡಿ ವಿದ್ಯಾರ್ಥಿಗಳಿಗೆ ಫೆಲೋಷಿಪ್**

ಸರ್ಕಾರವು ಸಮಾಜ ಕಲ್ಯಾಣ ಇಲಾಖೆಯಿಂದ ವಿವಿಧ ರೀತಿಯಲ್ಲಿ ಸಹಾಯಧನವನ್ನು ನೀಡುವುದರೊಂದಿಗೆ ಪರಿಶಿಷ್ಟ ಜಾತಿಯ ಮಕ್ಕಳು ಶೈಕ್ಷಣಿಕ ಅಭಿವೃದ್ಧಿ ಹೊಂದುವಂತೆ ಮಾಡಲು ಪ್ರೋತ್ಸಾಹಿಸಿವೆ. ಪರಿಶಿಷ್ಟ ಜಾತಿಯ

ವಿದ್ಯಾರ್ಥಿಗಳು ರಾಜ್ಯದ ವಿವಿಧ ವಿಶ್ವವಿದ್ಯಾಲಯಗಳಲ್ಲಿ ವಿವಿಧ ವಿಷಯಗಳ ಮೇಲೆ ಸಂಶೋಧನೆ ಕೈಗೊಂಡಿದ್ದಾರೆ. ಅಂತಹ ವಿದ್ಯಾರ್ಥಿಗಳಿಗೆ ಸಂಶೋಧನೆಗೆ ಸಹಾಯಕವಾಗಲು ಧನಸಹಾಯವನ್ನು ಮಾಡಲಾಗುತ್ತಿದೆ. ಎಂ.ಫಿಲ್ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ೧೫೦೦೦ ಹಾಗೂ ಪಿಎಚ್.ಡಿ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ೨೧.೦೦೦ ನೀಡುವ ಯೋಜನೆಯುನ್ನು ೨೦೦೦-೦೧ನೇ ಸಾಲಿನಿಂದ ಗಿರಿಜನ ಕಲ್ಯಾಣ ಇಲಾಖೆಯಿಂದ ಕಾರ್ಯಗತಗೊಳಿಸಲಾಗುತ್ತಿದೆ. ಇದಕ್ಕೂ ಹಿಂದೆ ಈ ಕಾರ್ಯಕ್ರಮವನ್ನು ಸಮಾಜ ಕಲ್ಯಾಣ ಇಲಾಖೆ ವತಿಯಿಂದ ಅನುಷ್ಠಾನಗೊಳಿಸಲಾಗುತ್ತಿತ್ತು. ಲಂಬಾಣಿ ಸಮುದಾಯದ ಸಂಶೋಧಕ ವಿದ್ಯಾರ್ಥಿಗಳು ಸಹಾಯಧನ ಪಡೆಯುತ್ತಿರುವುದು ಕಂಡುಬರುತ್ತದೆ.

**ಕಾನೂನು ಪದವೀಧರರಿಗೆ ಧನಸಹಾಯ**

ಕಾನೂನು ಪದವಿಯನ್ನು ಪಡೆದ ಲಂಬಾಣಿ ನಿರುದ್ಯೋಗಿ ಯುವಕ ಯುವತಿ ಕಾನೂನು ಪದವೀಧರರು ಸ್ವತಂತ್ರ ವಕೀಲ ವೃತ್ತಿಯನ್ನು ಕೈಗೊಳ್ಳಲು ಹಾಗೂ ಬಾರ್ ಕೌನ್ಸಿಲ್‌ನಲ್ಲಿ ಅವರ ಹೆಸರನ್ನು ನೋಂದಾಯಿಸಿಕೊಳ್ಳಲು ಸಹಾಯವಾಗುವಂತೆ ರೂ.೫೦೦.೦೦ಗಳ ಧನಸಹಾಯವನ್ನು ನೀಡಲಾಗುತ್ತದೆ.

**ಕಾನೂನು ಪದವೀಧರರಿಗೆ ಆಡಳಿತದಲ್ಲಿ ತರಬೇತಿ**

ಕಾನೂನು ಪದವಿಯನ್ನು ಪಡೆದ ಪರಿಶಿಷ್ಟ ಜಾತಿ ನಿರುದ್ಯೋಗಿ ಯುವಕ ಯುವತಿಯರಿಗೆ ನ್ಯಾಯಾಂಗ ಆಡಳಿತದಲ್ಲಿ ಹೆಚ್ಚು ಅನುಭವವನ್ನು ಹಾಗೂ ಜ್ಞಾನವನ್ನು ಪಡೆಯಲು ಅನುಕೂಲವಾಗುವಂತೆ ತರಬೇತಿಯನ್ನು ನೀಡಲಾಗುತ್ತಿದೆ.

**ಐ.ಟಿ.ಐ ಮತ್ತು ಐ.ಟಿ.ಸಿ. ತರಬೇತಿ ಹೊಂದುವರಿಗೆ ಸ್ಟೈಫಂಡ್**

ಪರಿಶಿಷ್ಟ ಜಾತಿ ನಿರುದ್ಯೋಗಿ ಯುವಕ ಯುವತಿಯರಿಗೆ ತರಬೇತಿಯನ್ನು ನೀಡಿ ಸ್ವತಂತ್ರವಾಗಿ ಉದ್ಯೋಗವನ್ನು ಆಯ್ಕೆ ಮಾಡಿಕೊಳ್ಳಲು ಅವಕಾಶ ಕಲ್ಪಿಸಿಕೊಡುವ ಉದ್ದೇಶದಿಂದ ಈ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ.

**ಇಂಜನಿಯರಿಂಗ್ ವಿದ್ಯಾರ್ಥಿಗಳಿಗೆ ಸಾಧನ ಸಲಕರಣಗಳ ಸರಬರಾಜು**

ತಾಂತ್ರಿಕ ಶಿಕ್ಷಣದಲ್ಲಿ ಅಭ್ಯಾಸ ಮಾಡುತ್ತಿರುವ ಬಡ ಲಂಬಾಣಿ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ಬೇಕಾಗುವ ತಾಂತ್ರಿಕ ಸಲಕರಣೆಗಳನ್ನು ಪೂರೈಸುವ ಉದ್ದೇಶದಿಂದ ಈ ಕಾರ್ಯಕ್ರಮವನ್ನು ರೂಪಿಸಲಾಗಿದೆ. ಪದವಿ ಡಿಪ್ಲೋಮ ತರಬೇತಿಯಲ್ಲಿ ಪ್ರಥಮ ವರ್ಷದ ವಿದ್ಯಾರ್ಥಿಗಳಿಗೆ ಡ್ರಾಯಿಂಗ್ ಬೋರ್ಡ್, ಸೈಂಟಿಫಿಕ್ ಕ್ಯಾಲ್ಕುಲೇಟರ್ ಮತ್ತು ತಾಂತ್ರಿಕ ಸಲಕರಣೆಗಳನ್ನು ನೀಡಲಾಗುತ್ತಿದೆ.

**ಅಧ್ಯಯನ ಪ್ರವಾಸಕ್ಕೆ ನೆರವು**

ಈ ಯೋಜನೆಯ ಅಡಿಯಲ್ಲಿ ತಾಂತ್ರಿಕ ಮತ್ತು ಇನ್ನಿತರ ವೃತ್ತಿಪರ ವಿಷಯಗಳಲ್ಲಿ ಅಧ್ಯಯನ ಮಾಡುತ್ತಿರುವ ಪರಿಶಿಷ್ಟ ವರ್ಗದ ಬಡ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಪ್ರವಾಸ ಕಡ್ಡಾಯವಾಗಿದ್ದರೆ ಅಂತಹ

ವಿದ್ಯಾರ್ಥಿಗಳಿಗೆ ಪ್ರವಾಸ ಕೈಗೊಳ್ಳಲು ರೂ.೧೦೦೦ ನೀಡಲಾಗುತ್ತದೆ. ಇಂತಹ ಸೌಲಭ್ಯವನ್ನು ಲಂಬಾಣಿ ಸಮುದಾಯದ ಬಾಲಕ-ಬಾಲಕಿಯರು ಪಡೆದುಕೊಂಡಿರುವುದು ಕಂಡುಬರುತ್ತದೆ.

**೫. ಖಾಸಗಿ ಶಿಕ್ಷಣ ಸಂಸ್ಥೆಗಳು ಮತ್ತು ಲಂಬಾಣಿಗರು**

ಶಿಕ್ಷಣ ಕ್ಷೇತ್ರದಲ್ಲಿ ಸರ್ಕಾರ ಮಾತ್ರವಲ್ಲದೇ ಸರ್ಕಾರೇತರ ಸಂಘ ಸಂಸ್ಥೆಗಳು ಶೈಕ್ಷಣಿಕ ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರವನ್ನು ವಹಿಸಿವೆ. ಸರ್ಕಾರದ ಅನುದಾನದಲ್ಲಿ ಅನೇಕ ವಿದ್ಯಾಸಂಸ್ಥೆಗಳನ್ನು ತೆರೆದು ಶಿಕ್ಷಣ ಪಡೆಯಲು ಅನುಕೂಲ ಮಾಡಿಕೊಡಲಾಗಿದೆ. ಅವುಗಳ ಆಶ್ರಯದಲ್ಲಿ ಕೇವಲ ಶಾಲಾ ಕಾಲೇಜುಗಳಲ್ಲದೇ ವಿದ್ಯಾರ್ಥಿ ನಿಲಯಗಳನ್ನು ಸಹ ತೆರೆಯಲಾಗಿದೆ. ಇಂತಹ ಖಾಸಗಿ ಸಂಸ್ಥೆಗಳು ಪ್ರಾಚೀನ ಕಾಲದಿಂದಲೂ ಇರುವುದು ಕಂಡುಬರುತ್ತದೆ. ಪ್ರಾಚೀನ ಕರ್ನಾಟಕದಲ್ಲಿ ಉನ್ನತ ಶಿಕ್ಷಣ ಕೇಂದ್ರಗಳಾಗಿದ್ದ ಅಗ್ರಹಾರ, ಬ್ರಹ್ಮಪುರಿ ದೇವಸ್ಥಾನ (ದೇವಸ್ಥಾನ ಕ್ರಮೇಣ ಮಠವೆಂಬ ಹೆಸರು ಪಡೆಯಿತು) ಹಾಗೂ ಘಟಿಕ ಸ್ಥಾನಗಳು ಸರ್ಕಾರದಿಂದ ಮತ್ತು ಸಾರ್ವಜನಿಕರಿಂದ ಅಗತ್ಯವಾದ ನೆರವನ್ನು ಪಡೆಯುತ್ತಿದ್ದರೂ ಸ್ವತಂತ್ರವಾಗಿ ಆಡಳಿತ ನಡೆಸುವ ಖಾಸಗಿ ಶಿಕ್ಷಣ ಸಂಸ್ಥೆಗಳಾಗಿದ್ದವು.[೨೩] ಇವುಗಳು ಕೇವಲ ಬ್ರಾಹ್ಮಣ ವರ್ಗಕ್ಕೆ ಮಾತ್ರ ಸೀಮಿತವಾಗಿದ್ದವು. ಆದರೆ ಆಧುನಿಕ ಕಾಲದ ಸಂದರ್ಭದಲ್ಲಿ ಬ್ರಾಹ್ಮಣೇತರರು ಸಹ ಅನೇಕ ಶೈಕ್ಷಣಿಕ ಕೇಂದ್ರಗಳನ್ನು ತೆರೆದಿರುವುದು ಕಂಡುಬರುತ್ತದೆ. ಈ ಕಾಲದಲ್ಲಿ ಅವಶ್ಯವಿರುವಷ್ಟು ಶಿಕ್ಷಣ ಕೇಂದ್ರಗಳು ಇರಲಿಲ್ಲ. ಬ್ರಿಟಿಷರು ಭಾರತವನ್ನು ಆಳುತ್ತಿದ್ದಾಗ ಭಾರತೀಯರಿಗೆ ಅವಶ್ಯವಿರುವಷ್ಟು ಶಿಕ್ಷಣ ಸಂಸ್ಥೆಗಳನ್ನು ಬ್ರಿಟಿಷ್ ಸರ್ಕಾರ ತೆರೆದಿರಲಿಲ್ಲ. ಈ ಕೊರತೆಯನ್ನು ತುಂಬಲು ಭಾರತೀಯರಿಗೂ ವಿದ್ಯಾಭ್ಯಾಸದ ಸೌಲಭ್ಯಗಳನ್ನು ವಿಸ್ತರಿಸುವ ಘನ ಉದ್ದೇಶದಿಂದ ಖಾಸಗಿ ಶಿಕ್ಷಣ ಸಂಸ್ಥೆಗಳು ಜನ್ಮತಾಳಿದವೆಂದು ತಿಳಿದುಬರುತ್ತದೆ.[೨೪] ಅಲ್ಲಿಂದ ಆರಂಭಗೊಂಡ ಖಾಸಗಿ ಶಿಕ್ಷಣ ಸಂಸ್ಥೆಗಳು ಇಂದಿಗೂ ಸಹ ತೆರೆಯುತ್ತಲೇ ಹೋಗುತ್ತಿರುವುದು ಕಂಡುಬರುತ್ತದೆ. ಮೊದಲು ಇಂತಹ ಸಂಸ್ಥೆಗಳನ್ನು ಸ್ಥಾಪನೆ ಮಾಡಿದ್ದು ಕ್ರೈಸ್ತ ಮಿಷನರಿಗಳು. ಆ ನಂತರದಲ್ಲಿ ಮಠ-ಮಾನ್ಯಗಳು ಹಾಗೂ ವಿವಿಧ ಸಂಘ-ಸಂಸ್ಥೆಗಳನ್ನು ಈ ಮಾರ್ಗ ಹಿಡಿದಿವೆ. ಈ ಹಿನ್ನೆಲೆಯಲ್ಲಿ ಇಂದು ಸರ್ಕಾರದಿಂದ ಅನುದಾನ ಪಡೆಯುವ ಮತ್ತು ಶಾಶ್ವತ ಅನುದಾನರಹಿತ ಶಿಕ್ಷಣ ಸಂಸ್ಥೆಗಳು ಇರುವುದು ಕಂಡುಬರುತ್ತದೆ. ಸ್ವಾತಂತ್ರ ಪೂರ್ವ ಮತ್ತು ನಂತರ ಕರ್ನಾಟಕದಲ್ಲಿ ಸ್ಥಾಪನೆಗೊಂಡಂತೆ ಶೈಕ್ಷಣಿಕ ಸಂಸ್ಥೆಗಳನ್ನು ತೆರೆಯುವುದರಲ್ಲಿ ಪ್ರಮುಖ ಜಾತಿಗಳೆಂದರೆ ಲಿಂಗಾಯಿತರು ಮತ್ತು ಒಕ್ಕಲಿಗರು. ಈ ಜನಾಂಗದವರ ಮೇಲ್ವಿಚಾರಣೆಯಲ್ಲಿ ಶೈಕ್ಷಣಿಕ ಸಂಸ್ಥೆಗಳು ಕರ್ನಾಟಕ ಉದ್ದಗಲಕ್ಕೂ ಕಂಡುಬರುತ್ತದೆ. ಈ ರೀತಿಯಾಗಿ ಜಾತಿ ಸಂಘ ಸಂಸ್ಥೆ ಮಠಮಾನ್ಯಗಳ ಶೈಕ್ಷಣಿಕ ಸಂಸ್ಥೆಗಳ ಸ್ಥಾಪನೆ ಸ್ವಾತಂತ್ರ ಪೂರ್ವದಿಂದಲೇ ಆರಂಭಗೊಂಡಿವೆ. ಅವು ಬೆರಳೆಣಿಕೆಯಷ್ಟು ಆದರೂ ಅದರಲ್ಲೂ ಅವು ಕೇವಲ ಸರ್ಕಾರದ ಅನುದಾನವನ್ನೇ ಆಶ್ರಯಿಸಿ ನಡೆಯುವಂಥವುಗಳಾಗಿದ್ದವು. ಈ ವರ್ಗ ಶೈಕ್ಷಣಿಕ ಸಂಸ್ಥೆಗಳನ್ನು ಹೆಚ್ಚು ಹೆಚ್ಚು ತೆರೆಯಲು ಅವಲಂಬಿಸಿದ್ದು ೮೦ರ ದಶಕದಲ್ಲಿ ಅಲ್ಲಿಂದ ಇವರು ಅನೇಕ ಸಂಸ್ಥೆಗಳನ್ನು ತೆರೆದು ಶೈಕ್ಷಣಿಕ ಕ್ಷೇತ್ರಕ್ಕೆ ಅಮೂಲ್ಯವಾದ ಸೇವೆಯನ್ನು ಸಲ್ಲಿಸಿವೆ. ಈ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಲಂಬಾಣಿಗರು ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಸ್ಥಾಪನೆ ಮಾಡಿರುವ ವಿವಿಧ ಶೈಕ್ಷಣಿಕ ಸಂಸ್ಥೆಗಳ ಬಗ್ಗೆ ತಿಳಿಯಲು ಪ್ರಯತ್ನಿಸಲಾಗಿದೆ.

**ಶಿಕ್ಷಣ ಸಂಸ್ಥೆಗಳು**

**೧. ಶ್ರೀ ಮಂಜುನಾಥಸ್ವಾಮಿ ಬಂಜಾರ ಟ್ರಸ್ಟ್, ಬೆಂಗಳೂರು, ಚಿಕ್ಕಜೋಗಿಹಳ್ಳಿ ತಾಂಡಾ, ಕೂಡ್ಲಿಗಿ**

ಈ ಸಂಸ್ಥೆಯನ್ನು ೨೦೦೪ರಲ್ಲಿ ಶ್ರೀಮತಿ ಚಂದ್ರಿಕಾ ಬಾಯಿಯವರು ಸ್ಥಾಪಿಸಿದರು. ವಿದ್ಯಾಭ್ಯಾಸದಲ್ಲಿ ಆಸಕ್ತಿಯುಳ್ಳ ವಿದ್ಯಾರ್ಥಿಗಳಿಗೆ ಊಟ. ವಸತಿ ವ್ಯವಸ್ಥೆಯನ್ನು ಕಲ್ಪಿಸಲಾಯಿತು. ಇದರಿಂದ ಅನೇಕ ಬಡ ವಿದ್ಯಾರ್ಥಿಗಳಿಗೆ ಅನುಕೂಲವಾಯಿತು. ಸದ್ರಿ ಸಂಸ್ಥೆಯು ಕೂಡ್ಲಿಗಿ ತಾಲೂಕು ಕೇಂದ್ರದಲ್ಲಿದ್ದು ಶ್ರೀ ಲಕ್ಷ್ಮೀವೆಂಕಟೇಶ್ವರ ಸಂಯುಕ್ತ ಸ್ವತಂತ್ರ ಪದವಿ ಪೂರ್ವ ಕಾಲೇಜು ಹಾಗೂ ಶ್ರೀ ಲಕ್ಷ್ಮಿ ವೆಂಕಟೇಶ್ವರ ಪ್ರಥಮ ದರ್ಜೆ ಕಾಲೇಜನ್ನು ಪ್ರಾರಂಭಿಸಲಾಯಿತು. ಶಿಕ್ಷಣದ ಜೊತೆ ಅನೇಕ ತರಬೇತಿ ಕೇಂದ್ರಗಳನ್ನು ಸ್ಥಾಪಿಸಿದ್ದಾರೆ.

ಶ್ರೀ ಲಕ್ಷ್ಮೀವೆಂಕಟೇಶ್ವರ ಶಿಕ್ಷಣ ಮಹಾವಿದ್ಯಾಲಯ (ಬಿ.ಇಡಿ), ಶ್ರೀ ಲಕ್ಷ್ಮೀವೆಂಕಟೇಶ್ವರ ಶಿಕ್ಷಕರ ತರಬೇತಿ ಸಂಸ್ಥೆ (ಡಿ.ಇಡಿ), ಶ್ರೀ ಲಕ್ಷ್ಮೀವೆಂಕಟೇಶ್ವರ ಕೈಗಾರಿಕಾ ತರಬೇತಿ ಕೇಂದ್ರ (ಐ.ಟಿ.ಐ)ವನ್ನು ಸ್ಥಾಪಿಸಿದ್ದಾರೆ. ಇದರಿಂದ ಕೇವಲ ಪ್ರಾಥಮಿಕ, ಪ್ರೌಢ ಶಾಲೆಗಳನ್ನು ಮಾತ್ರ ಹೊಂದಿದ್ದ ಲಂಬಾಣಿಗರ ಸಂಸ್ಥೆಗಳೆಲ್ಲ ಈಗ ಉನ್ನತ ಮಟ್ಟದ ಶಿಕ್ಷಣ ಹಾಗೂ ತಾಂತ್ರಿಕ ಶಿಕ್ಷಣಕ್ಕೂ ಆದ್ಯತೆ ನೀಡುತ್ತಿರುವುದು ಕಂಡುಬರುತ್ತದೆ. ಈ ಸಂಸ್ಥೆಯಲ್ಲಿ ೧೦೦೦ ದಿಂದ ೧೨೦೦ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ. ಸುಮಾರು ೪ ಎಕರೆ ಭೂಮಿಯಲ್ಲಿ ಸುಂದರವಾದ ಶಾಲಾಕಟ್ಟಡವನ್ನು ನಿರ್ಮಿಸಲಾಗಿದೆ. ಇಂದು ಈ ಸಂಸ್ಥೆ ಉತ್ತಮವಾಗಿ ಕಾರ್ಯನಿರ್ವಹಿಸುತ್ತಿದ್ದು, ಅನೇಕ ಪ್ರಗತಿಪರ ಯೋಜನೆಗಳನ್ನು ಹಮ್ಮಿಕೊಂಡಿದೆ. ಇದು ಅನುದಾನ ರಹಿತವಾಗಿದ್ದು ಸ್ವಂತ ಕಟ್ಟಡವನ್ನು ಹೊಂದಿದೆ.

**೨. ಶ್ರೀ ಸೇವಾಲಾಲ್ ವಿದ್ಯಾಸಂಸ್ಥೆ, ಹಂಪಸಾಗರ, ಹಗರಿಬೊಮ್ಮನಹಳ್ಳಿ ತಾಲೂಕು.**

ಈ ಸಂಸ್ಥೆಯನ್ನು ೧೯೯೨ ಮೇ ೩೦ರಂದು ಶ್ರೀ ನಾಣಕೀ ನಾಯ್ಕರವರು ಸ್ಥಾಪಿಸಿದರು. ವಿದ್ಯಾಭ್ಯಾಸದಲ್ಲಿ ಆಸಕ್ತಿಯುಳ್ಳ ವಿದ್ಯಾರ್ಥಿಗಳಿಗೆ ಊಟ-ವಸತಿ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ. ಇದರಿಂದ ಅನೇಕ ಬಡವಿದ್ಯಾರ್ಥಿಗಳಿಗೆ ಅನುಕೂಲವಾಯಿತು. ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕು ಹಂಪಸಾಗರ ಗ್ರಾಮದಲ್ಲಿ ೧ನೇ ತರಗತಿಯಿಂದ ೭ನೇ ತರಗತಿಯವರೆಗೆ ಶಾಲೆ ಇದೆ. ಇದು ಸರ್ಕಾರದ ಅನುದಾನ ಪಡೆಯುತ್ತಿದೆ. ಸ್ವಂತ ಕಟ್ಟಡವನ್ನು ಹೊಂದಿದೆ. ಸುಮಾರು ೪೦೦-೫೦೦ರಷ್ಟು ವಿದ್ಯಾರ್ಥಿಗಳ ಸಂಖ್ಯೆ ಇದೆ. ಅದೇ ರೀತಿಯಾಗಿ ಪ್ರೌಢಶಾಲೆಯು ಸಹ ೨೦೦೭ರಲ್ಲಿ ಪ್ರಾರಂಭವಾಯಿತು. ಲಂಬಾಣಿಗರಿಗೆ ಅಧಿಕ ಅವಕಾಶ ನೀಡಿ ಅವರ ಶೈಕ್ಷಣಿಕ ಪ್ರಗತಿಗೆ ಶ್ರಮಿಸುತ್ತಿರುವ ಸಂಸ್ಥೆ ಇದಾಗಿದೆ.

ನಾಯ್ಕರವರು ತಾಂತ್ರಿಕ ಶಿಕ್ಷಣಕ್ಕೂ ಆದ್ಯತೆ ನೀಡುತ್ತಿರುವುದು ಕಂಡುಬರುತ್ತದೆ. ೨೦೦೮ರಲ್ಲಿ ಕೈಗಾರಿಕಾ ತರಬೇತಿ ಕೇಂದ್ರ (ಐ.ಟಿ.ಐ) ಕಾಲೇಜುನ್ನು ಪ್ರಾರಂಭ ಮಾಡಿದ್ದಾರೆ. ಅಧಿಕವಾಗಿ ಮಕ್ಕಳ ಜವಾಬ್ದಾರಿಯನ್ನು ಸಂಸ್ಥೆಯು ನಿರ್ವಹಿಸುತ್ತಿರುವುದು ವಿಶೇಷವಾಗಿದೆ. ನಂತರ ೨೦೧೧ರಲ್ಲಿ ಪದವಿಪೂರ್ವ ಕಾಲೇಜು (ಪಿ.ಯು.ಸಿ) ಪ್ರಾರಂಭಿಸಿದರು. ಶ್ರೀ ಸೇವಾಲಾಲ್ ಸಂಸ್ಥೆಯು ಕೇವಲ ಲಂಬಾಣಿಗರಿಗೆ ಮಾತ್ರವಲ್ಲದೆ ಸುತ್ತಮುತ್ತಲಿನ ಸುಮಾರು ೧೫ ಗ್ರಾಮಗಳಿಗೆ ಶೈಕ್ಷಣಿಕ ಪ್ರಮುಖ ಕೇಂದ್ರ ಎಂದು ಹೇಳಿದರೆ ತಪ್ಪಾಗಲಾರದು. ಕೇವಲ ಪ್ರಾಥಮಿಕ, ಪ್ರೌಢಶಾಲೆಗಳನ್ನು ಮಾತ್ರ ಹೊಂದಿದ ಲಂಬಾಣಿ ಸಂಸ್ಥೆಗಳಲ್ಲಿ ಉನ್ನತ ಮಟ್ಟದ ಶಿಕ್ಷಣಕ್ಕೂ ಆದ್ಯತೆ ನೀಡುತ್ತಿರುವುದು ಕಂಡುಬರುತ್ತದೆ.

೩. ಶ್ರೀನಿಧಿ ವಿದ್ಯಾಸಂಸ್ಥೆ, ಚಿಕ್ಕಜೋಗಿಹಳ್ಳಿ.

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕು, ಚಿಕ್ಕಜೋಗಿಹಳ್ಳಿ ತಾಂಡಾದಲ್ಲಿ ೨೦೦೭ರಲ್ಲಿ ಶ್ರೀನಿಧಿ ವಿದ್ಯಾಸಂಸ್ಥೆಯನ್ನು ಪ್ರಾರಂಭಿಸಲಾಯಿತು. ಇದು ಕೈಗಾರಿಕಾ ತರಬೇತಿ ಕೇಂದ್ರ (ಐ.ಟಿ.ಐ ಕಾಲೇಜ್)ವಾಗಿದೆ. ಶ್ರೀ ಜೆ.ಎಂ. ಕೃಷ್ಣನಾಯ್ಕನವರ ಅಧ್ಯಕ್ಷತೆಯಲ್ಲಿ ಈ ಸಂಸ್ಥೆ ನಡೆಯುತ್ತಿದೆ. ಪ್ರತಿವರ್ಷ ಉಚಿತ ಪುಸ್ತಕ ವಿತರಣೆ, ಉಚಿತ ಮನೆಪಾಠ ವ್ಯವಸ್ಥೆ ಮಾಡಿಕೊಡಲಾಗುತ್ತಿದೆ. ಈ ಸಂಸ್ಥೆಯಲ್ಲಿ ೧೫೦ಕ್ಕೂ ಅಧಿಕ ಮಕ್ಕಳಿದ್ದಾರೆ. ಈ ಮಕ್ಕಳ ಜವಾಬ್ದಾರಿಯನ್ನು ಸಂಸ್ಥೆಯು ನಿರ್ವಹಿಸುತ್ತಿರುವುದು ವಿಶೇಷವಾಗಿದೆ.

ಇವುಗಳೇ ಅಲ್ಲದೇ ಇನ್ನು ಹಲವಾರು ಕಡೆ ಖಾಸಗಿ ಶಿಕ್ಷಣ ಸಂಸ್ಥೆಗಳು ಲಂಬಾಣಿಗರಿಂದ ಸ್ಥಾಪನೆಗೊಂಡು ಆ ಭಾಗದ ಮಕ್ಕಳ ಶೈಕ್ಷಣಿಕ ಸೌಲಭ್ಯ ಒದಗಿಸಿರುವುದು ಕಂಡುಬರುತ್ತದೆ. ಆದರೆ ಬಳ್ಳಾರಿ ಜಿಲ್ಲೆಯಲ್ಲಿ ಲಂಬಾಣಿಗರು ನಡೆಸುವ ಖಾಸಗಿ ಸಂಸ್ಥೆಗಳು ಕಡಿಮೆ.

ಟಿಪ್ಪಣಿಗಳು

೧. ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳು: ಒಂದು ಸಾಂಸ್ಕೃತಿಕ ಅಧ್ಯಯನ ಗೋಪಾಲ್‌ರಾವ್ ಹೆಚ್. ಎಸ್., ಪ್ರಾಚ್ಯವಸ್ತು ನಿರ್ದೇಶನಾಲಯ, ಮೈಸೂರು-೧೯೯೩, ಪುಟ.೧೫೫.
೨. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಚಿದಾನಂದಮೂರ್ತಿ, ಸಪ್ನ ಬುಕ್‌ಹೌಸ್, ಬೆಂಗಳೂರು, ೨೦೦೨ ಪುಟ. ೨೨೬
೩. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ-೩, ಕರ್ನಾಟಕ ರಾಜ್ಯ ಸರ್ಕಾರ, ೧೯೮೬, ಪುಟ.೪
೪. ಮಾನವ ಅಭಿವೃದ್ಧಿಯ ಪ್ರಾದೇಶಿಕ ಆಯಾಮಗಳು ಅಧ್ಯಯನ, ಕೃಷ್ಣ ಜೆ., ಹಂಪಿ ಕನ್ನಡ ವಿಶ್ವವಿದ್ಯಾಲಯ ವಿದ್ಯಾರಣ್ಯ, ೨೦೦೧, ಪುಟ. ೨೨೬
೫. ಮೈಸೂರು ಬಸವಯ್ಯ, ದೇವಿರಪ್ಪ, ಪುಟ. ೬
೬. ಸಾಮಾಜಿಕ ಹಿನ್ನೆಲೆಯ ಮೈಸೂರು ರಾಜಕೀಯ, ಎಸ್.ಚಂದ್ರಶೇಖರ್, ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ), ೧೯೮೫, ಪುಟ. ೯೭
೭. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ-೩, ಕರ್ನಾಟಕ ರಾಜ್ಯ ಸರ್ಕಾರ, ೧೯೮೬, ಪುಟ. ೨೦೮
೮. ಹಿಂದುಳಿದ ವರ್ಗಗಳು ಮತ್ತು ದಲಿತ ಚಳವಳಿಗಳು, ಲಕ್ಷ್ಮಣ್ ತೆಲಗಾವಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೩, ಪುಟ.೭೩
೯. ಪೂರ್ವೋಕ್ತ, ಭಾಗ-೩, ಪುಟ. ೨೦೮
೧೦. ಪೂರ್ವೋಕ್ತ, ಚಂದ್ರಶೇಖರ್ ಎಸ್., ಪುಟ. ೫೫
೧೧. ದಿವಾನ್ ಸಾರ್ ಎಂ. ವಿಶ್ವೇಶ್ವರಯ್ಯ, ಜಯಪ್ಪಗೌಡ ಡಿ.ಎಸ್., ಶುಭೋದಯ ಪ್ರಕಾಶನ ಮೈಸೂರು, ೧೯೯೪, ಪುಟ.೧೧೨.
೧೨. ಅದೇ ಪುಟ. ೧೧೨
೧೩. ಪಾವನ, ಸಂ.ಎ. ಜೈಕುಮಾರ್, ಶ್ರೀ ಕಾಗಿನೆಲೆ ಮಹಾಸಂಸ್ಥಾನ ಕನಕ ಗುರುಪೀಠ, ಬೆಂಗಳೂರು, ೧೯೯೨, ಪುಟ ೫೪.
೧೪. ಮೈಸೂರು ಬಸವಯ್ಯ, ದೇವಿರಪ್ಪ ಎಚ್., ಪುಟ. ೩೭
೧೫. ಇತಿಹಾಸ ದರ್ಶನ ಸಂಪುಟ-೯, ಕರ್ನಾಟಕ ಇತಿಹಾಸ ಅಕಾಡೆಮಿ, ಪುಟ.೨೨೯

೧೬. ಪೂರ್ವೋಕ್ತ, ಚಂದ್ರಶೇಖರ್ ಎಸ್., ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ), ೧೯೮೫, ಪುಟ. ೮೦

೧೭. ಅದೇ ಪುಟ.೬೭

೧೮. ಪೂರ್ವೋಕ್ತ, ಭಾಗ-೩, ಪುಟ. ೨೦೮

೧೯. ಮುಟ್ಟಿಸಿಕೊಂಡವರು, ವೀರಭದ್ರಪ್ಪ ಬಿ.ವಿ., ಮತ್ತು ಜಾಹ್ನವಿ ಬಿ.ಟಿ., ಬುಟ್ಟಿ ಪ್ರಕಾಶನ್, ದಾವಣಗೆರೆ, ೧೯೯೮, ಪುಟ. ೧೭೫

೨೦. ಅದೇ, ಪುಟ ೧೭೫

೨೧. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ-೩, ಕರ್ನಾಟಕ ರಾಜ್ಯ ಸರ್ಕಾರ, ೧೯೮೬, ಪುಟ. ೨೦೯

೨೨. ಅದೇ, ಪುಟ ೨೧೦

೨೩. ಅದೇ, ಪುಟ ೨೧೦

೨೪. ಪೂರ್ವೋಕ್ತ, ಚಂದ್ರಶೇಖರ್ ಎಸ್., ಪುಟ. ೬೬

೨೫. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ-೩, ಕರ್ನಾಟಕ ರಾಜ್ಯ ಸರ್ಕಾರ, ೧೯೮೬, ಪುಟ. ೪೦೩

೨೬. ಪೂರ್ವೋಕ್ತ, ಚಂದ್ರಶೇಖರ್ ಎಸ್., ಪುಟ. ೯೭

೨೭. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ-೩, ಕರ್ನಾಟಕ ರಾಜ್ಯ ಸರ್ಕಾರ, ೧೯೮೬, ಪುಟ. ೨೧೧

೨೮. ಶೋಷಿತ ಜಂಗಮರ ಮೀಸಲಾತಿ, ದಾಸನೂರು ಕೂಸಣ್ಣ, ಮಾತಂಗ ಪ್ರಕಾಶನ, ಮೈಸೂರು, ೧೯೯೯, ಪುಟ

೨೯. ಸಾಮಾಜಿಕ ಹಿನ್ನೆಲೆಯ ಮೈಸೂರು ರಾಜಕೀಯ, ಚಂದ್ರಶೇಖರ್ ಎಸ್., ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ), ೧೯೮೫, ಪುಟ. ೮೨

೩೦. ವಸಾಹತುಕಾಲೀನ ಬಳ್ಳಾರಿ ಜಿಲ್ಲೆ, ವಿರೂಪಾಕ್ಷಿ ಪೂಜಾರಹಳ್ಳಿ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯, ಪುಟ. ೭೩

೩೧. ಅದೇ, ಪುಟ ೭೪

೩೨. ಮೈಸೂರು ರಾಜ್ಯ ಗ್ಯಾಸೆಟಿಯರ್, ಕರ್ನಾಟಕ ಸರ್ಕಾರ, ೧೯೫೬, ಪುಟ. ೫೩೬

೩೩. ಅದೇ, ಪುಟ. ೩೩೨

೩೪. ಪೂರ್ವೋಕ್ತ ಭಾಗ-೩., ಕರ್ನಾಟಕ ರಾಜ್ಯ ಸರ್ಕಾರ, ೧೯೮೬, ಪುಟ. ೨೧೧

೩೫. ಅದೇ, ಪುಟ. ೨೧೨

೩೬. ಕ್ರಿಯಾ ಯೋಜನೆ, ೨೦೦೦-೦೧, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು, ಪುಟ. ೬

೩೭. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಬಳ್ಳಾರಿ.

೩೮. ಮೈಸೂರು ರಾಜ್ಯ ಗ್ಯಾಸೆಟಿಯರ್, ಬಳ್ಳಾರಿ ಜಿಲ್ಲೆ, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು ೧೯೭೨, ಪುಟ. ೫೪೩.

೩೯. ಕರ್ನಾಟಕ ಅಭಿವೃದ್ಧಿ ಮಾಹಿತಿ ಕೋಶ, ಕರ್ನಾಟಕ ರಾಜ್ಯ ಸರ್ಕಾರ, ೧೯೯೮, ಪುಟ. ೬೨

೪೦. ಶಿಕ್ಷಣ ಉಪನಿರ್ದೇಶಕರ ಕಛೇರಿ ಬಳ್ಳಾರಿ

೪೧. ಶಿಕ್ಷಣ ಉಪ ನಿರ್ದೇಶಕರ ಕಚೇರಿ, ಬಳ್ಳಾರಿ. (K:l MGTE, Laste, Classwise Enralment As Per-U-Dije- 2012-13.

೪೨. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೩, ಕರ್ನಾಟಕ ರಾಜ್ಯ ಸರ್ಕಾರ, ೧೯೮೬, ಪುಟ. ೧೬

೪೩. ಅದೇ, ಪುಟ. ೧೬

೪೪. ಅದೇ, ಪುಟ.೧೯

೪೫. ಅದೇ, ಪುಟ. ೧೯

೪೬. ಮೈಸೂರು ರಾಜ್ಯ ಗ್ಯಾಸೆಟಿಯರ್, ಚಿತ್ರದುರ್ಗ ಜಿಲ್ಲೆ, ಮೈಸೂರು ಸರ್ಕಾರ ೧೯೬೭, ಪು.೫೪೨.

೪೭. ಉಪ ನಿದೇಶಕರ ಕಛೇರಿ, ಬಳ್ಳಾರಿ.

೪೮. ಮೈಸೂರು ರಾಜ್ಯ, ೧೯೫೬, ಮೈಸೂರು ರಾಜ್ಯ ಸರ್ಕಾರ, ಪುಟ.೩೮೮.

೪೯. ಪದವಿ ಪೂರ್ವ ಉಪ ನಿರ್ದೇಶಕರ ಕಛೇರಿ, ಬಳ್ಳಾರಿ.

೫೦. ಹರಪನಹಳ್ಳಿ ತಾಲ್ಲೂಕು ಸ್ವಾತಂತ್ರ್ಯ ಹೋರಾಟಗಾರರು, ಹಿರೇಮಠ ವೀರಭದ್ರಯ್ಯ, ಶ್ರೀ ಜಗದ್ಗುರು ರೇಣುಕ ಪ್ರಕಾಶನ, ತೆಗ್ಗಿನಮಠ, ಹರಪನಹಳ್ಳಿ, ೧೯೯೮, ಪುಟ. ೫೬

೫೧. ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ, ಶೇಷಾದ್ರಿ ಬಿ., ಚಂದ್ರಶೇಖರ ಟಿ.ಆರ್., ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮. ಪುಟ. ೯೨

೫೨. ಹಿಂದುಳಿದ ವರ್ಗಗಳು ಮತ್ತು ದಲಿತ ಚಳವಳಿಗಳು, ಲಕ್ಷ್ಮಣ ತೆಲಗಾವಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೧. ಪುಟ ೭೬.

೫೩. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ-೩, ಪುಟ ೨೦೯.

೫೪. ಅದೇ, ಪುಟ. ೨೦೯

೫೫. ಅದೇ, ಪುಟ. ೨೦೯

೫೬. ಅದೇ, ಪುಟ. ೨೦೯

೫೭. ಅದೇ, ಪುಟ. ೨೧೦

೫೮. ಅದೇ, ಪುಟ. ೨೧೫

೫೯. ಅದೇ, ಪುಟ. ೨೧೪

೬೦. ಕ್ರಿಯ ಯೋಜನೆ ೨೦೦೦-೦೧, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು, ಪುಟ.೩೮

೬೧. ಜಿಲ್ಲಾ ಸಮಾಜ ಕಲ್ಯಾಣ ಇಲಾಖೆ, ಬಳ್ಳಾರಿ.

೬೨. ಜಿಲ್ಲಾ ಸಮಾಜ ಕಲ್ಯಾಣ ಇಲಾಖೆ, ಬಳ್ಳಾರಿ

೬೩. ಕರ್ನಾಟಕ ರಾಜ್ಯ ಗ್ಯಾಸೆಟಿಯರ್. ಭಾಗ-೩. ಕರ್ನಾಟಕ ರಾಜ್ಯ ಸರ್ಕಾರ ೧೯೮೬, ಪುಟ ೨೧೨.

೬೪. ಅದೇ, ಪುಟ. ೨೧೨

೬೫. ಅದೇ, ಪುಟ. ೨೧೨

೬೬. ಜಿಲ್ಲಾ ಸಮಾಜ ಕಲ್ಯಾಣ ಇಲಾಖೆ, ಬಳ್ಳಾರಿ

೬೭. ಅದೇ, ಪುಟ. ೨೦೨ - ೨೧೩.

೬೮. ಅದೇ, ಪುಟ. ೨೧೩

೬೯. ಅದೇ, ಪುಟ. ೨೧೨

೭೦. ಅದೇ, ಪುಟ. ೨೧೩

೭೧. ಅದೇ, ಪುಟ. ೨೧೨

೭೨. ಸಮಾಜ ಕಲ್ಯಾಣ ಇಲಾಖೆ ಅಂಕಿ ಅಂಶಗಳು, ಬಳ್ಳಾರಿ.

೭೩. ಪ್ರಚಲಿತ ಶಿಕ್ಷಣ ಒಂದು ಚಿಂತನೆ, ರೇಣುಕಾ ಪ್ರಸನ್ನ, ವಿಶ್ವನಾಥ ಪ್ರಕಾಶನ, ಮೈಸೂರು, ೧೯೭೯, ಪುಟ. ೪೧

೭೪. ಅದೇ, ಪುಟ. ೫

***

ಅಧ್ಯಾಯ ಒಂಭತ್ತು

# ಲಂಬಾಣಿ ಸಮುದಾಯದ ಜನಪದ

## ಲಂಬಾಣಿ ಸಮುದಾಯದ ಜನಪದ

### ೯.೧. ಲಂಬಾಣಿ ಜನಪದ ಸಾಹಿತ್ಯ

ಜಾನಪದವೆಂಬುದು ಜನಪದರಿಂದ ಜನಪದರಿಗಾಗಿ ಹಾಗೂ ಜನಪದರರದೇ ಆದುದಾಗಿರುತ್ತದೆ. ಜನಪದರ ಅನುಭವಗಳಿಂದ, ಭಾವನೆಗಳಿಂದ ಮತ್ತು ಅದರ ಸ್ಫೂರ್ತಿಗಳಿಂದ ಹುಟ್ಟಿಕೊಂಡ ಕಲೆಗಳೇ ಜನಪದ ಕಲೆಗಳಾಗಿವೆ. ಈ ಜನಪದ ಪ್ರದರ್ಶನ ಕಲೆಗಳು ಶ್ರಮದ ಜೊತೆಯಲ್ಲಿಯೇ ಹುಟ್ಟಿದವುಗಳಾಗಿವೆ. ಇಂತಹ ಸಾಹಿತ್ಯ, ಕ್ರೀಡೆ, ಮೊದಲಾದವುಗಳನ್ನು ಪ್ರತಿಯೊಂದು ಸಮುದಾಯಗಳೂ ಹೊಂದಿವೆ. ಕರ್ನಾಟಕದಾದ್ಯಂತ ನೆಲೆಸಿರುವ ಹಲವಾರು ಸಮುದಾಯಗಳು ತಮ್ಮದೇ ಆದ ವಿಶಿಷ್ಟವಾದ ಜನಪದ ಸಾಹಿತ್ಯ ಪ್ರದರ್ಶನ ಕಲೆ, ಸಾಹಿತ್ಯ ಹೊಂದಿರುವುದು ಕಂಡು ಬರುತ್ತದೆ. ಪ್ರಾಚೀನ ಕಾಲದಿಂದಲೂ ಇವರು ತಮ್ಮ ಜನಪದ ಕಲೆ, ಸಾಹಿತ್ಯವನ್ನು ಉಳಿಸಿ, ಬೆಳೆಸಿಕೊಂಡು ಬಂದಿದ್ದಾರೆ. ಹೀಗೆ ಜನಪದ ಸಾಹಿತ್ಯ, ಕಲೆ, ವೈದ್ಯಪದ್ಧತಿಯನ್ನು ಉಳಿಸಿ ಬೆಳೆಸಿದವರಲ್ಲಿ ಲಂಬಾಣಿ ಸಮುದಾಯವು ಒಂದಾಗಿದೆ. ಲಂಬಾಣಿಗರು ಲಂಬಾಣಿ ಜನಪದ ಸಾಹಿತ್ಯದಲ್ಲಿ ಹಾಡು, ಕಥೆ, ಗಾದೆ, ಲಾವಣಿ, ಒಗಟು ಜನಪದ ವೈದ್ಯಪದ್ಧತಿಗಳ ಮೂಲಕ ಸಾಹಿತ್ಯ, ಪ್ರದರ್ಶನ ಕಲೆಗಳಿಗೆ ವಿಶಿಷ್ಟ ಸ್ಥಾನ ನೀಡಿದ್ದಾರೆ.

### ೯.೧.೧. ಹಾಡು

ಜಾನಪದ ಸಾಹಿತ್ಯ ಪ್ರಪಂಚದಲ್ಲಿ ಜನಪದ ಹಾಡುಗಳದು ಒಂದು ಪ್ರಮುಖ ಸ್ಥಾನ. ಜನಪದರ ಬದುಕಿನ ಬೇನೆ-ಬೇಸರಿಕೆಗಳು, ಸರಸ-ವಿರಸಗಳು, ದುಃಖ-ದುಮ್ಮಾನಗಳು, ಭಕ್ತಿ-ಪ್ರೀತಿ, ಆಲೋಚನೆ, ಆರಾಧನೆಗಳು ಸ್ವಯಂ-ಸ್ಫೂರ್ತಿಯಿಂದ ಹಾಡಿನ ರೂಪ ಪಡೆದು ಹೊರಹೊಮ್ಮಿವೆ. ಅವೇ ''ಜನಪದ ಹಾಡು''ಗಳೆಂದು ಗುರುತಿಸಲಾಗುತ್ತದೆ. ಅವು ಜನಪದರ ಬದುಕಿನ ಅವಿಭಾಜ್ಯ ಅಂಗ ಹಾಗೂ ಉಸಿರು. ಲಂಬಾಣಿ ಜನಪದ ಸಾಹಿತ್ಯದ ಇತರ ಪ್ರಕಾರಗಳಂತೆ ಜನಪದ ಹಾಡುಗಳ ಉಗಮ, ಕಾಲ, ಯಾವುದೆಂದು ಖಚಿತವಾಗಿ ಹೇಳಲಾಗುವುದಿಲ್ಲ. ಆದರೆ ಅವುಗಳು ''ನಾಗರಿಕತೆ ಬೆಳೆಯುತ್ತ ಬಂದು ಭಾಷೆಗೆ ಲಿಪಿ ಪ್ರಾಪ್ತವಾಗಿ ಶಿಷ್ಟಪದ ಸಾಹಿತ್ಯ ಸೃಷ್ಟಿಗೊಳ್ಳುತ್ತ ಬಂದರೂ ಬೆಟ್ಟದ ತೊರೆಯಂತೆ, ಕಾಡಿನ ಹೂವಿನಂತೆ ತಮ್ಮ ಪಾಡಿಗೆ ತಾವು ಹರಿಯುತ್ತಲೇ ಬಂದವು, ಅರಳುತ್ತಲೇ ನಡೆದವು. ವಿಶಿಷ್ಟ ಭೌಗೋಳಿಕ ಪರಿಸರದಲ್ಲಿ ಗುಂಪು ಗುಂಪಾಗಿ ಬಾಳುತ್ತಿದ್ದ ಆದಿಮಾನವ ಗುಂಪುಗಳಿಂದ ಜನಪದ ಗೀತೆಗಳು ಹಾಗೂ ಇನ್ನಿತರ ಸಾಹಿತ್ಯ ಪ್ರಕಾರಗಳು ಸೃಷ್ಟಿಗೊಂಡವು''[೧] ಕೇಳಿ ನೆನಪಿನಲ್ಲಿಟ್ಟುಕೊಳ್ಳುವುದರಿಂದ ಹಾಡುವವರ ಜೊತೆ ಧ್ವನಿಗೂಡಿಸುವುದರಿಂದ ಅವುಗಳನ್ನು ಕಲಿಯಲಾಗುತ್ತದೆ.

ಈ ಮಾದರಿಯಲ್ಲೇ ಅದು ತಲೆಮಾರಿನಿಂದ ತಲೆಮಾರಿಗೆ ಹರಿದು ಬಂದಿವೆ. ಹಾಡುವವರ ಕ್ರಿಯೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳುವುದರ ಮೂಲಕ ಇವುಗಳನ್ನು ಕಲಿಯುತ್ತಾ ಬಂದಿದ್ದಾರೆ. ನಿರ್ದಿಷ್ಟ ಸಂದರ್ಭಗಳಲ್ಲಿ ಬಳಕೆಯಾಗುವ ಇವು ಸಾಮೂಹಿಕ ಉದ್ದೇಶಗಳನ್ನು ನೆರವೇರಿಸುವುದರಿಂದಾಗಿಯೇ ಜನಪದ ಸಾಮಾಜಿಕ ಜೀವನದಲ್ಲಿ ಹಾಸುಹೊಕ್ಕಾಗಿದೆ. ಮನುಷ್ಯನ ಜೀವನದ ತಿರುವುಗಳಾದ ಬಾಲ್ಯ, ಯೌವ್ವನ, ಮದುವೆ, ಮರಣ ಇಂತಹ ಸಂದರ್ಭಗಳಲ್ಲಿ ಜನಪದ ಗೀತೆ ಜೊತೆಯಾಗುತ್ತದೆ.

ಜನಪದರ ಹಾಡುಗಳು ಸಂಸ್ಕೃತಿಯ ಒಂದು ಭಾಗವಾಗಿದ್ದು ಆಯಾ ಸಮುದಾಯದ ಸಂಸ್ಕೃತಿಯನ್ನು ಎತ್ತಿಹಿಡಿಯಬಲ್ಲ ಗುರುತುಗಳಾಗಿವೆ. ಇವುಗಳಲ್ಲಿ ಆ ಸಮುದಾಯದ ಸಂಸ್ಕೃತಿಯ ಮೂಲ ತಿರುಳು ಹಾಡಿನ ರೂಪದಲ್ಲಿ ಘನೀಭವಿಸಿರುತ್ತದೆ. ಇವರಲ್ಲಿ ಜನಪದ ಹಾಡುಗಳ ಭಂಡಾರವೇ ಇದೆ. ಈ ಹಾಡುಗಳಲ್ಲಿ ಸುಖಃ ದುಃಖಗಳನ್ನು ಬವಣೆಗಳನ್ನು ಗೀತೆಗಳ ಮೂಲಕ ತೋಡಿಕೊಳ್ಳುತ್ತಾರೆ. ಇದರಿಂದರ ಜನಪದರ ಜಡತ್ವ ಕಡಿಮೆಯಾಗುವುದು ಎಂಬುದು ಅವರ ನಂಬಿಕೆ. "ಒಂದು ಜನಪದ ಗುಂಪಿನ ಬಳಕೆಯಲ್ಲಿರುವ ಹಾಡುಗಳನ್ನು ಸಮಗ್ರವಾಗಿ ಸಂಗ್ರಹಿಸಿ, ವಿಶ್ಲೇಷಿಸಿ, ವರ್ಗೀಕರಿಸಿ ನೋಡಿದಾಗ ಆ ಗುಂಪಿನ ಜೀವನ ವಿಧಾನ, ಶ್ರದ್ಧೆ, ನಂಬಿಕೆ, ಆಚರಣೆಗಳ ನೈಜ ಪರಿಚಯ ನಮಗಾಗುತ್ತದೆ."[೨]

ಲಂಬಾಣಿಗರಲ್ಲಿ ಜನಪದ ಹಾಡುಗಳನ್ನು ಸ್ಥೂಲವಾಗಿ ೧. ಧಾರ್ಮಿಕ ಹಾಡುಗಳು ೨. ಶೃಂಗಾರ ಹಾಡುಗಳು ೩. ಪ್ರಕೃತಿ ಹಾಡುಗಳು, ೪. ಸ್ತ್ರೀ ನೃತ್ಯ ಹಾಡುಗಳು ಎಂದು ವಿಭಾಗಿಸಿಕೊಳ್ಳಬಹುದು.

**೧. ಧಾರ್ಮಿಕ ಹಾಡುಗಳು:**

ಧರ್ಮವನ್ನು ಜನಪದರು ತಮ್ಮ ಬದುಕಿನ ಕಾರಣ, ಪ್ರೇರಕ ಹಾಗೂ ಪೋಷಕ ಶಕ್ತಿಯೆಂದೇ ಭಾವಿಸಿದ್ದಾರೆ. ಧರ್ಮ ದೇವರಿಲ್ಲದೆ ಯಾವುದೇ ಸಾಧ್ಯವಿಲ್ಲ. ಅದನ್ನು ನಾವು ರಕ್ಷಿಸಿದರೆ ಅದು ನಮ್ಮನ್ನು ಸರ್ವತಾರಕ್ಷಿಸುತ್ತದೆಂದು ನಂಬಿದ್ದಾರೆ. ಈ ಧರ್ಮ-ದೇವರುಗಳು ಅವರ ಬದುಕಿಗೆ ಆಸರೆಯನ್ನು ಒದಗಿಸಿರುವಂತೆ ಅವರ ಬದುಕನ್ನು ಹಿಂಡಿ ಹಿಪ್ಪೆಯನ್ನಾಗಿ ಮಾಡಿದೆ, ಮಾಡುತ್ತಿದೆ. ಇದಕ್ಕೆ ಅವರಲ್ಲಿರುವ ಮೂಢನಂಬಿಕೆ ಹಾಗೂ ಅಜ್ಞಾನಗಳು ಕಾರಣವಾಗಿದೆ. ಲಂಬಾಣಿಗರು ಇದರಂತೆ ತಮ್ಮ ಇಷ್ಟಾರ್ಥಗಳನ್ನು ಈಡೇರಿಸಿಕೊಳ್ಳಲು ಅನೇಕ ದೇವರುಗಳ ಉಪಾಸನೆಯನ್ನು ಮಾಡುತ್ತಾರೆ. ಹಿಂದೂಗಳು ಆಚರಿಸುವ ಪ್ರಮುಖವಾದ ಎಲ್ಲಾ ಹಬ್ಬ-ಹರಿದಿನಗಳನ್ನು ಆಚರಿಸುತ್ತಾರೆ. ಜೀವನ ಮುಕ್ತಿಗೆ ದೇವರ ಕೃಪೆ ಅತೀ ಅವಶ್ಯಕವೆಂದು ಭಾವನೆ ಅವರಲ್ಲಿದೆ. ಭಕ್ತಿ ಭಾವಾವೇಶದಿಂದ ಸ್ತುತಿ ಮಾಡುತ್ತಾರೆ. ಲಂಬಾಣಿಗರು ಧಾರ್ಮಿಕ ಹಾಡುಗಳನ್ನು ಪ್ರಮುಖವಾಗಿ ಅ. ಹಬ್ಬ-ಹರಿದಿನಗಳ ಹಾಡುಗಳು ಆ. ದೇವಿ-ದೇವತೆಗಳ ಹಾಡುಗಳೆಂದು. ಎರಡು ಪ್ರಕಾರವಾಗಿ ವಿಭಾಗಿಸಬಹುದು.

**ಅ. ಹಬ್ಬ-ಹರಿದಿನಗಳ ಹಾಡು**

ಲಂಬಾಣಿ ಸಮುದಾಯ ಸಾಮಾನ್ಯವಾಗಿ ಹಿಂದೂ ಹಬ್ಬಗಳನ್ನೇ ಆಚರಿಸಿದರೂ ಅವರ ಆಚರಣೆಯಲ್ಲಿ ಅವುಗಳು ತಮ್ಮದೇ ಆದ ಕೆಲವು ವೈಶಿಷ್ಟ್ಯ ಹಾಗೂ ಪರಂಪರೆಗಳಾಗಿವೆ. ಹಬ್ಬ ಹರಿದಿನಗಳಲ್ಲಿ ಅವರ ಧಾರ್ಮಿಕ

ಮನೋಭಾವ ಹಾಗೂ ಸಾಂಸ್ಕೃತಿಕ ಪರಂಪರೆ ವ್ಯಕ್ತವಾಗುತ್ತದೆ. ಲಂಬಾಣಿಗರು ಆಚರಿಸುವ ಪ್ರಮುಖವಾದ ಹಬ್ಬಗಳು ೧. ತೀಜ್ (ಗೋದಿಸಸಿ) ಹಬ್ಬ ೨. ಸೀತ್ಲ (ಆಷಾಢ) ದೇವತೆ ೩. ದೀಪಾವಳಿ ಹಬ್ಬ.[೪]

**೧. ತೀಜ್ (ಗೌರಿ ಸಸಿ) ಹಬ್ಬ**

ಲಂಬಾಣಿಗರು ತೀಜ್ (ಗೌರಿ ಸಸಿ) ಹಬ್ಬದಲ್ಲಿ ಬೆಳೆಸುವ ಸಸಿಗಳನ್ನು ಕುರಿತು ಲಂಬಾಣಿ ಯುವತಿಯರು ಈ ಕೆಳಗಿನಂತೆ ಹಾಡುತ್ತಾರೆ.

"ನವಿದಾಡೇರ ತೀಜಾ ಕೊಯಿ ಹಟ ಕೂಮತೊ ಯಾಡಿ ಝುಟಕೊ ಮ

ತೊ.

ಮಾರ ನಾಯಕ ಬೊರಾಯೋ ತೀಜ್.

ಕೊಯು ಹಟಕೂಮತೊ ಯಾಡಿ ಝುಟಕೊಮತೂ

ಸೇವಾ ಭೋರಾಯೇ ತೀಜಾವೂಲಡಿಮ ಫೇಲಗೆ

ಹರರಾ ಭರೋ ದಿಕಾಗೆ. ಪೂಲಡೀ ಮಾಯೇರಿ ತೀಜ್

ಝುಲರೆಮ ಹಲಗೆ ಹಾರಿಯೇಜ ಫೆಲಗೆ ಮಾಯೋರಿ ತೀಜ್

ಕಾಯು ಪೇಲಗೇ ಯಾಡಿ ಝುಲರೇಮ್ ಹಲಗೆ

ಮಾರಿಡಾವೀ ಬೋರಾಯಿ ತೀಜ್ ಝುಲರೇಮ ಫೆಲಗೆ ತಾಂಡಾ

ಸಾರಿ ಹಲಗೂ.

ಮಾರಿ ಮಾಬಾಪ ಬೋರಾಯೇ ತೀಜ್ ಕೊಯಿ ಹಟಕೂಮ ತೊಯಾಡಿ ಝುಟಕೊಮತೂ ಮಾರೋ ವಿರಣಭೂರಾಯೋ,

ತೀಜ್ ಕೊಯಿ ಹಟಕೊ ಮತೊಯಾಡಿ ಝುಟಕೋಮತೂ ಮಾರ ಸಾತಣ ಬೊರಾಯಿ ತೀಜ್ ಕೊಯಿ ಹಟಕೂ ಹಟಕೂ ಮತೊ ಯಾಡಿ ಝುಟಕೊ ಮತೊ"[೫]

ಒಂಬತ್ತು ದಿನಗಳ ಗೋಧಿ ಸಸಿಯನ್ನು ಯಾರೂ ಕೀಳಬೇಡಿ, ಹಾಳು ಮಾಡಬೇಡಿ, ನಮ್ಮ ಯಜಮಾನ ಬಿತ್ತಿದ ಗೋಧಿಸಸಿ ಯಾರು ಕೀಳಬೇಡಿ, ಹಾಳು ಮಾಡಬೇಡಿ, ಸೇವ (ದೇವರು) ಬಿತ್ತಿಸಿದ ಗೋದಿ ಸಸಿ ಯಾರು ಕೀಳಬೇಡಿ, ಹಾಳು ಮಾಡಬೇಡಿ, ಬುಟ್ಟಿ ತುಂಬಿ ಸಸಿಯು ಗುಂಡಿಯಲ್ಲಿ ಮೆರೆದು ಹಾಗೆಯೇ ಹಬ್ಬುತ್ತಿವೆ. ಒಂಬತ್ತು ದಿನಗಳ ಗೋಧಿ ಸಸಿ ಹೇಗೆ ಹಬ್ಬಿವೆ ನೋಡಿ ಹಾಳು ಮಾಡಬೇಡಿ. ನಮ್ಮ ಯಜಮಾನರು ಬಿತ್ತಿಸಿದ ಗೋಧಿ ಸಸಿ ಗುಂಪಿನಲ್ಲಿ ಮೆರೆದು ಹಾಗೆಯೇ ಹಬ್ಬುತ್ತಿವೆ. ನಮ್ಮ ಅಪ್ಪ-ಅಮ್ಮಂದಿರು ಬಿತ್ತಿಸಿದ ಗೋಧಿ ಸಸಿ ಯಾರು ಕೀಳಬೇಡಿ. ಯಾರು ಹಾಳುಮಾಡಬೇಡಿ, ಯಾರು ಕೀಳಬೇಡಿ ನನ್ನ ಸೋದರರು ಬಿತ್ತಿಸಿದ ಗೋಧಿ ಸಸಿ ಯಾರೂ ಕೀಳಬೇಡಿ ಹಾಳು ಮಾಡಬೇಡಿ. ನನ್ನ ಜೊತೆಗಾರರು ಬಿತ್ತಿಸಿದ ಗೋಧಿಸಸಿ ಯಾರು ಕೀಳಬೇಡಿ. ಹಾಳು ಮಾಡಬೇಡಿ.

ಹೀಗೆ ಹಬ್ಬ ಹರಿದಿನಗಳಲ್ಲಿ ಈ ಹಬ್ಬಗಳ ಪ್ರಮುಖ ಅಂಶಗಳನ್ನು ಕುರಿತು ಹಾಡುಗಳನ್ನು ರಚಿಸುವುದು ಇವರಲ್ಲಿ ಪ್ರಚಲಿತವಿದೆ. ಲಂಬಾಣಿಗರು ದೈವಭಕ್ತಿಯೊಂದಿಗೆ, ಪೂಜಾ ಸಂಪ್ರದಾಯವು ಪ್ರಸ್ತುತ ಗೀತೆಯಿಂದ ವ್ಯಕ್ತವಾಗುತ್ತದೆ. ಗೀತೆಯಲ್ಲಿ ಬರುವ ಆದಿ-ಅಂತ್ಯ ಪ್ರಾಸಗಳು ಹಾಗೂ ಶಬ್ದಗಳ ಪುನರಾವೃತ್ತಿಗಳು ಲಯಕ್ಕೆ ಪೋಷಕವಾಗಿ ನಿಂತು ಗೀತೆಯು ಸೌಂದರ್ಯವನ್ನು ಹೆಚ್ಚಿಸಿದೆ.

**೨. ಸೀತ್ಲ (ಆಷಾಢ ದೇವತೆ) ಹಬ್ಬ**

ಜೂನ್ ತಿಂಗಳ ಆಷಾಢ ಮಾಸದಲ್ಲಿ ಲಂಬಾಣಿಗರು ಏಳುಜನ ದೇವಿಯರು (ಸಾತಭವಾನಿ) ಹಾಗೂ ಸೇವಕ (ಲುಕ್ಕಡ)ನಿಗೆ ಆರಾಧನೆ ಸಲ್ಲಿಸುತ್ತಾರೆ. ಆಷಾಢ ಮಾಸದಲ್ಲಿ ಶೀತ ವಾತಾವರಣದ ಆಗಮನದಿಂದಾಗಿ ಹಲವಾರು ಬಗೆಯ ರೋಗರುಜಿನಗಳು ಬರಲು ಪ್ರಾರಂಭವಾಗುವುದರಿಂದ ತಮ್ಮ ಸಮುದಾಯಕ್ಕೆ ಯಾವುದೇ ರೀತಿಯ ರೋಗ ರುಜಿನಗಳು, ಜೇನೆ-ಬೇಸರಿಕೆಗಳು ಬರದಂತೆ ಶಕ್ತಿ-ದೇವತೆಗಳಾದ ತುಳಜಾಭವಾನಿ, ಶೀತಲಾಭಾವನಿ, ಭೋಜರಿಭವಾನಿ, ಮತರಾಲ್‌ಭವಾನಿ, ಮಸೂರ ಭವಾನಿ, ವಾಗ್ಮಾಯಿ ಹಾಗೂ ಹಿಂಗಳಾ ಮಾತಾ ಮತ್ತು ಅವರ ಸೇವಕನಾದ 'ಲುಕ್ಕಡ'ನಿಗೆ ಪೂಜೆ ಸಲ್ಲಿಸುತ್ತಾರೆ. ಸಿಹಿ ಹಾಗೂ ಮಾಂಸದ ಅಡುಗೆಯ ನೈವೇದ್ಯವನ್ನು ಅರ್ಪಿಸಿ ತಾಂಡಾದ ಪ್ರಮುಖ ಸ್ತ್ರೀಯರು ದೇವತೆಗಳಿಗೆ ಪ್ರಾರ್ಥನೆ ಸಲ್ಲಿಸುತ್ತಾರೆ.

"ಮಾತಾರೋ ಮೇಲ ಉಚಳೋಯೇಯಾ|
ಜಲ್ಮಿರೋ ಮೇಲ ಉಚಳೊಯೆಯಾ|
ಉತೋ ದಸರೊ ಪುರಮರೋರ್ಛಯೆ|
ಓಮಾ ಹಿಂಗಳಾರಿಯು ಜಾತರೆ ಆಯಿಯ|
ಓಮಾ ಮತರಾರಿಯು ಜಾತರ ಆಯಿತು|
..................
ಬಾರನ್ ಕೋಸೇಪರ ಮೈಯಾ ಬಾಳದಬಗದಿ|
ಹಾರೇ ಮೈಯಾ ಬಾಳದ ಬಗದಿ|
ಢಳೋ ಒಣ ಜಾರಾಯ|
ಕೂಂಕೇ ಬಣಜಾರಾ ಮಾರಿಯ ಜಾತನ ಭೊಲೇ|
ಹಾರೇ ಮೈಯಾ ಜಾತರ ಭೂಲೋ|
ಮೂನಾ ಭಗತ ತಾರಿಯ ಜಾತರ ಲಾಯಾ|
ಹಾರೇ ಮೈಯಾ ಜಾತರಲಾಯೋ|
..................
ಭೋಜಾ ಭರತ ತಾರಿಯ ಜಾತರಲಾಯೊ|
ಹಾರೆ ಮೈಯಾ ಜಾತರಲಾಯೋ|

ಬರಕಾ ಕಡಾಯಿ ಮೈಯಾ ಹಜರಲಾಯೋ|

ಹಾರೇ ಮೈಯಾ ಜಾತರಲಾಯೋ|

................

................

ವಿನತಿ ಸಣಲಯ ಮೇರಿಯಾ

ಗಂಗಾ ಉತರ ಹಮ ಡೇರಾದೀಯೋಯ ಆವ

ತಾಪಿಯ ಚಲಿಯ ಭರಪೂರ ||ಅಬದಲ||

ತಾಡಿಯ ಚಲಿಯೆ ಭರಪೂರ|

ಆರತಿ ಸಣಲಯ ಮಾರಿ ಮಾ|

ವಿನತಿ ಸಣಲಯ ಮಾರಿ ಮಾ|

ಹರೋ ಹರೋ ಸೋನೆರೋ ಬೇತಾ ||ಓತಿಮಾರಿ||

ಹಿಂಗಳಾಮಮಾ ಅಬದಲ ಜೀತಮಾರಿ ಮತರಾಯಮಾ|

ಆರತಿ ಸಣಲಯ ಮೇರಿಮಾ|

ವಿನತಿ ಸಣಲಯ ಮೇರಿಮೊ|"[೬]

ಸುದೀರ್ಘವಾದ ಈ ಸ್ತುತಿ ಗೀತೆಯಲ್ಲಿ ಲಂಬಾಣಿಗರ ಸಾಂಸ್ಕೃತಿಕ ಮೂಲದೊಂದಿಗೆ ಅವರ ಧಾರ್ಮಿಕ ಮನೋಭಾವನೆ ವ್ಯಕ್ತವಾಗಿದೆ. ಅತ್ಯಂತ ಸುಂದರವಾದ ಅವರ ಕಲ್ಪನೆ ಹಾಗೂ ವರ್ಣನಾ ಕೌಶಲ್ಯಗಳ ಮಾಧ್ಯಮದಿಂದ ಆತ್ಮನಿವೇದನೆಯು ಶಬ್ದರೂಪವನ್ನು ಪಡೆದಿದೆ. ಅತಿಭಾವುಕತೆಯು ದೀರ್ಘವಾದ ಲಯದೊಂದಿಗೆ ತೀವ್ರವಾಗಿ ಹೊರಹೊಮ್ಮಿದೆ. ಲಂಬಾಣ ಜನಪದ ಸಾಹಿತ್ಯದಲ್ಲಿ ಈ ಬಗೆಯ 'ವಳಂಗ' ಗೀತೆಗಳಿಗೆ ವಿಶೇಷವಾದ ಮಹತ್ವವಿದೆ. ಇವುಗಳಿಗೆ ಹೆಚ್ಚಿನ ಪಾವಿತ್ರ್ಯತೆಯ ಸ್ಥಾನವನ್ನು ನೀಡಲಾಗಿದೆ.

**೩. ದೀಪಾವಳಿ ಹಬ್ಬ**

ದೀಪಾವಳಿ ಹಬ್ಬ ಆಚರಣೆ ಅಂಧಕಾರವನ್ನು ಹೊಡೆದೋಡಿಸಿ ಬೆಳಕನ್ನುಂಟುಮಾಡುವ ಹಬ್ಬವೇ ದೀಪಾವಳಿ. ಇದು ಹಿಂದೂಗಳಿಗೆ ವಿಶೇಷಹಬ್ಬ. ಲಂಬಾಣಿಗರು ಈ ಹಬ್ಬಕ್ಕೆ 'ದವಾಳಿ' ಇಲ್ಲವೆ 'ಕಾಳಿಮಾಸ್' ಎಂದು ಕರೆಯುತ್ತಾರೆ. ಕಾಳಿ ಎಂದರೆ ಪರ್ವಕಾಳ (ಪುಣ್ಯಕಾಲ) ಎಂದರ್ಥ. ಹಿಂದೂ ಸಂಪ್ರದಾಯವನ್ನು ಅನುಸರಿಸಿಕೊಂಡು ಬಂದ ಲಂಬಾಣಿಗರು ತಮ್ಮದೇ ಆದ ವಿಶಿಷ್ಟ ಪರಂಪರೆಯೊಂದಿಗೆ ಈ ಹಬ್ಬವನ್ನು ಆಚರಿಸುತ್ತಾರೆ.

**ಆರತಿಗೀತೆ (ಮೇರಾ ಗೀತೆ)**

ದೀಪಾವಳಿ ಅಮವಾಸ್ಯೆಯ ದಿನ ರಾತ್ರಿಯ ಸಮಯದಲ್ಲಿ ಲಂಬಾಣಿಗರು ಲಕ್ಷ್ಮೀ ಪೂಜೆಯನ್ನು ಮಾಡುತ್ತಾರೆ. ಊಟವಾದ ನಂತರದಲ್ಲಿ ತಾಂಡಾದ ಯುವತಿಯರು ಶೃಂಗಾರ ಮಾಡಿ ಕೂಡಿಕೊಂಡು ಕೈಯಲ್ಲಿ

ಹರಳೆಣ್ಣೆ ದೀಪ ಹಚ್ಚಿಕೊಂಡು ನಾಯಕನ ಮನೆಗೆ ಹೋಗಿ ಅವನಿಂದ ಆರತಿ ಮಾಡುವ ಅನುಮತಿಯನ್ನು ಪಡೆದುಕೊಂಡು ಸಮಸ್ತ ತಾಂಡದ ಮನೆ ಮನೆಗೆ ಹೋಗಿ (ಮವಾ) ಆರತಿ ಮಾಡುತ್ತಾರೆ. ಅವರು ಮನೆಮನೆಗೆ ಹೋಗುವಾಗ ತಮ್ಮ ಗುಂಪಿನವರನ್ನೆಲ್ಲಾ ಸಂಬೋಧಿಸುತ್ತಾ ಹೀಗೆ ಹಾಡುತ್ತಾರೆ.

ಗೋಳ ಘಾಲು ದವಾಳೀತೋನ ದೀವ್ನೋ ಘಾಲು
ಬಾಪುರೀಯೇ ನಂಗರೀ ಹರಿಬರಿ
ಹರಿಬರಿಯೇ ನಂಗರೀ ಫೂಲಭರಿ
ಗೊಳ ಘಾಲು ದವಾಳೀ ತೋನ ದೀವ್ನೋ ಘಾಲು
ಬಾಪುರೀಯೇ ನಂಗರೀ ಹರಿಭರಿ
ನಾಯಕೀ ಘರೇರೋ ದೀನಲೋಯಿ ಗುಜರಿ
ಮೇರಾ ಕರೇನ ಚಾಲ ಗುಜರಿ
ಕುಂವಾರೀ ಭೋರೀರೋ ದೀವಲೋಯೇ ಗುಜರಿ
ಮೇರಾ ಕರೇನ ಚಾಲ ಗುಜರಿ'

ದೀಪಾವಳಿಯೇ ನಿನಗೆ ಬೆಲ್ಲ ಹಾಕುವೆ. ಹರಳೆಣ್ಣೆ ದೀಪ ಬೆಳಗುವೆ. ನಮ್ಮ ತಂದೆಯ ತಾಂಡವನ್ನು ಸಮೃದ್ಧಗೊಳಿಸು, ಸುಖ ಸಂತೋಷದಿಂದಿರಿಸು, ಸಖಿಯರೇ ಇದು ನಾಯಕರ ಮನೆಯ ದೀಪ, ನಾವೆಲ್ಲರೂ ಕೂಡಿಕೊಂಡು ಆರತಿ ಮಾಡಲು ಹೋಗುವಾ. ಇಡೀ ತಾಂಡಾದ ಜನರಿಗೆಲ್ಲ ಶುಭಕೋರುತ್ತಾ ಆರತಿ ಮಾಡುವಾ ನಡೆಯಿರೇ ಸಖಿಯರೇ, ನಡೆಯಿರಿ.

ಹೀಗೆ ಲಂಬಾಣಿ ಹುಡುಗಿಯರು ತಾಂಡದ ನಾಯಕನಿಂದ ಆರತಿ ಬೆಳಗಲು ಅನುಮತಿಯನ್ನು ಪಡೆದುಕೊಂಡು ದೀಪಾವಳಿ ದೇವಿಗೆ ಆರತಿಯನ್ನು ಬೆಳಗಿ ಇಡೀ ತಾಂಡಕ್ಕೆ ಶುಭವನ್ನು ಕೋರುತ್ತಾರೆ.

**ಆ. ದೇವಿ-ದೇವತೆಗಳ ಹಾಡು**

ಲಂಬಾಣಿಗರ ದೇವರು ದೇವತೆಗಳಾದ ಮೀಟುಭುಕ್ಯ, ಸೇವಾಭಾಯ, ಮರಿಯಮ್ಮ, ಸಾತಿಸತಿ, ಸಾತಿಭವಾನಿ ದೇವತೆಗಳನ್ನು ಕುರಿತು ಹಲವಾರು ಗೀತೆಗಳನ್ನು ಹಾಡುವುದನ್ನು ಕಾಣಬಹುದು. ಇದಕ್ಕೆ ನಿದರ್ಶನವಾಗಿ ಇವರ ಪ್ರಮುಖ ದೇವರಾದ ಶ್ರೀ ಸೇವಾಭಾಯರ ಪ್ರಾರ್ಥನೆಯನ್ನು ಗಮನಿಸಬಹುದು.

ಸತ್ಯಗುರು ಸತ್ಯಗುರು ಸೇವಾಲಾಲ್ ಬಾಪುತೊನ ನಮಸ್ಕಾರ
ಭಾವನ ಬರೋಡೆವಾಳೋ ದೋಳೆ ಘೋಡೆವಾಳೋ ಸೋನೇರಿ
ಕಳಸೇವಾಳೋ.
ಅಖಂಡ ಬ್ರಹ್ಮಚಾರಿ ಭರೋಸೋಭಾರಿ ಸೇವಾಲಾಲ ಮಲಕೇರಿ
ತಟೆಸ್ವಿರಿ.
ಉಂದೊ ಥಾಳಿನ್ ಸಮಾಕರ, ಚಿತ್ತೂಕಾಮ ಪತ್ತೋಕರ
ಆ ಸಾವಾಳೇರಿ ಆಸಾಪೂರಿಕರ್ ಬಾಪುತೊನ ನಮಸ್ಕಾರ
ಭಂಡಾರ ಖಾನ ಬರವೋರಕರ ತಾರನಾ ಮೇರೋಲಾಗೋ

ಭೋಗ್ ಲೊಗೋರಪರ ಸಾಯಿವೇಜೊ ಲಾಲತೋನ ನಮಸ್ಕಾರ

ಹರಘುಡಿ ಹರದೇಮೆ ಕಣು, ಸೊತೆರ ಸಪನೇಮ ರೇಣು

ಆವಜೆ ವಿಗ್ನೇನ ದೂರ ಕರಣು ಬಾಪುತೋನ ನಮಸ್ಕಾರ

ಬಾರ ಬಾರ ಘುಂಟಾ ರಾಮೇರ ಸಾಯಿವೇಣು,

ಭರೇ ಘುರೇರೆ ಸಾಯಿ, ಜೀವ ಜನಗಾನೀರ ಸಾಯಿ

ಖೊಂಟಾ ಮುಂಗರಿರೋ ಸಾಯಿ, ಬಾಲ ಬಚ್ಚಾರಸಾಯಿ

ನಂಗರಿ ಹರಿಭರಿ ಕರಣು ಸೂಕನಂದಿ ಭರಪೂರ ಕರಣು

ಪಂಚರ ಭಳನ ಹಾಥ್ ಜೋಡನ ಅರದಾಸ ಕರಜೇರ

ಬರಿದಾಸ ರಕಾಡಣು ಸುಖಿ ರಕಾಡಣು ಸಾಯವೇಜೋ,

ವರ್ಷ ದಾಡೋರ ಕೋಸಳರ ಕಾಡೊ ತೋನ ದೀರ್ಘದಂಡ ನಮಸ್ಕಾರ ಬಾಪು.[೨]

ಬಿಳಿ ಕುದುರೆ, ಬಂಗಾರದ ಕಳಸವನ್ನು ಹೊಂದಿರುವ ಬಾಲ ಬ್ರಹ್ಮಚಾರಿ ಸತ್ಯ ರೂಪವೇ ಆಗಿರುವ ಸೇವಾಲಾಲನೆ ನಿನಗೆ ದೀರ್ಘದಂಡ ನಮನಗಳು. ವಿಘ್ನಗಳನ್ನು ದೂರಮಾಡಿ ಬೇಡಿದವರ ಬೇಡಿಕೆಗಳನ್ನು ಪೂರೈಸು. ಎಂದೆಂದಿಗೂ ನೆನೆದವರ ಮನದಲ್ಲಿ ನೆಲೆಸಿರು. ಜೀವ ಜಂತುಗಳಿಗೆಲ್ಲಾ ರಕ್ಷಣೆಯನ್ನು ಒದಗಿಸು. ಈ ಎಲ್ಲಾ ಸೇವೆಗಳನ್ನು ಸ್ವೀಕರಿಸಿ ಸರ್ವರಿಗೂ ಸುಖಃ ಸಂತೋಷಗಳನ್ನು ನೀಡು ತಂದೆ.

ಲಂಬಾಣಿ ಸಮುದಾಯದಲ್ಲಿ ಇಂತಹ ಅನೇಕ ದೇವರು ದೇವತೆಗಳ ಗೀತೆ ಈ ಮೇಲಿನ ಹಾಡು ಈ ಸಮುದಾಯದ ತಮ್ಮ ಪ್ರಮುಖ ದೇವರಾದ ಸೇವಾಭಾಯನನ್ನು ಪ್ರಾರ್ಥಿಸಿಕೊಳ್ಳುವ ರೀತಿ ತುಂಬಾ ಮಾರ್ಮಿಕವಾಗಿದ್ದು ಭಾವಪೂರ್ಣತೆಯು ಎದ್ದು ಕಾಣುತ್ತದೆ. ಇಂತಹ ಹಾಡುಗಳಲ್ಲಿ ಮೊದಲು ದೇವರ ವರ್ಣನೆ ಕಂಡು ಬಂದರೆ, ನಂತರದಲ್ಲಿ ತಮ್ಮ ಬೇಡಿಕೆಗಳನ್ನು ಈಡೇರಿಸುವಂತೆ ದೇವರಲ್ಲಿ ನಮ್ರತೆಯಿಂದ ಪ್ರಾರ್ಥಿಸಿಕೊಳ್ಳುವುದನ್ನು ಕಾಣಬಹುದಾಗಿದೆ.

ಒಟ್ಟಾರೆ ಈ ಧಾರ್ಮಿಕ ಹಾಡುಗಳಲ್ಲಿ ದೇವರು, ದೈವತ್ವದ ಕಲ್ಪನೆ, ಭಕ್ತಿಭಾವ ತನ್ಮಯತೆ ಹಾಗೂ ಅವರ ಸಂಸ್ಕೃತಿಯೇ ಪರಿಕಲ್ಪನೆಯನ್ನು ಕಾಣಬಹುದಾಗಿದೆ.

### ೨. ಶೃಂಗಾರ ಹಾಡುಗಳು

ಲಂಬಾಣಿ ಸಮುದಾಯದ ಹಾಡುಗಳಲ್ಲಿ ಶೃಂಗಾರ ರಸ ಸೂಸುವ ಹಾಡುಗಳಿಗೆ ಕೊರತೆಯಿಲ್ಲ; ಕಾರಣ ಈ ಸಮುದಾಯದವರು ಬಹಳ ರಸಿಕರು; ನೈಸರ್ಗಿಕ ಸಹಜ ಬದುಕನ್ನು ಬದುಕುವ ಅವರಲ್ಲಿ ಸರಸ, ಆಟಗಳು, ವ್ಯಂಗ್ಯ, ಚೇಷ್ಟೆಗಳಿಗೆ ಕೊರತೆಯಿಲ್ಲ. ಇವೆಲ್ಲಾ ಅವರ ರಸಿಕತೆಗಳಿಗೆ ಆಧಾರಗಳಾಗಿ ನಿಂತಿವೆ. ವಿವಾಹ ಹಾಗೂ ಹಬ್ಬ ಹರಿದಿನಗಳಲ್ಲಿ ಶೃಂಗಾರ ಹಾಡುಗಳನ್ನು ಹಾಡುತ್ತಾರೆ; ಕುಣಿಯುತ್ತಾರೆ, ಸರಸ ಆಟಗಳಲ್ಲಿ ಮೈಮರೆಯುತ್ತಾರೆ. ಅದರಲ್ಲಿಯೂ 'ತೀಜ್' ಹಾಗೂ 'ಹೋಳಿ' ಹಬ್ಬಗಳಲ್ಲಿ ಲಂಬಾಣಿಗರ ಶೃಂಗಾರ ಹಾಡುಗಳು ಸೂರೆಯಾಗುತ್ತದೆ.

"ಭೋರಿ ತಾರೋ ಮುಳಕೋ ಜಮಣಾ ನಂದಿಯ|
ಮಾಚಳಿ ಸರಿಕೆ ತಾರಿ ಅಂಖಿಯೇ ಗೋರಿಯೆ|
ಚಾಂದಾಸರಿಕೋ ತಾರೋ ಮುಂಡೋಭಯೇ ಮೋಯಿಸಿ|
ಸೋನೆ ರೂಪೇರಿ ತಾರಿ ಕಾಯಾಯೆ ಚಾಂದಣ|
ಪೋಲಕಾಮ ಗೋಕಮೇಲಿ ಹರಣಾರ ಗೋಳಯ|
ಸೋಳೆ ಹಾತೇರೊ ತಾರೊ ಘಾಗರಿ ಯಾಯೋ ಭೋರಿ|
ಹರಿ ಹರಿಯಾಳಿ ಚುಂದರೀಯೇ ಹೂಳಕಿ|
ಗೋದೇಮ ಅ ತೋನ ಸರಗ ದಕಾಳುಯ|"[೯]

ಸುಂದರಿಯೇ ನಿನ್ನ ಜಡೆಯು ಜಮಣಾ (ಯಮುನಾ) ನದಿಯು; ಮೀನುಗಳಂತಿವೆ ನಿನ್ನ ಕಣ್ಣು ನಿನ್ನ ಮುಖವು ಚಂದ್ರನಂತಿದೆ. ನಿನ್ನ ಶರೀರವು ಬಂಗಾರ ಬೆಳ್ಳಿಯು, ಲಂಗಧ್ಲಿ ಬೆಲ್ಲವನ್ನು ಅಡಗಿಸಿಕೊಂಡಿರುವೆ, ಹದಿನಾರು ಮಾಳದ ಲಂಗವು ನಿನ್ನದು. ಸುಂದರಿಯೇ ಬಗಲಲ್ಲಿ ಬಾ ನಿನಗೆ ಸ್ವರ್ಗವನ್ನು ಕಾಣಿಸುವೆನು.

ಈ ಮೇಲಿನ ಶೃಂಗಾರ ಹಾಡುಗಳಲ್ಲಿ ಯುವಕನು ಯುವತಿಯ ಅಂಗ ಸೌಷ್ಠಗಳನ್ನು ರೂಪಕ ಹಾಗೂ ಉಪಮೆಯ ಮೂಲಕ ಹಾಡಿಹೊಗಳುತ್ತಾರೆ. ಅವಳ ಒಂದೊಂದು ಅವಯುವಗಳು ಸುಂದರತೆಯ ಪ್ರತೀಕವಾಗಿ ಕಂಗೊಳಿಸುತ್ತದೆ. ಅವಳ ಸೌಂದರ್ಯಕ್ಕೆ ಮಾರುಹೋಗಿ ಅವಳ ಮನಸ್ಸು ಅವಳ ಅಂಗಾಂಗಳ ವರ್ಣನೆಯಲ್ಲಿ ತೊಡಗಿ ತನಗೆ ಸ್ಥಾನವನ್ನು ಕೊಡುವಂತೆ ನಿವೇದಿಸಿಕೊಳ್ಳುತ್ತಾನೆ.

ಹುಡುಗರ ಸೌಂದರ್ಯಕ್ಕೆ ಮಾರುಹೋದ ಹುಡುಗಿಯರ ಮನಸ್ಸು ಹುಡುಗನನ್ನು ನೋಡುವ, ಕೂಡುವ, ಅವನ ಒಲವನ್ನು ಗಳಿಸಿಕೊಳ್ಳುವಂತೆ ಮಾಡುವ ಕಾರ್ಯಗಳ ಅನೇಕ ಹಾಡುಗಳಲ್ಲಿ ವ್ಯಕ್ತವಾಗಿದೆ. ಅಂತಹ ಒಂದು ಹಾಡು ಹೀಗಿವೆ.

"ದಾಡೋ ಗರಜಚ ಪಾಣಿ ಪಡರೋಚ
ಪಡಚೋರೆ ಮಾರೆ ಸೈಯಾರೇ ಮಲಕೇ ಮ|
ಅಂವೂಕೇಗೋ ಪಾಪಿವಾಳೋ ಆಯೇ ಕೋನಿ ಬಾಯಿಯ|
ಘೂಲೇರಿ ವಾಡೀಮ ವಾಟ ಜೋವರಿಚೂ|
ಕೋವಲ ಬೋಲಗೀಯ ಭಾತಿ ಘಾಟರೀಯೆ|
ಬೋಲ ಜೋಯೇ ಮಾರೆ ಸೈಯಾರೆ ಮಲಕೇಮ್|
........................
ಕಾಂಯಿ ಕೋಣೂ ಪಾಪಿವಾಳೋ ಆಯೋಕೋನಿ ಬಾಯಿಯ
ಝೂಡೇರೇ ಮಾಳೇಮ ಪಂಖೇರೂ ಬೇಟೋಚ|
ಪಂಖೇರೂ ಜಾನಾರೆ ಮಾರೇ ಸೈಯಾರೇ ಮಲಕೇನ|
ಕಾಂಯಿಕರೂ ಪಾಪಿವಾಳೋ ಆಯೋಕೋನಿ ಬಾಯಿಯ|"[೧೦]

ಯುವತಿ ತನ್ನ ಪ್ರೀತಿಯ ಹುಡುಗ ವಿರಹವಾದಾಗ ತನ್ನ ಪ್ರಿಯತಮನನ್ನು ಕಾಣಲು, ಕೂಡಲು ಹಂಬಲಿಸುತ್ತಿದ್ದಾಳೆ. ನಿಸರ್ಗದ ಜೀವಿಗಳಾದ ಭ್ರಮರ, ಕೋಗಿಲೆ, ನವಿಲು, ಗಿಳಿ ಮುಂತಾದವುಗಳ ಸರಸವನ್ನು ಕಂಡು ಅವಳ ವಿರಹ ಹೆಚ್ಚಾಗುತ್ತಿರುವುದರಿಂದ ಅವುಗಳಿಗೆ ಸಂಬೋಧಿಸಿ ತನ್ನ ಪ್ರಿಯಕರನಿಗೆ ತನ್ನ ವಿರಹತಾಪವನ್ನು ವಿವರಿಸಿ, ಕರೆತರುವಂತೆ ಬೇಡಿಕೊಳ್ಳುತ್ತಾಳೆ. ಪ್ರಕೃತಿಯ ಸಹಜ ಮಳೆಯೂ ಕೂಡ ಅದಕ್ಕೆ ಕಾರಣವೆಂದರಿತು ತನ್ನ ಪ್ರಿಯಕರನಲ್ಲಿಗೆ ಹೋಗಿ ಮಳೆ ಸುರಿಸುವಂತೆ ಮೋಡವನ್ನು ಬೇಡಿಕೊಳ್ಳುತ್ತಾಳೆ. ಹೀಗೆಯೇ ನಿಸರ್ಗದ ಜೀವಜಂತುಗಳನ್ನು ಕಂಡು ಅವುಗಳ ಮುಖಾಂತರ ತನ್ನ ಸಂದೇಶ ಕಳುಹಿಸಿಕೊಡಲು ಚಡಪಡಿಸುತ್ತಾಳೆ. ಅವಳ ವಿರಹ ವೇದನೆಯ ನೈಜ ಚಿತ್ರಣ ಇಲ್ಲಿದೆ. ಈ ಸಂದರ್ಭವು ಕಾಳಿದಾಸ ಕವಿ 'ಮೇಘ ಸಂದೇಶ'ವನ್ನು ನೆನಪಿಗೆ ತರುತ್ತದೆ. ಶಿಷ್ಟಕವಿಯ ಯಾವ ಶೃಂಗಾರ ಕಾವ್ಯಕ್ಕಿಂತಲೂ ಪ್ರಸ್ತುತ ಗೀತೆಯು ಕಡಿಮೆಯೇನಲ್ಲ.

ಹೀಗೆ ಮಹಿಳೆಯರ ಸೌಂದರ್ಯಕ್ಕೆ ಮಾರುಹೋದ ಪುರುಷನು ಅವಳನ್ನು ನೋಡಲು ಪಡೆಯಲು ಹಂಬಲಿಸುವ, ಹಂಬಲಿಸುತ್ತ ಹಲವು ಹತ್ತು ಬಗೆಯ ವಿಚಾರಗಳಲ್ಲಿ ಚಟುವಟಿಕೆಗಳಲ್ಲಿ ತೊಡಗುವ ಮನೋರಂಗಗಳನ್ನು ಕುರಿತ ಅನೇಕ ಹಾಡುಗಳು ಲಂಬಾಣಿ ಸಮುದಾಯದ ಜನಪದ ಸಾಹಿತ್ಯದಲ್ಲಿ ಲಭ್ಯವಾಗುತ್ತದೆ.

**೩. ಪ್ರಕೃತಿ ಹಾಡುಗಳು**

ಪ್ರಕೃತಿಯ ಮಕ್ಕಳಾದ ಲಂಬಾಣಿಗರು ತಮ್ಮ ಸುತ್ತ ಮುತ್ತಲಿನ ಪ್ರಕೃತಿ ಸೌಂದರ್ಯವನ್ನು ಕಣ್ಣಾರೆ ಕಂಡು ಸವಿದು ಅವುಗಳನ್ನು ಹಾಡುಗಳ ಮುಖಾಂತರವಾಗಿ ಅಭಿವ್ಯಕ್ತಪಡಿಸಿರುವುದನ್ನು ಕಾಣಬಹುದು. ಈ ಹಾಡುಗಳು ನಿಸರ್ಗದಲ್ಲಿ ಕಾಣುವ ಸೂರ್ಯ, ಚಂದ್ರ, ಮೋಡ, ಮರಗಿಡ ಇತ್ಯಾದಿಗಳ ಹಾಡುಗಳಾಗಿವೆ.

ಆಕಾಶದಲ್ಲಿ ಮಳೆಬಾರದೆ ಮೋಡಗಳ ಮಾಯವಾದಾಗ ಮಳೆಯನ್ನು ಹಾಡು ರೂಪದಲ್ಲಿ ಚಿತ್ರಿಸಿದ್ದಾರೆ.

"ಸಾಳ್ಯ ಸೂಂಕೆ ಗದ್ದಾಭುಂಕೆ

ಉಚರಳ ಮಿಟಕಿ

ಪಾಣೇ ಬಲಾ ಪಾಣೇಬಲಾ"[೧೧]

.......................

ಈ ಗೀತೆಯಲ್ಲಿ ಗರಿಕೆ ಹಾಗೂ ಹಸಿರು ಹುಲ್ಲು ಇಲ್ಲದೆ ನರಿಗಳು ಅದಕ್ಕಾಗಿ ಎಲ್ಲೆಲ್ಲಿಯೂ ಮೂಸಿ ನೋಡುತ್ತಿವೆ. ಕತ್ತೆಗಳು ಒಂದೇ ಸಮನೆ ನೀರಿಲ್ಲದೆ ಅರಚಾಡು. ಆದ್ದರಿಂದ ಕಪ್ಪೆಯೇ ಕುಪ್ಪಳಿಸಿ ಕುಪ್ಪಳಿಸಿ ಚಲಿಸಿ ಮಳೆರಾಯನನ್ನು ಕರೆಯಿಸು ಎಂಬುದಾಗಿ ಹಾಡಿನ ಮೂಲಕ ಹಾಡಿ ಮಳೆರಾಯನನ್ನು ಆಹ್ವಾನಿಸುತ್ತಾರೆ. ಈ ಹಾಡಿನಲ್ಲಿನ ಕಪ್ಪೆಗಳು ಕುಪ್ಪಳಿಸುವುದು ಮತ್ತು ಶಬ್ದ ಮಾಡುವುದು ಮಳೆರಾಯನ ಆಗಮನದ ಸಂಕೇತ ಎಂಬ ನಂಬಿಕೆ ಈ ಸಮುದಾಯದಲ್ಲಿ ರೂಢಿಯಲ್ಲಿದೆ.

ಲಂಬಾಣಿಗರಲ್ಲಿ ಪ್ರಚಲಿತವಿರುವ ಮಳೆರಾಯನ ಇನ್ನೊಂದು ಗೀತೆ ಹೀಗಿದೆ.

"ಪಾಣಿ ಪಾವಸ, ಪಡ ಮಾರಾಜ,

ಡೋಕರೀನ ಡೋಕರಾ, ಲಡ ಮಾರಾಜ

ಢಾಕಣೆ ಆಟೂ, ವಾಜಳ ಫಾಟೋ

ಬೂಡೋಸೋ ಡೋಕರಾ, ಖೇತೇನ ಧಾಟೊ''[೨]

ಈ ಗೀತೆಯಲ್ಲಿಯೂ ಸಹ ಮಳೆರಾಯನನ್ನು ಅಹ್ವಾನಿಸುತ್ತಾರೆ. ಗುಡುಗು-ಸಿಡಿಲಿನ ಆರ್ಭಟದಿಂದ ಮಳೆ ಸುರಿಯುವಂತೆ ಅವನನ್ನು ಪ್ರಾರ್ಥಿಸಿಕೊಳ್ಳುತ್ತಾರೆ. 'ಡೊಕರಿ ಡೋಕರ ಲಡ ಮಾರಾಜ್' ಅಂದರೆ ಗುಡುಗು-ಸಿಡಿಲುಗಳನ್ನು ಸಂಕೇತಿಸುವ ರೀತಿಯಲ್ಲಿ ಹಾಗೂ 'ಡಾಕಣ ಆಟೂ ವಾಜಳ ಪಾಟೋ'' ಎಂಬ ಶಬ್ದಗಳು ದಟ್ಟವಾದ ಮೋಡಗಳು ಬಯಲಾಗುವುದನ್ನು ಸೂಚಿಸುವ ಸಂಕೇತಗಳಾಗಿ ಬಳಸಲಾಗಿದೆ. ಈ ರೀತಿಯ ಮಳೆಯಿಂದಾಗಿ ರೈತನು ಬಿತ್ತುವುದಕ್ಕಾಗಿ ಹೊಲಕ್ಕೆ ಓಡುತ್ತಾನೆ ಎಂಬ ಭಾವನೆ ಹಾಡಿನಲ್ಲಿದೆ. ಹೀಗೆ ಲಂಬಾಣಿಗರು ಋತು ಸಂಬಂಧಿ, ಪ್ರಕೃತಿ ಸಂಬಂಧಿ ಹಾಗೂ ಸೃಷ್ಟಿಯ ಚರಾಚರ ವಸ್ತುಗಳನ್ನು ಕುರಿತು ಹಾಡುಗಳನ್ನು ಹಾಡಿ ಮನದಣಿಯುತ್ತಾರೆ.

**೪. ಸ್ತ್ರೀ ನೃತ್ಯಹಾಡುಗಳು**

ವಿವಾಹದ ಸಂದರ್ಭದಲ್ಲಿ ಹಬ್ಬ-ಹರಿದಿನಗಳ ಉತ್ಸವದಲ್ಲಿ ಲಂಬಾಣಿ ಮಹಿಳೆಯರು ನರ್ತಿಸುತ್ತಾರೆ. ಲಂಬಾಣಿಗರು ನೃತ್ಯಗೀತೆಗಳ ಕಣಜವನ್ನು ಹೊಂದಿದ್ದಾರೆ. ಈ ಹಾಡುಗಳು ಎಂತಹ ಕಟು ಹೃದಯದವರನ್ನೂ ಮನದೂಗಿಸುವಂತಿರುತ್ತವೆ. ಇವುಗಳು ಸಾಮಾನ್ಯವಾಗಿ ಹಾಸ್ಯ, ಸವಾಲು, ಕಥನ ಕವನಗಳು, ತತ್ವಪದ ಹಾಗೂ ಆಧುನಿಕ ಸಮಾಜವನ್ನು ಕುರಿತು ನಾನಾ ಬಗೆಯ ವಸ್ತು ವಿಷಯಗಳನ್ನು ಒಳಗೊಂಡಿರುತ್ತವೆ. ಹಾಡನ್ನು ಹಾಡುತ್ತ, ಆ ಗೀತೆಯ ನಾದ ಲಯ ಹಾಗೂ ತಾಳಗಳಿಗೆ ತಕ್ಕಂತೆ ತಮ್ಮ ಮೈಮಾಟವನ್ನು ಮಣಿಸುತ್ತ ಹೆಜ್ಜೆ ಹಾಕುತ್ತಾರೆ. ಮಹಿಳೆಯರು ಗುಂಪು ಕಟ್ಟಿ ಸುತ್ತುವರಿದು ಕೈಗಳನ್ನು ಮೇಲೆ ಕೆಳಗೆ ಆಡಿಸುತ್ತ ಸೊಂಟವನ್ನು ಬಾಗಿಸುತ್ತ, ಕುತ್ತಿಗೆ ತಿರುವುತ್ತ ಅಪೂರ್ವವಾದ ನೃತ್ಯಲೋಕವನ್ನು ಸೃಷ್ಟಿಸುತ್ತಾರೆ. ರಂಗುರಂಗಿನ ಬಟ್ಟೆಗಳು ವಿವಿಧ ವಿನ್ಯಾಸದ ಆಭರಣಗಳು, ಕಾಲಿನ ಕಿರುಗೆಜ್ಜೆಗಳು ಇವುಗಳ ಜೊತೆಗೆ ಈ ನೃತ್ಯಗೀತೆಗಳು ಶ್ರೋತೃಗಳ ಮನಸ್ಸನ್ನು ಸೆರೆ ಹಿಡಿಯುತ್ತವೆ.

ಸೇವಾಭಾಯ ಆಯೋನ ಲಗಿ ಭುಲಿಯೊಯೋ ||ಪ||

ಬನಾಯೇ ಲಗಿರೋ ಫೇರಿ ಫರಿಯಾಯೇ|

ಮಾತೀವಾಳೋ ಆಯೋನ ಗಾವಣ ಭೂಲಿಯಾಯೇ|

ಬನಾಯೇ ಗಾವಮೇರೂ ಫೇರಿ ಫರಿಮಾಯೇ|

ಆಯುವಾಳೇ ಆಯೋನ ಲಗಿ ಭಲಿಯಾಯೇ|

ಭಾನಾಯೇ ಲಗಿರೋ ಫುಲು ಗಾಲಿಯಾಯೋ|

ಸೇವಾಭಾಯಾ ಆಯೋನ ಗಾದಿ ಭುಲಿಯಾಯೋ|

ಬನಾಯೇ ಗಾದಿರೋ ಫೇರಿ ಗಾಲಿಯಾಯೋ|

ಸೇವಾ ಭಾಯಾ ಆಯೇನ ಲಗಿ ಭುಲಿಯಾಯೋ[೨೩] ||ಪಲ್ಲ||

..............................

ಸೇವಾಭಾಯಾ ಧ್ವಜ ಮರೆತು ಬಂದಿರುವನು, ಅದಿಲ್ಲದೆಯೋ ಪ್ರಪಂಚವನ್ನೆಲ್ಲಾ ಸುತ್ತಿಬಂದನು. ಮುತ್ತಿನಾಭರಣ ದಾರಿಯಾದರ ಸೇವಾಭಾಯನು ಗಾವಣ (ಗಾಯಕ) ಮರೆತು ಬಂದನು. ಆದರೂ ಅವರಿಲ್ಲದೆಯೇ ಇಡೀ ಲೋಕವನ್ನು ಸುತ್ತಿ ಬಂದನು. ಹೀಗೆಯೇ ತನ್ನದಾದ ಒಂದೊಂದು ವಸ್ತುವನ್ನು ಮರೆತು ಬಂದಿರುವ ಸೇವಾಭಾಯಾನು ಇಡೀ ಪ್ರಪಂಚವನ್ನೇ ಸುತ್ತಿಸುಳಿದು ಬಂದಿರುವನೆಂದು ಗೀತೆಯು ಮುಂದುವರಿಯುತ್ತದೆ. ಈ ಬಗೆಯ ಹಲವಾರು ಹಾಡುಗಳನ್ನು ರಚಿಸಿ ನೃತ್ಯಗಳ ಮೂಲಕ ಜನರನ್ನು ಮನರಂಜಿಸುತ್ತಾರೆ.

ಲಂಬಾಣಿ ಸಮುದಾಯದಲ್ಲಿ ನಿರ್ದಿಷ್ಟವಾದ ಹಾಡುಗಳ ಜೊತೆಗೆ ಮಾತ್ರ ನೃತ್ಯ ಮಾಡಬೇಕೆಂಬ ಯಾವ-ನಿಯಮವೂ ಇರುವುದಿಲ್ಲ. ಸಂದರ್ಭ ಸ್ಫೂರ್ತಿಯಿಂದ ರಚಿಸಿಕೊಂಡು ಅದಕ್ಕೆ ತಕ್ಕಂತೆ ನೃತ್ಯ ಮಾಡುವುದು ರೂಢಿಯಲ್ಲಿದೆ. ಇದನ್ನು 'ಘುಮರ್ ನೃತ್ಯ' ಎನ್ನುವರು. ಈ ನೃತ್ಯ ವೇಗದ ಹೆಜ್ಜೆಯ ನೃತ್ಯವಾಗಿದ್ದು ಇದರಲ್ಲಿ ಸಮಾಜಿಕ ಹಾಡುಗಳೇ ಹೆಚ್ಚಾಗಿರುತ್ತದೆ. ಈ ಹಾಡುಗಳು ಸಣ್ಣದಾಗಿದ್ದು ಸಂದರ್ಭೋಚಿತವಾಗಿ ಸ್ವಾರಸ್ಯಕರವಾಗಿದ್ದು ಮನರಂಜನೆಯನ್ನು ನೀಡುತ್ತದೆ.

**ಹಾತೇಕ ವೇತೇಯೇ ಕಾಕಡಿ ನಣದೆ ಬಾಯಿ**

**ಓಕ್ಯಾ ಮೋಚೆಯೇ ಕಾಕಡಿ ಸಣದೆ ಬಾಯಿ**

**ತಕಡಿಮ ತೋಲಯೇ ಕಾಕಡಿ ನಣದೆ ಬಾಯಿ**

**ಚಾರಾನಾನ ಕೇಜಿಯೇ ಕಾಕಡಿ ನಣದೆ ಬಾಯಿ**

**ಜಕ್ಯಾ ಮೋಚೆಯೇ ಕಾಕಡಿ ನಣದೆ ಬಾಯಿ**[??]

ಈ ಗೀತೆಯಲ್ಲಿ ಸೌತೆಕಾಯಿ ಹಾಗೂ ಸೌತೆಕಾಯಿ ತೂಕದಿಂದ ಲಭ್ಯವಾಗುವ ವೋಜನ್ನು ಹಾಡುಗಾರ್ತಿಯರು ಹಾಡಿದ್ದಾರೆ. ಹೀಗಾಗಿ ಎಲ್ಲ ಪ್ರಸಂಗಗಳಲ್ಲಿಯೂ ನೃತ್ಯದೊಂದಿಗೆ ಹಾಡುವ ಗೀತೆಗಳು ಕಡಿಮೆ ಪ್ರಮಾಣದಲ್ಲಿ ಲಭ್ಯವಾಗುತ್ತವೆ. ಹಾಡಿನ ಲಯದೊಂದಿಗೆ ಮೇಳೈಸಿ ಬರುವ ಲಂಬಾಣಿ ಸ್ತ್ರೀಯರ ನೃತ್ಯ ಅವರದೇ ವೈಶಿಷ್ಟ್ಯವನ್ನು ಹೊಂದಿದೆ.

**೯.೧.೨. ಕಥೆ**

ಜನಪದ ಸಾಹಿತ್ಯದಲ್ಲಿ 'ಜನಪದ ಕಥೆ' ಒಂದು ಪ್ರಮುಖವಾದ ಸಾಹಿತ್ಯ ಪ್ರಕಾರವಾಗಿದೆ. ಲಂಬಾಣಿಗರು ಜನಪದ ಕಥೆಗಳಿಗೆ 'ಸಾಕಿ' ಎಂದು ಕರೆಯುತ್ತಾರೆ. ಈ ಕಥೆಗಳನ್ನು ಹೆಚ್ಚಾಗಿ ಬಿಡುವಿನ ಸಮಯದಲ್ಲಿ, ಪ್ರಯಾಣದ ಸಮಯದಲ್ಲಿ, ದನಕಾಯುವಾಗ, ಅಜ್ಜ ಅಜ್ಜಿಯರು ತಮ್ಮ ಮೊಮ್ಮಕ್ಕಳನ್ನು ರಾತ್ರಿ ಮಲಗಿಸುವಾಗ ಬೆಳದಿಂಗಳ ತಂಪು ಕಿರಣಗಳ ಅಡಿಯಲ್ಲಿ ಕಥೆಯನ್ನು ಹೇಳಿ ಮಲಗಿಸುತ್ತಾರೆ. ಮನೋರಂಜನೆಯ ಉದ್ದೇಶಕ್ಕಾಗಿಯೇ ಅವುಗಳನ್ನು ಹೇಳುವ ಕ್ರಮ ಅಲ್ಲಿದೆ. ಇತ್ತೀಚೆಗೆ ಕಥೆ ಹೇಳುವ ಹಾಗೂ ಕೇಳುವ ಕ್ರಮ ಬಹಳ ಕಡಿಮೆಯಾಗುತ್ತಿದೆ. ಬದುಕಿನ ಆಹ್ವಾನ ಹಾಗೂ ರಂಜನೆಯ ಯಂತ್ರ ಸಾಮಾಗ್ರಿಗಳಾದ ರೇಡಿಯೋ ಹಾಗೂ ದೂರದರ್ಶನ ಮಾಧ್ಯಮಗಳು ತಾಂಡಾಗಳನ್ನು ಪ್ರವೇಶಿಸಿದ್ದೇ ಇದಕ್ಕೆ ಕಾರಣವಾಗಿದೆ. ಹೀಗಾಗಿ ಲಂಬಾಣಿ ಜನಪದ ಕಥೆಗಳು ವಕ್ತೃಗಳಿಂದ ಸಂಗ್ರಹಕ್ಕಾಗಿ ಸಿಗಬಹುದೇ ಹೊರತು, ಒಂದು ಪರಂಪರೆಯಾಗಿ ಉಳಿಯುವ ಯಾವ ಲಕ್ಷಣವೂ ಕಾಣಿಸುವುದಿಲ್ಲ. ಇದು ಇಂದು ಯಾವುದೇ ಸಮುದಾಯಗಳಲ್ಲಿಯೂ ನಡೆದಿರುವ ಪ್ರಕ್ರಿಯೆಯಾಗಿದೆ.

ಜನಪದ ಕಥೆಗಳು ಒಂದು ಸಮುದಾಯದ ಸಾಂಸ್ಕೃತಿಕ ಚರಿತ್ರೆಯನ್ನು ನೀಡುವುದರಲ್ಲಿ ಯಶಸ್ವಿಯಾಗಿವೆ. ಏಕೆಂದರೆ ಅವುಗಳ ಮೂಲಕ ಒಂದು ಪರಂಪರೆಯ ಜೀವನ ವಿಧಾನವನ್ನು ವಿಶಾಲವಾಗಿ ಪರಿಶೀಲಿಸಬಹುದಾಗಿದೆ. ''ಮಾನವ ಅವನ ಸಮಾಜ ಮತ್ತು ಸಂಸ್ಕೃತಿ ನಾಗರಿಕತೆಗಳ ಬಗ್ಗೆ ಅಧಿಕ ಪುರಾವೆಗಳನ್ನು ಒದಗಿಸಬಲ್ಲ. ಇದು ಕೇವಲ ಸಾಹಿತ್ಯ ಪ್ರಕಾರವಾಗಿದೆ. ಪ್ರಾಮಾಣಿಕ ವಿಜ್ಞಾನವೂ ಆಗಿದೆ. ಆದ್ದರಿಂದ ಇಂಥ ಪರಂಪರಾಗತಿ ಕಥೆಗಳಿಗೆ ಮನರಂಜನೆ ಒಂದು ಮುಖವಾದರೆ, ಸಾಮಾಜಿಕ, ಭಾಷಿಕ, ಚಾರಿತ್ರಿಕ, ಮನಃಶಾಸ್ತ್ರೀಯ ಹಾಗೂ ಮಾನವ ಶಾಸ್ತ್ರೀಯ ದೃಷ್ಟಿಕೋನಗಳ ಮೂಲಕ ಮನುಷ್ಯ ವರ್ಗದ ತಿಳುವಳಿಕೆ ಮತ್ತೊಂದು ಮುಖವಾಗಿದೆ. ಜನಪದ ಕಥೆಯ ಬಗ್ಗೆ ಹುಟ್ಟಿರುವಷ್ಟು ವಾದವಿವಾದಗಳು ಸಿದ್ಧಾಂತ, ಪ್ರತಿಸಿದ್ಧಾಂತಗಳು, ಮತ್ತಾವುದೇ ಪ್ರಕಾರದ ಬಗ್ಗೆ ಇದ್ದ ಹಾಗೆ ಕಾಣುವುದಿಲ್ಲ. ಈ ಸಂಪ್ರದಾಯದ ಬಗ್ಗೆ ಜಗತ್ತಿನ ಜನಪದ ವಿದ್ವಾಂಸರು ತೋರಿಸಿದ ಆಸಕ್ತಿ ನಡೆಸಿದ ಕೆಲಸ ಅಸದೃಶ್ಯವಾದುದಾಗಿದೆ. ಮತ್ತು ಅಪೂರ್ವವಾದುದಾಗಿದೆ.''[illegible]

ಜನಪದ ಕಥೆಗಳು ಸಂಸ್ಕೃತಿಯ ಅಧ್ಯಯನದಲ್ಲಿ ತನ್ನದೇ ಆದ ಸ್ಥಾನವನ್ನು ಪಡೆದುಕೊಂಡಿದೆ. ಇವುಗಳ ಪ್ರಾಮುಖ್ಯತೆ ಕುರಿತು ಡಾ. ಸೋಮಶೇಖರ ಇಮ್ರಾಪೂರ ಹೀಗೆ ವಿವರಿಸಿದ್ದಾರೆ. ''ಜನಪದ ಕಥೆಗಳು ಸಂಸ್ಕೃತಿಯ ಸಾರಸರ್ವಸ್ವ. ಇಡೀ ಮಾನವ ಬದುಕಿನ ಸಮಸ್ತವನ್ನು ಒಳಗೊಂಡ ಕಥೆಗಳು ಅದ್ಭುತ, ಕಲ್ಪನಾಲೋಕವನ್ನೇ ಕಣ್ಣೆದುರು ಕಟ್ಟುವಲ್ಲಿ ಕೃತಾರ್ಥವಾಗಿದೆ. ಆಯಾ ಜನಾಂಗದ ಆಚರಣೆ, ಆಚಾರ, ವಿಚಾರ, ನಡೆ-ನುಡಿ ಸಂಪ್ರದಾಯ, ಪದ್ಧತಿ, ಕಲೆ, ಸಾಹಿತ್ಯ, ವೈದ್ಯ, ಮಾಂತ್ರಿಕ ಮಾಟ-ಮಂತ್ರ, ಆಟ-ಪಾಠ ಮುಂತಾಗಿ ಇಡೀ ಸಂಸ್ಕೃತಿ ಪರಿಸರವನ್ನೇ ಕಟ್ಟಿಕೊಂಡು ತಲೆ ತಲಾಂತರಗಳಿಂದ ಬಾಯಿಂದ ಬಾಯಿಗೆ ಊರಿಂದೂರಿಗೆ ಯುಗದಿಂದ ಯುಗಕ್ಕೆ, ಸಾಗಿ ಬಂದಿರುವ ಅವು ಗ್ರಾಮೀಣರ ಪ್ರತಿಭೆ, ಬುದ್ಧಿ, ಜಾಣ್ಮೆ, ಕೌಶಲ್ಯಕ್ಕೆ ಒರೆಗಲ್ಲಾಗಿವೆ. ಆದ್ದರಿಂದಲೇ ಎಲ್ಲಾ ಸಾಮಾಜಿಕ ಶಾಸ್ತ್ರಗಳಲ್ಲಿಯೂ ಮಾತ್ರ ಸದೃಶ್ಯವಾದ ಜನಪದ ಕುರಿತು ವೈಜ್ಞಾನಿಕ ಅಧ್ಯಯನದಲ್ಲಿ ಈ ಜನಪದ ಕಥೆಗಳಿಗೆ ಅಗ್ರ ಪ್ರಾಶಸ್ತ್ಯ ಎಂದಿದ್ದಾರೆ.

ಲಂಬಾಣಿಗರು ಸುದೀರ್ಘ ಪರಂಪರೆಯುಳ್ಳವರು ಅನುಭವಿಗಳು. ತಲೆಮಾರಿನಿಂದ ಬುಡಕಟ್ಟಿಗಳೂ ಕಥೆಗಳನ್ನು ಅವುಗಳ ವಸ್ತು ವೈವಿಧ್ಯಗಳ ಆಧಾರದ ಮೇಲೆ ಸ್ಥೂಲವಾಗಿ ೧. ಪ್ರಾಣಿ ಕಥೆಗಳು ೨. ನೀತಿ ಕಥೆಗಳು ೩. ಪುರಾಣಗಳು ೪. ಐತಿಹ್ಯಗಳು ೫. ಸಂಕೀರ್ಣ ಕಥೆಗಳು ಎಂಬುದಾಗಿ ೫ ವರ್ಗಗಳಾಗಿ ವರ್ಗೀಕರಿಸಿ ಪರಿಶೀಲಿಸಬಹುದು.

### ೧. ಪ್ರಾಣಿ ಕಥೆಗಳು

ಪ್ರಾಣಿಗಳನ್ನು ಮುಖ್ಯವಾಗಿಟ್ಟುಕೊಂಡು ನಿರ್ಮಿಸುವ ಕಥೆಗಳೇ ಪ್ರಾಣಿ ಕಥೆಗಳು. ಈ ಕಥೆಗಳು ಪ್ರಾಕ್ತನವಾದವುಗಳು. ವಿಶ್ವದ ಎಲ್ಲಾ ಪ್ರದೇಶದಲ್ಲೂ ಎಲ್ಲಾ ಸಂಸ್ಕೃತಿಯಲ್ಲೂ ನೋಡಬಹುದಾದ ಈ ಪ್ರಾಣಿಕಥೆಗಳು ನೀತಿಯನ್ನು ಒಳಗೊಂಡಿರುತ್ತವೆ. ಲಂಬಾಣಿ ಸಮುದಾಯದಲ್ಲಿ ಇಂತಹ ಕಥೆಗಳು ಹೇರಳವಾಗಿದೆ. ಇವು ''ಪ್ರಾಣಿಗಳ ಸ್ವರೂಪವನ್ನು ವಿವರಿಸುವುದರ ಜೊತೆಗೆ ತಮ್ಮ ಸಮಕಾಲೀನ ಸಮಾಜದ ಪ್ರತಿಷ್ಠಿತ ಜನಾಂಗವನ್ನು ಒಂದು ಬಗೆಯಿಂದ ಪ್ರತಿಬಿಂಬಿಸುತ್ತವೆ.''[೧೨]

"ಮನುಷ್ಯ ತನ್ನ ಶೈವಾವಸ್ಥೆಯಿಂದ ತಾಳಿದ ಕುತೂಹಲ ವಹಿಸಿದ ಆಸಕ್ತಿಗಳೇ ಇಂತಹ ಕಥೆಗಳಿಗೆ ಕಾರಣವಾಗಿರಬೇಕೆಂದು ತೋರುತ್ತದೆ. ಆದಿವಾಸಿ ಜೀವನದ ಮೇಲೆ ಪ್ರಭಾವ ಬೀರಿದ ಅತ್ಯಂತ ದೊಡ್ಡ ಶಕ್ತಿಗಳಲ್ಲಿ ಪ್ರಕೃತಿ ಪ್ರಧಾನವಾಗಿರುವುದರಿಂದ ಸಹಜವಾಗಿಯೇ ಆತ ಇದರ ಬಗ್ಗೆ ಪ್ರತಿಕ್ರಿಯೆ ವ್ಯಕ್ತಪಡಿಸಿರಬೇಕು. ಇಂತಹ ಪ್ರತಿಕ್ರಿಯೆ ಪ್ರತೀಕಗಳಾಗಿ ಪ್ರಾಣಿ ಕಥೆಗಳು ಸೃಷ್ಟಿಯಾಗಿರಬೇಕೆಂದು ಊಹಿಸಿರಬಹುದಾಗಿದೆ."[೨೫] ಇದಕ್ಕೆ ನರಿಯ ಕಥೆಯನ್ನು ನಿದರ್ಶನವಾಗಿ ಕೊಡಬಹುದಾಗಿದೆ.

ಅಡವಿಯಲ್ಲಿ ಒಂದು ನರಿ ವಾಸವಾಗಿತ್ತು. ತನ್ನ ಹೆಂಡತಿಯ ಬಾಣಂತನವಿದ್ದುದರಿಂದ ಎಲ್ಲಿಯಾದರೂ ಆಶ್ರಯ ಪಡೆಯಬೇಕೆಂದು ಮನೆ ಹುಡುಕತೊಡಗಿತು. ಸುಮಾರು ಇಪ್ಪತ್ನಾಲ್ಕು ರಹದಾರಿಗಳ ದೂರ ಹೋಯಿತು. ಅಲ್ಲಿ ಒಂದು ಹುಲಿಯಗವಿ ಕಾಣಿಸಿತು. ತನ್ನ ಹೆಂಡತಿ ಮಕ್ಕಳೊಂದಿಗೆ ಹೋಗಿ ಅದರಲ್ಲಿ ಕುಳಿತುಕೊಂಡಿತು.

ದಿನವೆಲ್ಲಾ ಬೇಟೆಯಾಡಿದ ಹುಲಿ ಸಂಜೆಯ ಸಮಯಕ್ಕೆ ಎಂದಿನಂತೆಯೇ ತನ್ನ ಗವಿಗೆ ಬರತೊಡಗಿತು. ಅದು ಬರುತ್ತಿರುವುದನ್ನು ದೂರದಿಂದಲೇ ನೋಡಿದ ನರಿಯು ತನ್ನ ಕೈಯಲ್ಲಿ ಚೂರಿಯನ್ನು ಹಿಡಿದುಕೊಂಡು ಒಂದು ಕಲ್ಲಿಗೆ ಮಸೆಯ ಹತ್ತಿತು. ಕರ್ರ್ ಕರ್ರ್ ಎಂಬ ಸದ್ದು ಬರಲು ಪ್ರಾರಂಭವಾಯಿತು. ಗವಿಯ ಸಮೀಪಕ್ಕೆ ಬಂದ ಹುಲಿಯು ತನ್ನ ಮನೆಯ ಒಳಗಿನಿಂದ ಸದ್ದು ಬರುತ್ತಿರುವುದನ್ನು ಕೇಳಿ, ತನ್ನ ಮನೆಯಲ್ಲಿ ಯಾರೋ ಪ್ರವೇಶಿಸಿರುವರೆಂದು ತಿಳಿದು ಹೊರಗಡೆಯಲ್ಲಿ ನಿಂತುಕೊಂಡು ತನ್ನ ಮನೆಯಲ್ಲಿ ಇರುವವರು ಯಾರು ಎಂದು ಕೇಳಿತು.

ಆಗ ಒಳಗಿರುವ ನರಿಯು "ನಾನು ರಾಕ್ಷಸನ ತಂದೆ ಕಾನಾ ಇದ್ದೇನೆ, ನಿನ್ನಂಥವರನ್ನೆಷ್ಟೋ ತಿಂದಿದ್ದೇನೆ" ಎಂದು ಹೇಳಿತು. ಹುಲಿಯು ತನ್ನ ಮನೆಯನ್ನು ಬಿಟ್ಟು ಹೋಗುವಂತೆ ಪ್ರಾರ್ಥಿಸಿಕೊಂಡರೂ ಪ್ರಯೋಜನವಾಗಲಿಲ್ಲ. ಆ ಕಡೆ ಈ ಕಡೆಯಾರಾದರೂ ಇರಬಹುದೇ? ಎಂದು ನೋಡಿತು. ಸ್ವಲ್ಪ ದೂರದಲ್ಲಿ ಒಂದು ಒಂಟೆ ಕಾಣಿಸಿತು. ಹುಲಿಯು ಅದರಲ್ಲಿಗೆ ಓಡಿ ಹೋಗಿ ತನ್ನ ಸಮಸ್ಯೆಯನ್ನು ತೋಡಿಕೊಂಡು ತನಗೆ ಸಹಾಯ ಮಾಡುವಂತೆ ಕೇಳಿಕೊಂಡಿತು. ಹುಲಿಯ ಕೋರಿಕೆಯಂತೆ ಒಂಟೆಯು ಗವಿಗೆ ಬಂದು ನೋಡಲಾಗಿ ಈ ಹಿಂದಿನಂತೆಯೇ ಗವಿಯ ಒಳಗಿನಿಂದ ಕರ್ರ್ ಕರ್ರ್ ಎಂಬ ಧ್ವನಿ ಕೇಳಿ ಬರುತ್ತಿತ್ತು. ಒಂಟೆಯು ಗವಿಯ ಒಳಗಡೆ ಇರುವವರು ಯಾರು ಎಂದು ಪ್ರಶ್ನಿಸಿತು. ಆಗ ನರಿಯು ಈ ಹಿಂದೆ ಹೇಳಿದಂತೆಯೇ ತಾನು ರಾಕ್ಷಸನ ತಂದೆ ಇರುವುದಾಗಿ ತಿಳಿಸಿತು. ಒಂಟೆ ಹಾಗೂ ಹುಲಿಗಳೆರಡೂ ಹೆದರಿ ಓಡಿಹೋಗತೊಡಗಿದವು.[೨೬]

ಮುಂದೆ ಹುಲಿಯು ಆನೆ, ಸಿಂಹ ಹಾಗೂ ತೋಳಗಳನ್ನು ತನ್ನ ಗವಿಗೆ ಕರೆದುಕೊಂಡು ಬಂದು ತನ್ನ ಗವಿಯಲ್ಲಿರುವ ಪ್ರಾಣಿಯನ್ನು ಹೊರಹಾಕಲು ಪ್ರಯತ್ನಿಸಿತು. ಅವುಗಳ ಪ್ರಯತ್ನವೂ ನಿಷ್ಫಲವಾಯಿತು.

ಕೊನೆಗೆ ಹುಲಿಯು ನರಿಯಲ್ಲಿಗೆ ಬಂದು ತನ್ನ ಸಮಸ್ಯೆಯನ್ನು ನಿವೇದಿಸಿತು. ಹುಲಿಯ ಸಮಸ್ಯೆಯನ್ನು ಕೇಳಿದ ನರಿಯು ತಾನು ಗವಿಯಲ್ಲಿರುವ ಪ್ರಾಣಿಯನ್ನು ಹೊರ ಹಾಕುವುದಾಗಿ ತಿಳಿಸಿತು. ಸಿಂಹ, ಆನೆ, ಒಂಟೆ ಹಾಗೂ ತೋಳಗಳೊಂದಿಗೆ ಗವಿಯೆಡೆಗೆ ಬರತೊಡಗಿತು. ದೂರದಿಂದಲೇ ಗವಿಯ ಒಳಗಡೆಯಿಂದ ನೋಡಿದ ನರಿಯ "ಹಾವಿನ ಹೆಜ್ಜೆ ಹಾವೇ ಬಲ್ಲದು" ಎನ್ನುವಂತೆ ತನ್ನ ಸುಳಿವು ನರಿಯಣ್ಣನಿಗೆ ತಿಳಿಯದೇ ಇರಲಾರದು;

ಹುಲಿಗೆ ಈ ವಿಷಯ ತಿಳಿದು ಬಿಟ್ಟರೆ ತಾನು ಉಳಿದುಕೊಳ್ಳಲಾರನೆಂದು ತಿಳಿದು ತನ್ನ ಕುಟುಂಬ ಸಮೇತ ಗವಿಯಿಂದ ಹೊರ ಬಂದು ಒಂದು ಗಿಡ ಹತ್ತಿರ ಕುಳಿತುಕೊಂಡಿತು. ದೂರದಿಂದಲೇ ಇದನ್ನು ನರಿ, ಸಿಂಹ ಮುಂತಾದವುಗಳಲ್ಲಿ ನೋಡಿದವು. ಗವಿಯ ಒಳಗಿರುವ ರಾಕ್ಷಸವು ಗಿಡ ಹತ್ತುತ್ತಿದೆ ಎಂದು ತಿಳಿದುಕೊಂಡವು. ನರಿಯು ತಾನು ಹಿಡಿದು ತರುವುದಾಗಿ ಉಳಿದ ಪ್ರಾಣಿಗಳಿಗೆ ಮಾತುಕೊಟ್ಟಿತು. ಒಂಟೆ, ಆನೆ, ಹುಲಿ, ಸಿಂಹ, ತೋಳಗಳು ಒಂದರ ಮೇಲೊಂದರಂತೆ ನಿಂತುಕೊಂಡವು. ತೋಳದ ಮೇಲೆ ನರಿ ನಿಂತುಕೊಳ್ಳುತ್ತಿರುವಂತೆಯೇ ಗಿಡದ ಮೇಲಿರುವ ನರಿಯು ತನ್ನ ಹೆಂಡತಿಗೆ "ಲಾಬಿಲ್ಲಾ ಪಾಡುಯ ನೂರಬಿಲ್ಲಾ" (ತಾ ಆಟೋಳ ಕಾಯಿ ತಗಿತಿನಿ ಇವರ ಹೊಟ್ಯಾಗಿನ ಮರಿಗಳು) ಎಂದು ಧ್ವನಿ ಮಾಡಿ, ಆಟೋಳ ಕಾಯಿಗಳನ್ನು ನರಿಯ ಮೇಲೆ ಒಗೆಯ ತೊಡಗಿತು. ಸಿಂಹ, ಒಂಟೆ, ಆನೆಗಳಲ್ಲಿ ಒಂದರ ಮೇಲೊಂದು ಬೀಳುತ್ತಾ, ಏಳುತ್ತಾ ಹೆದರಿ ಓಡಿಹೋಗತೊಡಗಿದವು; ನರಿಯು ತನ್ನ ಜಾಣತನಕ್ಕೆ ನಗತೊಡಗಿತು. ಮುಂದೆ ಹುಲಿಯು ತನ್ನ ಗವಿಯನ್ನು ಮರೆತು ಬಿಟ್ಟಿತು. ನರಿಯು ಅದರಲ್ಲಿ ಸುಖವಾಗಿ ವಾಸವಾಯಿತು.[೨೦]

ಈ ಕಥೆಗಳೇ ಅಲ್ಲದೆ ಅನೇಕ ಮನರಂಜನೆಯ ಕಥನಗಳನ್ನು ಈ ಸಮುದಾಯದಲ್ಲಿ ಗುರುತಿಸಬಹುದಾಗಿದೆ. ಇವುಗಳನ್ನು ಕಟ್ಟುಕಥೆ, ತಮಾಷೆ ಕಥೆ, ಗೇಲಿ ಕಥೆ ಎಂದು ಕರೆಯುತ್ತಾರೆ. ಈ ಕಥೆಯಲ್ಲಿ ಪ್ರಾಣಿಗಳ ಪಾತ್ರಗಳು ಪ್ರಧಾನವಾಗಿರುತ್ತವೆ.

**೨. ನೀತಿ ಕಥೆಗಳು**

ನೀತಿ ಕಥೆಗಳು ಮುಖ್ಯ ಉದ್ದೇಶ ನೀತಿಯನ್ನು ಬೋಧಿಸುವುದು. ಮನುಷ್ಯನನ್ನು ಉತ್ತಮ ದಾರಿಯಲ್ಲಿ ಕೊಂಡೊಯ್ಯುವ ಆಶಯಗಳನ್ನು ಹೊಂದಿವೆ. ಇಲ್ಲಿ ಪ್ರಾಣಿಗಳ ಗುಣಾವಗುಣಗಳು ಮುಖ್ಯವಲ್ಲ. ಬದಲಾಗಿ ಪ್ರಾಣಿಗಳ ಮುಖಾಂತರ ನೀತಿಯನ್ನು ಬೋಧಿಸುವುದು ಪ್ರಮುಖ ಗುರಿಯಾಗಿರುತ್ತದೆ. ಲಂಬಾಣಿ ಸಮುದಾಯದಲ್ಲಿ ಹಲವಾರು ನೀತಿ ಕಥೆಗಳು ರೂಢಿಯಲ್ಲಿವೆ. ನೀತಿಯನ್ನು ಬೋಧಿಸುವ 'ಗರುಡಪಕ್ಷಿ'ಯ ಕಥೆಯನ್ನು ದರ್ಶನವಾಗಿ ಕೊಡಬಹುದಾಗಿದೆ.

"ಹೀಗೊಂದು ತಾಂಡಾದಲ್ಲಿ ಇಬ್ಬರು ಆತ್ಮೀಯ ಸ್ನೇಹಿತರಿದ್ದರಂತೆ. ಒಬ್ಬ ಬಡವ, ಇನ್ನೊಬ್ಬ ಅಗರ್ಭ ಶ್ರೀಮಂತ. ಇಬ್ಬರದು ಒಂದೇ ಮತ. ಮದುವೆಯಾಗುವುದಿದ್ದಲ್ಲಿ ಒಂದೇ ಸಲ ಆಗಬೇಕೆಂಬುದು ಇಬ್ಬರ ಆಲೋಚನೆ. ಆದರೆ ದೈವ ಹೀಗಾಗಲು ಬಿಡಲಿಲ್ಲ. ಬಡವ ಮೊದಲು ಮದುವೆ ಮಾಡಿಕೊಂಡ. ಮಾಡಿಕೊಂಡರೇನಾಯ್ತು? ಶ್ರೀಮಂತ ಸ್ನೇಹಿತ ಅವನಿಗೆ ಹೇಳಿದ. ನಾನೆಲ್ಲಿಯವರೆಗೆ ಮದುವೆಯಾಗುವುದಿಲ್ಲವೋ ಅಲ್ಲಿಯವರೆಗೆ ನೀನು ನಿನ್ನ ಹೆಂಡತಿಯ ಹತ್ತಿರಕ್ಕೆ ಹೋಗುವಂತಿಲ್ಲವೆಂದು ಕಟ್ಟಪ್ಪಣೆ ಹಾಕಿದ. ಅದಕ್ಕೆ ಆತ ಒಪ್ಪಿದ; ಅಂದೇ ಇಬ್ಬರೂ ಕುದುರೆ ಹತ್ತಿ ಕನ್ಯಾನ್ವೇಷಣೆಗಾಗಿ ಹೋಗೇಬಿಟ್ಟರು. ಹತ್ತಾರು ತಾಂಡಗಳನ್ನು ಸುತ್ತಾಡಿದರು ಕೊನೆಗೊಮ್ಮೆ ಒಬ್ಬ ಕನ್ಯೆಯನ್ನು ಆಯ್ಕೆ ಮಾಡಿದರು. ಹೇಗೂ ಬಂದಿದ್ದೀರಿ ಇಲ್ಲಿಯೇ ಮದುವೆ ಮುಗಿಸಿಕೊಂಡು ಹೆಣ್ಣನ್ನು ನಿಮ್ಮೊಂದಿಗೆ ಕರೆದುಕೊಂಡು ಹೋಗಬಹುದೆಂದು ಹೆಣ್ಣಿನ ಕಡೆಯವರು ಒತ್ತಾಯಿಸಿದರು. ಮದುವೆ ಆಯ್ತು, ಇಬ್ಬರೂ ಮದುವೆ ಹೆಣ್ಣಿನ ಸಮೇತವಾಗಿ ಹಿಂದಿರುಗಿದರು. ಬರುವಾಗ

ದಾರಿ ಮಧ್ಯದಲ್ಲಿಯೇ ಕತ್ತಲಾವರಿಸಿತು. ಕಗ್ಗಾಡು ಪ್ರದೇಶ, ಅಲ್ಲಿಯೇ ಉಳಿಯಬೇಕಾದ ಪ್ರಸಂಗ ಬಂದಿತು. ಮದುವೆ ಗಂಡು-ಹೆಣ್ಣು ಇಬ್ಬರು ನಿದ್ರೆ ಹೋದರು. ಬಡವನಿಗೆ ನಿದ್ರೆಯೇ ಬರಲಿಲ್ಲ. ಏನೋ ಆಲೋಚಿಸುತ್ತ ಕುಳಿತ. ಅದೇ ಸಮಯದಲ್ಲಿ ಮರವೊಂದರಲ್ಲಿ ಎರಡು ಗರುಡ ಪಕ್ಷಿ (ಗಂಡು-ಹೆಣ್ಣು)ಗಳು ಪರಸ್ಪರ ಮಾತನಾಡುತ್ತಿದ್ದವು. ಈ ಘೋರಾರಣ್ಯದಲ್ಲಿ ಕತ್ತಲುರಾತ್ರಿಯಲ್ಲಿ ಮಲಗಿದವರು ಯಾರಿರಬೇಕೆಂದು ಅವು ಆಲೋಚಿಸುವಾಗ, ಅವರು ಮದುವಣಿಗ-ಮದುವಣಗಿತ್ತಿ ಈಗ ತಾನೇ ಮದುವೆಯಾಗಿ ಬಂದು ಮಲಗಿದ್ದಾರೆಂದು ಗಂಡು ಗರುಡ ಹೆಣ್ಣಿಗೆ ಹೇಳಿತು. ಅಯ್ಯೋ ಪಾಪ, ಮದುವೆ ಏನೋ ಆಗಿದ್ದಾನೆ. ಆದರೆ ಇವನಿಗೆ ಇಷ್ಟರಲ್ಲೇ ಮರಣವಿದೆಯಲ್ಲಾ ಎಂದು ಹೆಣ್ಣು ಗರುಡ ಗಂಡಿಗೆ ನುಡಿಯಿತು. ಹಾಗಾದರೆ ಅವನನ್ನು ಮರಣದಿಂದುಳಿಸಲು ಸಾಧ್ಯವಿಲ್ಲವೆ? ಗಂಡು ಹೇಳಿತು. ಅವನನ್ನು ಉಳಿಸಲು ಸಾಧ್ಯವಿದೆ. ಆದರೆ ನಾನು ಹೇಳಿದ ಮಾತುಗಳನ್ನು ಕೇಳಿದ ವ್ಯಕ್ತಿಯು ಯಾವ ಸಂದರ್ಭದಲ್ಲಿಯೂ ಯಾರ ಬಳಿಗೂ ಹೇಳಕೂಡದು, ತನ್ನಷ್ಟಕ್ಕೆ ಅದನ್ನು ಮನನ ಮಾಡಿಕೊಂಡು ಸ್ನೇಹಿತನನ್ನು ಉಳಿಸಲು ಸಾಧ್ಯವಿದೆ ಎಂದು ಹೆಣ್ಣು ಗರುಡ ನುಡಿಯಿತು."[೫] ಅದೇನೆಂದರೆ

"ತಾಂಡಾ ಪ್ರವೇಶಿಸುವ ಮುನ್ನ ದಂಪತಿಗಳಿಬ್ಬರನ್ನು ಆನೆಯ ಮೇಲೆ ಅಂಬಾರಿ ಇಟ್ಟು ಮೆರವಣಿಗೆ ಮಾಡುತ್ತಾರೆ. ಹೀಗೆ ಮೆರವಣಿಗೆ ಹೋಗುವಾಗ ಇದ್ದಕ್ಕಿದ್ದಂತೆ ತಾಂಡಾದ ಅಗಸಿ ಉರುಳಿ ಬಿದ್ದು ಸಾವೀಡಾಗುತ್ತಾರೆ. ಅಲ್ಲದೆ ಅಲ್ಲಿಂದೇನಾದರೂ ಪಾರಾದರೆ ಗಂಡು-ಹೆಂಡತಿ ಮಲಗಿರುವ ಮೊದಲರಾತ್ರಿಯಲ್ಲಿ ಒಂದು ನಾಗಸರ್ಪ ಮಲಗಿರುವ ಕೋಣೆಯ ಬಚ್ಚಲು ಮೋರೆಯಿಂದ ಹಾಯ್ದು ಬಂದು ಆ ದಂಪತಿಗಳನ್ನು ಕಚ್ಚುತ್ತದೆ. ಹೀಗೆ ಈ ಗಂಡಾಂತರದಿಂದ ಸ್ನೇಹಿತನ ರಕ್ಷಣೆ ಮಾಡಬೇಕೆಂದಿದ್ದರೆ ನಾನು ಹೇಳಿದ ಮಾತುಗಳನ್ನು ಯಾರಲ್ಲಿಯೂ ಹೇಳದಂತೆ, ಮೆರವಣಿಗೆ ಹೋಗುವಾಗ ಆನೆಯ ಮೇಲಿದ್ದ ತನ್ನ ಸ್ನೇಹಿತನನ್ನು ಕೆಳಕ್ಕಿಳಿಸಿ ತಾನು ಅವನ ಹೆಂಡತಿಯ ಜೊತೆಗೆ ಕುಳಿತು ಅಗಸಿ ದಾಟಿಸಬೇಕು. ಇಬ್ಬರೂ ಮಲಗಿರುವಾಗ ಬಚ್ಚಲು ಮೋರೆಯಿಂದ ಬರುವ ನಾಗರಹಾವನ್ನು ಅಸ್ತ್ರದಿಂದ ಹೊಡೆದು ಹಾಕಬೇಕು. ಹೀಗೆ ಮಾಡಿದರೆ ಸ್ನೇಹಿತ ಉಳಿದು ಮುಂದೆ ಸಂಸಾರ ಸಾಗಿಸುತ್ತಾನೆ."[೬] ಹೆಣ್ಣು ಗರುಡ ಗಂಡಿಗೆ ಹೇಳಿತು. ಬಡ ಸ್ನೇಹಿತ ಗರುಡ ಪಕ್ಷಿ ಹೇಳಿದ ನುಡಿಗಳನ್ನು ಅಕ್ಷರಶಃ ಪಾಲಿಸಿ ತನ್ನ ಸ್ನೇಹಿತನನ್ನು ಉಳಿಸಲು ಮುನ್ನುಗ್ಗಿದ. ಆದರೆ ಶ್ರೀಮಂತನಿಗೆ ಇದಾವುದೋ ಸರಿಬರಲಿಲ್ಲ. ಬಡವ ತನ್ನನ್ನು ಅವಮಾನಿಸುತ್ತಿದ್ದಾನೆಂದು, ತನ್ನನ್ನು ಕೊಲ್ಲಲು ಪ್ರಯತ್ನಿಸುತ್ತಿದ್ದಾನೆಂದು ಅಪಾರ್ಥ ಕಲ್ಪಿಸಿಕೊಂಡನು. ಹೇಳಬಾರದ ಮಾತನ್ನು ಸ್ನೇಹಿತನ ಎದುರಿನಲ್ಲಿ ಹೇಳಿ ಬಡಸ್ನೇಹಿತ ಶಿಲೆಯಾಗಿ ನೆಲೆಯಾದ. ಈ ಸುದ್ದಿ ಬಡವನ ಹೆಂಡತಿಗೂ ತಲುಪಿ ಅವಳು ಧಾವಿಸಿ ಅಲ್ಲಿಗೆ ಬಂದು, ಗಂಡನನ್ನು ಪುನಃ ಪಡೆಯಲು ಒಂಭತ್ತು ತಿಂಗಳವರೆಗೂ ಕಾಳಿಕಾದೇವಿಗೆ ಪೂಜೆ ಸಲ್ಲಿಸಿ ಜಡ-ತಪವನ್ನಾಚರಿಸಿದಳು. ಫಲಪ್ರದವಾಗಿ ವರವನ್ನು ಪಡೆದುಕೊಂಡು, ಗಂಡನನ್ನು ಬದುಕಿಸಿಕೊಂಡು ಸುಖ-ಸಂತೋಷದಿಂದ ಕಾಲವನ್ನು ಕಳೆದರು. ಶ್ರೀಮಂತ ಸ್ನೇಹಿತ ಕೊನೆಯವರೆಗೆ ಪಶ್ಚಾತ್ತಾಪದಲ್ಲಿಯೇ ಮುಳುಗಿದನು.

**೩. ಪುರಾಣಗಳು**

ಗ್ರೀಕ್‌ನ 'mythus', ಇಂಗ್ಲೀಷಿನ 'myth' ಎಂಬ ಪದದಿಂದ ನಿಷ್ಪನ್ನಗೊಂಡದ್ದು ಮಿಥ್. ಈ ಪದವನ್ನು ಕನ್ನಡದಲ್ಲಿ ಪುರಾಣ ಎಂದು ಕರೆಯುತ್ತಾರೆ. ಜನಪದ ಕಲ್ಪನೆಯ ಪ್ರಕಾರ ಪುರಾಣ ಇಂದು ನಿನ್ನೆಯದಲ್ಲ

ಹಿಂದೆಂದೋ ನಡೆದು ಹೋದ ಘಟನೆಗಳನ್ನು ಆಧರಿಸಿದ ನಿಜ ಸಂಗತಿ, ಕ್ರಮೇಣ ಈ ಘಟನೆ ಧಾರ್ಮಿಕ ಪರಿವೇಶವನ್ನಾಧರಿಸಿ ಆಚರಣೆ ಬಂದಿತು. ಜನಸಾಮಾನ್ಯರ ಅನಿಯಂತ್ರಿತ ಬದುಕಿಗೆ ಅವ್ಯವಸ್ಥಿತ ಬಾಳಿಗೆ ನಿಯಂತ್ರಣವನ್ನು ನೆಮ್ಮದಿಯನ್ನು ತಂದುಕೊಟ್ಟಿತು. ಪರಿಣಾಮವಾಗಿ ಪುರಾಣಗಳ ಬಗೆಗೆ ಜನರ ಮನಸ್ಸಿನಲ್ಲಿ ಭಕ್ತಿಭಾವನೆಗಳು ಹುಟ್ಟಿ ಪವಿತ್ರ ಭಾವನೆ ಮೂಡಿತು.

ಮನುಷ್ಯ ಎಂದು ಪ್ರಕೃತಿಯನ್ನು ತನ್ನ ಪ್ರಶ್ನಾರ್ಥಕ ದೃಷ್ಟಿಯಿಂದ ವೀಕ್ಷಿಸಿದನೊ, ಅಂದೇ ಅವರಲ್ಲಿ ಪೌರಾಣಿಕ ಕಲ್ಪನೆಗಳು ಉಗಮಿಸಿದವು. ಇಂತಹ ಒಂದು ಪೌರಾಣಿಕ ಕಲ್ಪನೆಗಳಿಗೂ, ಐತಿಹ್ಯಗಳಿಗೂ ಹಾಗೂ ಮತಧರ್ಮಗಳಿಗೂ ನಿಕಟ ಸಂಬಂಧವಿದೆ. ಚರಿತ್ರೆಯ ಅಂಶ ಐತಿಹ್ಯಕ್ಕೆ ಆಧಾರವಾದರೆ ಐತಿಹ್ಯ ಪುರಾಣಕ್ಕೆ ಆಧಾರವಾಗಿದೆ. ಮೂಲತಃ ಇವು ಕಟ್ಟುಕಥೆಗಳಿಂದ ಪ್ರೇರಿತವಾದವು. ಮನುಷ್ಯನ ಅಮಿತ ಕಾಲ್ಪನಿಕ ಶಕ್ತಿಯು ಇವುಗಳ ಸೃಷ್ಟಿಗೆ ಕಾರಣವಾಗಿದೆ. ಕಟ್ಟುಕಥೆಗಳಲ್ಲಿ ರಂಜಕತೆ ತುಂಬಿ ತುಳುಕಿದರೆ ಐತಿಹ್ಯ ಪುರಾಣಗಳಲ್ಲಿ ಚಿಂತನೆಯು ಸೇರಿರುತ್ತದೆ.

ಲಂಬಾಣಿ ಸಮುದಾಯದಲ್ಲಿ ಮುಖ್ಯವಾಗಿ ಎರಡು ಬಗೆಯ ಮೌಖಿಕ ಪುರಾಣಗಳಿರುವುದನ್ನು ಕಾಣುತ್ತೇವೆ. ಆ ಸಮುದಾಯದ ಹುಟ್ಟಿನ ಹಾಗೂ ಕಸುಬಿನ ಬಗೆಗಿರುವ ಪುರಾಣಗಳು ವಿಶಿಷ್ಟವಾದವುಗಳಾದರೆ, ಜಗತ್ತಿನ ಸೃಷ್ಟಿ, ಸ್ಥಿತಿ ಮತ್ತು ಲಯಕ್ಕೆ ಸಂಬಂಧಿಸಿದಂತೆ ಕತೆ ಪುರಾಣಗಳನ್ನು ಸಾಂದರ್ಭಿಕವಾಗಿ ಹೇಳುವುದೂ ಕಂಡುಬರುತ್ತದೆ. ಪುರಾಣ ಕಥೆಗೆ ನಿದರ್ಶನವಾಗಿ 'ಕೋಡಿ ಧಜರಾಜಾರ್ ಸಾಕಿಯನ್ನು ಗಮನಿಸಬಹುದು.

"ಒಂದು ತಾಂಡಾದಲ್ಲಿ ಒಬ್ಬ ಕೋಡಿ ಧಜರಾಜಾ ಎಂಬುವನು ಇದ್ದನು. ಅವನು ತಾಂಡಾದ ಜನತೆಗಾಗಿ ಕೆರೆ ಕಟ್ಟಿಸಿದನೆಂದು ಸುತ್ತ ಹಳ್ಳಿಯ ಹನ್ನೆರಡು ಸಾವಿರ ಜನರಿಂದ ಕೆರೆಯನ್ನು ನಿರ್ಮಾಣ ಮಾಡಿಸಿದ. ಆದರೆ ಕೆರೆಯಲ್ಲಿ ನೀರೇ ಬರಲಿಲ್ಲ. ಕಾರಣ ರಾಕ್ಷಸನೊಬ್ಬ ಅಲ್ಲಿಯ ನೀರನ್ನು ಕುಡಿದು ಮಾಯವಾಗುತ್ತಿತ್ತು. ಹೀಗಾಗಿ ಎಷ್ಟೋ ದಿವಸಗಳವರೆಗೆ ಆ ಕೆರೆ ನೀರಿಲ್ಲದೆ ಒಣಗಿಹೋಗಿತ್ತು. ಕಾಲಾಂತರದಲ್ಲಿ ಭಗತ್-ಸಾದ್‌ರನ್ನು ವಿಚಾರಿಸಲಾಗಿ ನಿನ್ನ ಮಗ ಮತ್ತು ಸೊಸೆ ಇಬ್ಬರನ್ನು ಕೆರೆಗೆ ಬಲಿ ಅರ್ಪಿಸಿದ್ದೇ ಆದರೆ ಕೆರೆಯಲ್ಲಿ ನೀರು ತುಂಬುವುದೆಂದು ಕೋಡಿಧಜರಾಜಾನಿಗೆ ಹೇಳಿಕೆ ನೀಡಿದರು. ಬಲಿಯಿಂದ ರಾಕ್ಷಸನಿಗೆ ತೃಪ್ತಿಯುಂಟಾಗಿ ನೀರು ಕುಡಿಯುವುದನ್ನು ನಿಲ್ಲಿಸುತ್ತಾನೆ. ಆಮೇಲೆ ಕೆರೆಯಲ್ಲಿ ನೀರು ತುಂಬಿ ತುಳುಕುತ್ತದೆ ಎನ್ನುವ ಮಾತನ್ನು ಕೇಳಿ-ಧಜರಾಜನ ಮಗ ನಮ್ಮಿಬ್ಬರ ಜೀವವನ್ನು ಬಲಿಕೊಡುವುದರಿಂದ ಇಡೀ ಜಗತ್ತೇ ಸುಖದಿಂದ ಇರುವುದಾದಲ್ಲಿ ಈ ಜನ್ಮ ಇಲ್ಲಿಗೆ ಸಾರ್ಥಕವೆಂದು ಬಗೆದು, ಗಂಡ-ಹೆಂಡತಿ ಇಬ್ಬರೂ ಕುದುರೆ ಏರಿ ತಮ್ಮನ್ನರ್ಪಿಸಿಕೊಳ್ಳುವುದಕ್ಕಾಗಿ ಕೆರೆಗೆ ಬಂದು ಪೂಜಾಸಕ್ತರಾದರು. ಅಷ್ಟರಲ್ಲಿ ಅಲ್ಲಿದ್ದ ರಾಕ್ಷಸ ಅವರನ್ನು ತಿನ್ನುವುದಕ್ಕಾಗಿ ಹೊರಗೆ ಬಂದ ಆಗ ರಾಜಾನ ಮಗ ರಾಮನಾಮದ ಜೊತೆಗೆ ಸಾತೀ ದೇವಿಯರ ನಾಮಸ್ಮರಣೆಯನ್ನು ಮಾಡಿಕೊಂಡು ಜೊತೆಗೆ ತಂದಿದ್ದ ಪಂಚಾಸ್ತ್ರಗಳಿಂದ ರಾಕ್ಷಸನನ್ನು ಸಂಹಾರಗೊಳಿಸಿದರು. ಇದರಿಂದಾಗಿ ಆವರೆಗೂ ಆ ರಾಕ್ಷಸನು ಕುಡಿಯುತ್ತಿದ್ದ ನೀರು ಒಮ್ಮೆಲೇ ಭುವಿಯಿಂದ ಹೊರಹೊಮ್ಮಿ ಕೆರೆತುಂಬಿತು. ಈ ಘಟನೆಯಿಂದಾಗಿ ಜೀವಭಯವಿಲ್ಲದ ರಾಕ್ಷಸನೊಂದಿಗೆ ಸೆಣಸಾಡಿ ಸಂಹಾರಗೊಳಿಸಿದ ಸಮಸ್ತ ಜೀವಜಂತುಗಳಿಗೆ ಹಾಗೂ ಮಾನವನ ಪ್ರಾಣಿಗಳಿಗೆ

ನೀರನ್ನು ಕೊಟ್ಟ ಆ ಮಹಾನುಭಾವ ಕೋಡಿ ಧಜರಾಜಾನ ಮಗನನ್ನು 'ಧರ್ಮರಾಜ' ಎಂಬ ಹೆಸರಿನಿಂದ ಕೊಂಡಾಡಿದರು."[೨೫]

### ೪. ಐತಿಹ್ಯಗಳು

ಐತಿಹ್ಯ ಎಂದರೆ ಪಾಶ್ಚಾತ್ಯ ದೇಶಗಳಲ್ಲಿ ಪ್ರಾರಂಭದಲ್ಲಿ "ಸಾದು ಸಂತರಿಗೆ ಸಂಬಂಧಿಸಿದ ಜೀವ ಕಥೆ." ಎಂಬ ಅರ್ಥದೊಂದಿಗೆ ಬಳಸಲ್ಪಟ್ಟಿದ್ದರೆ, ನಂತರದಲ್ಲಿ ಪರಂಪರೆಯಿಂದ ಬಂದುದು ಎಂಬ ವಿಶಾಲಾರ್ಥದಲ್ಲಿ ಐತಿಹ್ಯ ಎಂಬ ಶಬ್ದವನ್ನು 'Legend' ಎಂಬ ಇಂಗ್ಲೀಷ್ ಪದಕ್ಕೆ ಸಮಾನಾಂತರವಾಗಿ ಬಳಸಲಾಗುತ್ತಿದೆ. ಇದು ಲ್ಯಾಟಿನ್ ಪದವಾಗಿದ್ದು ಅದಕ್ಕೆ things to be read ಎಂಬ ಅರ್ಥವಿದೆ. ಕನ್ನಡ ನಿಘಂಟಿನಲ್ಲಿಯೇ ವಿದೇಶಿಗಳನ್ನಾಧರಿಸಿದ ಅರ್ಥವನ್ನೇ ಉಪಯೋಗಿಸುತ್ತಾರೆ.

"ಐತಿಹ್ಯಗಳು ಕಾಲ್ಪನಿಕವಾದರೂ ಒಂದಿಷ್ಟು ಬಲವಾದ ಸತ್ಯವನ್ನೂ ಅಡಗಿಸಿಕೊಂಡಿರುತ್ತವೆ. ಜನಪದರಲ್ಲಿ ಬಳಕೆಯಲ್ಲಿರುವ ಕೆಲವು ಸಂಗತಿಗಳನ್ನು ನಂಬಲು ಇಲ್ಲವೇ ತಿರಸ್ಕರಿಸಲು ಸಾಧ್ಯವಾಗದು. ಅವು ಸಾಮಾನ್ಯವಾಗಿ ಚರಿತ್ರೆ, ಪುರಾಣ, ವ್ಯಕ್ತಿ ಇಲ್ಲವೆ ಸ್ಥಳಕ್ಕೆ ಆರೋಪಿತವಾಗಿರುತ್ತವೆ. ಒಂದು ನಿರ್ದಿಷ್ಟವಾದ ಹಿನ್ನೆಲೆಯಲ್ಲಿ ವ್ಯಕ್ತಿ, ಸ್ಥಳ ಹಾಗೂ ಘಟನೆಗಳಿಗೆ ಸಂಬಂಧಿಸಿದಂತೆ ವಿಭಿನ್ನ ಐತಿಹ್ಯಗಳನ್ನು ಕಾಣಬಹುದು. ಒಂದು ರೀತಿಯಲ್ಲಿ ಎಲ್ಲ ಬುಡಕಟ್ಟುಗಳ ಧಾರ್ಮಿಕ ಸಂಪ್ರದಾಯಗಳಲ್ಲಿ ಐತಿಹ್ಯಗಳನ್ನು ಕಾಣುತ್ತೇವೆ. ಅವು ಜನಪದರ ದೃಷ್ಟಿಯಲ್ಲಿ ಕಂಡ ಕತೆಗಳಲ್ಲಿ ನಿಜವಾಗಿಯೂ ನಡೆದುಹೋದ ಘಟನೆಗಳೇ ಆಗಿವೆ."[೨೬]

ಚರಿತ್ರೆ ಮತ್ತು ಐತಿಹ್ಯಗಳೆರಡರ ಸಾಮಾನ್ಯ ಹೇಗೆ ಇತ್ತು ಎಂಬುದು ಇವು ಎರಡು ಸಂಪೂರ್ಣವಾಗಿ ಭೂತಕಾಲಕ್ಕೆ "ಸೇರಿದವು ಒಂದು ಕಾಲದಲ್ಲಿ ಇದ್ದುದ್ದು ನಿರೂಪಣೆಯ ಕಾಲಕ್ಕನುಗುಣವಾಗಿ ಸಾಕಷ್ಟು ಕಲ್ಪನಾಂಶಗಳು ಸೇರಿಕೊಂಡು ವೈಭವದಿಂದ ಇದ್ದುದು ಆಗಿ ಮಾರ್ಪಡುತ್ತದೆ"[೨೭] ಐತಿಹ್ಯಗಳಿಗೆ ಚಾರಿತ್ರಿಕ ಮಹತ್ವವಿದ್ದು ಇವು ಗತಕಾಲದ ಘಟನೆಗಳ ಸತ್ಯ ಸಂಗತಿಯೊಂದರ ಪಳಯುಳಿಕೆಗಳಾಗಿವೆ. "ಐತಿಹ್ಯಗಳು ಕಲ್ಪನೆಯಿಂದ ಕೂಡಿದ್ದರೂ ಅನೇಕ ವೇಳೆ ಅವುಗಳ ಹಿಂದೆ ಐತಿಹಾಸಿಕ ಸತ್ಯ ವಿರಳವಾಗಿಯಾದರೂ ಇರುತ್ತದೆ."[೨೮] ವ್ಯಕ್ತಿಗಳಿಗೆ ಸ್ಥಳಗಳಿಗೆ ಘಟನೆಗಳಿಗೆ, ಸಂಬಂಧಿಸಿದಂತೆ ನಿರ್ದಿಷ್ಟ ಹಿನ್ನೆಲೆಯಲ್ಲಿ ಹುಟ್ಟಿಕೊಳ್ಳುವ ಕಥೆಗಳು ಐತಿಹ್ಯಗಳು."[೨೯]

ಐತಿಹ್ಯ ಚರಿತ್ರೆ ಬಹಳ ದೂರ ಸಾಗಿರುತ್ತದೆ. ಹಾಗೆಂದು ಅದು ಪೂರ್ವಕಲ್ಪಿತದಂತೆ ಕಥೆಯೂ ಅಲ್ಲ. ಪ್ರಾಚೀನ ಕಾಲದ ಘಟಿಸಿದ ಒಂದು ಘಟನೆಯಾಗಿದೆ. ಆ ಪರಿಸರದ ವ್ಯಕ್ತಿಗಳ ಮೇಲೆ ಪ್ರಭಾವ ಬೀರುತ್ತದೆ. ಈ ಪ್ರಭಾವದ ಪರಿಣಾಮವಾಗಿ ಅವರಲ್ಲೊಬ್ಬ ಪ್ರತಿಭಾಶಾಲಿ ಆ ನಿರ್ದಿಷ್ಟ ಘಟನೆಗೆ ಅಥವಾ ಸ್ಥಳಕ್ಕೆ ಅಥವಾ ವ್ಯಕ್ತಿಗೆ ತನ್ನ ಕಲ್ಪನೆಯ ವೈಭವೀಕರಣದ ಅಂಶಗಳನ್ನು ಸೇರಿಸಿ ಬಿಡುತ್ತಾನೆ. ಆ ಪರಿಷ್ಕೃತ ಅಂಶಗಳನ್ನು ಹರಡುತ್ತಾನೆ. ಹೀಗೆ ಘಟನೆಗೆ ಅಥವಾ ಸ್ಥಳಕ್ಕೆ ಅಥವಾ ಒಂದು ವ್ಯಕ್ತಿಗೆ ಸಂಬಂಧಿಸಿದ ಐತಿಹ್ಯ ಉಂಟಾಗುತ್ತದೆ.

ಈ ಮೇಲ್ಕಂಡ ಲಿಖಿತ ಪುರಾವೆಗಳಿಂದ ಐತಿಹ್ಯದಲ್ಲಿ ಘಟನೆ, ಸ್ಥಳ, ವ್ಯಕ್ತಿಗಳು ಪ್ರಧಾನವಾಗಿರುತ್ತದೆ. ಲಂಬಾಣಿ ಸಮುದಾಯದಲ್ಲಿ ಹಲವಾರು ಐತಿಹ್ಯಗಳು ರೂಢಿಯಲ್ಲಿದೆ. ಈ ಸಮುದಾಯದ ದೇವರುಗಳಾದ

ಶ್ರೀ ಸೇವಾಭಾಯ, ಭೀಮನಾಯ್ಕ, ಮರಿಯಮ್ಮ, ಮೀಠುಭುಕ್ಯ ಅವರ ಪವಾಡಗಳು. ಭೀಮನಾಯ್ಕರವರ ಸಮಾಧಿಸ್ಥಳ ಚಿಕ್ಕಜೋಗಿಹಳ್ಳಿ ಶ್ರೀ ಸೇವಾಭಾಯರ ಜನ್ಮಸ್ಥಳವಾದ ಸೂರಗೊಂಡನಕೊಪ್ಪ. ಭೀಮಸತ್ತಿಯ ದೊಡ್ಡಣೆಗೆರೆ ಸ್ಥಳ, ಸಾತಿಸತ್ತಿಯ ಕಥೆಗಳ ಬಗ್ಗೆ ಐತಿಹ್ಯಗಳು ದೊರೆಯುತ್ತದೆ.

**೫. ಸಂಕೀರ್ಣ ಕಥೆಗಳು**

ರಚನೆಯಲ್ಲಿ ಸಂಕೀರ್ಣತೆಯನ್ನು, ಎರಡಕ್ಕಿಂತ ಹೆಚ್ಚು ಆಶಯಗಳಿರುವ ಕಥೆಗಳು ಸಂಕೀರ್ಣ ಕಥೆಗಳಾಗಿರುತ್ತವೆ. ಸಂಕೀರ್ಣ ಜನಪದ ಕಥೆಗಳಲ್ಲಿ ರಮ್ಯ ಕಥೆಗಳದು ಒಂದು ಪ್ರಮುಖ ಭಾಗ. ಲಂಬಾಣಿ ಜನಪದ ಕಥೆಗಳಲ್ಲಿ ಮಾಂತ್ರಿಕ ಕಥೆಗಳಂತೆಯೇ ರಮ್ಯ ಕಥೆಗಳು ಅಧಿಕ ಸಂಖ್ಯೆಯಲ್ಲಿ ಲಭ್ಯವಾಗುತ್ತದೆ. ಕೆಲವೊಂದು ಕಥೆಗಳಲ್ಲಿ ಮಾಂತ್ರಿಕ ಕಥೆಯ ಭಾಗ ಹಾಗೂ ರಮ್ಯ ಕಥೆಯ ಭಾಗಗಳು ಸ್ಪಷ್ಟವಾಗಿ ಬೇರ್ಪಡಿಸಲು ಸಾಧ್ಯವಾಗದ ರೀತಿಯಲ್ಲಿ ಮೇಳೈಸಿರುತ್ತವೆ. ಇಂತಹ ಕಥೆಗಳಲ್ಲಿ ಸ್ಥೂಲವಾಗಿ ಅವುಗಳಲ್ಲಿ ಕಂಡು ಬರುವ ಪ್ರಮುಖ ಆಶಯಗಳ ಆಧಾರದ ಮೇಲೆ ಅವುಗಳನ್ನು ರಮ್ಯ ಕಥೆಗಳ ವರ್ಗಗಳಿಗೆ ಸೇರಿಸಿಕೊಳ್ಳಲಾಗಿದೆ. ರಮ್ಯ ಕಥೆಯನ್ನು ಉಪದೇಶಿಸಿದ 'ಮಗಳ ಜಾಣತನ' ಕಥೆಯನ್ನು ನಿದರ್ಶನಕ್ಕಾಗಿ ಆಯ್ದುಕೊಳ್ಳಬಹುದು.

"ಒಂದು ಚಿಕ್ಕ ಕುಟುಂಬದಲ್ಲಿ ತಂದೆ-ತಾಯಿಗಳಿಗೆ ಒಬ್ಬನೇ ಮಗ ಹಾಗೂ ಒಬ್ಬಳೇ ಮಗಳಿದ್ದರು. ಒಂದು ದಿನ ತಂದೆ-ತಾಯಿ ಹಾಗೂ ಅಣ್ಣ ಮೂವರೂ ಕೆಲಸಕ್ಕೆ ಹೋದರು. ಹೋಗುವಾಗ ಮಗಳಿಗೆ ತಾವು ಕೆಲಸದಿಂದ ಮರಳಿ ಬರುವವರೆಗೆ ತೊಗರಿಯ ಗುಗ್ಗರಿಯನ್ನು ಬೇಯಿಸಿ ಇಟ್ಟಿರುವಂತೆ ಹೇಳಿಹೋದರು. ಮಗಳು ಹಾಗೆಯೇ ಮಾಡುವುದಾಗಿ ಒಪ್ಪಿಕೊಂಡಳು.

ಹುಡುಗಿಯು ಬಹಳ ಚೆಲುವೆಯಾಗಿದ್ದಳು. ಅವಳನ್ನು ನೋಡಲು ದೂರದ ಸಂಬಂಧಿಕರು ಊರಿನಿಂದ ಬಂದರು. ಬಂದ ಬೀಗರಿಗೆ ಅವಳು ಕೈಕಾಲುಗಳಿಗೆ ನೀರು ಕೊಟ್ಟಳು. ನೀರು ಕುಡಿದ ಅವರು ಅವಳ ತಂದೆ-ತಾಯಿ ಹಾಗೂ ಸಹೋದರರು ಎಲ್ಲಿಗೆ ಹೋಗಿರುವುದಾಗಿ ಕೇಳಿದರು. ಆಗ ಅವಳು ಅವರ ಪ್ರಶ್ನೆಗೆ ಈ ರೀತಿಯ ಉತ್ತರವನ್ನು ನೀಡಿದಳು. ತಂದೆಯು ಗಿಡದ ಮೇಲೆ ನೀರಿನ ಝರಿ ತೆಗೆಯಲು ಹೋಗಿದ್ದಾರೆ. ತಾಯಿಯು ಸ್ವಲ್ಪ ಇರುವುದನ್ನು ಬಹಳಷ್ಟನ್ನಾಗಿ ಮಾಡಲು ಹೋಗಿದ್ದಾಳೆ. ಅಣ್ಣನು ಮುಳ್ಳಿಗೆ ಮುಳ್ಳು ಹಚ್ಚಲು ಹೋಗಿದ್ದಾನೆ." ಎಂದು ತಿಳಿಸಿದಳು. ಅವಳ ಉತ್ತರವನ್ನು ಅರ್ಥೈಸಿಕೊಂಡು ಬೀಗರು ಹಾಗಾದರೆ ಅವರು ಮರಳಿ ಬರುವುದು ಯಾವಾಗ ಎಂದು ಕೇಳಿದರು. ಆಗ ಅವಳು "ಬಂದರೆ ಬರುವುದಿಲ್ಲ ಬರದಿದ್ದರೆ ಬರುತ್ತಾರೆ" ಎಂದು ಉತ್ತರಿಸಿದಳು.

ಹುಡುಗಿಯ ಉತ್ತರಕ್ಕೆ ಮೆಚ್ಚಿದ ಬೀಗರು, ನೀನು ಈಗ ಏನನ್ನು ಮಾಡುತ್ತಿರುವುದಾಗಿ ಕೇಳಿದರು ಆಗ ಅವಳು 'ತಾಯಿಯನ್ನು ಸುಡುತ್ತಿದ್ದೇನೆ; ಮಗಳನ್ನು ಬೇಯಿಸುತ್ತಿದ್ದೇನೆ" ಎಂದು ಉತ್ತರವನ್ನು ನೀಡಿದಳು. ಬೀಗರಿಗೆ ಅವಳ ಕೆಲವು ಒಗಟುಗಳು ಅರ್ಥವೇ ಆಗಲಿಲ್ಲ. ಕೊನೆಗೆ ಅರ್ಥ ಒಡೆದು ಹೇಳಲು ಕೇಳಿಕೊಂಡಾಗ ಅವಳು ಈ ರೀತಿಯಲ್ಲಿ ಒಗಟುಗಳನ್ನು ಅರ್ಥೈಸಿ ಹೇಳಿದಳು.

ಗಿಡ ಮೇಲೆ ಝುರಿ ತೆಗೆಯುವುದು ಎಂದರೆ ಸಿಂಧಿಗಿಡಕ್ಕೆ ಬಿಂದಿಗೆ (ಮೋಗಾ) ಕಟ್ಟುವುದು ಎಂದರ್ಥ. ಅಂದರೆ ತಂದೆಯು ಸಿಂಧಿಗಿಡಕ್ಕೆ ಮೋಗಾ ಕಟ್ಟುವ ಕೆಲಸಕ್ಕೆ ಹೋಗಿದ್ದಾನೆ ಎಂದರ್ಥ. ತಾಯಿಯ ಕಡಿಮೆ ಇದ್ದುದನ್ನು ಬಹಳಷ್ಟನ್ನಾಗಿ ಮಾಡಲು ಅಂದರೆ ಹತ್ತಿಯನ್ನು ಬಿಡಿಸಲು ಹೋಗಿದ್ದಾಳೆಂದರ್ಥ, ಅಣ್ಣನು ಮುಳ್ಳಿಗೆ ಮುಳ್ಳನ್ನು ಹಚ್ಚಲು ಅಂದರೆ ಬದನೆಕಾಯಿ ತೋಟಕ್ಕೆ ಮುಳ್ಳಿನ ಬೇಲಿಯನ್ನು ಹಾಕಲು ಹೋಗಿದ್ದಾನೆಂದು ಅರ್ಥ.

ಬಂದರೆ ಬರುವುದಿಲ್ಲ, ಬರದಿದ್ದರೆ ಬರುತ್ತಾನೆ ಅಂದರೆ ಹಳ್ಳ ಪ್ರವಾಹ ರೂಪದಲ್ಲಿ ಬಂದರೆ ಬರುವುದಿಲ್ಲ. ಬರದಿದ್ದರೆ ಬರುತ್ತಾರೆ ಎಂದು ಅರ್ಥ. ತಾಯಿಯನ್ನು ಸುಡುತ್ತಿದ್ದೇನೆ ಎಂದರೆ ತೊಗರಿ ಕಟ್ಟಿಗೆಯನ್ನು ಸುಡುತ್ತಿದ್ದೇನೆ. ಅವಳ ಮಗಳು ಎಂದರೆ ತೊಗರಿಯನ್ನು (ಕಾಳು) ಬೇಯಿಸುತ್ತಿದ್ದನೆ ಎಂದು ಸುಲಭವಾಗಿ ಅರ್ಥವಾಗುವಂತೆ ತಿಳಿಸಿಕೊಟ್ಟಳು.

ಮನೆಯವರು ಕೆಲಸದಿಂದ ಬಂದ ನಂತರ ಸಂಜೆಗೆ ಕೆಲಸದಿಂದ ಬೀಗರು ಮನೆಗೆ ಬಂದರು. ಹುಡುಗಿಯ ಸೌಂದರ್ಯ ಹಾಗೂ ಜಾಣ್ಮೆಗಳನ್ನು ಈಗಾಗಲೇ ಕಂಡಿರುವ ಬೀಗರು ಅವಳನ್ನು ತಮ್ಮ ಮನೆಯ ಸೊಸೆಯನ್ನಾಗಿ ಮಾಡಿಕೊಳ್ಳಲು ಬೇಡಿಕೊಂಡರು. ಹುಡುಗಿಯ ತಂದೆ-ತಾಯಿಯರು ಅದಕ್ಕೆ ಒಪ್ಪಿಗೆ ನೀಡಿದರು.

ಲಂಬಾಣಿ ಒಗಟು ಕಥೆಯ ಅನುವಾದವನ್ನು ಇಲ್ಲಿ ಕೊಡಲಾಗಿದೆ. ಇಲ್ಲಿ ಜಾಣ ಹುಡುಗಿಯೊಬ್ಬಳು ಬೀಗರು ಕೇಳಿದ ಪ್ರಶ್ನೆಗಳಿಗೆ ತನ್ನ ಒಗಟು ರೂಪದ ಮಾತುಗಳಿಂದ ಉತ್ತರಿಸಿ ಅವರ ಮೆಚ್ಚುಗೆಗೆ ಪಾತ್ರಳಾಗಿ ಗಂಡನನ್ನು ಪಡೆದುಕೊಳ್ಳುತ್ತಾಳೆ.[೯೦]

### ೯.೧.೩. ಗಾದೆ

ಗಾದೆ ವಿಶ್ವದ ಎಲ್ಲಾ ಸಮುದಾಯದ ಭಾಷೆಯಲ್ಲಿ ಗಾದೆಗಳಿಗೆ ಮಹತ್ವವಿದೆ. ಸಾಮಾನ್ಯವಾಗಿ ಭಾಷೆ ಯಾವಾಗ ಹುಟ್ಟಿಕೊಂಡಿತೋ ಆವಾಗಲೇ ಗಾದೆಯು ಹುಟ್ಟಿಕೊಂಡಿತೆಂದು ಹೇಳಬಹುದು. ಗಾದೆಗಳು ಪರಂಪರಾನುಗತವಾಗಿ ಬಂದವುಗಳಾಗಿದ್ದು, ಅನುಭವದ ಆಧಾರದ ಮೇಲೆ ರೂಪಿತವಾಗಿವೆ. ಮಾತಿನ ಮಧ್ಯೆ ಅನಿವಾರ್ಯವಾಗಿ ಗಾದೆಗಳು ತೂರಿಕೊಳ್ಳುತ್ತವೆ. ತೂಕ ತಪ್ಪದಂತೆ ಮಾತನ್ನು ಪರಿಣಾಮಕಾರಿಯಾಗಿ ಅಭಿವ್ಯಕ್ತಿಸಲು ಗಾದೆಗಳನ್ನು ಪ್ರಯೋಗಿಸಲಾಗುತ್ತದೆ. ಈ ಹಿನ್ನೆಲೆಯಲ್ಲಿಯೇ ಆಕ್ಸಫರ್ಡ್ ನಿಘಂಟಿನಲ್ಲಿ ಸಾಮಾನ್ಯ ಬಳಕೆಯಲ್ಲಿರುವ ಸಂಕ್ಷಿಪ್ತವಾದ ಸೂಕ್ತ ಹೇಳಿಕೆಯಾಗಿದ್ದು. ಅನುಭವ ಅಥವಾ ವೀಕ್ಷಣೆಯಿಂದ ಗೊತ್ತಾದ ಸರ್ವರಿಗೂ ಚಿರಪರಿಚಿತವಾದ ಕೆಲವು ಸತ್ಯವನ್ನು ವ್ಯಕ್ತಪಡಿಸುವ ಸಂಕ್ಷಿಪ್ತ ವಾಕ್ಯ ಎಂಬುದಾಗಿ ವಿವರಿಸಲಾಗಿದೆ. ಆಯಾ ಸಮುದಾಯದ ಗಾದೆಗಳು ಅವರವರ ಸಂಸ್ಕೃತಿಯನ್ನು, ಜೀವನವನ್ನು, ಜೀವನ ಸಿದ್ಧಾಂತಗಳನ್ನು ಪ್ರತಿಬಿಂಬಿಸುವ ಸಾಧನಗಳಾಗಿವೆ. ಬದುಕಿನ ಮುಖಗಳನ್ನು ಚಿತ್ರಿಸುವ ಈ ಗಾದೆಗಳು ಅಂದಿನಿಂದ ಸಮಾಜದ ಸ್ಥಿತಿಗತಿಗಳನ್ನು, ಏರುಪೇರುಗಳನ್ನು, ನೋವು-ನಲಿವುಗಳನ್ನು, ಸಮಾಜದ ಲೋಪ-ದೋಷಗಳನ್ನು, ಕಟ್ಟಳೆಗಳನ್ನು ಪ್ರತಿಬಿಂಬಿಸುತ್ತದೆ. ಇವುಗಳು ತಲೆತಲಾಂತರದಿಂದ ಲೋಕಾನುಭವದಿಂದ ನುಡಿಮುತ್ತುಗಳು, 'ಹತ್ತು ಕಟ್ಟುವ ಕಡೆಗೆ ಒಂದು ಮತ್ತು ಕಟ್ಟಿ' ಎನ್ನುವ ಜನಪದ ಗಾದೆಯು ಹಾಗೆ ಒಂದು ವಿಶೇಷವಾದ ಮಾತಿನಲ್ಲಿ ಸೂತ್ರೀಕರಿಸುವುದೇ ಗಾದೆಗಳ ಲಕ್ಷಣ"[೯೧]

ಡಾ.ಹಾ.ಮಾ. ನಾಯಕರವರು ಗಾದೆಗಳ ಹರಿವು ಮತ್ತು ವ್ಯಾಪ್ತಿಯನ್ನು ಕುರಿತು ''ಬದುಕಿನ ಎಲ್ಲಾ ವಿಷಯಗಳಲ್ಲಿಯೂ ಗಾದೆ ಇಣುಕು ಹಾಕುತ್ತದೆ. ಚಿಕ್ಕದರಲ್ಲಿ ದೊಡ್ಡದನ್ನು ಕಾಣುವ ಮಹಾ ಸಾಹಸ ಮಾಡುತ್ತದೆ. ಒಂದು ಗುಂಪಿನ ಜಾಣ್ಮೆ, ಜೀವನಾನುಭವ ಅಭಿವ್ಯಕ್ತಿಯ ನವುರು ಜನಪದ ಸಾಹಿತ್ಯದ ಮಿಕ್ಕೆಲ್ಲಾ ಗಾದೆಯ ಹಾಗೆ ಸ್ಪಷ್ಟವಾಗಿ ಗೋಚರಿಸುವುದಿಲ್ಲ. ಏಕೆಂದರೆ ಗಾದೆ ವಿಶಾಲವಾದ ಜೀವನಾನುಭವದ ಆಧಾರದಿಂದ ರೂಪಗೊಂಡು ಸಂಕ್ಷಿಪ್ತ ಅಭಿವ್ಯಕ್ತಿಯಾಗಿದೆ.'' ಪ್ರಾಕ್ತನರು ತಾವು ಆಡಬೇಕಾದ ಮಾತುಗಳನ್ನು ಅತ್ಯಂತ ಸಂಕ್ಷಿಪ್ತವಾಗಿಯೂ ಹಾಗೂ ಪರಿಣಾಮಕಾರಿಯಾಗುವಂತೆಯು ಬಳಸುತ್ತಿದ್ದರು. ಇದರಿಂದಾಗಿ ತಮ್ಮ ಮಾತುಗಳಲ್ಲಿ ಅನುಭವ, ಜಾಣತನ, ವ್ಯವಹಾರ, ನಿಪುಣತೆಗಳು ತೋರುತ್ತಿದ್ದವು. ಈ ಗಾದೆಗಳಲ್ಲಿ ಪ್ರಮುಖವಾಗಿ ಸಂಕ್ಷಿಪ್ತತೆ, ವಿವೇಕಪೂರ್ಣತೆ, ತೀಕ್ಷ್ಣತೆ ಜನಪ್ರಿಯತೆಗಳಾಗಿವೆ.

ಲಂಬಾಣಿ ಸಮುದಾಯದಲ್ಲಿ ಗಾದೆಗಳು ಸಾಕಷ್ಟು ಲಭ್ಯವಿದ್ದು ಈ ಗಾದೆಗಳನ್ನು ಗೌರವಪೂರ್ವಕವಾಗಿ ಹೇಳುತ್ತಾರೆ. ಆಯಾ ಸನ್ನಿವೇಶಗಳಲ್ಲಿ ಬಹಳ ವ್ಯವಹಾರ ಕೌಶಲ್ಯದಿಂದ ಉಪಯೋಗಿಸುತ್ತಾರೆ. ಗಾದೆಗಳ ಮುಖಾಂತರವಾಗಿ ಉಪದೇಶಗಳನ್ನು ಹಾಗೂ ನೀತಿಯನ್ನು ಬೋಧಿಸುತ್ತಾರಲ್ಲದೆ ಅಡಿಗಡಿಗೆ ಘಟಿಸುವ ಘಟನೆಗಳನ್ನು ಮಾತಿನ ಚಾತುರ್ಯದಿಂದಲೇ ಪರಿಹರಿಸುತ್ತಾರೆ. ಇಂತಹ ಸಂದರ್ಭದಲ್ಲಿ "ಕಾವತೇಮಾ ಹೈ ಚಾಲ್ಗೀಚ್" (ಗಾದೆಯು ಹೀಗೆ ನಡೆದು ಹೋಗಿದೆ.) ಎನ್ನುತ್ತಾರೆ. ಇವರ ಭಾಷೆಯಲ್ಲಿ ಗಾದೆಯು 'ಕಾವತೆ' ಎಂಬುದಾಗಿ ಕರೆಯಲ್ಪಡುತ್ತದೆ. 'ಕಾವತ' ಎಂಬ ಈ ಪದವು ಹಿಂದೀ ಭಾಷೆಯ 'ಕಥಾವತ್' ಎಂಬ ಪದದಿಂದ ಬಂದಿದೆ. ಹಿಂದಿ ಭಾಷೆಯ ಕಹವತ್ ಎಂಬ ಪದವು ಆಂಗ್ಲ ಭಾಷೆಯ proyed ಪದಕ್ಕೆ ಸಂವಾದಿಯಾಗಿ ಬಳಕೆಯಲ್ಲಿದೆ. ಕಹವತ್ ಪದವು ಬಹು ಹಿಂದೆ ಘಟಿಸಿದ ಘಟನೆಯನ್ನು ಆಧರಿಸಿ ಹೇಳುವ ಸಂಕ್ಷಿಪ್ತ ಪದಗಳಿಗೆ ಬಳಸಲ್ಪಡುತ್ತದೆ. ಆದ್ದರಿಂದ ಲಂಬಾಣಿ ಭಾಷೆಯ ಕಾವತೆ ಪದವು ಕನ್ನಡದ ಗಾದೆ ಪದಕ್ಕೆ ಎಲ್ಲಾ ಅರ್ಥದಲ್ಲೂ ಸಮನಾಗಿದೆ.[೨೩]

ಲಂಬಾಣಿ ಸಮುದಾಯದವರು ಗಾದೆಗಳನ್ನು ನುಡಿಯುವಾಗ ಹಿಂದಿರುವ ಸತ್ಯ ಘಟನೆಗಳನ್ನು ಸಾಕ್ಷಿಯಾಗಿ ಕೊಡುತ್ತಾರೆ. ಈ ಸಮುದಾಯದ ಗಾದೆಗಳನ್ನು ಬಹು ಹಿಂದೆ ಘಟಿಸಿದ ಸತ್ಯ ಘಟನೆಗಳೆಂದು ನಂಬುತ್ತಾರೆ. ಗ್ರೀಸಿದ ಶ್ರೇಷ್ಠ ತತ್ವಜ್ಞಾನಿ ಅರಿಸ್ಟಾಟಲ್ ಗಾದೆಗಳನ್ನು ನಿರೂಪಿಸುತ್ತಾರೆ.[೨೪]

ಗಾದೆಗಳಿಗೆ ಹಿನ್ನೆಲೆಯಾಗಿ ಕಥೆಗಳು ಸಾಕ್ಷಿಯಾಗಿರುವುದಕ್ಕೆ ಅನೇಕ ಗಾದೆಗಳನ್ನು ಉದಾಹರಣೆ ನೀಡಬಹುದು.

ಲಾಕ್ ಜಾಯದೇಣು

ಪಣ ಸಾಕ ನಜಾಯದೇಣು

(ಲಕ್ಷ ಹೋದರೆ ಹೋಗಲಿ ಸಾಕ್ ಹೋಗಬಾರ್ದು)

ಲಂಬಾಣಿಗರಲ್ಲಿ ಕನ್ಯೆ ನಿಶ್ಚಯ ಮಾಡುವಾಗ ಕೈಕಸೂತಿಯಿಂದ ಮಾಡಿರುವ ಒಂದು ಸಣ್ಣ ಕೋತಳಿಯಲ್ಲಿ ಅಕ್ಕಿ, ಎಲೆ, ಅಡಿಕೆ ಹಾಗೂ ಒಂದು ಗಡ್ಡಿ ನಾಣ್ಯ ಹಾಕಿ ಪಂಚರ ಸಮಕ್ಷಮದಲ್ಲಿ ನಿಶ್ಚಿತಾರ್ಥ ಸಂಕೇತವಾಗಿ

ವರನ ಕಡೆಯವರಿಗೆ ಕೊಡುತ್ತಾರೆ. ಯಾವುದೇ ಪ್ರಸಂಗದಲ್ಲಿ ಏನಾದರೂ ಸಂಬಂಧಿಕರ ಮಧ್ಯದಲ್ಲಿ ವೈಮನಸ್ಸು ಉಂಟಾಗಿ ಕೊಡುಕೊಳ್ಳುವಿಕೆ ನಿಂತು ಹೋಗುವ ಪ್ರಸಂಗಗಳು ವರನ ಕಡೆಯವರು ಸಂಬಂಧ ಮುರಿದುಕೊಳ್ಳಲು ಇಷ್ಟಪಡಲಾರರು. ಹಾಗೇನಾದರೂ ಆದರೆ ಅದು ಅವರ ಗೌರವಕ್ಕೆ ಧಕ್ಕೆ ತಗುಲಿದಂತೆ ಎಂದು ಭಾವಿಸುತ್ತಾರೆ. ಎಷ್ಟೇ ಹಣ ಹೋದರೂ, ಜೀವ ಹಾನಿ ಉಂಟಾದರೂ ಕನ್ಯೆಯನ್ನು ಬಿಟ್ಟುಕೊಡಲಾರರು. ಅದಕ್ಕಾಗಿಯೇ 'ಲಾಕ್ ಜಾಯ ದೇಕ್ ಪಣ ಸಾಕನ ಜಾಂತು ದೇಕ್' ಎಂಬ ಗಾದೆಯು ಈ ಪ್ರಸ್ತುತ ಸಂದರ್ಭದಲ್ಲಿ ಹುಟ್ಟಿಕೊಂಡಿವೆ.

ಹೀಗೆ ಅನೇಕ ಗಾದೆಗಳಿಗೆ ಈ ಸಮುದಾಯ ಸಾಕ್ಷಿಧಾರಗಳು ಒದಗಿಸುವುದರಿಂದ ಇವರಿಗೆ ಗಾದೆಗಳ ಬಗ್ಗೆ ನಂಬಿಕೆ ಇದೆ. ಲಂಬಾಣಿ ಸಮುದಾಯ ಉಪಯೋಗಿಸುವ ಗಾದೆಗಳನ್ನು ಪ್ರಧಾನವಾಗಿ ಈ ಕೆಳಗಿನಂತೆ ವರ್ಗೀಕರಣ ಮಾಡಬಹುದಾಗಿದೆ.

೧. ಸಾಮಾಜಿಕ ಸಮಸ್ಯೆಗಳನ್ನು ಕುರಿತ ಗಾದೆಗಳು

೨. ಕೌಟುಂಬಿಕ ಗಾದೆಗಳು

೩. ಸಾಂಪ್ರದಾಯಿಕ ಗಾದೆಗಳು

೪. ನಂಬಿಕೆ ರೂಪದ ಗಾದೆಗಳು

೫. ನೀತಿ ಪ್ರಧಾನವಾದ ಗಾದೆಗಳು

೬. ವಿವಿಧ ಪ್ರವೃತ್ತಿ ಸೂಚಕ ಗಾದೆಗಳು

೭. ಧಾರ್ಮಿಕ ಜೀವನವನ್ನು ಕುರಿತ ಗಾದೆಗಳು

**೧. ಸಾಮಾಜಿಕ ಸಮಸ್ಯೆಗಳನ್ನು ಕುರಿತ ಗಾದೆಗಳು**

ಲಂಬಾಣಿ ಸಮುದಾಯ ತಮ್ಮಲ್ಲಿ ಉದ್ಭವಿಸುವ ಅನೇಕ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಹಲವಾರ ನೀತಿ-ನಿಯಮಗಳನ್ನು ಕಡ್ಡಾಯವಾಗಿ ಪಾಲಿಸಿಕೊಂಡು ಬಂದಿದ್ದಾರೆ. ಲಂಬಾಣಿಗರು ಸಾಮಾಜಿಕ ಸಮಸ್ಯೆಯನ್ನು ಕುರಿತು ಗಾದೆಗಳು ಕಾಣಬಹುದಾಗಿದೆ.

'ಪೂಜಾ ಕೀದೋ ಪೂಜಾರಿ
ಹಡ್ಕಾ ಮಾಂಗೋ ಹಜಾರಿ'[೩೩]
(ಪೂಜೆ ಮಾಡುವ ಪೂಜಾರಿ, ಎಲುಬು ಬೇಡ್ವವ ಹಜಾರಿ)

ಲಂಬಾಣಿಗರ ಧಾರ್ಮಿಕ ಜೀವನದಲ್ಲಿ ಪೂಜಾರಿಗೆ ಮಹತ್ವ ಸ್ಥಾನವಿದೆ. ಯಾರದೋ ಶ್ರಮಕ್ಕೆ ಯಾರೋ ನಾಲಿಗೆಯನ್ನು ಚಾಚಿದಾಗ ಪ್ರಸ್ತುತ ಗಾದೆಯನ್ನು ಬಳಸುತ್ತಾರೆ. ಈ ಸಮುದಾಯದವರು ತಮ್ಮ ಹಬ್ಬ-ಹರಿದಿನಗಳ ಸಮಯದಲ್ಲಿ ಪ್ರಾಣಿಯನ್ನು ಬಲಿ ಕೊಡುವುದು ಸರ್ವೇಸಾಮಾನ್ಯ. ಕುರಿಯನ್ನು ಬಲಿ ನೀಡಿದ ನಂತರ ನೈವೇದ್ಯಕ್ಕಾಗಿ ಬಲಿ ನೀಡಿದ ಕುರಿಯ ಎಲುಬನ್ನು ಬೇಯಿಸಿ ದೇವರ ಮುಂದೆ ಇಡುತ್ತಾರೆ. ನಂತರ ಇದನ್ನು ಪ್ರಸಾದವನ್ನಾಗಿ ತಾಂಡಾದ ಹಿರಿಯರಿಗೆ, ಬೇರೆ ತಾಂಡದ ಗಣ್ಯರಿಗೆ ಹಂಚುತ್ತಾರೆ. ಇಂತಹ ಸಂದರ್ಭದಲ್ಲಿ ಈ ಗಾದೆಯನ್ನು ಉಪಯೋಗಿಸುತ್ತಾರೆ.

‘ಪೇಲೊ ಜೋಡಾ ಸೋನೇರೊ ತೋಡ

ದುಸರೊ ಜೋಡಾ ಛಾತೀರೊ ಫೋಡಾ’[೩೭]

(ಮೊದಲಿನ ಜೋಡಿಯು ಬಂಗಾರದಂಥ ಸೌಖ್ಯವು, ಎರಡನೆಯ ಜೋಡಿಯು ಎದೆಯೊಳಗಿನ ಹುಣ್ಣಿನಂತೆ ಕಷ್ಟಮಯ)

ಸಮರೂಪ, ಸಂಪ್ರದಾಯ ಒಳ್ಳೆಯ ದಾಂಪತ್ಯ ಜೀವನವೆನಿಸುತ್ತದೆ. ಇದನ್ನು ಬಿಟ್ಟು ರೂಪ, ಯೌವನ ಕಳೆದುಹೋದ ಬಳಿಕ ಮತ್ತೆ ವಿವಾಹವಾಗುವುದು ಅಂದರೆ ಎರಡನೆ ಬಾರಿ ವಿವಾಹವಾಗುವುದೇನೆಂದರೆ ಒಂದು ರೀತಿಯಿಂದ ವಿಸ್ಮಮಯ ಜೀವನವಾಗುತ್ತದೆ. ಪರಸ್ಪರ ಮೊದಲಿನಂತೆ ಹೊಂದಿಕೊಂಡು ನಡೆಯಲಾರರು ಎಂಬುದು ಇಲ್ಲಿನ ಅಭಿಪ್ರಾಯ. ಇವರಲ್ಲಿ ವಿವಾಹ ಹಾಗೂ ಬಹುಪತ್ನಿತ್ವಕ್ಕೆ ಅವಕಾಶವಿದೆ ಎಂಬುದನ್ನು ಈ ಗಾದೆ ಸ್ಪಷ್ಟಪಡಿಸುತ್ತದೆ.

**೨. ಸಾಂಪ್ರದಾಯಿಕ ಗಾದೆಗಳು**

ಲಂಬಾಣಿಗರು ರೂಢಿ-ಸಂಪ್ರದಾಯಗಳನ್ನು ಕಟ್ಟುನಿಟ್ಟಿನಿಂದ ಪಾಲಿಸಿಕೊಂಡು ಬಂದಿದ್ದಾರೆ. ಅವರ ಆಚರಣೆ, ಪದ್ಧತಿ, ನಂಬಿಕೆ ಕುರಿತಂತೆ ಅನೇಕ ಗಾದೆಗಳು ಪ್ರಾಚೀನ ಕಾಲದಿಂದಲೂ ಜನಪ್ರಿಯತೆಯನ್ನು ಪಡೆದಿವೆ.

“ಖೂರಾ ಪರಾನ್ ಮಾತೋ ಮಾರ್ನು”[೩೮]

(ಊಟಮಾಡಿಸಿ, ಕುಡಿಸಿ ತಲೆ ಹೊಡೆಯಬೇಕು)

ಮನುಷ್ಯನಾದವನು ಎಂತಹ ಕ್ರೂರ ಸಮಯದಲ್ಲಿಯೂ ಕನಿಷ್ಠ ಮಾನವೀಯತೆ ಹೊಂದಿರಬೇಕು. ಹಸಿದ ಹೊಟ್ಟೆಯ, ಒಣಗಿದ ಬಾಯಿಯ ಜೀವಿಗಳನ್ನೆಂದೂ ಬಲಿಕೊಡಬಾರದು ಎಂಬುದು ಈ ಸಮುದಾಯದ ನಂಬಿಕೆ. ಕುರಿ, ಮೇಕೆ, ಕೋಳಿ ಇನ್ನೂ ಮುಂತಾದವುಗಳನ್ನು ಬಲಿಕೊಡುವಾಗ ಬಾಯಿಗೆ ನೀರನ್ನು ಸುರಿದು ಕುಂಕುಮ ಹಚ್ಚಿ ನಂತರ ಬಲಿ ಕೊಡುತ್ತಾರೆ. ಅಂತೆಯೇ ಮೇಕೆಯು ಮೈಕೊಡವಿದ ನಂತರವಷ್ಟೇ ಬಲಿ ಕೊಡುತ್ತಾರೆ. ಮೈ ಕೊಡವದಿದ್ದರೆ ಮೇಕೆಯನ್ನು ಬಲಿ ಕೊಡುವುದಿಲ್ಲ. ದೇಹ ತೃಪ್ತಿಗೊಂಡು ಆತ್ಮವು ಸಂತೃಪ್ತಿಗೊಂಡಾಗ ಮಾತ್ರ ಬಲಿಗೆ ಮೋಕ್ಷ ಪ್ರಾಪ್ತಿಯಾಗುತ್ತದೆಂಬ ಆಶಯ ಗಾದೆಯಲ್ಲಿ ಕಂಡುಬರುತ್ತದೆ.

“ಧಾರದೇನ ಪಾರವೇಣು”[೩೯]

(ರಕ್ತ ಚೆಲ್ಲಿ ಪಾರಾಗಬೇಕು)

ಯಾವುದೇ ಒಳ್ಳೆಯ ಕಾರ್ಯ ಪ್ರಾರಂಭಿಸುವಾಗ ದೇವರು ಪಿಶಾಚಿ ಮುಂತಾದವುಗಳಿಗೆ ಬಲಿಕೊಟ್ಟು ರಕ್ತಚೆಲ್ಲಿ, ತೃಪ್ತಿಪಡಿಸಿ ಕಾರ್ಯ ಪ್ರಾರಂಭಿಸಬೇಕೆಂಬುದನ್ನು ಪ್ರಸ್ತುತ ಗಾದೆಯು ಸೂಚಿಸುತ್ತದೆ. ಲಂಬಾಣಿಗರಲ್ಲಿ ಇಂದಿಗೂ ಈ ಬಗೆಯ ನಂಬಿಕೆ ಹಾಗೂ ಆಚರಣೆಗಳಿವೆ. ಯಾವುದೇ ಒಳ್ಳೆಯ ಕಾರ್ಯ ಪ್ರಾರಂಭಿಸುವಾಗ ತಮ್ಮ ದೈವಗಳಿಗೆ ಬಲಿಕೊಟ್ಟು ತೃಪ್ತಿಪಡಿಸಿ ಕಾರ್ಯವನ್ನು ಪ್ರಾರಂಭಿಸುತ್ತಾರೆ.

‘ಕೇರ ಪೇಟ್ ದೂಕ ತೊ ಕೋಣ್ ಅಜಮೊ ಖಾವ’[೪೦]

(ಅಜೀರ್ಣವಾಗಿ ಯಾರ ಹೊಟ್ಟೆ ನೋವಿಗೆ ಯಾರು ಅಜವಾನ ತಿನ್ನಬೇಕು)

ಲಂಬಾಣಿಗರು ನ್ಯಾಯ ನಿರ್ಣಯಕ್ಕಾಗಿ ಕುರಿತಾದ ಶಿಕ್ಷೆಗೊಳಗಾದ ವ್ಯಕ್ತಿಯನ್ನು ಕುರಿತು ಈ ಮೇಲಿನ ಗಾದೆಯನ್ನು ಬಳಸುತ್ತಾರೆ. ಸಮಾಜದಲ್ಲಿ ಯಾರೇ ತಪ್ಪು ಮಾಡಿರಲಿ, ತಪ್ಪಿತಸ್ಥರು ಶಿಕ್ಷೆಯನ್ನು ಅನುಭವಿಸಲೇಬೇಕು. ಇಲ್ಲದ ಅಪರಾಧವನ್ನೆಸಗಿ ಬೇರೆಯವರ ಮೇಲೆ ಅದನ್ನು ಹೊರಿಸುವಾಗ ಈ ಮೇಲಿನ ಗಾದೆಯನ್ನು ಬಳಸಿ ತಪ್ಪಿತಸ್ಥನನ್ನು ಶಿಕ್ಷೆಗೆ ಗುರಿಪಡಿಸುತ್ತಾರೆ.

**೩. ಕೌಂಟುಬಿಕ ಗಾದೆಗಳು**

ಅಜ್ಜ-ಅಜ್ಜಿ, ತಂದೆ-ತಾಯಿ, ಗಂಡ-ಹೆಂಡತಿ, ಅಣ್ಣ-ತಮ್ಮ, ಅಕ್ಕ-ತಂಗಿ, ಮಕ್ಕಳು ಇರುವ ಸಂಬಂಧವನ್ನು ಕುರಿತು ಹಲವಾರು ಗಾದೆಗಳು ರೂಢಿಯಲ್ಲಿವೆ. ಈ ಗಾದೆಗಳಿಂದ ಕುಟುಂಬದ ಆಂತರಿಕ ಸಂಬಂಧಗಳ ಬಗ್ಗೆ ನೋಡಬಹುದು.

"ಬೇಟ್‌ಬೇಟಾರ್ ಆಂಗ್ ಖಾ ಪೀಲೇಣು
ಬೋಡಿರ್ ಆಂಗ್ ಓಡ ಪೇರ್ಲೇಣು"[೧೧]

(ಮಕ್ಕಳಾಗುವ ಮೊದಲು ಉಂಡು-ಕುಡಿಯುವ ಆಸೆಯನ್ನು ತೀರಿಸಿಕೊಳ್ಳಬೇಕು. ಸೊಸೆಯರು ಬರುವ ಮೊದಲು ಉಡು-ತೊಡುವ ಬಯಕೆಯನ್ನು ಈಡೇರಿಸಿಕೊಳ್ಳಬೇಕು)

ಈ ಮೇಲ್ಕಂಡ ಗಾದೆಯಲ್ಲಿ ಕುಟುಂಬದಲ್ಲಿ ಸಹಜವಾಗಿ ನಡೆಯುವ ಕ್ರಿಯೆಯನ್ನು ಚಿತ್ರಿಸಲಾಗಿದೆ. ಮಕ್ಕಳು ಜನಿಸಿದ ಮೇಲೆ ಮನೆಯಲ್ಲಿ ವಿಶೇಷ ತಿನಿಸುಗಳನ್ನು ಮಾಡಿದರೆ ತಂದೆ-ತಾಯಿಗಳು ಮೊದಲು ಮಕ್ಕಳಿಗೆ ತಿನಿಸುವುದು ಸರ್ವೇಸಾಮಾನ್ಯ. ಮಕ್ಕಳು ತಿಂದ ನಂತರ ತಾವು ಅಳಿದುಳಿದುದನ್ನು ಸೇವಿಸುತ್ತಾರೆ. ಕೆಲವು ಬಾರಿ ಉಳಿಯದೇ ಇರುವ ಸಾಧ್ಯತೆಯೂ ಬಹಳಷ್ಟಿರುತ್ತದೆ. ಇದರಿಂದ ಹಿರಿಯರು ಸೇವಿಸುವ ಆಸೆ-ಆಸೆಯಾಗಿಯೇ ಉಳಿಯುತ್ತದೆ. ಹಾಗೆಯೇ ಸೊಸೆಯಂದಿರು ಬಂದ ಮೇಲೆ ಉಡುಗೆ-ತೊಡುಗೆಗಳಿಗೆ ಮೊದಲು ಆದ್ಯತೆಯನ್ನು ಕೊಡಬೇಕು. ಇದು ಲೋಕ ರೂಢಿಯಾದ, ಸಾಂಸಾರಿಕ ಅನುಭವಗಳಾಗಿದ್ದು ಅದನ್ನು ಗಾದೆಯ ಮುಖೇನ ವಿವರಿಸಲಾಗಿದೆ.

"ಪೇಲೋ ಜೋಡಾ ಸೋನೇರೊ ತೋಡಾ
ದುಸರೋ ಜೋಡಾ ಛಾತೀರೊ ಪೋಡಾ"

ಮೊದಲ ಜೋಡಿಯು ಬಂಗಾರದಂತೆ ಸೌಖ್ಯವು
ಎರಡನೇಯ ಜೋಡಿ ಎದೆಯೊಳಗಿನ ಹುಣ್ಣಿನಂತೆ ಕಷ್ಟಮಯ

ಈ ಗಾದೆಯು ದ್ವಿತೀಯ ವಿವಾಹವಾದ ಹೆಣ್ಣು-ಗಂಡುಗಳ ಸ್ಥಿತಿಗತಿಯನ್ನು ಮಾನಸಿಕ ವೇದನೆಯನ್ನು ಅತ್ಯಂತ ಸಮರ್ಪಕವಾಗಿ ಮನಮುಟ್ಟುವಂತೆ ತಿಳಿಸುತ್ತವೆ. "ಪ್ರಥಮ ವಿವಾಹದಿಂದ ಸಂಸಾರದಲ್ಲಿ ಸಿಗುವ ಆನಂದವು ಚಿನ್ನದಂತೆ ಆದರೆ, ಎದೆಯ ಮೇಲೆ ಹುಣ್ಣಾದರೆ ಯಾವ ಯಾವ ರೂಪದ ನೋವು ತೊಂದರೆಗಳಿಗೆ ಈಡಾಗುತ್ತವೆಯೋ ಆ ರೀತಿಯ ನೋವುಗಳನ್ನು ದ್ವಿತೀಯ ವಿವಾಹದಲ್ಲಿ ಅನುಭವಿಸಬೇಕಾಗುತ್ತದೆ." ಎಂಬುದು ಈ ಗಾದೆಯ ಸಾರಾಂಶವಾಗಿದೆ.

೪. ನಂಬಿಕೆ ರೂಪದ ಗಾದೆಗಳು

ಲಂಬಾಣಿ ಸಮುದಾಯದಲ್ಲಿ ನಂಬಿಕೆಗಳು ಅನೇಕ ಗಾದೆಗಳ ರೂಪದಲ್ಲಿ ಬಳಕೆಯಲ್ಲಿವೆ. ನಂಬಿಕೆಯ ಆಧಾರದ ಮೇಲೆ ರೂಪಗೊಂಡ ಗಾದೆಗಳಾಗಿವೆ. ಈ ನಂಬಿಕೆಗಳನ್ನು ಚಾಚೂ ತಪ್ಪದಂತೆ ಪಾಲಿಸಿಕೊಂಡು ಬರುತ್ತಿದ್ದಾರೆ. ಈ ನಂಬಿಕೆಗಳನ್ನು ಪಾಲಿಸದಿದ್ದರೆ ಒಳ್ಳೆಯದಾಗುವುದಿಲ್ಲ.

ಗಾಳಾ ದೇನ್ ಹಾತ್ ಬಂದಾಜಿಂವ್

[ಹಗ್ಗ ಕೊಟ್ಟು ಕೈಕಟ್ಟಿಸಿಕೊಂಡಂತೆ]

ಸೋನೂ ಮಳಿಚೇರ್ ಘರ್ ಸೂನೋ

[ಬಂಗಾರ ಸಿಕ್ಕರೆ ಅವರ ಮನೆ ಶೂನ್ಯ]

ಚೊಟ್ಯಾರ್ ಗೊಣ್ಣೆ ಕನ್ಯಾಯಿ ರಾಂಡಚ್

[ಕಳ್ಳನ ಹೆಂಡತಿ ಎಂದಿದ್ದರೂ ಮುಂಡೆಯಂತೆ]

"ಊದೆ ಬಲೋವಾಳೇರ ಊದ್ ಬಳಚ

ತೇಲ್ ಬಳೆವಾಳೇರ ತೇಲ್ ಬಳಚ್

ಖಾಲೇವಾಳೇರ ಕಾಯಿ ಜಾವಚ್"

[ಲೋಬಾನ ಸುಡುವವರದು ಲೋಬಾನ ಸುಡುತ್ತೆ

ಎಣ್ಣೆ ಸುಡುವವರದು ಎಣ್ಣೆ ಸುಡುತ್ತೆ,

ಭವಿಷ್ಯ ಹೇಳುವವನದೇನು ಹೋಗುತ್ತೆ]

೫. ನೀತಿ ಪ್ರಧಾನ ಗಾದೆಗಳು

ನೀತಿ ಹೇಳಿಕೊಡುವುದು ನೀತಿ ಪ್ರಧಾನ ಗಾದೆಗಳ ಗುರಿ. ಯಾವುದೇ ಒಂದು ಸಮುದಾಯ ನೀತಿಯನ್ನು ದೂರವಿಟ್ಟು ಹೋದದ್ದೇ ಆದಲ್ಲಿ ಅಂತಹ ಸಮುದಾಯವು ತನ್ನ ಇರುವಿಕೆಯನ್ನು, ಅಸ್ತಿತ್ವವನ್ನು ಕಳೆದುಕೊಳ್ಳುತ್ತದೆ. ಒಂದು ಸಮುದಾಯ ನೀತಿಯುತವಾಗಿ ನಡೆಯಬೇಕೆಂಬುದು ಈ ಗಾದೆಯ ಪ್ರಧಾನವಾದ ಅಂಶ.

'ಯಾಡೀರ್ ಜೋ ಬೇಟಿ ದೋರಾರ್ ಜೊ ಸಾಡೇ'

(ತಾಯಿಯಂತೆ ಮಗಳು, ನೂಲಿನಂತೆ ಸೀರೆ)

'ಬಾರಾ ಹಾತ್ ಹಣ್ಣಿಡೆಕಾರ್ ಮಾರತೊಯಿ ಜಮಿಪರಚ್ ಟಕ್‌ನೋ'

'ಹನ್ನೆರಡು ಮೊಳ ಎತ್ತರಕ್ಕೆ ಜಿಗಿದರೂ ಕೂಡ ಭೂಮಿಯ ಮೇಲೆಯೇ ಕಾಲೂರಬೇಕು)

'ಆಪಣ ಆಚರತೋ ತಾಂಡೋ ಆಚೋರಚ'[೪]

(ನಾವು ಒಳ್ಳೇಯವರಿದ್ದರೆ, ತಾಂಡ ಒಳ್ಳೆಯದಿರುತ್ತೆ)

'ಮಾ ದಿಟಿ ಪೇಟ್ ಗೋಣ್ಣೆದಿಟಿ ಪೊಟ್'

[ತಾಯಿ ನೋಡಿದಳು ಹೊಟ್ಟೆ ಹೆಂಡತಿ ನೋಡಿದಳು ಆಸ್ತಿ]

### ೬. ವಿವಿಧ ಪ್ರವೃತ್ತಿ ಸೂಚಕ ಗಾದೆಗಳು

ಪ್ರಾಚೀನ ಕಾಲದ ಚರಿತ್ರೆಯನ್ನು ಹೊಂದಿರುವ. ಲಂಬಾಣಿಗರು ತನ್ನದೇ ಆದ ಸಾಂಸ್ಕೃತಿಕ ಪರಂಪರೆ ಹೊಂದಿದ್ದಾರೆ. ವ್ಯಾಪಾರ, ಕೃಷಿ, ಗೋಡಾವೆ, ಇನ್ನೂ ಮುಂತಾದ ವೃತ್ತಿಯ ಅನುಭವ ಇವರಿಗಿದೆ. ಅಲೆಮಾರಿಗಳಾಗಿ ದಕ್ಷಿಣಕ್ಕೆ ವಲಸೆ ಬಂದು ಜೀವನೋಪಾಯಕ್ಕಾಗಿ ಮೇಲಿನ ಉದ್ಯೋಗ ಕೈಗೊಂಡಿದ್ದು ಕಂಡುಬರುತ್ತದೆ. ಅವರು ಅಲೆಮಾರಿ ಸಮುದಾಯಕ್ಕೆ ಬಳಕೆಯಲ್ಲಿರುವ ಗಾದೆಗಳು ರೂಢಿಯಲ್ಲಿವೆ.

'ಫೂಲ್ ವೇಚೇರ ಜಾಗ ಖಡ ವೇಚೇರ ವೇಜಾಯ'[೪೫]

[ಹೂ ಮಾರುವ ಜಾಗ ಹುಲ್ಲು ಮಾರುವುದಾದೀತು]

ಲಂಬಾಣಿಗರು ಕಡುಬಡವರಾದರೂ ಮಾನ, ಮರ್ಯಾದೆ ಪ್ರತಿಷ್ಠೆಯ ಪ್ರಶ್ನೆ ಉದ್ಭವಿಸಿದಾಗ ತುಂಬ ಬಿಗುಮಾನದಿಂದ ನಡೆದುಕೊಳ್ಳುತ್ತಾರೆ. ಮಾನ-ಮರ್ಯಾದೆ, ಅಂತಸ್ತಿಗೆ ಧಕ್ಕೆ ಬರದಂತೆ ಬದುಕುವುದೇ ಅವರ ಜೀವನ ವಿಧಾನ. ಅಕಸ್ಮಾತ್ ಹಾಗೆ ಬದುಕದೇ ಹೋದಲ್ಲಿ ಎಲ್ಲವೂ ವ್ಯರ್ಥ. ಹೂ ಮಾರುವಲ್ಲಿ ಹುಲ್ಲು ಮಾರುವಂತಾಗುತ್ತದೆ ಎಂದು ನಂಬಿ ಬದುಕಿದ್ದಾರೆ. ಒಳ್ಳೆಯವರು ಒಳ್ಳೆಯದನ್ನು ಬಯಸಬೇಕು ವಿನಃ ಕೆಟ್ಟದ್ದನ್ನು ಎಂದಿಗೂ ಬಯಸಬಾರದು. ಈ ಮೇಲ್ಕಂಡ ಗಾದೆ ಲಂಬಾಣಿಗರ ವ್ಯಕ್ತಿತ್ವವನ್ನು ಸ್ಪಷ್ಟಪಡಿಸುತ್ತದೆ.

"ವಾತೇವಾಳೇರ್ ಬುಂಡಾವಗ್ಗ

ಬನ್ ವಾತೇವಾಳೇರ್ ಛೋಲಾಯಿ ವಕೇನಿ'[೪೬]

(ಕನ್ನಡದ ಭಾವಾರ್ಥ: ಮಾತುಗಾರನು ಜೋಳದ ಕುನ್ನಿಯನ್ನು ಮಾರಿದನು. ಮಾತು ಇಲ್ಲದವನು ಜೋಳ ಮಾರದೇ ಇರುವನು)

ವ್ಯಾಪಾರಿಗಳಾದ ಇವರು ಜನರೊಂದಿಗೆ ಹೇಗೆ ಚಾಣಾಕ್ಷತನದಿಂದ ವ್ಯವಹರಿಸಬೇಕೆಂಬುದನ್ನು ಕಂಡುಕೊಂಡಿದ್ದಾರೆ. ವ್ಯವಹಾರ ನಿಪುಣರಾಗಿದ್ದಾರೆ. ಯಾವ ವ್ಯವಹಾರವೇ ಆಗಿರಲಿ ಮಾತು ಬಹುಮುಖ್ಯ ಎಂಬುದನ್ನು ಮೇಲಿನ ಗಾದೆ ಸೂಚಿಸುತ್ತದೆ.

'ದಾಮ್ ಕರಕಾಮ್

ಬಾಂದಿ ಕರ ಸಲಾಮ್'[೪೭]

(ಕನ್ನಡದ ಭಾವಾರ್ಥ: ಬೇಗ ಕೆಲಸಮಾಡಿ ಸಿರಿವಂತನಾಗು ಸಿರಿವಂತನಾದ ಮೇಲೆ ಅನ್ಯರು ನಿನಗೆ ಗೌರವ ಕೊಡುತ್ತಾರೆ.)

ಹಣವೇ ಸರ್ವಸ್ವ ಹಣವಿಲ್ಲದವರು ಹದ್ದಿಗಿಂತ ಕಡೆ ಎನ್ನುತ್ತಾರೆ. ಸಿರಿ-ಸಂಪತ್ತು ಇರುವವರೆಗೂ ಅನ್ಯರು ಸಲಾಮು ಹೊಡೆಯುತ್ತಾರೆ. ಸಿರಿ-ಸಂಪತ್ತು ಹೋದಬಳಿಕ ಹಾಳೂರ ನರಿಯಣ್ಣನಾಗುತ್ತಾರೆಂದು ಸರ್ವಜ್ಞ ಹೇಳಿರುವುದರಲ್ಲಿ ಸತ್ಯಾಂಶ ಅಡಗಿದೆ. ಈ ಮೇಲಿನ ಗಾದೆಯು ಅದನ್ನೇ ಧ್ವನಿಸುತ್ತದೆ.

'ರಾಬೇ ಬನಾ ಚೌಬೇನ ಮಳೆನಿ'[೪೮]

(ಕನ್ನಡದ ಭಾವಾರ್ಥ: ಕೆಲಸ ಮಾಡಿದರೆ ಮಾತ್ರ ಹೊಟ್ಟೆತುಂಬಿಸಿಕೊಳ್ಳಲು ಸಾಧ್ಯ)

ಶ್ರಮಪಟ್ಟು ದುಡಿದರೆ ಮಾತ್ರ ಹೊಟ್ಟೆ ತುಂಬಿಸಿಕೊಳ್ಳಲು ಸಾಧ್ಯ ಎಂಬುದನ್ನು ಈ ಗಾದೆಯ ಮೂಲಕ ಚಿತ್ರಿಸಲಾಗಿದೆ. ಶ್ರಮಜೀವಿಗಳಾದ ಲಂಬಾಣಿಗರು ಪ್ರಾಚೀನ ಕಾಲದಿಂದಲೂ ಬೆಟ್ಟಗುಡ್ಡಗಳಲ್ಲಿ ಗಾಳಿ, ಮಳೆ, ಚಳಿ, ಬಿಸಿಲು ಎನ್ನದೆ ಅಲೆದಾಡಿ ಬೆವರು ಸುರಿಸಿ ಜೀವನ ಸಾಗಿಸಿದ್ದು ಕಷ್ಟಜೀವಿಗಳು ಇವರು ಬೆವರಿನ ಬೆಲೆ ಏನೆಂಬುದನ್ನು ಸರಿಯಾಗಿ ಅರ್ಥೈಸಿಕೊಂಡಿದ್ದಾರೆ.

**೨. ಧಾರ್ಮಿಕ ಜೀವನವನ್ನು ಕುರಿತು ಗಾದೆಗಳು**

ಲಂಬಾಣಿಗರ ಧಾರ್ಮಿಕ ಆಚರಣೆ, ಪದ್ಧತಿ ಹಾಗೂ ನಂಬಿಕೆಗಳು ಅವರ ಸಂಸ್ಕೃತಿಯ ಪ್ರಮುಖ ಅಂಗಗಳಾಗಿವೆ. ಅವರ ಗಾದೆಗಳಲ್ಲಿ ಅವು ಸಹಜವಾಗಿ ಅಭಿವ್ಯಕ್ತಿಯನ್ನು ಹೊಂದಿದೆ.

**'ಊಪರ್ ಮೀಟೂ ಮಾಯಿ ಖಾಟೋ'**

**(ಮೇಲೆ ಸಿಹಿ, ಒಳಗೆ ಕಹಿ)**

**'ಮಾಯಿ ಖಾಸ್, ಭಾರ್ ಹಾತ್ ಧೋಯೇವಾಳ್'**

**(ಒಳಗಡೆ ಉಂಡು, ಹೊರಗೆ ಕೈತೊಳೆಯುವವರು)**

**'ಮೂಂಡೇರ್ ಮೀಟೊ, ಪೇಟೇರ್ ಪಾಪಿ'**[**]

**(ಮಾತಿನಲ್ಲಿ ಸಿಹಿ, ಹೊಟ್ಟೆಯಲ್ಲಿ ಪಾಪ ತುಂಬಿರುವವರು)**

ಈ ಇನ್ನೂ ಮುಂತಾದ ಗಾದೆಗಳಲ್ಲಿ ನಡೆ-ನುಡಿಗಳಲ್ಲಿರುವ ಅಂತರವನ್ನು ತನ್ನವರಿಗೆ ದ್ರೋಹ ಬಗೆಯುವ, ಮೇಲ್ನೋಟಕ್ಕೆ ಸಭ್ಯ-ಸಾಚಾನೆಂದು ತೋರುವ, ಧಾರ್ಮಿಕತೆಯ ಮುಖವಾಡಗಳನ್ನು ಧರಿಸಿರುವ ನೀಚಬುದ್ಧಿಯವರನ್ನು ಕುರಿತ ವ್ಯಂಗ್ಯವಿದೆ.

'ಮೋಟೋ ಮೋಟೊ ಕೇನು
ಮೋಟೋಮ ರೇನು ಪೇನೂ
ಮೋಟೊ ಮೋಟೊ ಕೇತಾನಿ
ಮೋಟ್ ಮಸೂತಿ ನ ವೇಜಾಣು'[೫೦]

[ನೀತಿವುಳ್ಳವರನ್ನು ದೊಡ್ಡವರೆಂದು ಕರೆಯಬೇಕು ದೊಡ್ಡವರೆನಿಸಿಕೊಂಡವರು ಅನೀತಿವಂತರಾಗಬಾರದು]

**೯.೧.೪. ಲಾವಣಿ**

ಲಾವಣಿಗಳನ್ನು ಲಂಬಾಣಿಗರು 'ಗೀದ್' ಎಂಬುದಾಗಿ ಕರೆಯುತ್ತಾರೆ. ಹಾಡು ಮತ್ತು ಲಾವಣಿಗಳ ನಡುವೆ ವ್ಯತ್ಯಾಸ ತಿಳಿಯದೇ ಇವರು ಹಾಡಿನ ರೂಪದ ಎಲ್ಲಾ ಪ್ರಕಾರಗಳಿಗೂ 'ಗೀದ್' ಎಂಬುದಾಗಿಯೇ ಸಂಬೋಧಿಸುತ್ತಾರೆ.[೫೧] ಇವರ ಲಾವಣಿ ಹಾಗೂ ಹಾಡುಗಳು ಭಿನ್ನವಾಗಿದ್ದು ಇವುಗಳಲ್ಲಿ ವ್ಯತ್ಯಾಸವು ಸ್ಪಷ್ಟವಾಗಿ ಗೋಚರಿಸುವುದರಿಂದ ಇವುಗಳನ್ನು ಪ್ರತ್ಯೇಕವಾಗಿಯೇ ಅಧ್ಯಯನ ಮಾಡಲಾಗಿದೆ.

ಬಳ್ಳಾರಿ ಭಾಗದಲ್ಲಿರುವ ಜನಪದ ಗೀತಾ ಪ್ರಕಾರದಲ್ಲಿ ಒಂದಾದ ಲಾವಣಿಗಳು ಬಯಲಾಟದಷ್ಟೇ ಜನಪ್ರಿಯ ಪ್ರಭಾವಿ ಸಾಹಿತ್ಯ ಪ್ರಕಾರವಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚು ಈ ಲಾವಣಿಗಳು ಜನಪದ ಗೀತೆಗಳಂತೆ ಅನಕ್ಷರಸ್ಥ ಸಮಾಜದಲ್ಲಿ ಹುಟ್ಟಿ ತಲೆಮಾರಿನಿಂದ ತಲೆಮಾರಿಗೆ ಹರಿದು ಬಂದಿದೆ. ಸಂಪ್ರದಾಯ ಬದ್ಧ ಜನತೆಯೇ ಇವುಗಳ ವಾಹಕರು. ಕಾಲಕಾಲಕ್ಕೆ ಇವರುಗಳು ಅವುಗಳಿಗೆ ಸುಂದರ ಆಕಾರವನ್ನು ಕೊಡುವ, ಬದಲಾವಣೆಗೆ ಒಳಪಡಿಸುವ ಘಟನೆ ಶೈಲಿಗಳನ್ನು ಮಾರ್ಪಡಿಸುವ ಕ್ರಿಯೆಗಳಲ್ಲಿ ತೊಡಗಿಸಿರುತ್ತಾರೆ.

ಲಂಬಾಣಿ ಪುರುಷರು ಲಾವಣಿಗಳನ್ನು ಸಾಂಪ್ರದಾಯಕ ವಾದ್ಯಗಳಾದ ನಗಾರಿ, ಕಂಚಿನ ಗಂಗಳ, ತಾಳಗಳನ್ನು ಬಳಸಿ ತಮ್ಮದೇ ಆದ ದಾಟಿಯಲ್ಲಿ ನಿರೂಪಣೆಯಲ್ಲಿ ವ್ಯತ್ಯಾಸವನ್ನು ಕಾಣಬಹುದಾಗಿದೆ. ಲಂಬಾಣಿ ಪುರುಷರು ತಮ್ಮ ದೇವರಾದ ಸೇವಾಭಾಯ, ಭೀಮನಾಯ್ಕರ ಗುಡಿಯಲ್ಲಿ ಪೂಜಾದಿನದಂದು ಕಂಚಿನ ಗಂಗಳವನ್ನು ಹಿಡಿದು ವೃತ್ತಾಕಾರವಾಗಿ ಕುಳಿತು ತಮಗೆ ಪ್ರಿಯವಾದ ಲಾವಣಿಗಳನ್ನು ತಾಂಡದ ಹಿರಿಯರು ಹಾಡುತ್ತಾರೆ.

ಲಾವಣಿಯನ್ನು ಹಾಡುವ ಪ್ರಮುಖ ವ್ಯಕ್ತಿಯು ವೃತ್ತಾಕಾರವಾಗಿ ಕುಳಿತಿರುವ ಇತರ ಸದಸ್ಯರ ನಡುವೆ ನಿಂತು ಹಾಡಲು ಪ್ರಾರಂಭಿಸುತ್ತಾನೆ. ಇನ್ನೊಬ್ಬ ನಿರೂಪಕನು ಥಟ್ಟನೆ ಹಾಡುವುದನ್ನು ನಿಲ್ಲಿಸಿ ಅದುವರೆಗೂ ಹಾಡಿದ ಕಥಾಭಾಗವನ್ನು ಗದ್ಯರೂಪದಲ್ಲಿ ಹೇಳುತ್ತಾನೆ. ಉಳಿದವರು ಮಧ್ಯ ಪ್ರವೇಶಿಸಿ ಸನ್ನಿವೇಶಕ್ಕೆ ತಕ್ಕಂತೆ ಹಾಸ್ಯ ಚಟಾಕಿಗಳನ್ನು ಹಾರಿಸುತ್ತಾರೆ. ಲಾವಣಿಗಳಲ್ಲಿ ಅರ್ಥವಾಗದ ಜಟಿಲ ಭಾಗಗಳನ್ನು ಸರಳವಾಗಿ ಬಿಡಿಸಿ ಶೋತೃಗಳಿಗೆ ಸುಲಭವಾಗಿ ಅರ್ಥವಾಗುವಂತೆ ತಿಳಿಹೇಳುತ್ತಾರೆ. ಗದ್ಯರೂಪದ ಲಾವಣಿಯ ವಿವರಣೆ ಮುಗಿದ ಮೇಲೆ ಪುನಃ ಮುಂದಿನ ಭಾಗವನ್ನು ಹಾಡಲು ಪ್ರಾರಂಭಿಸುತ್ತಾರೆ. ಆದರೆ ಸ್ತ್ರೀಯರು ವೃತ್ತಾಕಾರವಾಗಿ ನಿಂತು ನರ್ತಿಸುತ್ತ ಮಧುರವಾದ ಭಾಷೆಯಲ್ಲಿ ಪರಿಣಾಮಕಾರಿಯಾಗಿ ಲಾವಣಿಗಳನ್ನು ಹಾಡುತ್ತಾರೆ. ಇವರು ಹಾಡುವ ಲಾವಣಿಗಳನ್ನು ಅವುಗಳ ವಸ್ತುವೈವಿಧ್ಯತೆಗಳ ಆಧಾರದ ಮೇಲೆ ಈ ಕೆಳಗಿನಂತೆ ಮೂರು ಭಾಗವಾಗಿ ವಿಂಗಡಿಸಲಾಗಿದೆ.

೧. ದೈವೀ ಪುರುಷರ ಲಾವಣಿಗಳು

೨. ವೀರ ಪುರುಷರ ಲಾವಣಿಗಳು

೩. ಹಾಸ್ಯ ಲಾವಣಿಗಳು

**೧. ದೈವೀ ಪುರುಷರ ಲಾವಣಿಗಳು**

ದೈವೀ ಪುರುಷರ ಲಾವಣಿಗಳನ್ನು ಹಾಡಲು ಲಂಬಾಣಿಗರಿಗೆ ಎಲ್ಲಿಲ್ಲದ ಉತ್ಸಾಹ. ಈ ಸಮುದಾಯದಲ್ಲೇ ಜನಿಸಿ ಪವಾಡಪುರುಷರಾಗಿ ಪ್ರಸಿದ್ಧರಾಗಿರುವ ಸೇವಾಭಾಯ, ಭೀಮನಾಯ್ಕ, ಮಿಠುಭುಕ್ಯ ಇನ್ನೂ ಮುಂತಾದ ಮಹಾತ್ಮರ ಪವಾಡಗಳನ್ನು ಲಾವಣಿಗಳ ರೂಪದಲ್ಲಿ ಭಕ್ತಿಭಾವದಿಂದ ಮೈಮರೆತು ಹಾಡುತ್ತಾರೆ. ಸಿತಾಸತ್ತಿ, ಹುನಾಸಕ್ತಿ, ಭೀಮಸತ್ತಿ ಹೀಗೆ ಸಾತಿಯರ ಪವಾಡ ಸದೃಶವಾದ ಜೀವನವನ್ನು ಲಾವಣಿ ರೂಪದಲ್ಲಿ ಹಾಡುತ್ತಾರೆ. ಇಂತಹ ಲಾವಣಿಗಳಲ್ಲಿ ಲಂಬಾಣಿ ಸಮುದಾಯದ ವಿವಾಹ ಪದ್ಧತಿ, ಸತಿತ್ವದ ಪರಿಕಲ್ಪನೆಯ ಜೊತೆಗೆ ಆ ಕಾಲದ ಸ್ಥಿತಿಗತಿ, ಆಚಾರ, ವಿಚಾರಗಳನ್ನು ಕಂಡು ಹಿಡಿಯಬಹುದು.[೨೨]

### ೨. ವೀರ ಪುರುಷರ ಲಾವಣಿಗಳು

ವೀರ ಪುರುಷರ ಲಾವಣಿಗಳನ್ನು ಲಂಬಾಣಿಗರು ತಮ್ಮ ಭಾಷೆಯಲ್ಲಿ 'ವೆರಾಳು' ಎಂಬುದಾಗಿ ಕರೆಯುತ್ತಾರೆ.[೫೩] ಈ ವೆರಾಳುಗಳು ಮೆರೆದ ಪ್ರಕಾರ ನ್ಯಾಯಾಪಾಲನೆ, ಧರ್ಮನಿಷ್ಠೆ ಪ್ರೇಮ ಪ್ರಲಾಪಗಳು ಈ ಲಾವಣಿಯ ಪ್ರಮುಖ ವಸ್ತು ವಿಷಯಗಳಾಗಿವೆ. ವೀರ ಪುರುಷರ ಲಾವಣಿಗಳಲ್ಲಿ ಧರ್ಮರಾಜ ಆಲನೀಲ, ಹೀರಾಮನೆ, ದೇಸಲ್ಲಿ ಸುಪಲ್ಲಿ ಕೂಡಿದ ರಾಜ ಮೊದಲಾದ ವೀರ ಪುರುಷರ ಲಾವಣಿಗಳು ಜನಪ್ರಿಯವಾಗಿದೆ.

ಮಹಿಳೆಯರು ತಮ್ಮದೇ ಆದ ದಾಟಿಯಲ್ಲಿ ಲಾವಣಿಗಳನ್ನು ಮನ ಮುಟ್ಟುವಂತೆ ಹಾಡುತ್ತಾರೆ. ಆಲಾ-ನೀಲಾ ಲಾವಣಿಯಲ್ಲಿ ಚಿಕ್ಕಮ್ಮಳ ಅಸೂಯೆ, ದ್ವೇಷ, ಪ್ರವೃತ್ತಿಗಳನ್ನು ಮನೋಜ್ಞವಾಗಿ ಚಿತ್ರಿಸುವುದರಲ್ಲಿ ಯಶಸ್ವಿನಿಯರಾಗಿದ್ದಾರೆ. ಪ್ರಸ್ತುತ ದಿನಗಳಲ್ಲಿ ಇತರ ಸಂಪ್ರದಾಯನಿಷ್ಠ ಲಾವಣಿಗಳಿಗಿಂತ ಹಾಸ್ಯಲಾವಣಿಗಳು ಹೆಚ್ಚು ಜನಪ್ರಿಯವಾಗಿದೆ. ಈ ಲಾವಣಿಗಳಲ್ಲಿ ಸಾಮಾಜಿಕ ವಸ್ತು ವಿಷಯಗಳು ಹೆಚ್ಚು ಪ್ರಧಾನವಾಗಿದ್ದು ಇಂತಹ ಲಾವಣಿಗಳು ಲಂಬಾಣಿ ಸಮುದಾಯದಲ್ಲಿ ಹೆಚ್ಚು ಆಕರ್ಷಿತವಾಗುತ್ತಿದೆ.

### ೩. ಹಾಸ್ಯ ಲಾವಣಿಗಳು

ಹಾಸ್ಯದ ಮೂಲಕ ಜನರನ್ನು ನಗಿಸುವುದು ಹಾಸ್ಯಲಾವಣಿಯ ಪ್ರಧಾನ ಉದ್ದೇಶವಾಗಿದೆ. ಬಾಂಗಾಳೊ ಕೂಕಡೊ, ನಸಲ್ಯೊಸಾಳ್ಯ, ದೀ ಮಿಟಕಿ ಇನ್ನೂ ಮುಂತಾದವುಗಳು ಪ್ರಧಾನವಾಗಿರುತ್ತದೆ. ಬಾಂಗಾಳೋ ಕೂಕಡೋ ಲಾವಣಿಯಲ್ಲಿ ಅಹಂಕಾರದಿಂದ ಮೆರೆದ ಕೋಳಿಯು ನರಿಯ ಪಾಲಾಗುವ ದೃಶ್ಯವನ್ನು ವರ್ಣಿಸಿದರೆ, ದೀ ಮಿಟಕಿ ಲಾವಣಿಯಲ್ಲಿ ಕಪ್ಪೆಗಳೆರಡು ಸಿಹಿ ಅಡುಗೆಯನ್ನು ಸೊಸೆ ತನ್ನ ಅತ್ತೆಮಾವಂದಿರಿಗೆ ಊಟ ಬಡಿಸಿದ ಅತ್ಯಂತ ಹಾಸ್ಯಭರಿತ ಸಂದರ್ಭವನ್ನು ರಸವತ್ತಾಗಿ ವರ್ಣಿಸಲಾಗಿದೆ. ಇಂತಹ ಲಾವಣಿಗಳು ಸ್ತ್ರೀಯರಿಗಿಂತ ಹೆಚ್ಚು ಪುರುಷರಲ್ಲಿ ಅಧಿಕವಾಗಿ ಕಂಡುಬರುತ್ತದೆ.[೫೪]

### ೯.೧೫. ಒಗಟುಗಳು

ಭಾರತೀಯ ಸಮಾಜದಲ್ಲಿ ಒಗಟುಗಳು ಅತೀ ಪ್ರಾಚೀನ ಕಾಲದಲ್ಲಿಯೇ ಜನ್ಮ ತಳೆದಿದೆ. ಪ್ರಾಚೀನ ಕಾಲದಲ್ಲಿ ಜನನ, ವಿವಾಹ, ಮರಣ, ಶವಸಂಸ್ಕಾರಗಳಂತಹ ಸಂದರ್ಭದಲ್ಲಿ ಅನುಸರಿಸಲಾಗುತ್ತಿದ್ದ ಆಚರಣೆಗಳಲ್ಲಿ ಒಗಟಿನ ಕುರುಹುಗಳೂ ಇವೆ. ಒಗಟುಗಳನ್ನು ಹೋಲುವಂತಹ ಪ್ರಶ್ನಾತ್ಮಕ ಗೂಢಾತ್ಮಕ ಸಂಗತಿಗಳನ್ನು ಕೇಳುವುದು, ಹೇಳುವುದು ಪ್ರಾಚೀನ ಭಾರತೀಯರಿಗೆ ಪ್ರಿಯವಾದ ಹವ್ಯಾಸವಾಗಿತ್ತು. ಜನಪದರು ಒಗಟುಗಳಿಗೆ ಧಾರ್ಮಿಕ ಪಾವಿತ್ರತೆಯನ್ನು ಕೊಟ್ಟ ಮಂತ್ರ ಶಕ್ತಿ ಇದೆ ಎಂಬ ನಂಬಿಕೆಯನ್ನು ಬೆಳೆಸಿಕೊಂಡಿದ್ದರಿಂದ ಪ್ರಾಮುಖ್ಯತೆ ಹೆಚ್ಚಿತ್ತು. ಹೆಚ್ಚು ಜನಪ್ರಿಯವಾಗಲು ಪ್ರಬಲವಾದ ಕಾರಣವಾಯಿತೆನ್ನಬಹುದು.[೫೫]

ಜನಪದ ಸಾಹಿತ್ಯದ ಭಾಷಿಕ ಪ್ರಕಾರಗಳಲ್ಲಿ ಒಂದಾದ ಒಗಟು ಬುದ್ಧಿ ಚಾತುರ್ಯಕ್ಕೆ ಕಲ್ಪನಾ ಸಾಮರ್ಥ್ಯಕ್ಕೆ ಹಾಸ್ಯ ಪ್ರಜ್ಞೆ, ನಿಸರ್ಗ ಪರಿವೀಕ್ಷಣೆಯ ದೃಷ್ಟಿಗೆ ದ್ಯೋತಕವಾಗಿದೆ. ಅತ್ಯಂತ ಜನಪ್ರಿಯತೆ ಹಾಗೂ ಕುತೂಹಲವನ್ನು ಕೆರಳಿಸುವಂತಾಗಿದೆ. ಪ್ರಕೃತಿ ಮನುಷ್ಯನ ಸಂಸ್ಕೃತಿಗಳಿಗೆ ಸಂಬಂಧಿಸಿದಂತೆ ಹೊಸ ನಾಗರಿಕತೆಯ ಪರಿಕರಗಳಾದ ಟೆಲಿಫೋನ್, ಟೆಲಿವಿಷನ್, ರೇಡಿಯೋ ಮಾಧ್ಯಮಗಳವರೆಗೂ ಇದರ ಕ್ಷೇತ್ರ ವ್ಯಾಪಿಸಿದೆ. ಈ ಒಗಟುಗಳನ್ನು

ಬಿಡಿಸುವುದು ಆದಿಮಾನವನಷ್ಟೇ ಪ್ರಾಚೀನವಾಗಿದೆ. ಜನನ, ಮದುವೆ, ಶವ ಸಂಸ್ಕಾರಗಳಂತಹ ಸಂದರ್ಭದಲ್ಲಿ ಒಗಟುಗಳನ್ನು ಅನುಸರಿಸಲಾಗುತ್ತಿದೆ. ಎನ್‌ಸೈಕ್ಲೋಪೀಡಿಯಾ ಆಪ್ ರಿಲೀಜಿಯನ್ ಅಂಡ್ ಎಥಿಕ್ಸ್ ಎಂಬ ಗ್ರಂಥದಲ್ಲಿ ಒಗಟುಗಳು ಹುಟ್ಟುವ ಕಾರಣಗಳನ್ನು ಕೊಡುತ್ತಾ ಬುದ್ಧಿಶಕ್ತಿಗಳಿಂದ ಜನಿಸಿದ ಬೆಡಗಿನ ಪ್ರಕಾರರವೆ ಒಗಟುಗಳು[3] ಜನಪದರ ಆಳವಾದ ಅನುಭವ ಸೂಕ್ಷ್ಮವಾದ ಸಾದೃಶ್ಯಜ್ಞಾನಗಳ ಬುದ್ಧಿಯ ಸಹ ಚಾರ್ಯದಲ್ಲಿ ಸಂಗಮಿಸಿದಾಗ ಒಗಟುಗಳು ಹುಟ್ಟಿರಬಹುದಾಗಿದೆ.

ಲಂಬಾಣಿ ಸಮುದಾಯದಲ್ಲಿ ಒಗಟಿಗೆ ವಿಶಿಷ್ಟವಾದ ಸ್ಥಾನವಿದೆ. ಅವರ ಜೀವನದ ಎಲ್ಲಾ ಮುಗ್ಗಲುಗಳಿಗೂ ಪಸರಿಸಿರುವ ಅದು ಮಕ್ಕಳಿಂದ ಹಿಡಿದು ಮುದುಕರವರೆಗೂ ಮೆಚ್ಚುಗೆಯನ್ನು ಪಡೆದುಕೊಂಡಿದೆ. ಇವರಲ್ಲಿ ಒಗಟುಗಳು ಬೆಳೆಯಲು ಮುಕ್ತವಾತಾವರಣವಿದ್ದು ವಿವಿಧ ರೀತಿಯ ಒಗಟುಗಳು ಹುಟ್ಟಲು ಸಾಧ್ಯವಾಗಿದೆ. ಈ ಸಮುದಾಯದ ಎಲಾ ಕ್ಷೇತ್ರದಲ್ಲಿ ವ್ಯಾಪಿಸಿರುವ ಒಗಟುಗಳು ಅವರ ಕಲ್ಪನೆ, ಆಲೋಚನೆ ಆಚಾರ, ವಿಚಾರ, ನ್ಯಾಯ, ನೀತಿ, ಧರ್ಮ, ಸಂಸ್ಕೃತಿ, ಸಂಪ್ರದಾಯ ಮುಂತಾದವುಗಳನ್ನು ಅಭಿವ್ಯಕ್ತಗೊಳಿಸುತ್ತದೆ. ಜನನ, ವಿವಾಹ, ಹಬ್ಬ ಹರಿದಿನಗಳಲ್ಲಿ ವಿಶೇಷವಾದ ಮಹತ್ವವಿದೆ.

ಲಂಬಾಣಿಗರು ಒಗಟುಗಳಿಗೆ ತಮ್ಮ ಭಾಷೆಯಲ್ಲಿ 'ಪೋಡೇರ್ ಸಾಕಿ' ಎಂದು ಕರೆಯುತ್ತಾರೆ. 'ಪೋಡೆ' ಎಂಬ ಪದವು 'ಪೋಡ್' ಎಂಬ ಧಾತುವಿನಿಂದ ಬಂದಿದೆ. ಒಡೆಯುವುದು ಸೀಳುವುದು ಎಂಬುದನ್ನು ಲಂಬಾಣಿ ಭಾಷೆಯಲ್ಲಿ 'ಪೋಡ್' ಎಂಬುದಾಗಿ ಕರೆಯುತ್ತಾರೆ. ಆದ್ದರಿಂದ 'ಪೋಡ್' ಎಂದರೆ ಎದುರಾಳಿ ಹಾಕಿದ ಒಗಟುಗಳನ್ನು ಒಡೆಯುವುದು; ಸೀಳುವುದು ಎಂಬುದಾಗಿ ಅರ್ಥೈಸಬಹುದು. 'ಪೋಡ್' ಎಂಬ ಪದಕ್ಕೆ 'ಸಾಕಿ' ಎಂಬ ಮತ್ತೊಂದು ಪದವು ಸೇರಿ 'ಪೋಡೇರ್ ಸಾಕಿ' ಎಂಬ ಸಂಯುಕ್ತ ಪದವಾಗಿದೆ. 'ಸಾಕಿ' ಎಂದರೆ ಕಥೆ ಎಂದರ್ಥ. 'ಪೋಡೇರ್ ಸಾಕಿ' ಎಂದರೆ ಒಗಟು ಕಥೆ ಎಂದು ಹೇಳಬಹುದು. ಸಾಮಾನ್ಯವಾಗಿ ಲಂಬಾಣಿ ಭಾಷೆಯಲ್ಲಿ ಒಗಟುಗಳ ಹಿಂದೆ ಕಥೆ ಹೇಳುವುದೇ ಅಧಿಕವಾಗಿರುವುದರಿಂದ 'ಪೋಡೇರ್ ಸಾಕಿ' ಎಂಬ ಪದವು ಬಳಕೆಗೆ ಬಂದಿರಬೇಕು. ಆದರೆ ಲಂಬಾಣಿಗರು ಒಗಟು-ಒಗಟುಕತೆ ಎರಡು ಬೇರೆ ಪ್ರಕಾರಗಳೆಂದು ತಿಳಿಯುವುದಿಲ್ಲ. ಇವೆರಡು ಒಂದೇ ಎಂಬ ಭಾವನೆ 'ಪೋಡೇರ್ ಸಾಕಿ' ಎಂಬ ಪದವನ್ನು ಸಾಮಾನ್ಯವಾಗಿ ಬಳಸುತ್ತಾರೆ.

ಒಗಟು ಬಲ್ಲವರನ್ನು ಇವರ ಸಮುದಾಯದಲ್ಲಿ ಗೌರವ ಆದರಗಳಿಂದ ಸತ್ಕರಿಸಲಾಗುತ್ತದೆ. ಲಂಬಾಣಿ ಸ್ತ್ರೀ, ಪುರುಷರು ಒಗಟುಗಳನ್ನು ಕಟ್ಟುವುದರಲ್ಲಿ ಮತ್ತು ಬಿಡಿಸುವುದರಲ್ಲಿ ನಿಪುಣರಾಗಿದ್ದು, ಹಬ್ಬ-ಹರಿದಿನಗಳ ಸಮಯದಲ್ಲಿ ತಮ್ಮದೇ ಆದ ದೇವಸ್ಥಾನದ ಮುಂದೆ ವೃತ್ತಾಕಾರದಲ್ಲಿ ನರ್ತಿಸುತ್ತಾ ನೋಡಲು ತನ್ಮಯರಾಗಿ ಕುಳಿತ ಗಂಡಸರಿಗೆ ಗೀತೆರೂಪದಲ್ಲಿ ಒಗಟುಗಳನ್ನು ಹೇಳುತ್ತಾರೆ. ಈ ಒಗಟುಗಳಿಗೆ ಎಂಥವರು ತಲೆದೂಗಬೇಕು. ಕುಳಿತ ಗಂಡಸರು ನರ್ತಕಿಯರು ಹಾಕಿದ ಒಗಟಿಗೆ ಸರಿಯಾದ ಉತ್ತರವನ್ನು ನೀಡಿ ಗೌರವ ಉಳಿಸಿಕೊಳ್ಳಬೇಕಾಗುತ್ತದೆ. ಮದುವೆ ಪ್ರಸಂಗದಲ್ಲಿ ವಿನೋದಕ್ಕಾಗಿ ಒಗಟುಗಳನ್ನು ಪ್ರಯೋಗಿಸುತ್ತಾರೆ. ದಂಪತಿಗಳ ಮಧ್ಯದಲ್ಲಿ ಮೋಜಿಗಾಗಿ ಒಗಟು ಸ್ಪರ್ಧೆ ನಡೆಯುತ್ತದೆ. ಲಂಬಾಣಿಗರ ಕೆಲವು ಪ್ರಮುಖ ಒಗಟುಗಳನ್ನಿಲ್ಲಿ ಸಮೀಕ್ಷಿಸಬಹುದು.

'ತಾಡಿ ಊಟ ಪರಬಾತೀನ್

ದಲ್ಡಾಮ ಹಾತ್ ಘಾಲರಿ'  [ಕಾಂಚಳಿ]

ನಿಮ್ಮವ್ವ ಬೆಳಗ್ಗೆದ್ದು ಗುದ್ದಿನಲ್ಲಿ ಕೈಹಾಕು

ತ್ತಾಳೆ  [ಕುಪ್ಪಸ]

ಸಾಮಾನ್ಯವಾಗಿ ಲಂಬಾಣಿ ಸ್ತ್ರೀಯರು ರಾತ್ರಿ ತಾವು ತೊಟ್ಟಿರುವ ಕುಪ್ಪಸವನ್ನು ಬಿಚ್ಚಿಟ್ಟು ಮಲಗುತ್ತಾರೆ. ಬಹುಶಃ ಅವುಗಳಿಗೆ ಕಸೂತಿ ಮಾಡಿ ಹಾಕಿರುವ ಚಿಕ್ಕ ಚಿಕ್ಕ ಕನ್ನಡಿಗಳು ಒಡೆದು ಹೋಗಬಾರದೆಂಬ ಆಶಯವಾಗಿದೆ. ಆದ್ದರಿಂದ ಬೆಳಗ್ಗೆದ್ದು ಬಿಚ್ಚಿಟ್ಟ'ಕಾಂಚಳಿ'ಯನ್ನು ಪುನಃ ಹಾಕಿಕೊಂಡ ಮೇಲೆ ಕೆಲಸಕ್ಕೆ ತೊಡಗುತ್ತಿರಬೇಕು. ಗುದ್ದಿನಲ್ಲಿ ಕೈ ಹಾಕುತ್ತಾಳೆ ಎಂದರೆ ಎರಡೂ ತೋಳುಗಳಲ್ಲಿ ಕೈಸೇರಿಸಿ ಕುಪ್ಪಸ ತೊಟ್ಟುಕೊಳ್ಳುವುದು ಎಂದರ್ಥ.[೫೮]

'ಅಂಗಡೀಮ ಧೇನಿ

ತಾಕಡೀಮ ತೋಲೇನಿ

ಓರಸಾಯಿ ಪೂಜಾಲೇನಿ'[೫೯]  [ಗೋಬರ್]

(ಅಂಗಡಿಯಲ್ಲಿ ಸಿಗುವುದಿಲ್ಲ

ತಕ್ಕಡಿಯಲ್ಲಿ ತೂಗುವುದಿಲ್ಲ

ಅದಿಲ್ಲದೆ ಪೂಜೆ ನಡೆಯುವುದಿಲ್ಲ)  [ಸಗಣಿ]

ಸಂಪ್ರದಾಯಸ್ಥರಾದ ಲಂಬಾಣಿಗರು ಪ್ರಮುಖವಾಗಿ ಗೋಪೂಜಕರು. ಅವರಲ್ಲಿ ಯಾವ ಪೂಜೆ-ಪುನಸ್ಕಾರಗಳೇ ನಡೆಯಲಿ ಮನೆಯಲ್ಲಿ ಸಗಣಿಯಿಂದ ಪೂಜಾಸ್ಥಳವನ್ನು ಸಾರಿಸಿ, ರಂಗೋಲಿ ಹಾಕಿಯೇ ಮುಂದಿನ ಕೆಲಸಕ್ಕೆ ಅಣಿಯಾಗುತ್ತಾರೆ. ಸಗಣಿ ಇಲ್ಲದೆ ಅವರ ಪೂಜೆ ನಡೆಯಲಾರದೆಂದು ಮೇಲಿನ ಒಗಟು ಧ್ವನಿಸುತ್ತದೆ.

ಕಾಸಾ ಭಾಂಡಾರತೂ ಸಾಟೆಜಾಯ

ಬಳದ ಗಾವಡಿ ರತೂ ವೇಚೆಜಾಯ

ಹಿವಡಾ ಧಾಯಿ ಜೀವಡಾ ವಸಗೂ

ಕೀಂವಕರ ಛೂಟ ಜೋಡಾ[೬೦]  [ವಿವಾಹ ವಿಚ್ಛೇದನೆ]

ಪತಿ-ಪತ್ನಿಯರಲ್ಲಿ ಜಗಳ ಸಂಭವಿಸಿದಾಗ, ಇಬ್ಬರೂ ದೂರವಾಗಿ ವಿವಾಹ ವಿಚ್ಛೇಧನಕ್ಕಾಗಿ ನಾಯಕನ ಬಳಿಗೆ ಹೋಗಿ ಕೇಳಿದಾಗ ನಾಯಕನು ಮೇಲಿನಂತೆ ಉಪದೇಶಿಸುತ್ತಾನೆ. ಅಲ್ಯೂಮಿನಿಯಮ್ ಮುಂತಾದ ಪಾತ್ರೆಗಳಿದ್ದರೆ ಹೋಗಿ ಮಾರಾಟ ಮಾಡಬಹುದು, ದನಕರುಗಳಿದ್ದರೆ ಇನ್ನೊಬ್ಬರಿಗೆ ಕೊಡಬಹುದು. ಆದರೆ ಜೀವ-ಜೀವಗಳು (ಹೃದಯ) ಒಂದಾಗಿ ಬೆಸೆಯದಿರುವುದನ್ನು ಅಗಲಿಸುವುದಾದರೂ ಹೇಗೆ? ಎಂಬುದನ್ನು ಮೇಲಿನ ಒಗಟು ಧ್ವನಿಸುತ್ತದೆ.

'ನಾನಕ್ಯಾಸೂ ಮಾಟಿ

ತಾಲನ್ ತೋಲನ್

ಕಾಂದೇಪರ ಧೋತಿ
ಮಾತೇಪರ ಚೋಟಿ'[೬೧]    [ಕೂಕಡೂ]
[ಹೆಗಲ ಮೇಲೆ ಧೋತರ
ತಲೆಮೇಲೆ ಜುಟ್ಟು
ಕುಳ್ಳಗಿನ ಮನುಷ್ಯ ಜೋಲಿ
ಹೊಡೆಯುತ್ತಾನೆ]    [ಹುಂಜ]
'ಹಲ್ ಹಲ್ ಕರ್ತಾ
ಧರತೀ ನಹಿ ಜಮ್ತಾ
ಮೂ ಮಾಂಗ್ತಾ
ಹಾತ್ ನಹಿ ಪೂಜ್ತಾ'[೬೨]    [ನಾಳರ]
[ಹಲ್ ಹಲ್ ಎನ್ನುತ್ತಾರೆ
ಹೆಪ್ಪಾಗುವುದಿಲ್ಲ
ಬಾಯೀ ಕೇಳುತ್ತದೆ ಆದರೆ
ಕೈಗೆಟಕುವುದಿಲ್ಲ]    [ತೆಂಗಿನಕಾಯಿ ನೀರು]
'ಅವಡಿಕೆ ಚಿಟವಿ
ಡೊಂಗರ ಪಿಟವಿ'    [ಕೋರಾಡಿ]
[ಇಷ್ಟುಸಣ್ಣ ವಸ್ತು
ಅರಣ್ಯಸುಂಗ್ರತಿ]    [ಕೊಡಲಿ]
'ಅದರಚರ ಅಸಮಾನಭಮೆ;, ಜಣತಿ ಜಣಲ ಮಾಯಿ
ಚಾಂದ ಸುರತೇರ ನಗಾ ತವೇನಿ
ಜಾತ ಪಂಕುರೇರೇಮಾಯಿ
ಪೋರ ನಾಮಚ ಕಾಂಯಿ?    [ಘುಲ್ಲರೇಮಾಯೀರ ಕೀಡಾ]
[ಹುಟ್ಟುತ್ತಲೇ ಒಳಗಿದ್ದು ತಿನ್ನುತ್ತ
ಆಕಾಶಕ್ಕೆ ರಾವಿಸುತ್ತೆ
ಸೂರ್ಯ ಚಂದ್ರರ ಕಿರಣ ತಾಗೊಲ್ಲ
ಜೀವಜಾಲದಲ್ಲಿರುವ ಅದರ ಹೇಸರೇನಿರಬಹುದು?]    [ಅತ್ತಿಹಣ್ಣಿನಲ್ಲಿನ ಹುಳ]
'ಅಸೋ ಹೀರಾ ಬಳದ;, ಗಣ ಗಣ ದಾಣಾಖಾವ
ಪಣ ಪಾಣಿ ಕಾಯಿ ಪೀಯೇನಿ'[೬೩]    [ಘಟ್ಟಿ]

[ಇಂಥದೊಂದು ಎತ್ತು
ಕಾಳು ತಿನ್ನುತ್ತ ಆದ್ರ
ನೀರು ಕುಡಿಯಲ್ಲ] [ಬೀಸುಕಲ್ಲು]
'ಅಸಿದಯಾ ದಿಟೋಕೋಗಿ
ಸಾಮಳ ಮಾರ್‌ವಾತ್
ಸುಕೆ ಸಮಂದರೇಮಾಯಿ
ಡುಬನ್ ನಿಕಳೋ
ಕತಿನ ಲಾಗೋಹಾತ್'[೬೮] [ಹಾತ್-ಮರಣ]
[ಇಂಥ ದಯೆಯನ್ನು ನಾನೆಂದು ಕಂಡಿಲ್ಲ
ಕೇಳು ನನ್ನ ಮಾತು
ಬತ್ತಿ ಸಮುದ್ರದಲ್ಲಿ
ಮುಳಗಿ ಬಂದಿರುವೆ
ಎಲ್ಲಿಯೂ ಅದರ ಅಂತ ಸಿಗಲಿಲ್ಲ] [ಜೀವ-ಮರಣ]
'ಉಟತುಯಿ ಟೇಡೋ
ಬೆಸತುಯಿ ಟೇಡೋ
ಓರೋ ರುಮಾಲ ಟೇಡೋ
ರಚವನಸ್ಪತಿರೇ ಮಾಯಿ
ಓರೋ ನಾಮವೀಯಕಾಂಯಿ?'[೬೭] [ಭಾಕ್ರ್ಯಾ]
[ಏಳುವಾಗ್ಲೂ ವಂಕ
ಕೂಡುವಾಗ್ಲೂ ವಂಕ
ಅದರರು ಮಾಲೂ ವಂಕ
ಇತ್ತದ ಅಡವಿ ಅರಣ್ಯದಾಗ
ಅದರ ಹೆಸರೇನಿರಬಹುದು?] [ಮಳೆಹುಳ]
'ಏಕಜ ರಾತೇಮಾ ಮಾಡಿ ಬಂಧಾಯೋ
ಓರೇ ಉಪರ ಏಕೆ ಚಪಟಿ ಧೂಡಭೇನಿ
ರಚವನಸ್ಪತಿರೇ ಮಾಯಿ
ಓರೋ ನಾಮವೀಯ ಕಾಂಯಿ?'[೬೬] [ಗಾಜ]
[ಒಂದೆ ರಾತ್ರಿಯೊಳಗೆ ಮೇಲು ಮನೆ ಕಟ್ಟಿಸಿದ
ಅದರ ಮ್ಯಾಲ ಹಿಡಿ ಮಣ್ಣಿಲ್ಲ

ಇರ್‍ತದ ಅಡಿವಿ ಅರಣ್ಯದಾಗ
ಅದರ ಹೆಸರೇನಿರಬಹುದು?]          [ಅಣಜಿ]
'ಏಕ ಜೀವೇಲಾರ ತೀನ ಜೀವಥ
ಏಕ ಜೀವ ಖಾಣೋ ಖಾದೋತೋ
ತೀನ ಜೀವ ಬಚಚ
ವಾ ಜವ ಕುಣಸೋ ಏೀಯ?']ೕ[೫೯]          [ಮಾತೇಮಾಯೀರ ಜೂ]
[ಒಂದು ಜೀವದ ಹಿಂದೆ ಮೂರು ಜೀವ ಆದವ
ಒಂದು ಜೀವ ತಿಂದ್ರ ಮೂರು ಜೀವ ಬದಕ್ತವ
ಆ ಜೀವ ಯಾವುದಿರಬಹುದು?]          [ತಲ್ಯಾಗಿನ ಹೇನು]
'ಏಕ ಮಾಟಿ ಅಸೋ
ಓರ ಗಾಂಡೇಪರ ಮಸೋ
ಇಂಗ ಡಿಂಗ ಚಾಲ
ಓರ ಗಾಂಡಗುದದಿಹಾಲ'[೬೦]          [ಊಂಟ]
[ಒಬ್ಬ ಮನುಷ್ಯ ಇಂತವನು
ಅವನ ಮುಕುಳಿಯ ಮೇಲೆರಡು ಆಲಿ
ದುಡುದುಡೆಂದು ನಡೆಯುವಾಗ
ಓಲಾಡ್ತಾವದರ ತಿಕ-ಕೊರಳು]          [ಒಂಟೆ]
'ಏಕವೇಸ ಸೆಂಸಪಾಲ
ಸೋತಾ ನೀನ ಸೋಬಾಕತಿ
ಓರ ನಾಮಚ ಕಾಂಯಿ
ಪರಕನ ದೇಕರ ಮಾಯಿ'[೬೧]          [ಮಂಗಾಳೊ]
[ಒಂದು ವಸ್ತು ನೂರ ಭಾಗ
ಸೂರು ಮಕ್ಕಳಿ ನೂರಭಾಗ
ಅದರ ಹೇಸಿರೇರಬಹುದು
ತಿಳಕೊಂಡು ನೀನ್ಹೇಳು]          [ಜೇನುತುಪ್ಪ]
'ಏಕ ನಾರ ತೋ ಆಸಿ ದೀಟೆ
ಬಡ ಭಯಂಕರ
ಜೀಮರೀಕಿ ಕೋಸಾ ಅಂಗಾರ ಬುಖಚ
ಲಾಕುಚಾರ ಹಜಾರ
ಯೇಕೋ ನಾಮಚ ಕಾಂಯಿ

ಪರಕನ ದೇಖೋ ಸಭಾರೇಮಾಯಿ'[೭೨] [ವಿಜಳಿ]
[ದಾರಿಯೊಬ್ಬಳು ಅತಿಭಯಂಕರ
ಬೆಂಕಿಯಿಂದ ಅದರ ಆಹಾರ
ಗೊತ್ತಾಗೊಲ್ಲ ಮೂರವಾರಿಗೂ
ಅವಳ ಹೆಸರೇನಿರಬಹುದು] [ಸಿಡಿಲು]
'ಏಕ ಬಕರಾರ ಚಾರ ಹಡಕಾ
ಬಾರ ನಾಯಕೇನ ದೇಣು
ಊ ಕುಣಸೋ ಬಕರಾವೀಯ?'] [ಕಾಚಮಾ]
[ಒಂದು ಮೇಕೆ (ಕುರಿ)ಗೆ
ಹನ್ನೆರಡು ಚಪ್ಪೆ ಎಲುಬು
ಹನ್ನೆರಡು ಜನನಾಯಕರಿಗೆ ಕೊಡಬೇಕು
ಆ ಮೇಕೆ ಯಾವುದಿರಬಹುದು?] [ಆಮ]
'ಏಕ ಚಿಡಿಯಾ ತೇರಮೇಲಿ ಪಾಜಮಾ
ವೊರಮಾಯಿ ವೀಪೆ ಎಕ್ಕೀಸಹಜಾರ' [ಕಸ ಕಸ್]
[ಒಂದು ಪಕ್ಷಿ ಧರಿಸಿದೆ ಪಾಯಿಜಾಮ
ಅದರಲ್ಲಿ ಅಡಗಿವೆ ಸಾವಿರಾರು] [ಕಸ ಕಸ್]
'ಕಾಳೂ ಮಕ್ಕಲ
ಧೋಳೊ ಧನ್
ವೀಯೆ ವನಸ್ಪತಿರೇ ಮಾಯಿ
ವೂ ವೀಯ ಕಾಂಯಿ?'[೭೧] [ಸೀತಾಫಲ]
[ಕರಿ ಬೀಜ, ಬಿಳಿ ಸಂಪತ್ತು
ಇರಬಹುದು ಅಡವಿ ಅರಣ್ಯದಾಗ
ದೇನಿರಬಹುದು] [ಸೀತಾಫಲ]
'ಝೂಡೇಪರ ಛಪಣ
ಪಕ್ಷಿ ಕಾವ
ತೀನ ಡೋಳಾವಪಣ
ಶಂಕರ ಕಾವ
ಭಗವಾ ಕಪಡಾಛಪಣ
ಗೋಸಾಯಿ ಕಾವ

ಅನಪಾಣಿತಿ ಭರೋಚಪಣ

ಡಗ್ ನವ'[೬]                    [ಬನಾಥೋಲೇರೂ ನಾರಳ]

[ಗಿಡ ಮೇಲಿದೆ; ಆದರೆ ಪಕ್ಷಿಯಲ್ಲ; ಮೂರುಕಣ್ಣವೆ; ಆದರೆ ಮುಕ್ಕಣ್ಣನಲ್ಲ; ಕಾವಿವಸ್ತ್ರವಿದೆ; ಆದರೆ ಗೋಸಾಯಿ ಬಾವಾ ಅಲ್ಲ; ನೀರಿನಿಂದ ತುಂಬಿದೆ ಆದರೆ ಜೀವಿಯಲ್ಲ]

[ನಾರು ಸುಲಿಯದ ತೆಂಗಿನಕಾಯಿ]

'ಏಕೇನ ಬಸಾರ ಮೇಲಿ

ಏಕೇನ ಲಗಾಡ ಮೇಲಿ

ಏಕೇನ ದೇಕನ ಹಾಂಸರಿ'[೬೮]          [ಆರ್ಸಿ, ಟಿಕೂ, ಪ್ರತಿಬಿಂಬ]

[ಒಬ್ಬನನ್ನು ಕೂಡ್ರಿಸಿದ್ದಾಳೆ

ಒಬ್ಬನನ್ನು ಹಚ್ಚಿಕೊಂಡಿದ್ದಾಳೆ

ಒಬ್ಬನನ್ನು ನೋಡಿ ನಗುತ್ತಿದ್ದಾಳೆ]     [ಕನ್ನಡಿ, ಕುಂಕುಮ, ಪ್ರತಿಬಿಂಬ]

'ಪಕಡೆಕತೂ ಮೂಟೀ ಭರಾವಚ

ಬಗಾದೀನೆಕತೂ ಘರ ಭರಾವಚ'[೬೯]     [ಸಾದರಿ]

[ಹಿಡಿದರೆ ಹಿಡಿತುಂಬಿ

ಒಗೆದರೆ ಮನೆತುಂಬಿ]              [ಚಾಪಿ]

ಗೂಳೆಕಾರರಾಗಿ ಸಂಚಾರ ವ್ಯಾಪಾರಿ ವೃತ್ತಿ ಮಾಡುತ್ತಿದ್ದ ಲಂಬಾಣಿಗರು ತಮ್ಮ ಹಾಸಿಗೆಗಾಗಿ ಚಾಪೆಯನ್ನು ಉಪಯೋಗಿಸುತ್ತಿದ್ದರು. ಈಗಲೂ ಬಹು ಜನರು ಅದನ್ನು ಉಪಯೋಗಿಸುತ್ತಿದ್ದರು. ಅವರ ಆರ್ಥಿಕ ಪರಿಸ್ಥಿತಿಯೇ ಅದಕ್ಕೆ ಕಾರಣವಾಗಿದೆ. ಸ್ವತಃ ತಾವೇ ತಯಾರಿಸಿ ತಮ್ಮ ಅನುಕೂಲಕ್ಕೆ ತಕ್ಕಂತೆ ಅವರು ಅದನ್ನು ಉಪಯೋಗಿಸಿಕೊಳ್ಳುತ್ತಾರೆ. ಇತ್ತೀಚೆಗೆ ಈಚಲು ಮರಗಳೇ ಕಾಣೆಯಾಗಿರುವುದು, ಅವರು ಚಾಪೆ ತಯಾರಿಸುವುದನ್ನು ಬಿಟ್ಟುಕೊಟ್ಟಿರುವುದಕ್ಕೆ ಕಾರಣವಾಗಿದೆ.

'ಆವಜಕೂ ಪಾಣಿ ಹೋಳ ವೇಜಾನು

ಮಾರ ದಣೇರ್ ಬಾಳವಿ ಬಳಜಾನು

ಮಾರ ಬೇಟಾರ ವಾಯಾ ವೇಜಾನು'[೭೦]     [ಹಾಂಡಿ]

[ಬರಬಹುದಾದ ಮಳೆ ದೂರ ಸರಿಯಬೇಕು

ನನ್ನ ಗಂಡನ ಸಂಪತ್ತೆಲ್ಲ ಭಸ್ಮವಾಗಬೇಕು

ನನ್ನ ಮಕ್ಕಳ ಮದುವೆ ನಡೆಯಬೇಕು]       [ಮಡಕೆ]

ಸಾಮಾನ್ಯವಾಗಿ ಲಂಬಾಣಿಗರಲ್ಲಿ ಹೈನುಗಾರಿಕೆಯ ವ್ಯವಸಾಯವಿರುವುದರಿಂದ ಮಣ್ಣಿನ ಮಡಿಕೆಗಳ ಬಳಕೆ ಹೆಚ್ಚು. ಇಂದಿಗೂ ಅವರು ಮಣ್ಣಿನ ಪಾತ್ರೆಗಳನ್ನೇ ಹೆಚ್ಚಿನ ರೀತಿಯಲ್ಲಿ ಉಪಯೋಗಿಸುತ್ತಾರೆ. ಆ ಪಾತ್ರೆಗಳಲ್ಲಿ

ತಯಾರಿಸಲ್ಪಟ್ಟ ಅಡುಗೆಯು ರುಚಿಯಾಗಿರುತ್ತದೆಂಬ ನಂಬಿಕೆ ಹಾಗೂ ಅವರ ದುರ್ಬಲವಾದ ಆರ್ಥಿಕ ಸ್ಥಿತಿಗಳೇ ಇದಕ್ಕೆ ಕಾರಣೀಭೂತಗಳಾಗಿವೆ.

'ಅಡಿತಿನ ಮ ಖಡಿಸಿ
ನವುಲಾಕ ಮೋತಿಸಿ ಖಡಿತಿ
ಹರಾ ದುಶಾಲ ಒಡಕರ
ರಾಜಾ ಚಂದು ಲಾಲಕೀ
ಬಗಿಚೇಮ ಖಡಿತಿ' [ಮಕ್ಕ]
[ಹಸಿರು ಶಾಲನ್ನು ಹೊದ್ದುಕೊಂಡು
ಅದೆಷ್ಟೋ ರತ್ನಗಳನ್ನು ಹಚ್ಚಿಕೊಂಡು
ರಾಜಾ ಚಂದುಲಾಲನ ತೋಟದಲ್ಲಿ ನಿಂತಿದ್ದೆ] [ಗೋವಿನ ಜೋಳ]
'ಭಡೀರೆ ಭಡಿ ಲಾಲ ಭಡಿ
ಬೇಜಾರೇಮರಡಿ ಪಡಿ' [ಮರಚ್ಯ]
[ಕೆಂಪು ಶಲಾಕೆ ಬಜಾರದಲ್ಲಿ ಬಿದ್ದಿದೆ] [ಮೆಣಸಿನಕಾಯಿ]
'ಕಾಳೇ ಖೇತೇಮ
ಸೋನೇರ ಖೀಲ್ಯಾ' [ಗಜಾರ್]
[ಕರಿಯ ಹೊಲದಲ್ಲಿ
ಬಂಗಾರದ ಖೀಲ್ಯಾ] [ಗಜ್ಜರಿ]

### ೯.೧.೬ ನುಡಿಗಟ್ಟುಗಳು

ನುಡಿಗಟ್ಟು ಎಂಬ ಪದಕ್ಕೆ ಒಕ್ಕಣೆ, ಮಾತಿನ ಜೋಡಣೆ, ನುಡಿಕಟ್ಟು, ನುಡಿವಳಿ, ಪಡೆಗುಡಿ ಇತ್ಯಾದಿ ಅರ್ಥಗಳಿವೆ. ಭಾಷೆಯು 'ಮಾನಸಿಕ ಅಂತರಾಳವನ್ನು ಅಭಿವ್ಯಕ್ತಪಡಿಸುವ ಒಂದು ಮಾಧ್ಯಮವಾಗಿದೆ. ನಾವು ಬಳಸುವ ಪ್ರತಿಯೊಂದು ಶಬ್ದಕ್ಕೂ ಒಂದು ನಿಶ್ಚಿತಾರ್ಥವಿರುತ್ತದೇನೂ ನಿಜ. ಆದರೆ ಕೆಲವು ಸಮಯಗಳಲ್ಲಿ ವಿಶೇಷ ಅರ್ಥವನ್ನು ಪಡೆದುಕೊಳ್ಳುತ್ತದೆ. ನಮ್ಮ ದೈನಂದಿನ ವ್ಯವಹಾರವನ್ನು ಸುಗಮಗೊಳಿಸಲು ಅನೇಕ ವಿಶಿಷ್ಟ ಪದಗಳನ್ನು ಹಾಗೂ ಶಬ್ದ ಸಮುಚ್ಚಯಗಳನ್ನು ಬಳಸುತ್ತೇವೆ. ಇವುಗಳನ್ನು ಸಂದರ್ಭಕ್ಕೆ ತಕ್ಕಂತೆ ಹಿತಮಿತವಾಗಿ, ಹದವರಿತು ಬಳಸಿದಾಗ ಅದಕ್ಕೆ ಒಂದು ಅರ್ಥ ಬರುತ್ತದೆ. ನಮ್ಮ ಜನಪದರು ತಾವು ಬಳಸುವ ಭಾಷೆಗೆ ಕಸುವು ಬರಲು ಅನೇಕ ಬಗೆಯ ವಿಶೇಷಣ ದೃಷ್ಟಾಂತ ಪಡೆನುಡಿ, ಗಾದೆಮಾತು, ಒಗಟುಗಳನ್ನು ಉಪಯೋಗಿಸಿಕೊಂಡು ಬಂದಿದ್ದಾರೆ. ಅನವಶ್ಯಕ ಶಬ್ದಗಳ ಬಳಕೆಯು ಭಾಷೆಯನ್ನು ನಿಸ್ಸತ್ವಗೊಳಿಸುತ್ತದೆ. ಹೀಗಾಗಿ ಸಣ್ಣ ಪದಗಳ ಬಳಕೆಯ ಮೂಲಕ ದೊಡ್ಡ ಅರ್ಥವನ್ನು ಹುದುಗಿಸಿ ಹೇಳುವುದು ವ್ಯಕ್ತಿಯ ಜಾಣ್ಮೆಯನ್ನು ತೋರಿಸಿಕೊಡುತ್ತದೆ.

ಲಂಬಾಣಿ ಸಮುದಾಯದ ಭಾಷೆಯು ಅದರ ಜನಪದ ಸಂಪತ್ತಿನಿಂದಾಗಿ ಅದೊಂದು ಜೀವಂತ ಭಾಷೆಯಾಗಿದ್ದು ಲಿಪಿಕ ಭಾಷೆಯಲ್ಲಿರುವ ಎಲ್ಲಾ ಬಗೆಯ ಜನಪದ ಪ್ರಕಾರಗಳನ್ನು ಈ ಭಾಷೆಯಲ್ಲಿ ಗುರುತಿಸಲಾಗಿದೆ. ಭಾಷೆಯನ್ನು ಅತ್ಯಂತ ಚತುರತೆಯಿಂದ ಶಕ್ತಿಶಾಲಿಯಾಗಿ ಬಳಸುವ ಲಂಬಾಣಿಗರು ಸುಖ-ಸಂತೋಷ, ನೋವು-ನಲಿವು ಇನ್ನೂ ಮುಂತಾದವುಗಳು ಜನಪದರು ಸಂಭಾಷಿಸುವಾಗ ಮಧ್ಯದಲ್ಲಿ ಅರ್ಥವತ್ತಾಗಿ ಹಲವಾರು ಪದಗಳನ್ನು ಜೋಡಿಸಿ ವಾಕ್ಯಗಳನ್ನು ರಚಿಸುತ್ತಾರೆ. ಅವರು ಬಳಸುವ ಕೆಲವು ನುಡಿಗಟ್ಟುಗಳನ್ನು ಕಾಣಬಹುದಾಗಿದೆ.

೧. ಛಾತೀಪರ ಹುಬರ್: ಎದೆಯ ಮೇಲೆ ನಿಲ್ಲು ಅತಿಮಸರಪಡಿಸು, ಮೇಲ್ವಿಚಾರಣೆಯಿಂದ ಕೆಲಸಮಾಡಿಸು.

೨. ಅಂಗಾರ್ ಲಗಾಡೆವಾಳ್: ಬೆಂಕಿ ಹಚ್ಚುವವರು ವೈಶಮ್ಯ ಹುಟ್ಟಿಸೋರು.

೩. ಅಂಕಿಮಾ ಧೂಡ್ ಘಾಲೆವಾಳ್: ಕಣ್ಣಿಗೆ ಮಣ್ಣೆರಚುವವರು, ಮೋಸ ಮಾಡುವವರು.

೪. ಹತೇಳಿ ಪರಪಾಡ: ಅಂಗೈ ಮೇಲೆ ಎತ್ತು, ಅತಿ ಮುದ್ದು ಮಾಡು. ಅತಿ ಸಲಿಗೆ ಕೊಡು.

೫. ದೀ ಜೀಬೆವಾಳ್: ಎರಡು ನಾಲಿಗೆ ಉಳ್ಳವ, ನುಡಿದಂತೆ ನಡೆಯದವ.

೬. ನಾಕೆನ್ ಜೀಬ್‌ಲಗಾಡ್: ಮೂಗಿಗೆ ನಾಲಿಗೆ ಹಚ್ಚು, ಸತ್ಯವನ್ನು ಹೇಳು.

೭. ಚೂಲೆಂ ನೂಣ್: ಒಲೆಯಲ್ಲಿ ಉಪ್ಪು ಸುರಿ, ವಿನಾಕಾರಣ ತೊಂದರೆಯನ್ನು ಕೊಡುವುದು.

೮. ಮಾತೇಪರ್ ಲಿಂಬು ಕಾಟ್: ತಲೆಯ ಮೇಲೆ ನಿಂಬೆಹಣ್ಣನ್ನು ಕೊಯ್ಯುವುದು: ಎದುರಾಳಿಯನ್ನು ಮೀರಿಸುವ ಜಾಣ್ಮೆ ಶಕ್ತಿ ಇದ್ದು ನಿಪುಣತೆಯನ್ನು ಹೇಳುವ ಸಂದರ್ಭದಲ್ಲಿ ಈ ನುಡಿಗಟ್ಟನ್ನು ಬಳಸುತ್ತಾರೆ.

೯. ಹಾತೇಮ ಫುಟ್ಲಿ ಹಾಂಡಿ: ಕೈಯಲ್ಲಿ ಹೊಡದ ಮಡಿಕೆ. ಈ ನುಡಿಗಟ್ಟು ತೀರ ನಿರ್ಗತಿಕ ಹತಾಶ ಪರಿಸ್ಥಿತಿಯನ್ನು ಪ್ರತಿಬಿಂಬಿಸುತ್ತದೆ.

೧೦. ಗಾಮೇರ್ ಗೇತ್ರ: ಗ್ರಾಮಗಳಲ್ಲಿ ರೂಢಿಯಾದವನು: ಲಂಬಾಣಿ ಸಮುದಾಯವಾದ ತಾಂಡಾಗಳಲ್ಲಿ ಬೆಳೆಯದೆ ಇತರೆ ಗ್ರಾಮಗಳಲ್ಲಿ ಬೆಳೆದು ಅಲ್ಲಿಯ ಸಂಸ್ಕೃತಿಯನ್ನು ರೂಢಿಸಿಕೊಂಡಾಗ ಈ ಮಾತನ್ನು ಬಳಸುತ್ತಾರೆ.

೧೧. ನೂಣೆಲಗಾಡೆವಾಳು: ಬೆಣ್ಣೆ ಹಚ್ಚು: ಉಪಾಯದಿಂದ ಕೆಲಸ ಮಾಡಿಕೊಳ್ಳು.

೧೨. ಚೊಲೆಮ್ ಪಾಣಿ: ಒಲೆಯಲ್ಲಿ ನೀರು ಸುರಿ: ಹಿಂಸೆ ಕೊಡುವುದು, ತೊಂದರೆಯನ್ನು ಮಾಡುವುದು.

೧೩. ಭಣ್ ಬಣ್ ಮಾಕ್ಕಿ ಗೋಳಾ ವಜಂವ್: ಭಣ್ ಭಣ್ ನೊಣಗಳು ಕೂಡಿಕೊಂಡಂತೆ ಜೇನು ನೊಣಗಳು ರಾಣಿ ನೋಡಿ ಕುಳಿತ ಜಾಗದಲ್ಲಿ ತಕ್ಷಣವೇ ಕುಳಿತುಕೊಳ್ಳುವಂತೆ ಯಾವುದೇ ವಿಷಯಕ್ಕೆ ತಕ್ಷಣ ಜನ ಗುಂಪುಗೂಡುವಾಗ ಬಳಸುವ ನುಡಿಗಟ್ಟು.

೧೪. ಚೂಲೆರ್ ತೀನಜ್ ಮಂಗಾಳ: ಒಲೆಗೆ ಮೂರು ಕಲ್ಲುಗಳನ್ನು ಬಳಸಿ ಒಲೆಯನ್ನು ಹೂಡುತ್ತಾರೆ. ಮೂರಕ್ಕಿಂತ ಅಧಿಕವಾಗಲಿ ಇಲ್ಲವೆ ಕಡಿಮೆಯಾಗಲಿ ಬಳಸಲು ಸಾಧ್ಯವಿಲ್ಲ. ಬದಲಾದ ಸ್ಥಿತಿಯನ್ನು ಹೇಳುವಾಗ ಈ ಮಾತನ್ನು ಬಳಸುತ್ತಾರೆ.

೧೫. ಕೋಲ್ನಿಮಾ ಕರಲೇನ್ ಕುಚ್ಚಿಮೆ ಖೊ: ಮಡಿಕೆಯಲ್ಲಿ ಬೇಯಿಸಿಕೊಂಡು ಚಿಕ್ಕತಟ್ಟೆಯಲ್ಲಿ ಊಣ್ಣುವುದು: ವ್ಯಕ್ತಿಯ ಅತ್ಯಂತ ಸಂಕುಚಿತ ಮನೋಭಾವವನ್ನು ಕುರಿತು ಹೇಳುವುದು ಚಿಕ್ಕ ಕುಟುಂಬದ ಬದುಕನ್ನು ಸಹ ಈ ಮಾತು ವಿಡಂಭಿಸುತ್ತದೆ.

೧೬. ನಾಕೇಪರ್ ಮಾಕ್ಕಿ ಬೆಸೆಸಾರು ಛೇನಿ: ಮೂಗಿನ ಮೇಲೆ ನೊಣ ಕುಳಿತುಕೊಳ್ಳುವಂತಿಲ್ಲ, ಮುಂಗೋಪಿ ಸ್ವಭಾವವನ್ನು ಈ ನುಡಿಗಟ್ಟು ಸೂಚಿಸುತ್ತದೆ.

೧೭. ವಗಾಡ: ವ್ಯಭಿಚಾರಿ ಮರ್ಯಾದೆ ಇಲ್ಲದವರು.

೧೮. ಭಾಟಾನ್ ಚಾಬೇವಾಳ: ಕಲ್ಲನ್ನು ಸುರಿಯುವವರು, ಶಕ್ತಿಶಾಲಿಗಳು.

೧೯. ಚೋಟಿ ಪಕಡ್: ಜುಟ್ಟು ಹಿಡಿ, ಹಿಡಿತಕ್ಕೆ ಸಿಗು.

ಹೀಗೆ ಲಂಬಾಣಿ ಸಮುದಾಯದ ನುಡಿಗಟ್ಟುಗಳು ರೂಢಿಯಲ್ಲಿದ್ದು ಇದರಲ್ಲಿ ವಿಶೇಷವಾದ ಅರ್ಥ ಅಡಗಿದ್ದು ಕಂಡು ಬರುತ್ತಾರೆ. ಮೌಖಿಕ ಜನಪದದಲ್ಲಿ ಉಳಿದು ಬಂದಿರುವ ಸಮಗ್ರ ಸಾಹಿತ್ಯ ಇನ್ನೂ ಸಮಗ್ರವಾಗಿ ಸಂಗ್ರಹವಾಗಬೇಕಾಗಿದ್ದು ಅದರ ವಿಜ್ಞಾನಗಳ ಸಂಬಂಧಿಸಿದ ಅಧ್ಯಯನ ಅಗತ್ಯವಾಗಿದೆ.

**೬.೩. ಲಂಬಾಣಿ ಜನಪದ ಪ್ರದರ್ಶನ ಕಲೆಗಳು**

ಜನಪದ ಪ್ರದರ್ಶನ ಕಲೆಗಳು ಮಾನವನಲ್ಲಿ ಅಂತರ್ಗತವಾಗಿ ಅಡಗಿರುವ ಪ್ರತಿಭೆಯ ಅಭಿವ್ಯಕ್ತಿಗಳು. ಇವುಗಳು ವೈಯಕ್ತಿಕ ಮತ್ತು ಸಾಂಸ್ಕೃತಿಕ ಜೀವನದಲ್ಲಿ ಹುಟ್ಟಿ ಬೆಳೆದಂಥವು. ಹೀಗಾಗಿ ಮಾನವನ ಸಾಂಸ್ಕೃತಿಕ ಚರಿತ್ರೆಗೂ, ಜನಪದ ಪ್ರದರ್ಶನ ಕಲೆಗಳಿಗೂ ಅವಿನಾಭಾವ ಸಂಬಂಧವಿದೆ. ವ್ಯಕ್ತಿಗತವಾಗಿ ಮತ್ತು ವಿವಿಧ ಸಾಂಸ್ಕೃತಿಕ ಸಂದರ್ಭಗಳಲ್ಲಿ ಇವು ಪ್ರದರ್ಶನಕ್ಕೊಳಗಾಗುತ್ತವೆ. ಅಂತಹ ಕಲೆಗಳೆಂದರೆ ಸ್ತ್ರೀ, ಪುರುಷ, ಕುಣಿತಗಳು, ತಮಟೆ ವಾದ್ಯ, ಕೋಲಾಟ, ಬಯಲಾಟ, ವೀರಗಾಸೆ, ಇತ್ಯಾದಿ ಕೆಲವೊಂದು ಕಲೆಗಳಲ್ಲಿ ನಿರ್ದಿಷ್ಟವಾದ ಜಾತಿಗಳೇ ಪ್ರದರ್ಶನ ಮಾಡುವುದು ಕಂಡುಬಂದರೆ ಕೋಲಾಟ, ಬಯಲಾಟ ಮೋಡಿಯಂಥ ನಮ್ಮ ಬಹಳಷ್ಟು ಕಲೆಗಳಿಗೆ ಜಾತಿಯ ಮಿತಿಗಳೇ ಇಲ್ಲವೆಂಬುದನ್ನು ಗಮನಿಸಬಹುದು.[೮೮] ಈ ರೀತಿಯಾಗಿ ಕೆಲವು ಜನಪದ ಕಲೆಗಳು ಅನೇಕ ಅಂಶಗಳನ್ನು ತನ್ನ ಆಂತರ್ಯದಲ್ಲಿ ಅಡಗಿಸಿಕೊಂಡಿವೆ. ಒಂದು ನಾಡಿನ, ಜನಾಂಗ, ವರ್ಗದ ಬೆಳವಣಿಗೆಯನ್ನು ಅರಿಯಬೇಕಾದರೆ ಅವರ ಪರಂಪರೆ ಹಾಗೂ ಸಂಪ್ರದಾಯಗಳನ್ನು ಅರಿಯಬೇಕಾಗುತ್ತದೆ. ಮಾನವನ ಪ್ರತಿಹಂತದಲ್ಲಿ ಅವನ ಸಾಂಸ್ಕೃತಿಕ ಲೋಕದ ಕಲೆ ಪ್ರೇರಣೆಯ ವಸ್ತುವಾಗಿರುತ್ತದೆ.[೮೯] ಲಂಬಾಣಿ ಸಮುದಾಯದಲ್ಲಿ ಅಡಗಿರುವ ಜನಪದ ಕಲೆಗಳು ಸಾಂಸ್ಕೃತಿಕ ಲೋಕವನ್ನು ಶ್ರೀಮಂತಗೊಳಿಸಲು ಸಹಕಾರಿಯಾಗಿವೆ. ಜನಪದ ಕಲೆಗಳಲ್ಲಿ ಕೆಲವೊಂದು ಕೀಳು ಕಲೆಗಳೆಂದು ಭಾವಿಸಿದ್ದರಿಂದ ಅವುಗಳು ಕೇವಲ ಕೆಳಜಾತಿಗಳಲ್ಲಿ ಮಾತ್ರವೇ ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆಗಳಲ್ಲಿ ನೆಲೆಸಿರುವ ಲಂಬಾಣಿಗರಲ್ಲಿ ಅಡಗಿರುವ ಜನಪದ ಕಲೆಗಳನ್ನು ಕುರಿತು ಚರ್ಚಿಸಲು ಯತ್ನಿಸಲಾಗಿದೆ.

೯.೨.೧. ನೃತ್ಯ (ಕುಣಿತ)

ದೈವಾರಾಧನೆ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರುವ ಕುಣಿತ ಕಲೆಗೆ ಚರಿತ್ರೆ ಇದೆ. "ಮನುಷ್ಯ ತನ್ನಲ್ಲಿ ಅಡಕಗೊಂಡಿರುವ ಅವ್ಯಕ್ತ ಭಾವನೆಗಳನ್ನು, ವಿಚಾರಗಳನ್ನು ಸ್ಪಷ್ಟಪಡಿಸುವುದಕ್ಕಾಗಿ ಈ ದೈಹಿಕ ಕ್ರಿಯೆಯನ್ನು (ನರ್ತನಾಲಯಬದ್ಧವಾದ ರೀತಿಯಲ್ಲಿ ಹೊರಚೆಲ್ಲಿ, ತಾಳ ಗತ್ತುಗಳೊಂದಿಗೆ ಮೈಮಣಿಸುವ ಕಲೆಯೇ ನೃತ್ಯಕಲೆಯಾಗಿದೆ."[೮] ಸಂವೇದನೆಗಳಿಗೂ, ಭಾವನೆಗಳಿಗೂ ಅನುಗುಣವಾಗಿ ಉಂಟಾಗುವ ದೇಹದ ಲಯಬದ್ಧವಾದ ಚಲನೆಯೇ ಈ ನೃತ್ಯದ ಮೂಲವಾಗಿದೆ. ಇದು ಮನುಷ್ಯನಲ್ಲಿ ಮಾತ್ರವಲ್ಲ ಪ್ರಾಣಿಗಳಲ್ಲಿಯೂ ಕಂಡು ಬರುವ ಸಹಜ ಪ್ರವೃತ್ತಿ. ಕಲೆಗಳಲ್ಲಿಯೇ ಇದಕ್ಕೆ ಅತ್ಯುನ್ನತವಾದ ಸ್ಥಾನವಿದೆ. ಅಂತೆಯೇ ಹ್ಯಾವಲಾಕ್ ವಿಲ್ಲಿಸ್ ಎಂಬ ವಿದ್ವಾಂಸರು ಹೇಳುವಂತೆ ಕಲೆಗಳಲ್ಲೆಲ್ಲ ನೃತ್ಯಕಲೆಯು ಅತ್ಯುನ್ನತವಾದ, ಅತೀ ಪ್ರೌಢವಾದ, ಅಂತಃಕರಣವನ್ನು ಪ್ರಚೋದಿಸುವ ಅತಿ ಸುಂದರವಾದ ಕಲೆ ಇದೆ. ಏಕೆಂದರೆ, ಅದು ಜೀವನ ಬರಿಯ ಪ್ರತಿಬಿಂಬ ಅಥವಾ ಆಕರ್ಷಣವಲ್ಲ ಅದೇ ಜೀವನವಾಗಿದೆ."[೯]

'ಲಂಬಾಣಿ ಸ್ತ್ರೀಯರ ಕಣಿತದ ರೀತಿ ಬಹು ಆಕರ್ಷಣೀಯವಾಗಿರುತ್ತದೆ. ಮೈಯಿಂದ ಬೆವರು ಸುರಿಯುವವರೆಗೂ ಈ ಜನ ಹಾಡುತ್ತಾರೆ, ಕುಣಿಯುತ್ತಾರೆ. ಸ್ತ್ರೀಯರ ಕುಣಿತಗಳಲ್ಲಿ ಅನೇಕ ವಿಧಿ-ವಿಧಾನಗಳಿವೆ. ವೃತ್ತಾಕಾರವಾಗಿ ನಿಂತು ವಿವಿಧ ಭಂಗಿಗಳಲ್ಲಿ ಕುಣಿಯುತ್ತಾರೆ. ಕೆಲವೊಮ್ಮೆ ಕುಣಿಯುವಾಗ ತಾವೇ ಲಯಬದ್ಧವಾಗಿ ಹಾಡಿಕೊಳ್ಳುತ್ತಾರೆ. ಯಾವ ಹಿಮ್ಮೇಳದ ಅವಶ್ಯಕತೆಯೂ ಇಲ್ಲಿಲ್ಲ. ಸಾಮಾನ್ಯವಾಗಿ ಪ್ರಾರ್ಥನೆಯೊಂದಿಗೆ ಇವರ ಸಾಮೂಹಿಕ ಕುಣಿತ ಆರಂಭಗೊಳ್ಳುತ್ತದೆ. ಅನಂತರ ಬೇರೆ ಬೇರೆ ಪೌರಾಣಿಕಾಂಶಗಳೊಂದಿಗೆ ದೇವಾದಿ-ದೇವತೆಗಳನ್ನು ಕುರಿತು ಹಾಡುತ್ತಾ ಕುಣಿಯುತ್ತಾರೆ. ಕುಣಿತದಲ್ಲಿ ಕೈಕಾಲು, ಸೊಂಟಗಳಿಗೆ ಹೆಚ್ಚಿನ ಶ್ರಮವಿರುತ್ತದೆ. ಕೆಲವೊಮ್ಮೆ ಕುಣಿತಕ್ಕೆ ಹಿಮ್ಮೇಳವಾಗಿ ಹಲಗೆ, ನಗಾರಿ ಮೊದಲಾದ ವಾದ್ಯ ಸಾಮಾಗ್ರಿಗಳನ್ನು ಉಪಯೋಸುತ್ತಾರೆ.'[೧೦]

ಕುಣಿತ, ಲಂಬಾಣಿಗರಲ್ಲಿ ಹುಟ್ಟಿನೊಂದಿಗೆ ಬಂದಿದ್ದು. ಅವರಿಗೆ ಯಾವುದೇ ನಾಟ್ಯ ಶಾಲೆಗಳಿಲ್ಲ; ತರಬೇತಿ ಅಗತ್ಯವಿಲ್ಲ. ಅವರಿಗೆ ಕಲೆ ಉಸಿರಾಗಿದೆ. ವಿವಾಹ, ಹಬ್ಬ ಹರಿದಿನ ಮತ್ತು ಇತರೆ ಸಂದರ್ಭದಲ್ಲಿ ನರ್ತಿಸುತ್ತಾರೆ.

"ಲಂಬಾಣಿ ಮಹಿಳೆಯರ ಕುಣಿತಗಳನ್ನು ಪ್ರಮುಖವಾಗಿ ಈ ರೀತಿಯಲ್ಲಿ ಗುರ್ತಿಸಬಹುದು."[೧೧] ೧. ಕೋಲಾಟದ ಕುಣಿತ, ೨. ಮಳೆರಾಯನ ಕುಣಿತ, ೩. ಹಬ್ಬ-ವಿವಾಹ ಸಂದರ್ಭದ ಕುಣಿತ, ೪. ತೀಜ್ ಕುಣಿತ, ೫. ತಮಟೆ ಕುಣಿತ. ವಿಶೇಷವಾಗಿ ಹರಿದಿನಗಳಲ್ಲಿ ವಿವಾಹ, ಹಬ್ಬಗಳಲ್ಲಿ ಈ ಗೀತೆ, ಕುಣಿತಗಳ ಸುರಿಮಳೆಯನ್ನೇ ಸುರಿಸಿ ತಾವು ಆನಂದಿಸಿ ನೋಡುಗರನ್ನು ಆನಂದದಲ್ಲಿ ತೇಲಿಸುತ್ತಾರೆ.

೧. ಕೋಲಾಟದ ಕುಣಿತ

ಜಾನಪದ ಕಲೆಗಳಲ್ಲಿ ಕೋಲಾಟವು ಒಂದು. ಇಂದಿಗೂ ಕೋಲಾಟ ಮಾಡುವುದನ್ನು ನೋಡಬೇಕೆಂದರೆ ಗ್ರಾಮೀಣ ಪ್ರದೇಶಗಳಿಗೆ ಹೋಗಬೇಕಾಗುತ್ತದೆ. ಇದೊಂದು ಸಾರ್ವತ್ರಿಕ ಕಲೆಯಾಗಿದ್ದು ಎಲ್ಲಾ ಜಾತಿಗಳಲ್ಲಿಯೂ (ಶೂದ್ರ ಹಾಗೂ ಅಸ್ಪೃಶ್ಯ) ಕೋಲಾಟ ಮಾಡುವವರನ್ನು ಕಾಣಬಹುದು. ಈ ಕೋಲಾಟವನ್ನು ರೈತರು ಹಾಗೂ

ಶ್ರಮಿಕರು ತಮ್ಮ ಬಿಡುವಿನ ವೇಳೆಯಲ್ಲಿರುತ್ತಾರೆ. ಬಳ್ಳಾರಿ ಜಿಲ್ಲೆಯ ಲಂಬಾಣಿ ಸ್ತ್ರೀಯರ ಕೋಲಾಟವು ಪ್ರಸಿದ್ಧವಾಗಿದೆ. ಸಾಮಾನ್ಯವಾಗಿ ಹತ್ತು-ಹನ್ನೆರಡು ಜನ ಹೆಣ್ಣು ಮಕ್ಕಳು ವೃತ್ತಾಕಾರವಾಗಿ ನಿಂತುಕೊಂಡು ಸುಮಾರು ಒಂದು ಮೊಳ ಉದ್ದದ ಎರಡು ಕೋಲುಗಳನ್ನು ತಮ್ಮ ಕೈಯಲ್ಲಿ ಹಿಡಿದುಕೊಂಡು ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಕೋಲಾಟ ಆಡುತ್ತಿದ್ದರೆ ನೋಡಲು ಆಕರ್ಷಕವಾಗಿರುತ್ತದೆ. ಇದರೊಂದಿಗೆ ಕೋಲಾಟ ಪದಗಳು ಇರಲೇಬೇಕು. ಅವಿಲ್ಲದೇ ಹೋದರೆ ಕೋಲಾಟ ಆಡಲಾಗದು, ಈ ಹಾಡುಗಳನ್ನು ಹೇಳುವವರು ಪ್ರತ್ಯೇಕವಾಗಿ ಇಲ್ಲವೇ ಕೋಲಾಟ ಮಾಡುವವರಲ್ಲಿ ಒಬ್ಬರಾಗಿರುತ್ತಾರೆ. ಅವರು ಹಾಡುವಾಗ ಕೋಲಾಟ ಆಡುವರು ಅವರೊಂದಿಗೆ (ಕೊರಸ್) ಹಾಡುತ್ತಾರೆ. ಹಿಂದೆ ಹೆಚ್ಚಾಗಿ ಕಂಡುಬರುತ್ತಿದ್ದ ಈ ಕಲೆಯು ಇಂದು ಕೆಲವೊಂದು ಸಾಂಸ್ಕೃತಿಕ ಚಟುವಟಿಕೆಗಳ ಸಂದರ್ಭಗಳಿಗಷ್ಟೇ ಸೀಮಿತಗೊಂಡಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಲಂಬಾಣಿ ಸಮುದಾಯದ ಚಿಂಗನಾಯ್ಕ ಕತೆ ಹಾಡುವಲ್ಲಿ ಕೋಲು ಹಾಕುವಲ್ಲಿ ಪ್ರಾವಿಣ್ಯತೆ ಪಡೆದಿದ್ದಾರೆ.[೨೯] ಎಂಬ ಅಂಶವು ಗ್ರಾಮೀಣ ಪ್ರದೇಶದಲ್ಲಿ ಲಂಬಾಣಿ ಜನಾಂಗವು ಕೋಲಾಟ ಮಾಡುವುದನ್ನು ನೋಡಿದರೆ ಖಚಿತವಾಗಿ ತಿಳಿಯುತ್ತದೆ. ಕೋಲಾಟ ಮಾಡುವ ಕಲಾವಿದರು ಈ ಜಿಲ್ಲೆಯ ಹೂವಿನಹಡಗಲಿ ತಾಲೂಕಿನ ಕುಮಾರಹಳ್ಳಿ ತಾಂಡದಲ್ಲಿ ಖೇಮಿಬಾಯಿ ಮತ್ತು ಸಂಗಡಿಗರು, ದಾಸರಹಳ್ಳಿ ತಾಂಡದ ರಾಜುನಾಯ್ಕ ಮತ್ತು ಸಂಗಡಿಗರು, ಚಿಕ್ಕಜೋಗಿಹಳ್ಳಿ ತಾಂಡದ ಚಿಂಗನಾಯ್ಕ ಮತ್ತು ಸಂಗಡಿಗರು, ಆನೇಕಲ್ಲು ತಾಂಡದ ರೂಪ್ಲನಾಯ್ಕ ಮತ್ತು ಸಂಗಡಿಗರು ಹೆಸರುವಾಸಿಯಾಗಿದ್ದಾರೆ. ಕೋಲಾಟ ಪದಗಳನ್ನು ಹಾಡುವ ಕೂಡ್ಲಿಗಿ ತಾಲೂಕಿನ ಚಿಕ್ಕಜೋಗಿಹಳ್ಳಿ ತಾಂಡದಲ್ಲಿ ಥಾವರ್ಯಾನಾಯ್ಕರು ೧೯೯೬ರಲ್ಲಿ ಡೆಲ್ಲಿಯಲ್ಲಿ ನಡೆದ ಕೋಲಾಟದ ಪ್ರದರ್ಶನಲ್ಲಿ ರಾಷ್ಟ್ರ ಪ್ರಶಸ್ತಿಯನ್ನು ಪಡೆದಿರುವುದು ಕಂಡುಬರುತ್ತದೆ. ಕೋಲಾಟ ಆಡುವುದು ಜಿಲ್ಲೆಯ ಇತರೆ ಭಾಗದಲ್ಲಿಯೂ ಕಂಡುಬರುತ್ತದೆ. ಹಗರಿಬೊಮ್ಮನಹಳ್ಳಿ ತಾಲೂಕಿನ ಕೋಗಳಿ ತಾಂಡ, ಹಂಪದೇವನಹಳ್ಳಿ ತಾಂಡ, ಅನೇಕಲ್ಲು ತಾಂಡ, ರಾರಾಳ್‌ತಾಂಡ, ಸಂಡೂರಿನ ಸುಶೀಲ ನಗರ ತಾಂಡ. ಹೊಸಪೇಟೆ ತಾಲೂಕಿನ ಮರಿಯಮ್ಮಹಳ್ಳಿ ತಾಂಡ, ಕೆರೆತಾಂಡ, ಸೀತಾರಾಮ ತಾಂಡ, ಮುಂತಾದ ಕಡೆ ಕೋಲಾಟ ಆಡುವ ಕಲಾವಿದರು ಕಂಡುಬಂದಿದ್ದು ಇಂದು ಈ ಕಲೆ ಅವಸಾನದ ಅಂಚಿಗೆ ಸಾಗುತ್ತಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಹಂಪಿಯ ಸುತ್ತ ಮುತ್ತಲಿನ ಪ್ರದೇಶಗಳಲ್ಲಿ ಕೋಲಾಟ ಎಲ್ಲಾ ಜಾತಿಯ ಜನರಲ್ಲಿ ಕಂಡು ಬರುವ ಒಂದು ಸಾರ್ವತ್ರಿಕ ಕಲೆ.[೩೦] ಕೂಡ್ಲಿಗಿ ತಾಲ್ಲೂಕಿನ ಪೂಜಾರಹಳ್ಳಿ ತಾಂಡದಲ್ಲಿ ಎರಡು ಕೋಲಾಟದ ತಂಡ ಇರುವುದು ತಿಳಿದು ಬಂದಿದೆ.

**೨. ಮಳೆರಾಯನ ಕುಣಿತ**

ಲಂಬಾಣಿಗರು ಮಳೆ ಬಾರದೇ ಹೋದಾಗ, ವರುಣ ದೇವರನ್ನು ಕುರಿತು ಸ್ತುತಿಪರವಾದ ಗೀತೆಯನ್ನು ಗಾನ ಮಾಡುತ್ತಾ ಸುತ್ತಿಕಟ್ಟಿ ನೃತ್ಯ ಮಾಡುತ್ತಾರೆ. ಬಲವಾದ ನಂಬಿಕೆ ಈ ಸಮುದಾಯದಲ್ಲಿದೆ. ''ಕಾಡು ಜನಾಂಗದ ಲಂಬಾಣಿಗಳು ಈ ಹಾಡು, ಕುಣಿತವನ್ನು ತಮ್ಮ ಮುತ್ತಜ್ಜರಿಂದ ಕಲಿತು ಈಗಲೂ ಅದನ್ನು ಪಾಲಿಸುವುದನ್ನು ನೋಡಬಹುದು.[೩೧]

ಸುಮಾರು ದಿನಗಳವರೆಗೆ ಮಳೆ ಬಾರದೇ ಇದ್ದಾಗ ಇವರಲ್ಲಿ ವಿಶೇಷ ಆಚರಣೆ ಇದೆ. ಚಿಕ್ಕ ಹುಡುಗರು ಅಥವಾ ಯುವಕರು 'ಮಿಂಡಕ ಮಾತಾ ಪಾಣಿ ಲಾ' ಎಂಬ ಹೆಸರಿಂದ ಕರೆಯುವ ಆಚರಣೆ ವಿಶಿಷ್ಟವಾಗಿದೆ. ಇಬ್ಬರು ಅರೆಬೆತ್ತಲಾಗಿ ಉಡುದಾರವನ್ನು ಜನಿವಾರದಂತೆ ಧರಿಸುವರು. ಒಂದು ಉದ್ದನೆಯ ಕೋಲಿಗೆ ಕಟ್ಟಿಕೊಂಡು, ತಾವೂ ಬೇವನ ಸೊಪ್ಪು ಕೊರಳು ಹಾಗೂ ಸೊಂಟಕ್ಕೆ ಹಾಕಿಕೊಂಡು ಪ್ರತಿ ಮನೆಯ ಮುಂದೆ 'ಮಿಂಡಕ ಮಾತಾ ಪಾಣಿಲಾ' ಎಂದು ಕೂಗುತ್ತ ಮೇಲಿಂದ ಕೆಳಗೆ ಹೆಗರುವರು. ಆಗ ಮನೆಯವರು ಇವರ ಮೇಲೆ ನೀರು ಸುರಿದು ಮನೆಯಲ್ಲಿರುವ ಜೋಗಳ ಹಿಟ್ಟು, ಮೆಣಸಿನಕಾಯಿ, ಉಪ್ಪು, ಎಣ್ಣೆ, ಹಣ ಮುಂತಾದವನ್ನು ಸ್ವೀಕರಿಸುವರು. ನಂತರ ಊರ ಹೊರಗೆ ಹೋಗಿ ಮುದ್ದೆ ಚಟ್ನಿ ಮಾಡಿ ತಿಂದು 'ಲಬೊ ಲಬೊ' ಎಂದು ಬಾಯಿ ಬೊಬ್ಬೆ ಹಾಕುವರು. ಈ ರೀತಿಯ ಆಚರಣೆ ಮಳೆರಾಯನ ಕುರಿತಾಗಿದೆ.

**೩. ಹಬ್ಬ-ವಿವಾಹ ಸಂದರ್ಭದಲ್ಲಿ ಕುಣಿತ**

ಲಂಬಾಣಿಗರು ವಾಸಿಸುವ ಪ್ರದೇಶದಲ್ಲಿ ಹಬ್ಬ-ವಿವಾಹ ಇತ್ಯಾದಿ ಸಂದರ್ಭಗಳಲ್ಲಿ ಕುಣಿತದ ವಿಶೇಷ ಕಾರ್ಯಕ್ರಮಗಳಿರುತ್ತವೆ. ಇನ್ನುಳಿದ ಸಂದರ್ಭದಲ್ಲಿ ಗೀತೆ-ಭಜನೆಗಳೊಂದಿಗೆ ತೃಪ್ತಿ ಪಡೆಯುತ್ತಾರೆ. ಈ ಬಗೆಯ ಗೀತೆ-ಕುಣಿತಗಳಿಗೆ ಯಾವುದೇ ರೀತಿಯ ನಿಯಮಗಳಿರುವುದಿಲ್ಲ. ಸಾಧ್ಯವಾದಷ್ಟು ಮಹಿಳೆಯರು ಸೇರಿಕೊಂಡು ತಮಗೆ ಅನುಕೂಲವಾದ ಸಮಯದಲ್ಲಿ ದೇವತೆಗಳ ಸ್ತುತಿ ಗೀತೆಗಳಾಗಲಿ ಇಲ್ಲವೆ ಕುಣಿತಕ್ಕೆ ಹೊಂದಿಕೊಳ್ಳುವ ಯಾವುದೇ ಬಗೆಯ ಗೀತೆಗಳನ್ನಾಗಲಿ ಹಾಡುತ್ತಾ, ಆ ಹಾಡಿನ ಲಯಕ್ಕನುಗುಣವಾಗಿ, ಮೈಬಳುಕಿಸುತ್ತಾ ಹೆಜ್ಜೆ ಹಾಕುತ್ತಾರೆ. ಅವರ ಕುಣಿತದ ರೀತಿಯು ಬಹು ಆಕರ್ಷಣೀಯವಾಗಿರುತ್ತದೆ. ಕುಣಿತದಲ್ಲಿ ಕೈಕಾಲು ಮತ್ತು ಸೊಂಟಗಳಿಗೆ ಹೆಚ್ಚು ಕೆಲಸ. ಎರಡು ಕೈಗಳನ್ನು ಮೇಲಕ್ಕೆತ್ತಿ, ಹಾಗೆಯೇ ಎಡಕ್ಕೂ ಬಲಕ್ಕೂ ಮುಖ ತಿರುಗಿಸುತ್ತಾ, ಒಂದೊಂದೇ ಕೈಯನ್ನು ನೇರವಾಗಿ ನೆಲದವರೆಗೆ ಇಳಿಸಿ ಮತ್ತೇ ಮೇಲಕ್ಕೆತ್ತುತ್ತಾರೆ. ಈ ಚಲನೆಗೆ ತಕ್ಕಂತೆ ಸೊಂಟವೂ ಬಳುಕುತ್ತಿರುತ್ತದೆ. ಕೈ ಚಲನೆಯೊಂದಿಗೆ ಹೆಜ್ಜೆಗಳನ್ನು ಹಿಂದಕ್ಕೆ ಮುಂದಕ್ಕೆ ಹಾಕುತ್ತಾ, ಚಪ್ಪಾಳೆ ತಟ್ಟುತ್ತಾರೆ. ಈ ಚಲನವಲನಗಳು ಒಂದು ದಿಕ್ಕಿನಲ್ಲಿ ನಡೆಯುತ್ತಿದ್ದಂತೆ, ಕುಣಿತದ ತಂಡ ಅದೇ ವೃತ್ತಾಕಾರದಲ್ಲೇ ಇನ್ನೊಂದು ದಿಕ್ಕಿನಲ್ಲಿ ಸುತ್ತುತ್ತದೆ. ವಿವಿಧ ಭಂಗಿಗಳಲ್ಲಿ ಕೈಯಾಡಿಸಿ, ನಡುಬಾಗಿಸಿ ಹಿಂದೆ ಮುಂದೆ ಚಲಿಸಿ ಸುತ್ತಿನಲ್ಲಿ ಹಾಡುಗಳೂ ಹರಿದು ಬರುತ್ತದೆ.[೨೫]

ಲಂಬಾಣಿ ಮಹಿಳೆಯರು ಸುತ್ತುಗಟ್ಟಿ ನಿಂತು ಪಲ್ಲವಿ, ಅನುಪಲ್ಲವಿ ಮುಮ್ಮೇಳ, ಹಿಮ್ಮೇಳಗಳೊಂದಿಗೆ ಗೀತೆಗಳನ್ನು ಹಾಡುತ್ತಾ, ಹಾಡಿನ ಲಯದೊಂದಿಗೆ ಮೈಮಾಟವನ್ನು ಮಣಿಸುತ್ತ ಹೆಜ್ಜೆ ಹಾಕುತ್ತಾರೆ. ಹಾಡಿನ ಲಯದೊಂದಿಗೆ ಕೂಡಿಕೊಂಡು ಬರುವ ನಯ ನಾಜೂಕಿನ ಈ ಕುಣಿತವು ನೋಡುಗರ ಕಣ್ಮನ ಸೆಳೆಯುತ್ತದೆ.

**೪. ತೀಜ್ ಕುಣಿತ**

ಲಂಬಾಣಿ ಸ್ತ್ರೀಯರು ಶ್ರೀಕೃಷ್ಣನನ್ನು ಮೆಚ್ಚಿಸುವ ಉದ್ದೇಶಕ್ಕಾಗಿ ಕುಣಿಯುವ ಅಪೂರ್ವ ಕುಣಿತವೇ ಈ ತೀಜ್‌ಕುಣಿತ. ಶ್ರಾವಣ ಇಲ್ಲವೆ ಭಾದ್ರಪದ ಮಾಸಗಳಲ್ಲಿ ಬಿದಿರಿನ ಬುಟ್ಟಿಗಳಲ್ಲಿ ಗೋಧಿ ಸಸಿಗಳನ್ನು ನಾಟಿಸಿ ಒಂಭತ್ತನೆಯ ದಿನಕ್ಕೆ ಶ್ರೀಕೃಷ್ಣನ ಹೆಸರಿನಲ್ಲಿ ಪೂಜೆ ಸಲ್ಲಿಸುತ್ತಾರೆ. ಒಂಬತ್ತು ದಿನಗಳವರೆಗೆ ಬೆಳೆಸಿದ ಗೋಧಿ ಸಸಿಯ ಬುಟ್ಟಿಗಳನ್ನು ತಲೆಯ ಮೇಲೆ ಹೊತ್ತು ಶ್ರೀಕೃಷ್ಣನನ್ನು ಸ್ತುತಿಸುವ ಹಾಡುಗಳೊಂದಿಗೆ ದಿನವಿಡೀ ಕುಣಿದು

ಕೊನೆಯಲ್ಲಿ ಸಸಿಗಳನ್ನು ನೀರಿನಲ್ಲಿ ವಿಸರ್ಜಿಸುತ್ತಾರೆ. ಈ ಸಂದರ್ಭದಲ್ಲಿ ಲಂಬಾಣಿ ಸ್ತ್ರೀಯರು ದೇವರನ್ನು ಕುರಿತು ನಿರರ್ಗಳವಾಗಿ ಹಾಡಿ ಕುಣಿಯುತ್ತಾರೆ.

ಭೋರಿ ಗೋರಿಯ ದುಧೀಯಾ ತಳಾವಗದಳೋವು 'ಪಲ್ಲವಿ'
ಭೋರಿ ಗೋರಿಯೇ ರಂಗ ರಂಗೇರಿ ವೋಮ ಮಾಚಳೀಭ "ಅನುಪಲ್ಲವಿ"
ಭೋರಿ ಗೋರಿಯೇ ಪಾಣಿ ಭರಜನಾ ರೋಕೇ ರೀಭ|
ಭೋರಿ ಗೋರಿಯೇ ತಾಂಡೇರೋ ನಾಯಕ ಕತ ಗೋಚ|
ಭೋರಿ ಗೋರಿಯೇ ವೋರೆ ಬನಾ ಮಳಾವೊ ಸೂನೋಭ|
ಭೋರಿ ಗೋರಿಯೇ ವೋರೆ ಬನಾ ಝೂಲರ ಸೂನೋಚ್[೪೯] "ಪಲ್ಲವಿ"|
[ಸುಂದರಿಯೇ, ನೀರಿನಿಂದ ಹಾಲ್ಗೆರೆಯ ತುಂಬಿಕೊಂಡಿದೆ.
ಸುಂದರಿಯೇ ಅದರಲ್ಲಿ ಬಣ್ಣ ಬಣ್ಣದ ಮೀನುಗಳು ನಲಿದಾಡುತ್ತಿವೆ.
ಸುಂದರಿಯೇ ನೀರು ತುಂಬಲು ಹೋದಾಗ ತಡೆದು ನಿಲ್ಲಿಸುತ್ತಿವೆ.
ಸುಂದರಿಯೇ ತಾಂಡದ ನಾಯಕನು ಎಲ್ಲಿಗೆ ಹೋಗಿದ್ದಾನೆ.
ಸುಂದರಿಯೇ ಅವನಿಲ್ಲದೆ ಸಭೆಯು ಶೂನ್ಯವಾಗಿದೆ.
ಸುಂದರಿಯೇ ತಾಂಡಾದ ನಾಯಕಿಯು ಎಲ್ಲಿಗೆ ಹೋಗಿದ್ದಾಳೆ
ಸುಂದರಿಯೆ ಅವಳಿಲ್ಲದ ನಾರಿ ಸಮೂಹವು ಶೂನ್ಯವೆನಿಸುತ್ತಿದೆ.] "ಪಲ್ಲವಿ"[೫೦]

ಸುಂದರವಾದ ಕಲ್ಪನೆ ಹಾಗೂ ಲಯದ ಏರಿಳಿತವು ಕುಣಿತಕ್ಕೆ ಕಳೆಯನ್ನು ತರುವಂತಿದೆ. ಪ್ರತೀ ಸಾಲಿನ ಪ್ರಾರಂಭದಲ್ಲಿ ಬರುವ ಲಯದ ಏರು ಉತ್ಸಾಹವನ್ನು ಹೊರಸೂಸಿದರೆ ಕೊನೆಯಲ್ಲಿ ಬರುವ ದೀರ್ಘಾಲಯವು ಕುಣಿತಕ್ಕೆ ಉಸಿರನ್ನು ಬಿಡಲು ಅವಕಾಶ ಮಾಡಿಕೊಡುತ್ತದೆ. ಹಾಡಿನ ಏರಿಳಿತದ ಲಯದೊಂದಿಗೆ ತಮ್ಮ ಸುಂದರವಾದ ಮೈಮಾಟವನ್ನು ಸಹಜವಾಗಿ ಹಿಂದಕ್ಕೆ, ಮುಂದಕ್ಕೆ ಬಾಗಿಸುತ್ತ, ಕೊರಳಿನ ರಾಗ, ಲಯಗಳಿಗೆ ಅನುಗುಣವಾಗಿ ಹೆಜ್ಜೆಗಳನ್ನು ಹಾಕುತ್ತಾರೆ. ಇಂಪಾದ ಧ್ವನಿಯು ಕುಣಿತದೊಂದಿಗೆ ಮೇಳೈಸಿಕೊಂಡು ಪ್ರೇಕ್ಷಕರ ಕಣ್ಮನಗಳನ್ನು ತಣಿಸುತ್ತದೆ.

**ೞ. ತಮಟೆ ಅಥವಾ ಹಲಗೆ ವಾದ್ಯ ಕುಣಿತ**

ತಮಟೆ ಬಾರಿಸುವ ಕಲೆಯು ಜಾನಪದ ಕಲೆಗಳಲ್ಲೆಲ್ಲ ಅತ್ಯಂತ ಪ್ರಾಚೀನವಾದುದು. ಚರ್ಮವಾದ್ಯದ ಇತರೆ ಕಲೆಗಳ ಉಗಮದ ಪ್ರೇರಣೆಯೇ ತಮಟೆ ವಾದ್ಯ ಎಂದರೆ ಉತ್ಪ್ರೇಕ್ಷೆಯಲ್ಲ. ಕಬ್ಬಿಣದ ಪಗಡಕ್ಕೆ ಕುರಿ ಅಥವಾ ಮೇಕೆ ಚರ್ಮವನ್ನು ಬಿಗಿದು ಲಂಬಾಣಿಗರು ಈ ವಾದ್ಯವನ್ನು ತಯಾರು ಮಾಡುತ್ತಾರೆ. ಈ ವಾದ್ಯ ವಿವಿಧ ಸಂದರ್ಭಗಳಲ್ಲಿ ಬಳಕೆ ಮಾಡಲಾಗುತ್ತದೆ. ಇದು ಹಿಂದಿನಿಂದಲೂ ಇಂದಿನವರೆಗೆ ತನ್ನ ಅಸ್ತಿತ್ವವನ್ನು ಕಾಪಾಡಿಕೊಂಡು ಬಂದಿದೆ. ಹಲಗೆ ಸಾಮೂಹಿಕವಾಗಿ ಬಾರಿಸುವ ವಾದ್ಯವಾಗಿರುವುದರೊಂದಿಗೆ ಏಕವಾದ ಕಲೆಯು ಆಗಿದೆ. ಇದನ್ನು ಬಾರಿಸುವವರು ಲಂಬಾಣಿಗರು, ಮಾದಿಗರು ಇಲ್ಲವೇ ಕೊರಚರಾಗಿರುತ್ತಾರೆ.[೫೧] ಬಳ್ಳಾರಿ

ಜಿಲ್ಲೆಯಲ್ಲಿ ಹೆಚ್ಚಾಗಿ ಈ ವಾದ್ಯವನ್ನು ಬಳಸುವುದು ಕಂಡುಬರುತ್ತದೆ. ಈ ಜಿಲ್ಲೆಯ ಎಲ್ಲಾ ತಾಂಡ, ಗ್ರಾಮಗಳ ಲಂಬಾಣಿಗರ ಮನೆಯಲ್ಲಿ ಒಂದಾದರೂ ತಮಟೆ ಇದ್ದೇ ಇರುತ್ತದೆ. ಇದು 'ಒಲೆಯಿಲ್ಲದ ಒಕ್ಕಲಿಲ್ಲ ಹಲಗೆ ಇಲ್ಲದ ಊರಿಲ್ಲ' ಎಂಬ ಗಾದೆಯನ್ನು ನಿಜಗೊಳಿಸುತ್ತದೆ. ಆದರೆ ತಮಟೆಯನ್ನು ಬಳಸುವ ಲಂಬಾಣಿಗರು ಹಬ್ಬ, ಹರಿದಿನ, ಜಾತ್ರೆಗಳ, ಸಂದರ್ಭಗಳಲ್ಲಿ ಅಲ್ಲದೇ ಮದುವೆಗಳಲ್ಲೂ ಮಂಗಳ ವಾದ್ಯವಾಗಿ ಬಳಸುವುದು ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬರುತ್ತದೆ. ಹಿಂದೊಮ್ಮೆ ಲಂಬಾಣಿಗರು ತಮ್ಮ ವಿವಾಹಗಳಲ್ಲಿ ತಮಟೆಯನ್ನು ಬಳಸುತ್ತಿದ್ದರು. ಆದರೆ ಇಂದು ಬಳ್ಳಾರಿ ಜಿಲ್ಲೆಯಲ್ಲಿ ತಮಟೆ ಬಾರಿಸುವ ಪ್ರದರ್ಶನ ಕಂಡುಬಂದರೂ ಅದು ಕಡಿಮೆ ಪ್ರಮಾಣದಲ್ಲಿದೆ.

ಲಂಬಾಣಿಗರು 'ಮೋಹರಂ ಹಬ್ಬ'ದ ಆಚರಣೆಯ ಸಮಯದಲ್ಲಿ ಕುಣಿಯುವ ಕುಣಿತವಿದು. ಇದರಲ್ಲಿ ಮಜಣು ಕುಣಿಯುವುದು ಹುಲಿ ಕುಣಿಯುವುದು, ಸಿದ್ಧಿ ಕುಣಿಯುವುದು ಮತ್ತು ಅಲಯ ಕುಣಿಯುವುದು ಎಂಬ ಪ್ರಕಾರಗಳಿವೆ.

**ಮಜಣು ಹಲಗೆ ಕುಣಿಯುವುದು:** ಒಬ್ಬರ ಹಿಂದೆ ಒಬ್ಬರು ನಿಂತುಕೊಂಡು ವರ್ತುಲಾಕಾರವಾಗಿ ಸುತ್ತುತ್ತ ಹಲಗೆಯ ತಾಳ ತಕ್ಕಂತೆ ಕುಣಿಯುತ್ತಾರೆ. ಅದಕ್ಕೆ ಹಲಗೆ ಮಜಣು ಕುಣಿತ ಎಂದು ಕರೆಯುತ್ತಾರೆ. ಕುಣಿಯುವಾಗ ಕೈಯಲ್ಲಿ ಕೋಲು, ಬಡಿಗೆ ಇಲ್ಲವೆ ಖಡ್ಗ ಹಿಡಿದಿರುತ್ತಾರೆ. ಕೆಲವರು ಮೋರ್ಚಲ ಎಂದರೆ ನವಿಲಿನ ಪುಕ್ಕದ ಕಟ್ಟನ್ನು ಹಿಡಿಯುವುದುಂಟು. ಕೆಲವರು ತುಂಬಿದ ತಂಬಿಗೆ ತಲೆಯ ಮೇಲಿಟ್ಟುಕೊಂಡು ಕಣಿಯುವುದುಂಟು. ಕುಣಿಯುವಾಗ ಕಾಲಿಗೆ ಮೊಳಕಾಲಿನವರೆಗೆ 'ಬಾಂಡಿಸ್' ಕಟ್ಟಿಕೊಂಡಿರುತ್ತಾರೆ. ಕೆಲವರು ಗೆಜ್ಜೆ ಕಟ್ಟಿಕೊಳ್ಳುವುದುಂಟು, ಬಾಂಡೀಸ್ ಎಂದರೆ ಗುಲೇಬಾನ್ ಆಕಾರದ ಪಟ್ಟಿ.

ಕುಣಿಯುವಾಗ ಬಾಜಾ, ತಾಸ್ಯಾಗಳನ್ನು ಬಾರಿಸುತ್ತಾರೆ.

**ಹುಲಿ ಹಲಗೆ ಕುಣಿಯುವುದು:** ದೇಹದ ಮೇಲೆ ಹಳದಿ ವರ್ಣ ಹಾಗೂ ಕಪ್ಪು ವರ್ಣದಿಂದ ಹುಲಿಯ ಚಿತ್ರ ಬರೆದುಕೊಂಡು ಕೃತ್ರೀಮ ಬಾಲವನ್ನು ಹಚ್ಚಿಕೊಂಡು ಇಬ್ಬರು ವ್ಯಕ್ತಿಗಳು ಕುಣಿಯುವ ಕುಣಿತ ಇದಾಗಿದೆ.

ಇಬ್ಬರೂ ಎದುರುಬದುರಾಗಿ ನಿಂತುಕೊಂಡು, ಸಿಟ್ಟಿನಿಂದ, ಕೆಂಗಣ್ಣ ಮಾಡಿಕೊಂಡು, ಬಾಗಿ ಕೈಯನ್ನು ಮುಂದೆ ಮಾಡುತ್ತಾ, ಆ ಕಡೆಗೆ ಈ ಕಡೆಗೆ ತಿರುಗಿಸುತ್ತ ಎಡಕ್ಕೆ ಬಲಕ್ಕೆ ಹೊರಳಿಸುತ್ತ ಹಲಗೆಯ ತಾಳಕ್ಕೆ ತಕ್ಕಂತೆ ಕುಣಿಯುತ್ತಾರೆ. ಈ ಸಂದರ್ಭದಲ್ಲಿ ಬಡಿಯುವ ಹಲಗೆ ತಾಳಕ್ಕೆ 'ಹುಲಿಚ್ಯಾಳಿ' ಎಂದು ಹೆಸರು.

**ಸಿದ್ಧಿ ಗಲಗೆ ಕುಣಿಯುವುದು:** ದೇವರ ದರ್ಶನಕ್ಕೆ ಪೀರಗಳನ್ನು ತೆಗೆದುಕೊಂಡು ಹೋಗುವಾಗ ಪೀರಗಳು ಕುಣಿಯುವ ಕುಣಿತ ಇದಾಗಿದೆ. ಪೀರ ಅಂದರೆ ಸವಾರಿ ಹಿಡಿದ ವ್ಯಕ್ತಿಗಳು. ಇವರು ಈ ಸಂದರ್ಭದಲ್ಲಿ ಹಲಗೆಯ ತಾಳಕ್ಕೆ ಅನುಗುಣವಾಗಿ ವೇಗವಾಗಿ ಜಿಗಿಯುತ್ತ ಕುಣಿಯುತ್ತಾರೆ. ಈ ಸಂದರ್ಭದಲ್ಲಿ ಬಾರಿಸುವ ಹಲಗೆಯ ತಾಳಕ್ಕೆ 'ಸಿದ್ದಿಚ್ಯಾಳಿ' ಎಂದು ಕರೆಯುತ್ತಾರೆ.

**ಆಲಿಯ ಹಲಗೆ ಕುಣಿತ:** ಆಲಿಯ್ ಎಂದರೆ 'ಮೋಹರಂ'ದಲ್ಲಿ ಬೆಂಕಿ ಮಾಡಲು ಮಾಡಿದ ಬಲೆ ಹತ್ತಾರು ಜನ ಸೇರಿಕೊಂಡು ಈ ಅಲಯದ ಸುತ್ತ ಹಿಂದೆ-ಮುಂದೆ ಸರಿಯುತ್ತ ಕುಣಿಯುವ ಕುಣಿತ ಇದಾಗಿದೆ.

### ೯.೩. ವೈಜ್ಞಾನಿಕ ಜನಪದ

### ೯.೩.೧. ಕೆಟ್ಟ ಕಣ್ಣು:

ಕೆಲವರು ಮೋಹಗೊಂಡ ವಸ್ತುಗಳನ್ನು ದೃಷ್ಟಿಸಿ ನೋಡಿದಾಗ ಅವರ ಕೆಟ್ಟನೋಟದಿಂದ ಕೆಟ್ಟಪರಿಣಾಮಗಳುಂಟಾಗುತ್ತವೆ. ಆ ರೀತಿಯವರನ್ನು ದೃಷ್ಟಿ ಕಣ್ಣಿನವರು, ರಾವು ಕಣ್ಣಿನವರು ಕಟ್ಟಕಣ್ಣಿನವರು, ಎನ್ನುವರು. ಲಂಬಾಣಿಗರು ತಮ್ಮ ಭಾಷೆಯಲ್ಲಿ 'ನಂಜರ್ ಲಗಾಡೆವಾಳ್' ಎಂಬುದಾಗಿ ಕರೆಯುತ್ತಾರೆ.[೯]

ಈ ಕೆಟ್ಟ ಕಣ್ಣು ಅಥವಾ ದೃಷ್ಟಿ ಎಂಬುದು ಚೆನ್ನಾಗಿ ಬೆಳೆದಿರುವ ಮರ, ಮೈತುಂಬಿಕೊಂಡಿರುವ ಮಕ್ಕಳು, ಹುಲುಸಾಗಿ ಬೆಳೆದಿರುವ ಬೆಳೆಗಳು, ತುಂಬು ಕೆಚ್ಚಲಿನ ಹಸು, ಇತ್ಯಾದಿಗಳ ಮೇಲೆ ಬೀಳುತ್ತದೆ. ಎಂಬ ಬಲವಾದ ನಂಬಿಕೆ ಇವರಲ್ಲಿದೆ. ಇದರಿಂದ ಕೆಟ್ಟ ಅಘಾತಗಳಾಗಬಹುದು ಎಂಬುದಾಗಿ ನಂಬುತ್ತಾರೆ. ಇವುಗಳ ಪರಿಣಾಮ ಸಂಪೂರ್ಣವಾಗಿ ಮೂಢನಂಬಿಕೆಯಲ್ಲ. ಕೆಲವು ಜನರಲ್ಲಿ ಮಾತ್ರ ಇಂತಹ ಶಕ್ತಿ ಇರುತ್ತದೆ ಎಂದು ಪರಮನೋ ವಿಜ್ಞಾನ ಸಂಶೋಧನೆಯಿಂದ ಸ್ಪಷ್ಟವಾಗಿದೆ.[೧೦]

ಕೆಟ್ಟ ಕಣ್ಣಿನ ನಂಬಿಕೆಯು ಜನರಲ್ಲಿ ಎಂದಿನಿಂದ ಬೆಳೆದು ಬಂದಿದೆ ಎಂಬುದು ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲ. ಜನಪದರಲ್ಲಿ ಪ್ರಾಚೀನ ಕಾಲದಿಂದಲೂ ಕ್ರೂರ ದೃಷ್ಟಿ ತಟ್ಟದಿರಲೆಂದು ಬೆದರುಗಳನ್ನು (ಬೆದರು ಗೊಂಬೆ) ಬಳಸಿ ದೃಷ್ಟಿಯನ್ನು ಬೇರೆ ಕಡೆಗೆ ಸೆಳೆಯುವಂತೆ ಮಾಡುವ ಪ್ರಯತ್ನ ಬಹುಪಾಲು ಎಲ್ಲಾ ಜನಾಂಗಗಳಲ್ಲಿಯೂ ಬಳಕೆಯಲ್ಲಿದೆ.[೧೧]

ದೃಷ್ಟಿ ಕಣ್ಣಿನ ಪರಿಣಾಮಗಳನ್ನು ನಿವಾರಣೆ ಮಾಡಲು ಲಂಬಾಣಿಗರು ಅನೇಕ ಆಚರಣೆಯನ್ನು ರೂಢಿಮಾಡಿಕೊಂಡು ಬಂದಿದ್ದಾರೆ. ಆಕಳು ಹಾಲಿನ ಪ್ರಮಾಣ ದಿಢೀರನೇ ಕಡಿಮೆಯಾದರೆ ಆಕಳಿಗೆ ದೃಷ್ಟಿ ತಗುಲಿದೆ ಎಂಬ ನಂಬಿಕೆಯಿಂದ ಅವರ ಮನೆ ದೇವರ ಹೆಸರಿನಲ್ಲಿ ಹಸುವಿನ ಕೊರಳಿಗೆ ನಾಲ್ಕಾಣೆ ಇಲ್ಲವೆ ಎಂಟಾಣೆಯನ್ನು ಅಥವಾ ತಾಂಡಾದ ದೇವಸ್ಥಾನದಲ್ಲಿ ಮಂತ್ರಿಸಿದ ನಿಂಬೆಹಣ್ಣನ್ನು ತಂದು ಕೊರಳಿಗೆ ಕಟ್ಟುತ್ತಾರೆ. ಅಲ್ಲದೆ ಟಗರಿನ ಕೊಂಬು, ಒಡೆದ ತೆಂಗಿನ ಚಿಪ್ಪು ಮರದ ಚಿಕ್ಕಕೊಂಬೆ ಇತ್ಯಾದಿಗಳನ್ನು ಒಂದು ದಾರಕ್ಕೆ ಹೆಣೆದು ಕಟ್ಟುತ್ತಾರೆ.[೧೨]

ಮಕ್ಕಳಿಗಾಗಲಿ ಅಥವಾ ದೊಡ್ಡವರಿಗಾಗಲಿ ಸೇವಿಸಿದ ಆಹಾರವು ಅಜೀರ್ಣವಾಗಿ ಹೊಟ್ಟೆನೋವು ಕಾಣಿಸಿಕೊಂಡರೆ ಊಟಕ್ಕೆ ತಗುಲಿದ ದೃಷ್ಟಿದೋಷದಿಂದ ಹೀಗಾಗಿರುವುದಾಗಿ ಭಾವಿಸಿ ಹಿರಿಯ ವಿಧವೆ ಮಹಿಳೆಯನ್ನು ಕರೆಯಿಸಿ ಅವರ ಎಡಕಾಲು ಎಡಕೈಗಳಿಂದ ತಲೆಯಿಂದ ಪಾದದವರೆಗೆ ಮೂರು, ಇಲ್ಲವೆ ಏಳುಬಾರಿ ನೀವಳಿಸುತ್ತಾರೆ. ಅಲ್ಲದೆ ದೃಷ್ಟಿದೋಷಕ್ಕೆ ಒಳಗಾದ ವ್ಯಕ್ತಿಯು ಊಟಕ್ಕೆ ಬಳಸುವ ಎಲ್ಲಾ ವಸ್ತುಗಳ ಸ್ವಲ್ಪ ಸ್ವಲ್ಪ ಭಾಗವನ್ನು ತೆಗೆದುಕೊಂಡು ಒಂದು ತಟ್ಟೆಯಲ್ಲಿ ಹಾಕಿ ರೋಗಿಯ ಬಲಗೈ ಹಾಗೂ ಎಡಗಾಲಿನ ಹೆಬ್ಬೆರಳುಗಳನ್ನು ಗಂಗಳದಲ್ಲಿನ (ತಟ್ಟೆ) ನೀರಿನಿಂದ ತೊಳೆದು ಒಂದು ಸಗಣಿ ಉಂಡೆಯನ್ನು ಗಂಗಳದ ಮಧ್ಯಭಾಗದಲ್ಲಿ ಇಟ್ಟು ಒಂದು ಚಿಕ್ಕಕಡ್ಡಿಯನ್ನು ಅದರಲ್ಲಿ ಇಡುತ್ತಾರೆ. ಆ ಕಡ್ಡಿಗೆ ಅಂಗೈ ಅಗಲದ ಒಂದು ತುಂಡು ಬಟ್ಟೆಯನ್ನು ಸೀಮೆ ಎಣ್ಣೆಯಲ್ಲಿ ಅದ್ದಿ ಚುಚ್ಚಿರುತ್ತಾರೆ. ಖಾಲಿ ಕೊಡವನ್ನು ರೋಗಿಗೆ ಏಳುಬಾರಿ

ನೀವಳಿಸಿ ತಟ್ಟೆಯಲ್ಲಿರುವ ಬಟ್ಟೆಗೆ ಬೆಂಕಿ ಹಚ್ಚಿ ತಕ್ಷಣ ಕೊಡವನ್ನು ಅದರ ಮೇಲೆ ಬೋರಲಾಗಿ ಮುಚ್ಚುತ್ತಾರೆ. ನಂತರ ರೋಗಿಯ ಎಡಗಾಲಿನ ಹೆಬ್ಬೆರಳನ್ನು ಏಳು ಬಾರಿ ಗಂಗಳಕ್ಕೆ ಮುಟ್ಟಿಸಿ, ಆ ಗಂಗಳದಲ್ಲಿರುವ ನೀರನ್ನು ಮೂರು ದಾರಿಗಳು ಸೇರುವ ಸ್ಥಳದಲ್ಲಿ ಚೆಲ್ಲುತ್ತಾರೆ.[೯]

ಮಕ್ಕಳಿಗೆ ಮತ್ತೆ ಮತ್ತೆ ಜ್ವರ ಮರುಕಳಿಸುತ್ತಿದ್ದರೆ ದೃಷ್ಟಿದೋಷದಿಂದ ಈ ರೀತಿ ಆಗುತ್ತಿದೆ ಎಂದು ನಂಬಿ 'ದಾನ್ ಕಾಡನ್ ನಾಕೆರೂ' ಅಂದರೆ ಅನ್ನ ತೆಗೆದು ಹಾಕುವುದು ಎಂಬ ಆಚರಣೆಯು ರೂಢಿಯಲ್ಲಿದೆ. ಇದಕ್ಕಾಗಿ ಅಮಾವಾಸ್ಯೆಯ ದಿನವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಅಂದು ಸಂಜೆ ಒಂದು ಹಂಚನ್ನು (ಮೇಲ್ಛಾವಣಿಗೆ ಬಳಸುವ ಓಡು) ಇಲ್ಲವೆ ಮಣ್ಣಿನ ಮಡಿಕೆಯ ಚೂರನ್ನು ತೆಗೆದುಕೊಂಡು ಮಧ್ಯದಲ್ಲಿ ಅದಕ್ಕೆ ಅರ್ಧಚಂದ್ರಾಕೃತಿಯ ಒಂದು ಗೆರೆಯನ್ನು ಎಳೆದು ಅದರಲ್ಲಿ ಅನ್ನವನ್ನು ಹಾಕಿ ಅದರ ಮೇಲೆ ಕುಂಕುಮ, ನೀರು ಇತ್ಯಾದಿಗಳನ್ನಿಟ್ಟು ಪೂಜೆ ಮಾಡಿ ಬೇವಿನ ಎಲೆಯಿಂದ ಜ್ವರಕ್ಕೆ ತುತ್ತಾಗಿರುವ ಮಗುವಿನ ಮೇಲೆ ಅಂತಹ ನೀರನ್ನು ಚಿಮುಕಿಸುತ್ತಾರೆ. ನಂತರ ಪೂಜೆಗೆ ಇಟ್ಟಿದ್ದ ಅನ್ನವನ್ನು ತಗೆದುಕೊಂಡು ಹೋಗಿ ತಾಂಡಾದ ಪಕ್ಕದಲ್ಲಿ ಇರುವ ಬೇವಿನ ಇಲ್ಲವೆ ಅರಳಿಮರದ ಕೆಳಗೆ ಇಟ್ಟು ಬರುತ್ತಾರೆ. ಇದರಿಂದ ದೃಷ್ಟಿ ಪರಿಣಾಮಗಳು ನಿವಾರಣೆಯಾಗುತ್ತವೆಂದು ನಂಬುತ್ತಾರೆ. ಮಕ್ಕಳು ನಿರಂತರವಾಗಿ ಅಳುವುದು ಇಲ್ಲವೆ ಹಟ ಮಾಡುತ್ತಿದ್ದರೆ ಕಸಬರಿಕೆಯನ್ನು ನೀವಳಿಸುತ್ತಾರೆ. ಇಲ್ಲವೆ ಕಸಬರಿಕೆಯ ಕಡ್ಡಿಯನ್ನು ತೆಗೆದು ನೀವಳಿಸಿ ಮೂಲೆಯಲ್ಲಿಟ್ಟು ಬೆಂಕಿ ಹಚ್ಚುತ್ತಾರೆ. ಹಾಗೂ ಎಡಗೈ ಮುಷ್ಠಿಯಲ್ಲಿ ಸ್ವಲ್ಪ ಮೆಣಸಿನಕಾಯಿಯ ಪುಡಿ ಹಾಗೂ ಉಪ್ಪನ್ನು ಭದ್ರವಾಗಿ ಹಿಡಿದುಕೊಂಡು ಮಗುವಿನ ಮೇಲೆ ಏಳು ಬಾರಿ ನೀವಳಿಸಿ ಒಲೆಗೆ ಹಾಕಿ ಬೆರಳುಗಳ ಲಟಿಕೆ ತೆಗೆಯುತ್ತಾರೆ. ಇದರಿಂದ ದೃಷ್ಟಿ ನಿವಾರಣೆಯಾಗುತ್ತದೆ ಎಂದು ನಂಬುತ್ತಾರೆ.[೯೩]

ಲಂಬಾಣಿಗರು ದೃಷ್ಟಿ ದೋಷಗಳ ನಿವಾರಣೆ ಅನೇಕ ಸಂಪ್ರದಾಯಗಳನ್ನು ಪ್ರಾಚೀನ ಕಾಲದಿಂದಲೂ ರೂಢಿ ಮಾಡಿಕೊಂಡು ಬಂದಿರುವುದನ್ನು ನೋಡಬಹುದಾಗಿದೆ.

**ಕಣಿ**

ಮಾನವ ತನ್ನ ಭವಿಷ್ಯತ್ತಿನಲ್ಲಾಗಬಹುದಾದ ಒಳಿತು-ಕೆಡಕುಗಳನ್ನು ತಿಳಿಯುವ ಪ್ರಯತ್ನದ ಫಲವೇ ಕಣಿ. ಈ ಕಣಿಯನ್ನು ನುಡಿಯುವವನನ್ನು ಅತೀಂದ್ರಿಯ ಜ್ಞಾನವಿದ್ದವನೆಂದು ಭಾವಿಸುವ ವ್ಯಕ್ತಿಯ ಬಳಿ ಹೋಗಿ ಕೇಳುತ್ತಾರೆ. ಆಂಗ್ಲಭಾಷೆಯ Divination ಎಂಬ ಪದಕ್ಕೆ 'ಕಣಿ' ಎಂದೂ, Predication ಎಂಬ ಪದಕ್ಕೆ 'ಭವಿಷ್ಯ' ಎಂದು ಕನ್ನಡದಲ್ಲಿ ಸಮಾನಾರ್ಥಕವಾಗಿ ಬಳಸಲಾಗುತ್ತದೆ. ಕಣಿ ಭವಿಷ್ಯ, ಶಕುನ, ಹಸ್ತಸಾಮುದ್ರಿಕೆ, ನಾಡಿಫಲ, ಕಾಲಜ್ಞಾನ ಇವುಗಳು ಒಂದಕ್ಕೊಂದು ಸಾಮ್ಯ ಸಂಬಂಧ ಉಳ್ಳವುಗಳಾಗಿವೆ. ಮಾನವ ತನ್ನ ಪಂಚೇಂದ್ರಿಯಗಳಿಂದ ತಿಳಿಯಲು ಸಾಧ್ಯವಾಗದ, ಆದರೆ ಅತೀಂದ್ರಿಯ ಶಕ್ತಿಯಿಂದ ತಿಳಿಯಲು ಸಾಧ್ಯವಾಗುವ ಕ್ರಮವನ್ನೇ 'ಕಣಿ' ಎಂದು ಕರೆಯಲಾಗಿದೆ. ಅತೀಂದ್ರಿಯ ಶಕ್ತಿಯಿಂದ ಬೇರೊಂದು ವ್ಯಕ್ತಿಯ ಮನಸ್ಸಿನಲ್ಲಿರುವ ಆಲೋಚನೆಗಳನ್ನು ತಿಳಿಯುವುದು ಕಳೆದುಹೋಗಿರುವ ವಸ್ತುಗಳನ್ನು ಪತ್ತೆ ಹಚ್ಚುವುದು, ಮುಂದೆ ನಡೆಯಬಹುದಾದುದನ್ನು ಮೊದಲೇ ತಿಳಿದುಕೊಳ್ಳುವುದು ಈ ಎಲ್ಲಾ ಕೆಲಸಗಳು ಕಣಿ ಹೇಳುವುದರಲ್ಲಿ ಸೇರಿ ಹೋಗುತ್ತಿದೆ.[೯೬]

ಈ ಹೇಳಿಕೆಯಿಂದ ಕಣಿ ಎಂಬ ಪದದ ಅರ್ಥ, ಅದರ ವ್ಯಾಪ್ತಿ ಹಾಗೂ ಕನ್ನಡದಲ್ಲಿ ಅದರ ಬಳಕೆಯನ್ನು ವಿಶಿಷ್ಟವಾಗಿ ತಿಳಿಯಬಹುದಾಗಿದೆ. ಕರ್ನಾಟಕದಲ್ಲಿ ಕೊರಚರು, ಇರುಳಿಗರು, ಕಾಡುಗೊಲ್ಲರು ಕಣಿ ಹೇಳುವುದರಲ್ಲಿ ಪ್ರಖ್ಯಾತರಾಗಿದ್ದಾರೆ. ದೇವಾಲಯಗಳಲ್ಲಿ ಭೂಗತ ಗುಡಿಗಳಲ್ಲಿ ಊರ ಜಾತ್ರೆಗಳಲ್ಲಿ ಸಮುದಾಯದ ಮುಖ್ಯಸ್ಥ ಅಥವಾ ದೈವ ಮಾಧ್ಯಮದ ಮೂಲಕ ಕಣಿ ಹೇಳುವ ಕೆಲಸ ನಡೆಯುತ್ತದೆ. ಲಂಬಾಣಿಗಳಲ್ಲಿ ತಮ್ಮವನೇ ಆದ ಭಗತ್ ಎಂದು ಕರೆಯಲ್ಪಡುವ ದೈವಮಾಧ್ಯಮದ ಬಳಿ ಕಣಿ ಕೇಳುವ ಪದ್ಧತಿ ರೂಢಿಯಲ್ಲಿದೆ. ಇವನು ಸಾಮಾನ್ಯವಾಗಿ ಲಂಬಾಣಿಯರು ದೇವರುಗಳಾದ ಸೇವಾಭಾಯ, ಮರಿಯಮ್ಮ, ಮಿಠಭುಕ್ಯಾ, ಭಕ್ತನಾಗಿರುತ್ತಾನೆ. ಇಲ್ಲವೆ ಸ್ಥಳೀಯ ಪ್ರಭಾವಿ ದೇವರುಗಳ ಆರಾಧಕನಾಗಿರುತ್ತಾನೆ. ಇವನು ದೈವಪ್ರೇರಣೆಯಿಂದ ಕಣಿ ಹೇಳುತ್ತಾನೆಂದು ಜನರು ನಂಬುತ್ತಾರೆ. ಇವನು ಒಳ್ಳೆಯ ಚಾರಿತ್ರ್ಯ ಉಳ್ಳವನು ಹಾಗೂ ಮಾಂಸ ಮದ್ಯಗಳಿಂದ ದೂರವಿರುವವನೂ ಆಗಿರುತ್ತಾನೆ. ತಮ್ಮ ತಮ್ಮ ತಾಂಡದ ಭಕ್ತರು ಕಣಿ ಹೇಳುವುದರಲ್ಲಿ ವಿಫಲರಾಗುತ್ತಿದ್ದರೆ ಬೇರೆ ತಾಂಡಗಳ ಪ್ರಭಾವಶಾಲಿ ಭಕ್ತರನ್ನು ಇಲ್ಲವೆ ಲಂಬಾಣಿಯೇತರ ಕಣಿಗಾರರನ್ನು ಸಂಪರ್ಕಿಸುತ್ತಾರೆ. ಕೆಲವು ವೇಳೆ ಕಣಿ ಹೇಳುವವರ ಸಾಮರ್ಥ್ಯವನ್ನು ಪರೀಕ್ಷೆಗೆ ಒಳಪಡಿಸುವುದೂ ಉಂಟು. ತೀರ ಕಠಿಣ ಪರಿಸ್ಥಿತಿಯಲ್ಲಿ ಗುರುವನ್ನು ಪರೀಕ್ಷಿಸುವುದುಂಟು. ಅದಕ್ಕಾಗಿ ಅವನನ್ನು ಕಾಣಲು ಹೋಗುವಾಗ ದಾರಿಯಲ್ಲಿ ಸಿಗುವ ಒಂದು ವಸ್ತುವನ್ನು ತೆಗೆದುಕೊಂಡು ಹೋಗಿ ಅದನ್ನು ಬಚ್ಚಿಟ್ಟುಕೊಂಡು, ಅದು ಏನೆಂದು ಊಹಿಸುವಂತೆ ಪ್ರಶ್ನೆಯನ್ನು ಕೇಳುವುದೂ ಉಂಟು."[] ಹೀಗೆ ಕಣಿ ನುಡಿಯುವ ಶಕ್ತಿಯನ್ನು ಪರೀಕ್ಷಿಸುತ್ತಾರೆ. ಕಣಿಗಾರರ ಮೇಲೆ ನಂಬಿಕೆ ಬಂದರೆ ಅವನ ಬಳಿ ತಮ್ಮ ಸಂಕಷ್ಟಗಳನ್ನು ಪರಿಹರಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಹೀಗೆ ಲಂಬಾಣಿಗರು ತಮ್ಮ ಪ್ರಜ್ಞಾವಲಯಕ್ಕೆ ನಿಲುಕದ ವಿಷಯಗಳನ್ನು ಕಣಿ ಕೇಳುವುದರ ಮೂಲಕ ತಿಳಿಯಬಹುದೆಂದು ಬಲವಾಗಿ ನಂಬುತ್ತಾರೆ.

ಕಣಿ ಹೇಳುವ ಕ್ರಿಯೆಯಲ್ಲಿ ಪಂಚೇಂದ್ರಿಯಗಳ ಪರಿಮಿತಿಯನ್ನು ಮೀರಿ ಜಗತ್ತಿನಲ್ಲಿ ನಡೆಯುವ ವಿದ್ಯಮಾನಗಳನ್ನು ತಿಳಿಯಲು ಸಾಧ್ಯ ಎಂಬ ತತ್ವ ಅಡಗಿದೆ. ಬಹಳ ಕಾಲದವರೆಗೆ ವಿಜ್ಞಾನಿಗಳು ಈ ಕ್ರಿಯೆಯ ಸಾಧ್ಯತೆಯನ್ನು ಒಪ್ಪಿರಲಿಲ್ಲ. ಪಂಚೇಂದ್ರಿಯಗಳಿಗೆ ಹೊರತಾದ ಕಾಲ, ದೇಶಗಳ ಪರಿಮಿತಿಯನ್ನು ದಾಟಿ ಅರಿವನ್ನು ಪಡೆಯಲು ಸಾಧ್ಯವಿಲ್ಲವೆಂಬುದು ವಿಜ್ಞಾನಿಗಳ ಅಭಿಪ್ರಾಯವಾಗಿತ್ತು. ಆದರೆ ಇಂದು ವಿಜ್ಞಾನದ ಸ್ಥಾನಮಾನಗಳನ್ನು ಗಳಿಸಿಕೊಂಡಿರುವ ಪರ ಮಾನವಶಾಸ್ತ್ರವು ತನ್ನ ವೈಜ್ಞಾನಿಕ ಪ್ರಯೋಗಗಳ ಮೂಲಕ ಅದನ್ನು ಗಳಿಸಿಕೊಂಡಿರುವ ಪರಮಾನವಶಾಸ್ತ್ರವು ತನ್ನ ವೈಜ್ಞಾನಿಕ ಪ್ರಯೋಗಗಳ ಮೂಲಕ ಅದನ್ನು ಸಮರ್ಥಿಸಿದೆ. ಕಾಲ ದೇಶಗಳ ಪರಿಮಿತಿಯನ್ನು ಮೀರಿ ಪಂಚೇಂದ್ರಿಯಗಳ ಸಾಮರ್ಥ್ಯವನ್ನು ದಾಟಿ ಮಾನವ ಗಳಿಸಿಕೊಳ್ಳಬಹುದಾದ ಜ್ಞಾನವನ್ನು ಅತೀಂದ್ರಿಯ ಜ್ಞಾನ (Trasentory Pereception)ವೆಂದು ಕರೆಯಲಾಗಿದೆ. ಈ ಜ್ಞಾನ ಮೂರು ರೀತಿಯಲ್ಲಿ ಇರಬಹುದು. ಪಂಚೇಂದ್ರಿಯಗಳ ಸಹಾಯವಿಲ್ಲದೆ ಬೇರೊಬ್ಬ ವ್ಯಕ್ತಿಯ ಮನಸ್ಸಿನಲ್ಲಿರುವ ಆಲೋಚನೆಗಳನ್ನು ತಿಳಿಯುವುದು ಅನ್ಯಮನೋದರ್ಶನ (Telepatty) ಪಂಚೇಂದ್ರಿಯಗಳ ಸಹಾಯವಿಲ್ಲದೆ ಬಹುದೂರದಲ್ಲಿ ನಡೆದ ಘಟನೆಗಳನ್ನು ತಿಳಿಯುವುದು. ಭವಿಷ್ಯ ದರ್ಶನ (Clairvoyance), ಪಂಚೇಂದ್ರಿಯಗಳ ಸಹಾಯವಿಲ್ಲದೆ ಮುಂದೆ ನಡೆಯುವುದನ್ನು ತಿಳಿಯುವುದು ಭವಿಷ್ಯ ದರ್ಶನ (Percognation)[] ಈ ಸಾಮರ್ಥ್ಯ ಇರುವುದು ಸಾಧ್ಯವೆಂದು ಪರ ಮನೋವಿಜ್ಞಾನ ಪ್ರಯೋಗಗಳಿಂದ ಸಾಧಿಸಿದೆ. ಹೀಗಾಗಿ ಕಣಿ ಹೇಳುವ ಪದ್ಧತಿ ಅವೈಜ್ಞಾನಿಕವೆಂದು ತಳ್ಳಿಹಾಕುವಂತಿಲ್ಲ.

### ೯.೩.೨. ಮಾಟ-ಮಂತ್ರ

ಭೂಮಿಯ ಮೇಲೆ ಮನುಷ್ಯ ತಾನು ಅಸ್ತಿತ್ವಕ್ಕೆ ಬಂದ ಮೇಲೆ ಪ್ರಕೃತಿಯ ಅದ್ಭುತ ಶಕ್ತಿಗಳನ್ನು ಕಂಡು ಅವುಗಳಿಗೆ ಹೆದರಿದ್ದುಂಟು. ಅವುಗಳ ಕಾರಣವೇನು ಎಂಬ ಪ್ರಶ್ನೆ ಅವನನ್ನು ಕಾಡಿದಂತಿವೆ. ಅವುಗಳ ಮೂಲವನ್ನು ಕಂಡುಹಿಡಿಯುವ ಕುತೂಹಲ ಅವನಲ್ಲಿ ಮೂಡಿ, ಆ ಅದ್ಭುತ ಶಕ್ತಿಗಳನ್ನು ತನ್ನ ಉಪಯೋಗಕ್ಕಾಗಿ ಬಳಸಿಕೊಳ್ಳಲು ಮುಂದಾಗಿ ಅವುಗಳ ಕಾರ್ಯಕಾರಣ ಸಂಬಂಧದ ರಹಸ್ಯವನ್ನು ಭೇದಿಸಲು ಮುಂದುವರಿದು, ಕೆಲವನ್ನು ಕಂಡುಹಿಡಿದು ಬಳಸಿಕೊಳ್ಳತೊಡಗಿದನು. ಆದರೂ ಇನ್ನೂ ಕೆಲವು ಅವನ ಮಿತಿಯಿಂದ ಹೊರಗೆ ಉಳಿದದ್ದುಂಟು.

ಪ್ರಕೃತಿಯನ್ನು, ಭೂತ ಪ್ರೇತಾದಿಗಳನ್ನು ರಹಸ್ಯ ರೀತಿಯಲ್ಲಿ ಅಧೀನದಲ್ಲಿಟ್ಟುಕೊಂಡು ಘಟನೆಗಳ ಗತಿಯನ್ನು ಮಾರ್ಪಡಿಸಲಾಗುವುದೆಂಬ ಅಭಿಪ್ರಾಯವುಳ್ಳ ವಿದ್ಯೆಯನ್ನು ಮಾಟ, ಮಂತ್ರವಿದ್ಯೆ, ಇಂದ್ರಜಾಲ, ಮೋಡಿ, ಯಕ್ಷಿಣಿ, ಕಣ್ಕಟ್ಟು, ಗಾರುಡಿ, ಅಭಿಚಾರ ಇವೆಲ್ಲ ಅದರ ಸಂವಾದಿ ಪದಗಳೆಂದು ಹೇಳಲಾಗಿದೆ.[೧೦೧] ಅನೈಸರ್ಗಿಕ ಅಥವಾ ಅಮಾನುಷ ವಿಧಾನದಲ್ಲಿ ನೈಸರ್ಗಿಕ ವ್ಯಾಪಾರಗಳನ್ನು ನಿಯಂತ್ರಿಸುವ ಕ್ರಿಯೆಯೇ ಮಾಟವೆಂದೂ ಹೇಳಲಾಗಿದೆ. ತಾರ್ತಿಕ ಹಿನ್ನೆಲೆಯಿಂದ ವಿಜ್ಞಾನ ಹಾಗೂ ಮಾಟ ಎರಡೂ ಸಮಾನ ಧರ್ಮಿಗಳು, ಆದರೆ ಮುಖದಲ್ಲಿ ಕಾಣುವ ತರ್ಕ ದೋಷಪೂರಿತವಾದುದು. ಇಲ್ಲಿಯ ಕಾರ್ಯಕಾರಣ ಸಂಬಂಧ ವೀಕ್ಷಣೆ ಹಾಗೂ ಪ್ರಯೋಗಗಳಿಂದ ಅವು ಸಿದ್ಧವಾದವುಗಳಾಗಿಲ್ಲ. ಕೆಲವೊಂದು ಅತೀಂದ್ರಿಯ ಶಕ್ತಿಗಳ ಮೇಲೆ ಮಾನವ ನಿರ್ದಿಷ್ಟವಾದ ಉಪಾಸನೆ, ಕ್ರಿಯಾಚರಣೆಗಳ ಮೂಲಕ ಅವುಗಳನ್ನು ತಮ್ಮ ಅಥವಾ ತಮ್ಮವರ ಒಳಿತಿಗಾಗಿ ಅಥವಾ ತನಗಾಗದವರ ವಿನಾಶಕ್ಕಾಗಿ ಬಳಸಿಕೊಳ್ಳುವ ಬಗ್ಗೆಯು ಮಾಟದಲ್ಲಿ ಕಾಣಸಿಕೊಳ್ಳುತ್ತದೆ.[೧೦೨]

ಲಂಬಾಣಿಗರಲ್ಲಿ ಮಾಟ ಮಂತ್ರ ಬಗೆಗಿನ ನಂಬಿಕೆಯು ಅವರ ಸಮುದಾಯದಷ್ಟೇ ಪ್ರಾಚೀನವಾದುದು. ಈ ಜನಾಂಗದ ಮೂಲಪುರುಷರಾದ ದಾವಮೊಲ ರಾಥಿದಾದಿಯರು ತಮ್ಮ ದೊಂಬರಾಟವನ್ನು ಪ್ರದರ್ಶಿಸಲು ಮುಚ್ಚರ್‌ಫುಡ್ ಎಂಬಲ್ಲಿಗೆ ಹೋಗಿ ಅಲ್ಲಿ ಮನುಷ್ಯರನ್ನು ಕಚ್ಚಿ ರಕ್ತ ಹೀರಿ ಸಾಯಿಸುತ್ತಿದ್ದ ಜೇನುನೊಣ ಗಾತ್ರದ ಸೊಳ್ಳೆಗಳನ್ನು ತಮ್ಮ ಮಾಟ ಮಂತ್ರದ ಶಕ್ತಿಯಿಂದ ದಿಗ್ಬಂದಿಸಿ ರಾಜಸ್ಥಾನದಲ್ಲಿ ಮನರಂಜನೆ ನೀಡುತ್ತಾರೆ. ಈ ಮಾಟದ ಮೂಲಪುರುಷ ಭವಯ್ಯ ಎಂಬ ಲಂಬಾಣಿ ಮಂತ್ರವಾದಿ ಈ ವಿಷಯವು ಇವರಲ್ಲಿ ಪ್ರಚಲಿತದಲ್ಲಿದೆ. ಲಂಬಾಣಿಗರಲ್ಲಿ ಸಾಮಾನ್ಯವಾಗಿ ರಕ್ಷಣೆ ಹಾಗೂ ವಿನಾಶಗಳೆಂಬ ಎರಡು ಉದ್ದೇಶದಿಂದ ಮಾಟ ಶಕ್ತಿಯನ್ನು ಬಳಸುವುದು ರೂಢಿಯಲ್ಲಿದೆ. ರಕ್ಷಣೆಗಾಗಿ ಮಾಡುವ ಮಾಟವನ್ನು ತಾಂಡಾದ ಪೂಜಾರಿಯಾದ ಭಗತ್‌ನ ಉಪಸ್ಥಿತಿಯಲ್ಲಿ ನಡೆಯುತ್ತದೆ. (ಇವನಿಗೆ ಭೂಪ ಎಂದು ಕರೆಯುವುದೂ ಉಂಟು) ತಾಂಡಾದಲ್ಲಿ ಯಾರಾದರೂ ತೀವ್ರವಾದ ಕಾಯಿಲೆಯಿಂದ ಬಳಲಿ ದೂರ ಹೋದರೆ ದೇವರ ಗುಡಿಯಲ್ಲಿ ಧೂಪವನ್ನು ಹಾಕಿ ತನ್ನ ಇಷ್ಟ ದೈವವನ್ನು ಮೈಮೇಲೆ ಆಹ್ವಾನಿಸಿಕೊಳ್ಳುತ್ತಾನೆ. ತೊಂದರೆಗೀಡಾದ ವ್ಯಕ್ತಿಗೆ ಕಾರಣಗಳನ್ನು ವಿವರಿಸಿ ಅದರ ನಿವಾರಣೋಪಾಯವನ್ನು ಸೂಚಿಸುತ್ತಾನೆ. ಕುಲದೇವತೆಗಳಿಂದ ತೊಂದರೆಯಾಗಿದ್ದರೆ ಹರಕೆ ಕಟ್ಟಿಕೊಳ್ಳಲು ಇಲ್ಲವೆ ಸಿಹಿ ಅಡುಗೆಯ ನೈವೇದ್ಯ ಮಾಡಲು ಆದೇಶಿಸುತ್ತಾನೆ. ದೆವ್ವ, ಭೂತ, ಪಿಶಾಚಿಗಳಿಂದ ತೊಂದರೆಯಾಗಿದ್ದರೆ ದುಷ್ಟಶಕ್ತಿಗಳ ಪ್ರಾಬಲ್ಯವನ್ನು ಗಮನದಲ್ಲಿರಿಸಿಕೊಂಡು ಬೇರೆ ಬೇರೆ ನಿವಾರಣೆ ಕ್ರಮಗಳನ್ನು ಸೂಚಿಸುತ್ತಾನೆ. ಅಮವಾಸ್ಯೆಯ ದಿನ ಸಂಜೆಯ ವೇಳೆ ಮನೆಯ ಹೊರಗಡೆ ಅರೆಬರೆ ಬೆಂದ ಅನ್ನವನ್ನು ಒಂದು ಮಣ್ಣಿನ ಗಂಗಳದಲ್ಲಿ

ಹಚ್ಚಿ ಅದಕ್ಕೆ ಕುಂಕುಮ ಹಾಕಿ ತೊಂದರೆಗೀಡಾದ ವ್ಯಕ್ತಿಯ ಮೇಲೆ ಏಳುಬಾರಿ ನೀವಳಿಸಿ ತಾಂಡಾದ ಹೊರಗಿನ ಬೇವಿನ ಇಲ್ಲವೆ ಅರಳಿಮರದ ಕೆಳಗೆ ಇಟ್ಟು ಬರುವುದು. ತೊಂದರೆಗೀಡಾದ ವ್ಯಕ್ತಿಯನ್ನು ಹೊಸ್ತಿಲಿನ ಮೇಲೆ ಕುಳ್ಳಿರಿಸಿ ಮಂತ್ರಿಸಿದ ನಿಂಬೆ ಹಣ್ಣನ್ನು ಆತನ ತಲೆಯ ಮೇಲೆ ಕತ್ತರಿಸಿ ಎಸೆಯುವುದು ಜೀವಂತ ಕೋಳಿಯನ್ನು ತೊಂದರೆ ಗೀಡಾದ ವ್ಯಕ್ತಿಯ ಮೇಲೆ ಏಳುಬಾರಿ ನೀವಳಿಸಿ ಎಸೆಯುವುದು.[೨೦೬]

ಮಾಟಗಾರ ತಾನು ಮಾಟ ಮಾಡಬೇಕೆಂದು ಉದ್ದೇಶಿಸಿದ ವ್ಯಕ್ತಿ ಸಂಪರ್ಕ ಪಡೆದ ಬಟ್ಟೆ, ಉಗುರು, ಕೂದಲು, ಹೆಜ್ಜೆಯ ಮಣ್ಣನ್ನು ಸಹ ಬಳಸಿ ಮಾಟ ಮಾಡುತ್ತಾರೆ. ಅದರ ಪರಿಣಾಮ ಉದ್ದೇಶಿತ ವ್ಯಕ್ತಿಯ ಮೇಲೆ ಆಗುತ್ತದೆ. ಹೀಗೆ ಮಾಟ ಮಾಡಿದ ವಸ್ತುಗಳನ್ನು ವ್ಯಕ್ತಿಯು ಓಡಾಡುವ ದಾರಿ, ಮನೆಯ ಮುಂಭಾಗ ಅವರ ಜಮೀನುಗಳಲ್ಲಿ ಗುಂಡಿ ತೆಗೆದು ಹೂಳುತ್ತಾರೆ. ಮಾಟದ ಬಗ್ಗೆ ಹಲವಾರು ನಂಬಿಕೆಯುಳ್ಳವರಾಗಿರುವ ಲಂಬಾಣಿಗರು ನಂಬಿಕೆಗಳಿಗೆ ಕಾರಣಗಳನ್ನು ವಿವರಿಸುತ್ತಾ ಲಂಬಾಣಿಗರ ಅಲೆದಾಟ ಮತ್ತು ಅಪಾಯಕಾರಿ ಜೀವನ ವಿಧಾನವು ಜ್ವರ, ವಾಯುಪೀಡೆ ಹಾಗೂ ಅತಿಸಾರಗಳಿಗೆ ಕಾರಣವಾಗುತ್ತಿತ್ತು. ಅವುಗಳ ಉಪಶಮನಕ್ಕಾಗಿ ಮಾಟ ಮಂತ್ರಗಳ ಆಚರಣೆಯನ್ನು ನಂಬುತ್ತಿದ್ದರು. ಇಂದಿಗೂ ದಟ್ಟವಾದ ಕಾಡುಗಳ ನಡುವೆ ಜಿಪ್ಸಿಗಳಂತೆ ವಸತಿ ಹೂಡುವ ಲಂಬಾಣಿಗರು ಹಂದಿಗಳನ್ನು ಬಲಿ ಕೊಡುವ ಮೂಲಕ ರೋಗರುಜಿನಗಳಿಂದ ಮುಕ್ತರಾಗಲು ಪ್ರಯತ್ನಿಸುತ್ತಾರೆ.[೨೦೭] ಈ ದಾಖಲೆಯಿಂದ ಅವರ ಅಪಾಯಕಾರಿ ಜೀವನ ವಿಧಾನವೇ ಇವರ ಮಾಟ ಮಂತ್ರದ ಬಗೆಗಿನ ನಂಬಿಕೆಗೆ ಕಾರಣ ಎಂಬುದಾಗಿ ತಿಳಿಯಬಹುದು.

**ಮದ್ದು ಹಾಕುವುದು.**

ಹಳ್ಳಿಗಳಲ್ಲಿ ಮದ್ದು ಹಾಕುವ ಪದ್ಧತಿಯನ್ನು ಲಂಬಾಣಿಗರಲ್ಲಿಯೂ ನೋಡಬಹುದು. ತಾಂಡಾದಲ್ಲಿ ಶೋಷಣೆಗೆ ಒಳಗಾದ ಮಹಿಳೆಯರು ವಿಶೇಷವಾಗಿ ಸಣ್ಣ ವಯಸ್ಸಿನ ವಿಧವೆಯರು, ಗಂಡನ ಶೋಷಣೆಗೆ ಬಲಿಯಾದ ಮಧ್ಯವಯಸ್ಸಿನ ಮಹಿಳೆಯರು ತಾವು ಪಡೆದ ನಿರಾಸೆ, ನೋವುಗಳಿಗೆ ಕಾರಣವಾದ ಸಮಾಜದ ಮೇಲೆ ಸೇಡನ್ನು ತೀರಿಸಿಕೊಳ್ಳಲು ಈ ಮದ್ದಿಡುವುದನ್ನು ಕಲಿತುಕೊಳ್ಳುತ್ತಾರೆ. ತಮಗಾದ ನೋವು, ನಿರಾಸೆಗಳು, ಇತರರ ಜೀವನದಲ್ಲೂ ಪ್ರವೇಶಿಸಲಿ ಎಂದು ಈ ಕೆಟ್ಟ ರೂಢಿಯಲ್ಲಿರುವುದನ್ನು ಸಹ ಕಾಣಬಹುದಾಗಿದೆ. ಬೇರೆಯವರ ನೋವಿನಲ್ಲಿ ತಮ್ಮ ನೋವನ್ನು ಮರೆಯಲು ಪ್ರಯತ್ನಿಸುತ್ತಾರೆ. ಬೇರೆಯವರಿಗೆ ನೋವು ಕೊಟ್ಟು ಪುನಃ ಶಾಂತಿಯನ್ನು ಪಡೆದುಕೊಳ್ಳುತ್ತಾರೆ. ತಮ್ಮ ಮನೆಗೆ ಬಂದ ನೆಂಟರಿಗೆ, ಪರಿಚಯಸ್ಥರಿಗೆ ಅಥಿತಿಗಳಿಗೆ ಆಹಾರದಲ್ಲಿ ಮದ್ದು ಸೇರಿಸಿ ಕೊಡುತ್ತಾರೆ. ಅಂತಹ ಆಹಾರವನ್ನು ಸೇವಿಸಿದವರು ನರಳುವುದನ್ನು ನೋಡಿ ಇವರು ಸಂತೋಷಪಡುತ್ತಾರೆ. ಈ ಮದ್ದಿಡುವ ದುರ್ವಿದ್ಯೆ ಪದ್ಧತಿಯನ್ನು ಒಮ್ಮೆ ಅನುಸರಿಸಿದ ಮೇಲೆ ಅವರು ಅವಧಿಗೊಮ್ಮೆಯಾದರೂ ಯಾರಿಗಾದರೂ ಒಬ್ಬರಿಗೆ ಮದ್ದು ಹಾಕಿಯೇ ಹಾಕುತ್ತಾರೆ.

ಒಬ್ಬ ಮನುಷ್ಯ ಇದ್ದಕ್ಕಿದ್ದಂತೆ ಜ್ವರವಿಲ್ಲದೆ ಸುಸ್ತು, ಸಂಕಟ, ನೋವು, ಉರಿ, ಸೆಳೆತ, ಊಟ ಮಾಡದೆ, ನಿದ್ರೆಮಾಡದೆ ಇರುವ ಲಕ್ಷಣಗಳು ದೇಹದಲ್ಲಿ ಕಾಣಿಸಿಕೊಂಡರೆ, ಹೊಟ್ಟೆ ಉಬ್ಬರಿಸಿ ದಿನವೂ ಹುಳಿ ತೇಗು ಬರುತ್ತಿದ್ದರೆ, ಕಣ್ಣುಗಳಲ್ಲಿ ರಕ್ತ ಕಡಿಮೆಯಾಗಿ ಹಳದಿವರ್ಣಕ್ಕೆ ತಿರುಗಿದ್ದರೆ ಲಂಬಾಣಿ ಮಹಿಳೆಯರು ಮೊದಲು

ಹುಡುಕಿ ಹೇಳುವುದೆಂದರೆ ಯಾರೋ ಅವರಿಗೆ ಮದ್ದು ಹಾಕಿದ್ದಾರೆ, ಮದ್ದು ತೆಗೆಯಿಸಿದರೆ ಸರಿಹೋಗುತ್ತದೆಂದು. ಮದ್ದು ಇದೆ ಅಥವಾ ಇಲ್ಲ ಎಂಬುದನ್ನು ಖಚಿತಪಡಿಸಿಕೊಳ್ಳಲು ರೋಗಿಯ ಅಂಗೈ ಮೇಲೆ ನುಗ್ಗೆಸೊಪ್ಪಿನ ರಸವನ್ನು ಹಿಂಡುತ್ತಾರೆ. ಈ ರಸವು ಹೆಪ್ಪುಗಟ್ಟಿ ಮೊಸರಿನಂತಾದರೆ ರೋಗಿಗೆ ಮದ್ದು ಹಾಕಿದ್ದಾರೆಂದೂ, ರಸ ಹೆಪ್ಪುಗಟ್ಟದೆ ಹೋದರೆ ಮದ್ದು ಹಾಕಿಲ್ಲವೆಂಬುದಾಗಿ ಭಾವಿಸಲಾಗುತ್ತದೆ.

ಮದ್ದಿನ ತೊಂದರೆಯಿಂದ ನರಳುವ ಮನುಷ್ಯನನ್ನು ಗುಣಪಡಿಸಲು ನಿರ್ದಿಷ್ಟ ಔಷಧಿಗಳಿವೆ. ಅವು ತೀವ್ರವಾದ ಭೇದಿಗಳಾಗುವ ಔಷಧಿಗಳಾಗಿದ್ದು, ಇವುಗಳನ್ನು ರಹಸ್ಯವಾಗಿ ರೋಗಿಗೆ ನೀಡಲಾಗುತ್ತದೆ. ಮದ್ದನ್ನು ಹೊರಹಾಕಲು ಔಷಧಿ ಕುಡಿಸುವ ವಿಷಯ ಮದ್ದು ನೀಡುವವರಿಗೆ ತಿಳಿಯಬಾರದೆಂಬುದೇ ಇಲ್ಲಿನ ರಹಸ್ಯಕ್ಕೆ ಮುಖ್ಯ ಕಾರಣ. ಅಲ್ಲದೆ ಔಷಧಿಯು ಯಾವುದೇ ಪರಿಣಾಮ ಬೀರುವುದಿಲ್ಲ ಎಂಬುದು ಇನ್ನೊಂದು ನಂಬಿಕೆಯು ಇವರಲ್ಲಿ ಬಲವಾಗಿದೆ.

ಲಂಬಾಣಿಗರು ಮದ್ದನ್ನು ಹಲ್ಲಿ, ಹಾವುರಾಣಿ, ಹೂತಿ, ಹೆಟಗೊದ್ದ, ಉಡ ಮುಂತಾದ ಸರಿಸೃಪಗಳನ್ನು ಕೊಂದು ಕೊಳೆಹಾಕುತ್ತಾರೆ. ಹೀಗೆ ಕೊಳೆತ ದೇಹದಿಂದ ತೊಟ್ಟಿಕ್ಕುವ ದ್ರವ ಹಾಗೂ ಕೆಲವು ಬೇರುಗಳನ್ನು ಪುಡಿಮಾಡಿ ಸೇರಿಸಿ ತಯಾರಿಸುತ್ತಾರೆ. ಕೆಲವೊಮ್ಮೆ ಕೆಲವರು ಇದರ ಜೊತೆಗೆ ಮಹಿಳೆಯರ ಋತುಸ್ರಾವವನ್ನು ಸೇರಿಸುತ್ತಾರೆ. ಈ ಪದ್ಧತಿ ಕೆಲವರಲ್ಲಿ ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದೆ.

**೯.೪. ಲಂಬಾಣಿ ಜನಪದ ವೈದ್ಯ ಪದ್ಧತಿ**

ಬುಡಕಟ್ಟಿನ ಸಮುದಾಯದಲ್ಲಿ ತಮ್ಮದೇ ಆದ ವೈದ್ಯಕೀಯ ವ್ಯವಸ್ಥೆ ಹೊಂದಿರುತ್ತಾರೆ. ಇದು ಜನಪದ ವೈದ್ಯಪದ್ಧತಿಯಾಗಿದೆ. ಜನಪದ ವೈದ್ಯವನ್ನು ಸಾಮಾನ್ಯವಾಗಿ 'ನಾಟಿ ವೈದ್ಯ' ಎಂದು ಕರೆಯುತ್ತಾರೆ. ಇದು ಜನಪದದ ಪ್ರಮುಖ ಅಂಶಗಳಾದ ಸಾಹಿತ್ಯಿಕ ಬಗೆ, ಭಾಷಿಕ ಬಗೆ, ಕ್ರಿಯಾತ್ಮಕ ಬಗೆ ಮತ್ತು ವೈಜ್ಞಾನಿಕ ಬಗೆ ಎಂಬ ನಾಲ್ಕು ಬಗೆಗಳಲ್ಲಿ ವೈಜ್ಞಾನಿಕ ಬಗೆಗಳಿಗೆ ಸೇರುತ್ತದೆ. ತಮ್ಮ ರೋಗ ರುಜಿನಗಳನ್ನು ಪರಿಹರಿಸಿಕೊಳ್ಳಲು ಪ್ರಕೃತಿಯಲ್ಲಿ ದೊರೆಯುವ ಗಿಡಮೂಲಿಕೆ, ಎಲೆ, ಬೇರುಗಳು, ಪಶುಪಕ್ಷಿಗಳ ಉತ್ಪನ್ನಗಳು ಸಾಮಾನ್ಯವಾಗಿ ಅವರ ವೈದ್ಯಕೀಯ ಆಶ್ರಮಕ್ಕೆ ಬರುವ ಸಾಮಗ್ರಿಗಳಾಗಿವೆ. ಜನಪದದ ಅನುಭವ ದ್ರವ್ಯವೇ ಇದಕ್ಕೆ ಆಧಾರವಾಗಿರುತ್ತದೆ.

ಲಂಬಾಣಿಗರು ಕಾಡಿನಲ್ಲಿಯೇ ನೆಲೆಯನ್ನು ಕಂಡುಕೊಂಡ ಜನ. ಬೇಟೆ ಮತ್ತು ಖಾದ್ಯ ಪದಾರ್ಥಗಳ ವ್ಯಾಪಾರ ಅವರ ಬದುಕಿನ ಅಸ್ತಿಭಾರ. ಹೀಗಾಗಿ ಕಾಡಿನ ಅನೇಕ ಗಿಡಮೂಲಿಕೆ ಹಾಗೂ ಪಶುಪಕ್ಷಿಗಳ ಬಗೆಗೆ ಅವರಿಗೆ ಅಪಾರ ಜ್ಞಾನವಿದೆ. ತಮ್ಮ ಅನುಭವಗಳ ಹಿನ್ನೆಲೆಯಲ್ಲಿ ಆರೋಗ್ಯ ರಕ್ಷಿಸುವಲ್ಲಿ ಅವು ಹೇಗೆ ಪ್ರಯೋಜನಕಾರಿಯಾಗಬಲ್ಲವೆಂಬುದನ್ನು ಅವರು ತಿಳಿದವರಾಗಿದ್ದಾರೆ. ಅಂತೆಯೇ ಅವರು ಜನಪದ ಜೊತೆಗೆ ವೈದ್ಯ ಪದ್ಧತಿ ಅವರ ಕಸುಬಾಗಿ ಪರಿಣಮಿಸಿದೆ. ನಮ್ಮ ಸಮಾಜದಲ್ಲಿ ನಾಗರಿಕರೆನಿಸಿಕೊಂಡವರಿಗೆ ಪರಿಚಯವಿಲ್ಲದ ಎಷ್ಟೋ ಔಷಧಿಯನ್ನು ಮಾಡುವುದುಂಟು. ಈ ಔಷಧಿಗಳು ಅವರ ಬುಡಕಟ್ಟಿಗೆ ಬಳಕೆಯಾಗುವುದರ ಜೊತೆಗೆ ವ್ಯಾಪಾರದ ಜೊತೆಗೆ ವ್ಯಾಪಾರದ ಪ್ರಮುಖ ಸಾಧನಗಳೂ ಆಗಿವೆ. ಕೆಲವೊಂದು ಪ್ರಮುಖವಾದ ಔಷಧಿಗಳನ್ನು ಇಲ್ಲಿ ಅವಲೋಕಿಸಬಹುದು.

೧. ಮಕ್ಕಳಿಗೆ ಕೆಮ್ಮು ನೆಗಡಿ

ಲಂಬಾಣಿಗರು ಮಕ್ಕಳಿಗೆ ಕೆಮ್ಮು ನೆಗಡಿ ಬಂದರೆ ಎಕ್ಕದ ಗಿಡದ ಹಣ್ಣಾದ ಎಲೆಯನ್ನು ತಂದು ಸ್ವಲ್ಪ ಬಿಸಿ ಮಾಡಿ ತಲೆಯ ಮೇಲೆ ಟೋಪಿಯ ಆಕಾರದಲ್ಲಿ ಕಟ್ಟುತ್ತಾರೆ. ಸ್ವಲ್ಪ ಹೊತ್ತಿನ ನಂತರ ಎಲೆಗಳನ್ನು ತೆಗೆಯುತ್ತಾರೆ. ಈ ಎಲೆಗಳ ಮೇಲೆ ತುಂತುರು ನೀರಿನ ಹನಿಗಳು ಶೇಖರವಾಗಿರುತ್ತದೆ. ಇವು ಮಗುವಿನ ಶೀತದ ಹನಿಗಳೆಂದು ಅವುಗಳನ್ನು ಈ ಎಲೆಗಳು ಹೀರಿಕೊಂಡಿವೆ ಎಂದು ನಂಬುತ್ತಾರೆ.

೨. ಬಾಯಿಬೇನೆ

ಮಾಪಲೆಕಾಯಿಯನ್ನು ತೊಳೆದು ಬಂಡೆಯ ಮೇಲೆ ನಾಲ್ಕು ಅಥವಾ ಐದು ಹನಿ ನೀರು ಬಿಟ್ಟು ತಿಕ್ಕಬೇಕು. ಅದರಿಂದ ಬಂದ ರಸವನ್ನು ಬಾಯಿಯೊಳಗೆ ಹಾಕಿ ಮುಕ್ಕಳಿಸಬೇಕು ಅಥವಾ ಒಣಕೊಬ್ಬರಿ ಕಸಕಸಿ ತಿನ್ನಬೇಕು. ಅಥವಾ ಕಸಕಸಿಯನ್ನು ಸಣ್ಣಗೆ ಅರೆದು ಪುಡಿ ಮಾಡಿ ತುಪ್ಪದಲ್ಲಿ ಕಲೆಸಿ ನೋವಿದ್ದಲ್ಲಿ ಸವರಬೇಕು.

೩. ಕಾಲುಬೇನೆ

ನೋವಿದ್ದಲ್ಲಿ ಉಡದ ತುಪ್ಪ ಹಚ್ಚಿ ತಿಕ್ಕಬೇಕು. ನಂತರ ಬಿಸಿನೀರನ್ನು ಹಾಕಿಕೊಳ್ಳಬೇಕು. ಅಥವಾ ನವಿಲುತುಪ್ಪ, ಉಡದ ತುಪ್ಪ ಮೊಸಳೆ ತುಪ್ಪ ಹಚ್ಚಿ ಇವುಗಳ ತುಪ್ಪ ದೊರೆಯದಿದ್ದರೆ ಇವುಗಳ ಮಲ ತಂದು ತಿಕ್ಕಬೇಕು, ಅಂಗಡಿಯ ೨ ದಿನಗಳಲ್ಲಿ ಕಲಸಬೇಕು. ಕಲೆಸಿದ್ದನ್ನು ಒಂದು ಗುಳ್ಳೀ (ಸಣ್ಣ ಗಡಿಗೆ)ಯಲ್ಲಿ ಹಾಕಿ ಮುಚ್ಚಳ ಮುಚ್ಚಿ ಬಿಗಿ ಮಾಡಿ ತೆಗ್ಗು ತೆಗೆದು ಹೂಳಬೇಕು. ಕುಳ್ಳಿನ ಬೆಂಕಿಯಿಂದ ಸುಟ್ಟು ಭಟ್ಟಿ ಇಳಿಸಬೇಕು. ಭಟ್ಟಿ ಇಳಿಸಿ ತೆಗೆದು ರಸವನ್ನು ಕೈಯಿಂದಲೇ ತಯಾರಿಸಿದ ಔಡಲ ಎಣ್ಣೆಯಲ್ಲಿ ಹಾಕಿ ಕಲಿಸಬೇಕು. ಕಲಿಸಿದ್ದನ್ನು ಸಣ್ಣಸೀಸದಲ್ಲಿ ಹಾಕಬೇಕು. ಅರಳೆಯಿಂದ ರಸ ಅಂಟಿಸಿಕೊಂಡು ನೋವಿರುವ ಕಡೆಯಲ್ಲಿ ಹಚ್ಚಬೇಕು. ನಂತರ ಉಗುರು ಬೆಚ್ಚಗಿನ ನೀರಿನಲ್ಲಿ ತೊಳೆದುಕೊಂಡರೆ ನೋವು ಇಲ್ಲವಾಗುತ್ತದೆ. ಅಲ್ಲದೆ ಸ್ವಲ್ಪ ಹೊತ್ತು ಅಡ್ಡಾಡಬೇಕು. ಹಿಡಿದ ಕಾಲುಗಳು ಸಡಿಲಗೊಳ್ಳುತ್ತವೆ.

೪. ಪಾರ್ಶ್ವವಾಯು

ಪಾರ್ಶ್ವವಾಯು ಪೀಡಿತರಿಗೆ ಪಾರಿವಾಳದ ರಕ್ತವನ್ನು ಕುಡಿಸುತ್ತಾರೆ. ಜೊತೆಗೆ ರೋಗಿಯ ಎರಡು ಕಣ್ಣಿಗೂ ಎರಡೆರಡು ಹನಿ ಪಾರಿವಾಳದ ರಕ್ತವನ್ನು ಬಿಡುತ್ತಾರೆ. ಇಲ್ಲವೆ ಇದರಲ್ಲಿ ಐದು ಬಗೆಯ ಸೆಟೆರೋಗ ವಾಯುಮುಟ್ಟು, ಅಡವಿಯ ಏಳು ಗಿಡಮೂಲಿಕೆ, ನಾಲ್ಕು ಪಕ್ಷಿಗಳ ರಕ್ತ ಒಟ್ಟು ೩೨ ದಿನಸುಗಳನ್ನು ಕಲೆಸಿ ರೋಗ ಬಂದ ಕಡೆಯಲ್ಲಿ ಹಚ್ಚಿದರೆ ಗುಣವಾಗುವುದುಂಟು.

೫. ಕಾಮಾಲೆ

ನಾಡಿ ಹಿಡಿದು ಇದನ್ನು ಗುರುತಿಸುತ್ತಾರೆ. ಕಾಮಾಲೆಯಲ್ಲಿ ಐದು ಬಗೆ ಉಸಿರು ಕಾಮಾಲೆ, ಹಸಿರು ಕಾಮಾಲೆ, ಬಿಳಿ ಕಾಮಾಲೆ, ಉದ್ದು ಕಾಮಾಲೆ, ಅರಿಶಿಣ ಕಾಮಾಲೆ. ಇಂಗಳಕಾಯಿ, ಪತ್ರಿ ಸೊಪ್ಪು ತಂದು ತಿನ್ನಿಸಿದರೆ ಇದು ವಾಸಿಯಾಗುತ್ತದೆ. ಹಸಿ ಮೆಣಸಿನಕಾಯಿ, ಬದನೆಕಾಯಿ ಹಾಗೂ ಹಸಿರು ಪದಾರ್ಥಗಳನ್ನು

ತಿನ್ನುವಂತಿಲ್ಲ. ಅಲ್ಲದೆ ಕೈ ರಟ್ಟೆಗೆ ಒಂದು ಒಳ್ಳೆಯ ಬಳ್ಳಿ ಹಾಕುತ್ತಾರೆ. ಅದು ಒಣಗಿದಂತೆ ಕಾಮಾಲೆ ವಾಸಿಯಾಗುತ್ತದೆ.

**೬. ಚರ್ಮರೋಗ**

ಗೇರು ಬೀಜದ ಹಾಲನ್ನು ಹಚ್ಚಿದರೆ ಚರ್ಮರೋಗ ಇಲ್ಲವಾಗುತ್ತದೆ. ಇಲ್ಲವೆ ಬೇವಿನ ಎಣ್ಣೆ, ಗೋರಂಜನ ಇವೆರಡನ್ನು ಮಿಶ್ರಮಾಡಿ ೨೧ ದಿನ ಎರಡೊತ್ತು ಕೊಟ್ಟರೆ ಈ ರೋಗ ವಾಸಿಯಾಗುತ್ತದೆ.

**೭. ಮಕ್ಕಳಿಗೆ ಅಮ್ಮ ಅಥವಾ ಸಿಡುಬು ಏಳುವುದು**

ಲಂಬಾಣಿಗರು 'ಬೋಜರಿ ನಿಕಳೆರೂ' ಎಂಬುದಾಗಿ ಕರೆಯುತ್ತಾರೆ. ಈ ಕಾಯಿಲೆ ಬಂದರೆ ಅಲೋಪತಿ ಚಿಕಿತ್ಸೆ ಕೊಡುವುದರಿಂದ ಅಮ್ಮ ಮುನಿಯುತ್ತಾಳೆ ಹಾಗೂ ಇನ್ನಷ್ಟು ಹೆಚ್ಚಾಗುವುದೆಂದು ನಂಬುತ್ತಾರೆ. ಇದಕ್ಕಾಗಿ ಮದ್ಯಮಾಂಸಗಳನ್ನು ಸೇವಿಸದಂತೆ ಮನೆಯಲ್ಲಿ ಶುಚಿತ್ವವನ್ನು ಕಾಪಾಡುತ್ತಾರೆ. ಮಗುವಿಗೆ ಒಂಬತ್ತು ದಿನಗಳವರೆಗೆ ಪ್ರತಿನಿತ್ಯ ಬೇವಿನ ಸೊಪ್ಪನ್ನು ಅರೆದು ಮೈಗೆ ಹಚ್ಚಿ ಮನೆಯ ಬಾಗಿಲ ಬಳಿಗೆ ಒಂದು ಮಣ್ಣಿನ ಮಡಿಕೆಯಲ್ಲಿ ಗೋಮೂತ್ರ ಹಾಗೂ ಅದರಲ್ಲಿ ಬೇವಿನ ಸೊಪ್ಪನ್ನು ಹಾಕುತ್ತಾರೆ. ಹೊರಗಿನಿಂದ ಯಾರಾದರೂ ಮನೆಯ ಒಳಗಡೆ ಬಂದರೆ ಗೋಮೂತ್ರ ಕಾಲಿಗೆ ಚಿಮುಕಿಸಿಕೊಂಡು ಬರಬೇಕು. ಪಾದರಕ್ಷೆಗಳನ್ನು ಮನೆಯಿಂದ ಸ್ವಲ್ಪ ದೂರದಲ್ಲಿಯೇ ಬಿಡಬೇಕು. ಮುಟ್ಟು ಚಟ್ಟುಗಳಿಗೆ ಅವಕಾಶವಿರುವುದಿಲ್ಲ. ಹೀಗೆ ಹತ್ತು ಹಲವು ನಿಬಂಧನೆಗಳನ್ನು ಪಾಲಿಸುತ್ತಾರೆ. ಒಂಬತ್ತನೆಯ ದಿನಕ್ಕೆ ಮನೆಯನ್ನು ಸಗಣಿಯಿಂದ ಸಾರಿಸಿ ಕಾಯಿಲೆಯಾದವರಿಗೆ ಅಕ್ಕಿಗಂಜಿ, ಬೇವಿನಸೊಪ್ಪು, ಬಂಡಾರ ನೀರಿನಿಂದ ಸ್ನಾನ ಮಾಡಿಸುತ್ತಾರೆ.

**೮. ಕಣ್ಣುಬೇನೆ**

ಒಂದು ಬಗೆಯ ಮುಳ್ಳಿನ ಗಿಡದ ಕೊನೆಮುರಿದರೆ ಅರಿಷಿಣ ಬಣ್ಣದ ಹಾಲು ಬರುತ್ತದೆ. ಬಂದ ಹಾಲನ್ನು ಕುಡುಗೋಲು ಅಥವಾ ಚೂರಿ ಮೇಲೆ ಹಾಕಿ ತಿಕ್ಕಬೇಕು. ತಿಕ್ಕಿದ ಹಾಲನ್ನು ರೆಪ್ಪೆತೆಗೆದು ಕಣ್ಣಲ್ಲಿ ಬಿಟ್ಟರೆ ಖಂಡಿತಾ ವಾಸಿಯಾಗುತ್ತದೆ.

**೯. ಹಾವು ಕಚ್ಚಿದರೆ**

ಹಾವು ಕಚ್ಚಿದರೆ ಕಚ್ಚಿದ ಮೇಲ್ಭಾಗಕ್ಕೆ ವಿಷ ಮೇಲೇರದಂತೆ ಒಂದು ಬಟ್ಟೆಯಿಂದ ಬಿಗಿಯುತ್ತಾರೆ. ಹಾವಿನ ವಿಷವನ್ನು ನಿರ್ವಿಷಗೊಳಿಸಲು ಕಾಡು ಕವಡೆಕಾಯಿಯ ಬೇರು ತಿಕ್ಕಿ ರಸ ತೆಗೆದು ಅದನ್ನು ಹಾವು ಕಚ್ಚಿದವರಿಗೆ ಕುಡಿಸಿ ವಾಂತಿ ಮಾಡಿಸುತ್ತಾರೆ. ಹಾಗೂ ಕೋಳಿಯ ಹಂಡಿಯ (ಗುಧದ) ಭಾಗವನ್ನು ಹಾವು ಕಚ್ಚಿದ ಭಾಗಕ್ಕೆ ಬಿಗಿಯಾಗಿ ಅದುಮಿ ಹಿಡಿಯುತ್ತಾರೆ. ಇದರಿಂದ ಹಾವಿನ ವಿಷವು ವ್ಯಕ್ತಿಯ ದೇಹದಿಂದ ಕೋಳಿಯ ದೇಹಕ್ಕೆ ವರ್ಗಾಯಿಸಲ್ಪಡುತ್ತದೆ ಎಂಬುದಾಗಿ ನಂಬುತ್ತಾರೆ.

**೧೦. ಚೇಳು ಕಚ್ಚಿದರೆ**

ಚೇಳು ಕಚ್ಚಿದರೆ ಅದನ್ನು ಹೊಡೆದು ಅದರ ಹೊಟ್ಟೆಯ ಭಾಗವನ್ನು ಬಗೆದು ಅದು ಕಚ್ಚಿದ ಸ್ಥಳದಲ್ಲಿ ಹಚ್ಚುತ್ತಾರೆ. ಇಲ್ಲವೆ ಆ ಭಾಗಕ್ಕೆ ಬೆಲ್ಲ ಹಚ್ಚಿ ಉಪ್ಪಿನ ಕಾವನ್ನು ಹಾಕುತ್ತಾರೆ.

೧೧. ನಾಯಿ ಕಚ್ಚಿದರೆ

ಯಾರ ಮನೆಯ ನಾಯಿ ಕಚ್ಚಿರುತ್ತದೆಯೋ ಅವರ ಮನೆಯಿಂದಲೇ ನಾಯಿ ಕಚ್ಚಿಸಿಕೊಂಡ ವ್ಯಕ್ತಿಯು (ನಾಯಿಯ ಮಾಲಿಕನ ಮನೆಯಿಂದಲೇ) ನೀರನ್ನು ಕುಡಿಯಬೇಕು. ಮತ್ತು ನಾಯಿ ಕಚ್ಚಿದ ಗಾಯಕ್ಕೆ ಸುಣ್ಣ ಹಚ್ಚಬೇಕು. ಅದರಿಂದ ನಾಯಿ ಕಚ್ಚಿದ ನೋವು ಮತ್ತು ಗಾಯ ಕಡಿಮೆಯಾಗುವುದು.

೧೨. ಹೆರಿಗೆ ಬೇನೆಗೆ (ನೋವಿಗೆ)

ಹಡೆಯಲು ಸಿದ್ಧವಾಗಿರುವ ಮಹಿಳೆಗೆ ಕೋತ್ತಂಬರಿ ಜೀರಿಗೆ ಹುರಿದು ಪುಡಿಮಾಡಿ ಅದರ ಕಷಾಯವನ್ನು ಕುಡಿಸುತ್ತಾರೆ. ಹಾಲು ಹಾಕದ ಕಾಫಿಯನ್ನು ೩, ೪ ಬಾರಿ ಕೊಟ್ಟರೆ ಹೆರಿಗೆ ಬೇಗವಾಗುತ್ತದೆ.

೧೩. ಬಿಳಿ ಮುಟ್ಟಾದರೆ

ದಾಸವಾಳದ ಪುಡಿ ಅಥವಾ ಹೂ, ಗುಡಿಮಾಕಾಯಿ, ಚಕ್ಕ ಗಸಗಸೆ, ಕೆಂಪುಸಕ್ಕರೆ, ಕಸ್ತೂರಿ, ಬಾದಾಮಿಕಾಯಿ, ಜೀರಿಗೆ ಇವುಗಳನ್ನು ಸೇರಿಸಿ ಕುಟ್ಟಿ ಪುಡಿ ಮಾಡಿ ಎಳನೀರಿನಲ್ಲಿ ರಾತ್ರಿಯಿಡೀ ನೆನೆಯಿಟ್ಟು ಬೆಳಿಗ್ಗೆ ಖಾಲಿ ಹೊಟ್ಟೆಗೆ ಕೊಟ್ಟರೆ ಬಿಳಿ ಮುಟ್ಟು ನಿಲ್ಲುತ್ತದೆ. ಈ ಔಷಧಿಯಿಂದ ಕೀಲುನೋವು, ಮಬ್ಬು, ಪಿತ್ತ, ಸಂದು ಮುಂತಾದ ಕಾಯಿಲೆಗಳೂ ಕೂಡ ನಿವಾರಣೆಯಾಗುವುದುಂಟು.

೧೪. ಅರ್ಧ ತಲೆನೋವು

ಅರ್ಧ ತಲೆನೋವಿನ ನಿಯಂತ್ರಣಕ್ಕೆ ವಿಶೇಷವಾದ ಚಿಕಿತ್ಸೆ ಇವರಲ್ಲಿ ರೂಢಿಯಲ್ಲಿದೆ. ಅರ್ಧ ಅಡಿ ಉದ್ದವಿರುವ ಕೋಲಿಗೆ ಬಿಳಿಯ ಕಲ್ಲಿನ ಚಕ್ಕೆಯನ್ನು ಕೊಡಲಿಯಂತೆ ಗಟ್ಟಿಯಾಗಿ ಬಿಗಿಯುತ್ತಾರೆ. ಸೂರ್ಯೋದಯದ ಸಮಯದಲ್ಲಿ ರೋಗಿಯನ್ನು ಸೂರ್ಯಾಭಿಮುಖವಾಗಿ ಕುಳ್ಳಿರಿಸುತ್ತಾರೆ. ಒಂದು ಬಟ್ಟೆಯಿಂದ ರೋಗಿಯ ಕುತ್ತಿಗೆಯನ್ನು ನಿಧಾನವಾಗಿ ಬಿಗಿಯುತ್ತಾರೆ. ಇದರಿಂದ ರೋಗಿಯ ಹಣೆಯ ಮೇಲಿನ ನರಗಳು ಉಬ್ಬುತ್ತವೆ. ನಂತರ ಕಲ್ಲಿನ ಚಕ್ಕೆಯ ಕೊಡಲಿಯನ್ನು ಹಣೆಯ ಮೇಲಿನ ಉಬ್ಬಿದ ನರಗಳ ಮೇಲಿಟ್ಟು ನಿಧಾನವಾಗಿ ಹೊಡೆಯುತ್ತಾರೆ. ನರಗಳಿಂದ ರಕ್ತ ಸುರಿಯುತ್ತದೆ. ನಂತರ ಅರೆ ತಲೆನೋವು ಗುಣವಾಗುವುದೆಂದು ಇವರು ನಂಬುತ್ತಾರೆ.

೧೫. ಹಲ್ಲು ನೋವಿಗೆ

ಎರಡು ಮೂರು ಲವಂಗಗಳನ್ನು ಚೆನ್ನಾಗಿ ಕುಟ್ಟಿ ಪುಡಿ ಮಾಡಿ, ನೋವಿರುವ ಹಲ್ಲಿಗೆ ಇಟ್ಟು ಅರ್ಧ ಗಂಟೆಕಾಲ ನೀರು ಉಗಿಯದೆ ಇರಬೇಕು ಅಥವಾ ಪಪ್ಪಾಯಿ ಕಾಯಿಯ ಹಾಲನ್ನು ನೋವಿರುವ ಕಡೆಗೆ ಇಡಬೇಕು. ಆಗ ಹಲ್ಲು ನೋವು ತನ್ನಿಂದತಾನೇ ಹೊರಟು ಹೋಗುತ್ತದೆ.

೧೬. ವಾಯುರೋಗಕ್ಕೆ

ನವಿಲಿನ ಎಣ್ಣೆ, ಉಡದ ಎಣ್ಣೆ ಹಾಗೂ ಮೊಸಳೆ ಎಣ್ಣೆ ಮೂರನ್ನು ನಿಂಬೆ ಹುಳಿ ಜೊತೆ ಹಚ್ಚಿದರೆ ವಾಯುರೋಗ ವಾಸಿಯಾಗುತ್ತದೆ.

೧೭. ಕಿವಿ ಸೋರುವಿಕೆ

ಯಾರಿಗಾದರೂ ಕಿವಿ ಸೋರುತ್ತಿದ್ದರೆ ಅಂಥವರ ಕಿವಿಯಲ್ಲಿ ಉಪ್ಪಿನ ಹರಳನ್ನು ಎದೆ ಹಾಲಿನೊಂದಿಗೆ ಸೇರಿಸಿ ಕಿವಿಯಲ್ಲಿ ಬಿಟ್ಟರೆ ಕಿವಿಸೋರುವುದು ನಿಲ್ಲುತ್ತದೆ.

೧೮. ಮಕ್ಕಳಿಗೆ ನಿರಂತರವಾಗಿ ಬಿಟ್ಟು ಬಿಟ್ಟು ಬರುವ ಜ್ವರಕ್ಕೆ

ಮಕ್ಕಳಿಗೆ ನಿರಂತರವಾಗಿ ಬಿಟ್ಟು ಬಿಟ್ಟು ಬರುವ ಜ್ವರಕ್ಕೆ ಬೇವಿನ ಮರದ ತೊಗಟೆಯನ್ನು ಚೆನ್ನಾಗಿ ಕುದಿಸಿದ ದ್ರಾವಣ ತಯಾರಿಸಿಕೊಂಡು ದಿನಕ್ಕೆ ಮೂರು ಬಾರಿ ಕುಡಿಸುತ್ತಾರೆ. ಮತ್ತು ಅಗುಣೆ ಹಾಕುತ್ತಾರೆ. ಅಂದರೆ ರೋಗಿಗೆ ಮಾನಸಿಕವಾಗಿ ಭಯವನ್ನುಂಟುಮಾಡುತ್ತಾರೆ. ಇದರಿಂದ ಜ್ವರವು ಕಡಿಮೆಯಾಗುವುದೆಂದು ಭಾವಿಸುತ್ತಾರೆ. ಈ ಅಗುಣೆ ಹಾಕುವ ವಿಧಾನವು ಹಲವಾರು ಗುಡ್ಡಗಾಡು ಜನರಲ್ಲಿ ರೂಢಿಯಲ್ಲಿದೆ.

೧೯. ತಲೆ ನೋವನ್ನು ಹೋಗಲಾಡಿಸುವುದು

ಕೆರೆಯಲ್ಲಿಯ ಕೆಂಪು ಸಿಗಡಿಗಳನ್ನು ತಂದು ಅದರಿಂದ ರಸ ತೆಗೆದು ಕುಡಿಸಿ ನಿಂಬೆಹಣ್ಣನ್ನು ನೆತ್ತಿಗೆ ಹಾಕಿ ಉಜ್ಜಿ ಅದನ್ನು ಕುಡಿಸಿ ನಂತರ ಮಜ್ಜಿಗೆಯನ್ನು ಕುಡಿಯಬೇಕು. ಏಳು ಮಡಿಕೆಗಳ ತಣ್ಣೀರನ್ನು ತಲೆಯ ಮೇಲೆ ಸುರಿದರೆ ತಲೆನೋವು ಕಡಿಮೆಯಾಗುತ್ತದೆ.

೨೦.ಹೆಂಗಸರ ಬಂಜೆತನಕ್ಕೆ

ಹೆಣ್ಣು ಮಕ್ಕಳಿಗೆ ವಿವಾಹದ ನಂತರ ಮಕ್ಕಳಾಗದೆ ಗೊಡ್ಡುಬಿದ್ದರೆ, ಅದಕ್ಕೆ ಒಂದು ಹಸಿರು ಔಷಧಿಯನ್ನು ಬಳಸಲಾಗುತ್ತದೆ. 'ಪಚೇಲಿ' ಎಂಬ ಸೊಪ್ಪು ತಂದು ಅರೆದು ಗುಳಿಗೆ ಮಾಡಿ ನುಂಗಿಸಿ ಗೊಡ್ಡು ಕಾಫಿ ಅಂದರೆ ಹಾಲು ಹಾಕದೇ ಮಾಡಿದ ಕರಿ ಕಾಫಿಯನ್ನು ಕುಡಿಸಬೇಕು. ಹೀಗೆ ಮಾಡುವುದರಿಂದ ಮಕ್ಕಳ ಫಲ ನಿಲ್ಲುತ್ತದೆ. ಅಲ್ಲದೆ ತಿಂಗಳು ತಿಂಗಳು ಮುಟ್ಟು ಆಗುತ್ತಿರುತ್ತದೆ.

ಮಕ್ಕಳ ಫಲ ಆಗದಿದ್ದವರಿಗೆ ಲಂಬಾಣಿಗರು ಮಹಾದೇವ್ ಪಿಂಡಕಾಯಿಯನ್ನು ತಿನ್ನಲು ಕೊಡುತ್ತಾರೆ. ಈ ಕಾಯಿಗಳನ್ನು ಎಷ್ಟು ತಿನ್ನುತ್ತಾರೋ ಅಷ್ಟೊಂದು ಮಕ್ಕಳಾಗುತ್ತವೆಂದು ಹೇಳುತ್ತಾರೆ. ಈ ಮಹಾದೇವ ಪಿಂಡಕಾಯಿಗಳಲ್ಲಿ ಶಂಭು ಮತ್ತು ಗೌರವಪರ್ವತ ಎಂಬ ಗಂಡು ಮತ್ತು ಹೆಣ್ಣು ಬೀಜಗಳಿರುತ್ತವೆಯಂತೆ. ಮುಟ್ಟಾದ ಮೂರು ದಿವಸಕ್ಕೆ ಸ್ನಾನ ಮಾಡಿ ಮಹಾದೇವಸ್ವಾಮಿಯ ಹೆಸರು ಹೇಳಿ ಬಾಳೆಹಣ್ಣಿನ ಜೊತೆ ಈ ಬೀಜವನ್ನು ನುಂಗಿದರೆ, ಅದೇ ಮುಟ್ಟುನಿಲ್ಲುತ್ತದೆ.

ತಮ್ಮ ಈ ಔಷಧಿಗಳನ್ನು ಸಾಬೀತುಪಡಿಸಲು ಇರುವ ಒಂದು ಪೌರಾಣಿಕ ಕಥೆಯನ್ನೇ ಹೇಳುತ್ತಾರೆ. ಹಿಂದೆ ರಾಮಾಯಣದ ಸೀತೆ ತನಗೆ ಮಕ್ಕಳಾಗದ್ದಕ್ಕೆ ಕಾಡಿನಲ್ಲಿ ಅಳುತ್ತಾ ಕುಳಿತಿದ್ದಳಂತೆ ಆಗ ಶ್ರೀರಾಮಚಂದ್ರನು ಮಹಾದೇವಿಕಾಯಿಯನ್ನು ಕಿತ್ತು ತಂದುಕೊಟ್ಟನಂತೆ. ಅದರಲ್ಲಿರುವ ಎರಡು ಶಂಭು ಎನ್ನುವ ಬೀಜಗಳನ್ನು ನುಂಗಿದ್ದರಿಂದಲೇ ಅವಳಿಗೆ ಲವಕುಶ ಎಂಬ ಇಬ್ಬರು ಅವಳಿ ಜವಳಿ ಮಕ್ಕಳು ಹುಟ್ಟಿದರಂತೆ.

೨೧. ಮೂಲವ್ಯಾಧಿ

ಮೂಲವ್ಯಾಧಿಗೆ ಸಂಬಂಧಿಸಿದಂತೆ ಪರಿಣಾಮಕಾರಿಯಾದ ಔಷಧವನ್ನು ನೀಡುವುದು ಇವರಲ್ಲಿ ರೂಢಿಯಲ್ಲಿದೆ. ಒಂದು ಬಗೆಯ ಹಸಿರೆಲೆ ಸೊಪ್ಪಿನೊಂದಿಗೆ, ಏಳು ಬೆಳ್ಳುಳ್ಳಿ ಎಸಳು, ಏಳು ಕರಿಮೆಣಸಿನ

ಕಾಳುಗಳನ್ನು ಚೆನ್ನಾಗಿ ಅರೆದು ದುಂಡಗಿನ ಉಂಡೆಗಳಾಗಿ ಮಾಡಿಕೊಂಡು ಏಳುದಿವಸಗಳ ಕಾಲ ಸೇವಿಸಿದರೆ ಮೂಲವ್ಯಾಧಿ ಗುಣವಾಗುತ್ತದೆ.

**೨೨. ಗಂಟಲು ಬೇನೆ**

ಮಕ್ಕಳಿಗೆ ಗಂಟಲು ಬೇನೆ ಬಂದು ಗಂಟಲಿನ ಎರಡು ಕಡೆಯಲ್ಲಿ ಗ್ರಂಥಿಗಳು ಊದಿಕೊಂಡರೆ, ವಿಪರೀತ ಜ್ವರ ಬಂದರೆ, ರೋಗಿಯ ಬಾಯಿಯೊಳಗೆ ಬೆರಳು ಹಾಕಿ ಉಬ್ಬಿರುವ ಗ್ರಂಥಗಳನ್ನು ಉಗುರುಗಳಿಂದ ಚಿವುಟಿ ರಕ್ತ ತೆಗೆಯುತ್ತಾರೆ. ಉಪ್ಪು ಬೆರೆಸಿದ ಬಿಸಿ ನೀರನ್ನು ಉಬ್ಬಿರುವ ಭಾಗಗಳಿಗೆ ತಾಕುವಂತೆ ಹಾಕಿ ಮುಕ್ಕಳಿಸಿ ಉಗುಳಿಸುತ್ತಾರೆ. ಹಾಗೂ ಎಕ್ಕದ ಗಿಡದ ಮೊಗ್ಗನ್ನು ಮೂಗಿನ ಒಳಗೆ ಎರಡು ಭಾಗಗಳಲ್ಲಿಯೂ ಇಟ್ಟು ಬೆರಳಿನಿಂದ ನಿಧಾನವಾಗಿ ಒಡೆಯುತ್ತಾರೆ. ಮೊಗ್ಗಿನ ಚೂಪಾದ ಭಾಗಗಳು ಮೂಗಿನ ಒಳಗಿನ ರಕ್ತನಾಳಗಳನ್ನು ಸೀಳಿ ರಕ್ತಬರುವಂತೆ ಮಾಡುತ್ತಾರೆ. ಮೂಗಿನ ಎರಡು ಭಾಗಗಳಿಂದ ರಕ್ತ ಹರಿದು ಬಂದ ಮೇಲೆ ಎಕ್ಕ ಮೊಗ್ಗನ್ನು ತೆಗೆದು ಎಸೆಯುತ್ತಾರೆ. ರೋಗಿಗೆ ಒರಟಾದ ಒಣರೊಟ್ಟಿ, ಈರುಳ್ಳಿ, ಬೆಳ್ಳುಳ್ಳಿಗಳ ಮಿಶ್ರಣದ ರೊಟ್ಟಿಯನ್ನು ಕೊಡುತ್ತಾರೆ. ಹಾಗೂ ಒಣ ಮೆಣಸಿನಕಾಯಿ, ಬೆಳ್ಳುಳ್ಳಿ ಮಿಶ್ರಿತ ಚಟ್ನಿಯನ್ನು ಮುದ್ದೆಯೊಂದಿಗೆ ತಿನ್ನಲು ಹೇಳುತ್ತಾರೆ.

**೨೩. ಮುಳ್ಳು ಚುಚ್ಚಿದರೆ**

ಕಾಲಿಗೆ ಅಥವಾ ಕೈಗೆ ಮುಳ್ಳು ಚುಚ್ಚಿದರೆ, ಆ ಸ್ಥಳಕ್ಕೆ ಗೇರು ಬೀಜದ ಎಣ್ಣೆಯನ್ನು ಹಚ್ಚುತ್ತಾರೆ. ಇದರಿಂದ ಆ ಮುಳ್ಳು ಚುಚ್ಚಿದ್ದು ಹೊರಗೆ ಬರುವುದಲ್ಲದೇ ನೋವು ಕಡಿಮೆಯಾಗುವುದು.

**೨೪. ಗರ್ಭಪಾತ**

ಬಿದಿರು ಸೊಪ್ಪನ್ನು ಅರೆದು ಬೇಯಿಸಿ, ಹಾಲು, ಇಂಗು, ಘನಬೆಲ್ಲ ತಪ್ಪೆಬೆಲ್ಲ ಶುಂಟಿ ಮತ್ತು ಎಳ್ಳು ಇವುಗಳನ್ನು ಚೆನ್ನಾಗಿ ಅರೆದು ಪಾಯಸದ ರೀತಿಯಲ್ಲಿ ಬೇಯಿಸಿ ಮೂರು ದಿವಸ ಕುಡಿಸಬೇಕು. ಎರಡು, ಮೂರು ತಿಂಗಳ ಫಲವಾಗಿದ್ದರೆ ಮುಟ್ಟಾಗಿ ಕರಗಿಹೋಗುತ್ತದೆ.

**೨೫. ದೃಷ್ಟಿಯಾದರೆ**

ಗಟ್ಟಿಯಾದ ಎಲೆಕಳ್ಳಿ ತುಂಡುಗಳನ್ನು ದಾರದಲ್ಲಿ ಪೋಣಿಸಿ ಅದನ್ನು ದೃಷ್ಟಿಯಾದ ವ್ಯಕ್ತಿಗೆ ಕಟ್ಟುವುದಲ್ಲದೆ ಅವನ ಎರಡೂ ಪಕ್ಕಗಳಿಗೆ ಅದರ ಹಾಲನ್ನು ಹಚ್ಚುತ್ತಾರೆ.

**೨೬. ಮಲಬದ್ಧತೆ**

ಚಟವಟಿ (ಪಟವಟಿ) ಎಂಬ ಗಿಡಮೂಲಿಕೆಯ ಬೇರು ತಂದು ಅದರ ತೊಗಟೆ ತೆಗೆದು ಸ್ವಲ್ಪ ಹಾಲಿನಲ್ಲಿ ಹಾಕಿ ಕಿವುಚಬೇಕು. ಇದನ್ನು ಬೆಳಿಗ್ಗೆ ಹಾಳು ಹೊಟ್ಟೆಯಲ್ಲಿ ಕುಡಿಯಬೇಕು. ಮೂರು ದಿವಸ ಖಾರ ತಿನ್ನುವಂತಿಲ್ಲ. ಒಳ್ಳೆಣ್ಣೆ, ಜೋಳದ ರೊಟ್ಟಿ ತಿನ್ನಬೇಕು. ರಕ್ತಭೇದಿ, ನೀರು ಭೇದಿ ಇದರಿಂದ ನಿವಾರಣೆಯಾಗುತ್ತದೆ.

ಹೀಗೆ ರೋಗ ನಿವಾರಣೆಗಾಗಿ ಲಂಬಾಣಿಗರು ಹಲವಾರು ರೀತಿಯ ಗಿಡಮೂಲಿಕೆಗಳ ಮೂಲಕ ಔಷಧಗಳನ್ನು ತಯಾರಿಸುವುದು ಕಂಡುಬರುತ್ತದೆ. ಇವುಗಳ ಬಳಕೆಯಲ್ಲಿ ಹಲವಾರು ವರ್ಷಗಳ ಅನುಭವ ಅಡಗಿದೆ. ಲಂಬಾಣಿಗರು ಬಳಸುವ ಗಿಡಮೂಲಿಕೆಗಳಿಂದ ರೋಗಿಯು ದೈಹಿಕವಾಗಿ ಸದೃಢಗೊಳ್ಳುವುದರ ಜೊತೆಗೆ ರೋಗ ನಿವಾರಿಸಿಕೊಳ್ಳುವಲ್ಲಿ ಯಶಸ್ವಿಯಾಗುತ್ತಾನೆ. ಪ್ರಕೃತಿಯಲ್ಲಿ ಅಡಗಿರುವ ರಹಸ್ಯಗಳನ್ನು ಅರಿತು ಅವುಗಳ ಬಳಕೆಯಿಂದ ತಮ್ಮ ಸಮುದಾಯದ ರಕ್ಷಣೆಯನ್ನು ತಲೆತಲಾಂತರಗಳಿಂದ ರೂಢಿಯಲ್ಲಿದೆ. ಇಂದಿಗೂ ಸಹ ಇವರು ಆಸ್ಪತ್ರೆಗಳಲ್ಲಿ ಗುಣಪಡಿಸಿಕೊಳ್ಳಲಾಗದ ಎಷ್ಟೋ ರೋಗಗಳನ್ನು ತಮ್ಮ ನಾಟಿ ವೈದ್ಯ ಪದ್ಧತಿ ಬಳಕೆಯಿಂದ ಗುಣಪಡಿಸಿಕೊಳ್ಳುತ್ತಾರೆ.

**ಟಿಪ್ಪಣಿಗಳು**

೧. ಜನಪದ ಗೀತೆಗಳು, ಶಿವರಾಮ ಕಾರಂತ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು - ೧೯೬೬, ಪುಟ- ೮

೨. ಜಾನಪದ ಸ್ವರೂಪ, ನಾಯಕ ಹಾ.ಮಾ., ತೆ.ವೆಂ. ಸ್ಮಾರಕ ಗ್ರಂಥ, ಮೈಸೂರು-೧೯೭೧, ಪುಟ-೨೭

೩. ದೇಶಿ ಸಂಸ್ಕೃತಿ, ನಾಯಕ್ ಡಿ.ಬಿ., ಬಂಜಾರ ಪ್ರಕಾಶನ ನಂ.೪ ಗುಲ್ಬರ್ಗ-೨೦೦೨, ಪುಟ -೨೦

೪. ಕಾಡುಗೊಲ್ಲ ಸಂಪ್ರದಾಯ ಮತ್ತು ನಂಬಿಕೆ, ಶಂಕರನಾರಾಯಣ ತೀ.ನಂ., ಮೈಸೂರು - ೧೯೮೨, ಪುಟ - ೧೬೭

೫. ಕರ್ನಾಟಕದ ಲಂಬಾಣಿಗಳು ಇತಿಹಾಸ ಮತ್ತು ಸಂಸ್ಕೃತಿ, ಶೇಖರನಾಯ್ಕ ದಿನಕರ ಪ್ರಕಾಶನ, ನಾಗರಬಾವಿ ಬೆಂಗಳೂರು-೨೦೦೨, ಪುಟ - ೨೨೫

೬. ಲಂಬಾಣಿ ಜನಪದ ಸಾಹಿತ್ಯ, ನಾಯಕ್ ಡಿ.ಬಿ., ಬಂಜಾರ ಪ್ರಕಾಶನ, ಗುಲ್ಬರ್ಗ - ೨೦೦೨, ಪುಟ - ೬೪ ಮತ್ತು ೬೫

೭. ಶ್ರೀ ಸೇವಾಲಾಲ್ ಚರಿತ್ರೆ, ಮಲ್ಲಿಕಾರ್ಜುನನಾಯ್ಕ ಬಿ.ಎಚ್., ಯೋಗೇಶ್ವರಿ ಪ್ರಕಾಶನ ಕುಮಾರನಹಳ್ಳಿ ತಾಂಡ - ೨೦೦೨, ಪುಟ - ೨೦೦ ಮತ್ತು ೨೦೧

೮. ಕರ್ನಾಟಕದ ಲಂಬಾಣಿಗಳು ಇತಿಹಾಸ ಮತ್ತು ಸಂಸ್ಕೃತಿ, ಶೇಖರನಾಯ್ಕ, ದಿನಕರ ಪ್ರಕಾಶನ ನಾಗರಭಾವಿ ಬೆಂಗಳೂರು - ೨೦೦೨, ಪುಟ - ೨೨೪

೯. ಪೂರ್ವೋಕ್ತ, ನಾಯಕ್ ಡಿ.ಬಿ. ಪುಟ - ೮೯

೧೦. ಅದೇ, ಪುಟ - ೯೦

೧೧. ಕರ್ನಾಟಕ ಲಂಬಾಣಿಗಳು ಒಂದು ಸಾಂಸ್ಕೃತಿಕ ಅಧ್ಯಯನ, ಖಂಡೋಬಾ ಪಿ.ಕೆ., ದಿ. ತೇಜಸಿಂಗ್ ರಾಠೋಡ್ ಮೆಮೋರಿಯಲ್ ಟ್ರಸ್ಟ್, ಗುಲ್ಬರ್ಗ - ೨೧೮

೧೨. ಅದೇ, ಪುಟ - ೨೧೮

೧೩. ಪೂರ್ವೋಕ್ತ, ನಾಯಕ್ ಡಿ.ಬಿ., ಪುಟ - ೯೧

೧೪. ಕರ್ನಾಟಕ ಲಂಬಾಣಿಗಳು ಇತಿಹಾಸ ಮತ್ತು ಸಂಸ್ಕೃತಿ, ಶೇಖರನಾಯ್ಕ ದಿನಕರ ನಾಗರಬಾವಿ, ಬೆಂಗಳೂರು-೨೦೦೨, ಪುಟ - ೨೨೬

೧೫. ಜನಪದ ಸಾಹಿತ್ಯ ರೂಪಗಳು, ರಾಗೌ. ಬೆಂಗಳೂರು-೧೯೭೮, ಪುಟ - ೩೨

೧೬. ಜನಪದ ವ್ಯಾಸಂಗ ಭಾಗ ೧, ಇಮ್ರಾಪುರ ಎಸ್.ಜಿ., ಚೇತನಾ ಪ್ರಕಾಶನ, ಧಾರವಾಡ - ೧೯೭೯, ಪುಟ-೬೬

೧೭. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ - ೨೨೫

೧೮. ಜನಪದ ಸಾಹಿತ್ಯ ರೂಪಗಳು, ರಾಗೌ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು - ೧೯೭೮, ಪುಟ-೨೨೫

೧೯. ಪೂರ್ವೋಕ್ತ, ನಾಯಕ್ ಡಿ.ಬಿ., ಪುಟ - ೧೭೬

೨೦. ಅದೇ, ಪುಟ - ೧೭೭

೨೧. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ - ೨೨೮, ೨೨೯.

೨೨. ಅದೇ ಪುಟ - ೨೨೯

೨೩. ಜನಪದ ಕೈಪಿಡಿ, ಲಕ್ಕಪ್ಪಗೌಡ, ಕರ್ನಾಟಕ ಪುಸ್ತಕ ಪ್ರಾಧಿಕಾರ ಬೆಂಗಳೂರು - ೧೯೯೭ ಪುಟ - ೩೦೧

೨೪. ಪೂರ್ವೋಕ್ತ, ಖಂಡೋಬಾ ಪಿ.ಕೆ., ಪುಟ - ೨೩೦

೨೫. ಕರ್ನಾಟಕ ಬುಡಕಟ್ಟಿನ ಲಂಬಾಣಿಗಳು, ಖಂಡೋಬಾ ಪಿ.ಕೆ., ಶ್ರೀ ಸಿದ್ಧಲಿಂಗೇಶ್ವರ ಬುಕ್ ಡಿಪೋ ಗುಲ್ಬರ್ಗ - ೨೦೦೦, ಪುಟ - ೧೦೬.

೨೬. ಲೆಜೆಂಡ್ ಫ್ರಮ್ ಇಂಡಿಯನ್ ಹಿಸ್ಟರಿ, ಘೋಷ್ ಎ.ಕೆ., ಪ್ರಕಾಶನ ಬೆಂಗಳೂರು - ೧೯೮೫, ಪುಟ - ೧೫ ''History is Much More exciting and Interesting when read Stories of what People said and did not one Knows of theose stories are true, but they are generally belives to be Trueg They are ligendus''

೨೭. ಲಂಬಾಣಿ ಸಂಸ್ಕೃತಿ, ಸಣ್ಣರಾಮ, ಮಲ್ನಾಡ್ ಆಫ್‌ಸೆಟ್ ಪ್ರಿಂಟರ್ಸ್ ಆಂಡ್ ಪಬ್ಲಿಷರ್, ಶಿವಮೊಗ್ಗ - ೧೯೯೯, ಪು - ೨೩೮

೨೮. ಕನ್ನಡ ಜನಪದ ಕಥೆಗಳು, ಪರಮಶಿವಯ್ಯ ಜಿ.ಶಂ., ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು- ೧೯೭೦ ಪುಟ - ೧೫

೨೯. ಲಂಬಾಣಿ ಜನಪದ ಸಾಹಿತ್ಯ, ನಾಯಕ್ ಡಿ.ಬಿ., ಬಂಜಾರ ಪ್ರಕಾಶನ, ಗುಲ್ಬರ್ಗ - ೨೦೦೦ ಪುಟ - ೧೯೬, ೧೯೭

೩೦. ಅದೇ ಪುಟ ೧೯೬, ೧೯೮

೩೧. ಪೂರ್ವೋಕ್ತ, ಖಂಡೋಬ ಪಿ.ಕೆ., ಪುಟ - ೨೩೨

೩೨. ಜಾನಪದ ಸ್ವರೂಪ, ನಾಯಕ್ ಹಾ.ಮಾ., ತೆ.ವೆಂ. ಸ್ಮಾರಕ ಗ್ರಂಥ, ಮೈಸೂರು - ೧೯೭೧ ಪುಟ-೩೦.

೩೩. ಲಂಬಾಣಿ ಸಂಸ್ಕೃತಿ, ಸಣ್ಣರಾಮ, ಮಲ್ನಾಡ್ ಆಫ್‌ಸೆಟ್ ಪ್ರಿಟರ್ಸ್ ಆಂಡ್ ಪಬ್ಲಿಷರ್, ಶಿವಮೊಗ್ಗ - ೧೯೯೯, ಪುಟ - ೨೦೮

೩೪. ಎನ್ ಸೈಕ್ಲೋಪಿಡಿಯಾ ಅ ಆಫ್ ರಿಲಿಜಿಯನ್ ಅಂಡ್ ಎತಿಕ್ಸ್ ವ್ಯಾಲ್ಯೂಂ - ೧೦, ಪುಟ - ೪೧೨. ''In wrining of Provebs embodied three of tese of properties in deffning them as Reinnants. which on allounts of their Shart News and correctness have been saved out of thewrecks and reins of ancient Philosophy''

೩೫. ಬುಡಕಟ್ಟಿನ ಲಂಬಾಣಿ ಗಾದೆಗಳು, ನಾಯಕ್ ಡಿ.ಬಿ., ಬಂಜಾರಾ ಪ್ರಕಾಶನ , ಗುಲಬರ್ಗಾ - ೨೦೦೧, ಪುಟ - ೩

೩೬. ಪೂರ್ವೋಕ್ತ, ನಾಯಕ್ ಡಿ.ಬಿ., ಪುಟ - ೪೭

೩೭. ಪೂರ್ವೋಕ್ತ, ಖಂಡೋಬ ಪಿ.ಕೆ., ಪುಟ - ೨೪೧

೩೮. ಕರ್ನಾಟಕ ಲಂಬಾಣಿಗಳು ಇತಿಹಾಸ ಮತ್ತು ಸಂಸ್ಕೃತಿ, ಶೇಖರನಾಯ್ಕ, ದಿನಕರ ನಾಗರಬಾವಿ, ಬೆಂಗಳೂರು-೨೦೦೨, ಪುಟ - ೨೩೬

೩೯. ಲಂಬಾಣಿ ಜನಪದ ಸಾಹಿತ್ಯ, ನಾಯಕ್ ಡಿ.ಬಿ., ಬಂಜಾರ ಪ್ರಕಾಶನ ಗುಲ್ಬರ್ಗ - ೨೦೦೦ ಪುಟ - ೨೦೨

೪೦. ಪೂರ್ವೋಕ್ತ, ಖಂಡೋಬ ಪಿ.ಕೆ., ಪುಟ - ೨೩೪

೪೧. ಕರ್ನಾಟಕ ಲಂಬಾಣಿಗಳು ಇತಿಹಾಸ ಮತ್ತು ಸಂಸ್ಕೃತಿ, ಶೇಖರನಾಯ್ಕ, ದಿನಕರ ನಾಗರಬಾವಿ, ಬೆಂಗಳೂರು-೨೦೦೨, ಪುಟ - ೨೩೮

೪೨. ಬುಡಕಟ್ಟಿನ ಲಂಬಾಣಿ ಗಾದೆಗಳು, ನಾಯಕ ಡಿ.ಬಿ., ಬಂಜಾರಾ ಪ್ರಕಾಶನ, ಗುಲಬರ್ಗಾ - ೨೦೦೧, ಪುಟ - ೨೮

೪೩. ಅದೇ, ಪುಟ - ೫೪

೪೪. ಪೂರ್ವೋಕ್ತ, ಶೇಖರನಾಯ್ಕ ಪುಟ - ೨೪೦

೪೫. ಪೂರ್ವೋಕ್ತ, ಖಂಡೋಬ ಪಿ.ಕೆ., ಪುಟ - ೨೩೮

೪೬. ಅದೇ, ಪುಟ - ೨೩೫

೪೭. ಅದೇ, ಪುಟ - ೨೩೬

೪೮. ಕರ್ನಾಟಕ ಲಂಬಾಣಿಗಳು ಇತಿಹಾಸ ಮತ್ತು ಸಂಸ್ಕೃತಿ, ಶೇಖರನಾಯ್ಕ, ದಿನಕರ ನಾಗರಬಾವಿ, ಬೆಂಗಳೂರು-೨೦೦೨, ಪುಟ - ೨೪೨

೪೯. ಪೂರ್ವೋಕ್ತ, ಖಂಡೋಬ ಪಿ.ಕೆ., ಪುಟ - ೨೩೭

೫೦. ಅದೇ, ಪುಟ - ೨೩೮

೫೧. ಕರ್ನಾಟಕ ಲಂಬಾಣಿಗಳು ಇತಿಹಾಸ ಮತ್ತು ಸಂಸ್ಕೃತಿ, ಶೇಖರನಾಯ್ಕ, ದಿನಕರ ನಾಗರಬಾವಿ, ಬೆಂಗಳೂರು-೨೦೦೨, ಪುಟ - ೨೩೦

೫೨. ಅದೇ, ಪುಟ - ೨೩೨

೫೩. ಅದೇ, ಪುಟ - ೨೩೨

೫೪. ಅದೇ, ಪುಟ - ೨೩೧

೫೫. ಲಂಬಾಣಿ ಸಂಸ್ಕೃತಿ, ಸಣ್ಣರಾಮ, ಮಲ್ನಾಡ್ ಆಫ್‌ಸೆಟ್ ಪ್ರಿಂಟರ್ಸ್ ಆಂಡ್ ಪಬ್ಲಿಷರ್, ಶಿವಮೊಗ್ಗ - ೧೯೯೯, ಪು - ೨೬೩

೫೬. ಎನ್ ಸೈಕ್ಲೋಪಿಡಿಯಾ ಅ ಆಫ್ ರಿಲಿಜಿಯನ್ ಅಂಡ್ ಎತಿಕ್ಸ್ ವ್ಯಾಲ್ಯೂಂ - II, ನ್ಯೂಡೆಲ್ಲಿ, ೧೯೧೮, ಪುಟ - ೭೬೫ "A genuine folk-riddle is a Spuntaneous expresion coming from the depths of the soul of a People ar race, not from the maindofam individual and consequennty is aninymus (ex Art Proverbs) many profound Mysterious tralts were expressed in the from of riddles primitive man, who also frequently Uses the same literary device in his des cription of on occasional accideantal occurrenced, when it consituted for him"

೫೭. ಲಂಬಾಣಿ ಸಂಸ್ಕೃತಿ, ಸಣ್ಣರಾಮ, ಮಲ್ನಾಡ್ ಆಫ್‌ಸೆಟ್ ಪ್ರಿಂಟರ್ಸ್ ಅಂಡ್ ಪಬ್ಲಿಷರ್, ಶಿವಮೊಗ್ಗ - ೧೯೯೯, ಪು - ೨೬೩

೫೮. ಪೂರ್ವೋಕ್ತ, ಖಂಡೋಬ ಪಿ.ಕೆ., ಪುಟ - ೨೪೬

೫೯. ಅದೇ, ಪುಟ - ೨೪೭

೬೦. ಅದೇ, ಪುಟ - ೨೪೮

೬೧. ಅದೇ, ಪುಟ - ೨೪೮

೬೨. ಅದೇ, ಪುಟ - ೨೪೯

೬೩. ಬುಡಕಟ್ಟಿನ ಲಂಬಾಣಿ ಒಗಟುಗಳು, ನಾಯಕ್ ಡಿ.ಬಿ., ಬಂಜಾರ ಪ್ರಕಾಶನ, ಗುಲ್ಬರ್ಗಾ - ೨೦೦೨, ಪುಟ - ೫೮

೬೪. ಅದೇ, ಪುಟ - ೫೯

೬೫. ಅದೇ, ಪುಟ - ೫೯

೬೬. ಅದೇ, ಪುಟ - ೬೪

೬೭. ಅದೇ, ಪುಟ - ೬೫

೬೮. ಅದೇ, ಪುಟ - ೬೭

೬೯. ಅದೇ, ಪುಟ - ೬೪

೭೦. ಅದೇ, ಪುಟ - ೭೧

೭೧. ಅದೇ, ಪುಟ - ೭೨

೭೨. ಅದೇ, ಪುಟ - ೭೩

೭೩. ಅದೇ, ಪುಟ - ೭೭

೭೩. ಲಂಬಾಣಿ ಜನಪದ ಸಾಹಿತ್ಯ, ನಾಯಕ್ ಡಿ.ಬಿ., ಬಂಜಾರ ಪ್ರಕಾಶನ ಗುಲ್ಬರ್ಗ - ೨೦೦೦ ಪುಟ - ೩೩೧

೭೪. ಅದೇ, ಪುಟ - ೩೫೩

೭೫. ಅದೇ, ಪುಟ - ೩೫೪

೭೬. ಅದೇ, ಪುಟ - ೩೫೭

೭೭. ಅದೇ, ಪುಟ - ೩೬೪

೭೮. ಅದೇ, ಪುಟ - ೩೬೫

೭೯. ಅದೇ, ಪುಟ - ೩೬೬

೮೦. ದುರುಗ ಜಾನಪದ, ಮೀರಾಸಾಬಿಹಳ್ಳಿ ಶಿವಣ್ಣ, ಶಕ್ತಿ ಮುದ್ರಣ ಮತ್ತು ಪ್ರಕಾಶನ, ಬೆಂಗಳೂರು - ೧೯೯೯ ಪುಟ-೫೦

೮೧. ಬಳ್ಳಾರಿ ಜಿಲ್ಲೆಯ ಜನಪದ ಸಾಹಿತ್ಯ, ರುದ್ರಪ್ಪ ಕೆ., ಸಿದ್ಧವೀರ ಶಿವಾಚಾರ್ಯ ಜ್ಞಾನ ಪ್ರಕಾಶನ, ಪುರ - ೧೯೯೪, ಪುಟ - ೫೦

೮೨. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ತಿಪ್ಪೇರುದ್ರಸ್ವಾಮಿ ಹೆಚ್., ಡಿ.ವಿ.ಕೆ. ಮೂರ್ತಿ, ಮೈಸೂರು - ೧೯೭೯, ಪುಟ-೬೮೬

೮೩. ಆಧುನಿಕ ಭಾರತದಲ್ಲಿ ನೃತ್ಯಕಲೆ, ಕುವೆಂಪು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು - ೧೯೫೬, ಪುಟ - ೧

೮೪. ಲಂಬಾಣಿ ಸಂಸ್ಕೃತಿ, ಖಂಡೋಬ ಪಿ.ಕೆ., ದಿ. ತೇಜ್‌ಸಿಂಗ್ ರಾಠೋಡ್, ಸ್ಮಾರಕ ಟ್ರಸ್ಟ್ ಗುಲ್ಬರ್ಗ - ೧೯೮೮ ಪುಟ - ೧೦,೧೧.

೮೫. ಲಂಬಾಣಿ ಕುಣಿತವನ್ನು ಸಂಸ್ಕೃತಿ ಅಥವಾ ಅರೆಧಾರ್ಮಿಕ, ಸಾಮಾಜಿಕ ಋತುಪ್ರಮಾಣ ಈ ಹಿನ್ನೆಲೆಯಲ್ಲಿಯೂ ವಿಂಗಡಿಸಬಹುದು.

೮೬. ಕನ್ನಡ ಜಾನಪದ ವಿಶ್ವಕೋಶ, ಚಂದ್ರಶೇಖರ ಕಂಬಾರ (ಸಂ), ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು - ೧೯೮೫, ಪುಟ - ೭೬೩

೮೭. ಹಂಪಿ ಜಾನಪದ, ಪುರುಷೋತ್ತಮ ಬಿಳಿಮಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೧೯೯೬, ಪುಟ - ೧೩೯

೮೮. ಕನ್ನಡ ಜಾನಪದ ಗೀತೆಗಳು, ಗಧಗಿಮಠ ಬಿ.ಎಸ್., ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೧೯೮೭, ಪುಟ - ೭

೮೯. ಕರ್ನಾಟಕ ಜನಪದ ಕಲೆಗಳು, ಚನ್ನಬಸಪ್ಪ ಗೊ.ರು., ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು - ೧೯೭೭, ಪುಟ - ೧೫೫

೯೦. ಪೂರ್ವೋಕ್ತ, ನಾಯಕ್ ಡಿ.ಬಿ., ಪುಟ - ೩೮೯

೯೧. ದಲಿತರ ಬದುಕು ಮತ್ತು ಸಂಸ್ಕೃತಿ ಜಾನಪದೀಯ ಅಧ್ಯಯನ, ಅರ್ಜುನ ಗೋಳಸಂಗಿ, ವಿಮೋಚನ ಪ್ರಕಾಶನ ಅಥಣಿ - ೨೦೦೦, ಪುಟ - ೩೫೨

೯೨. ಪಾರ್ವತಿಬಾಯಿ, ಚಿಕ್ಕಜೋಗಿಹಳ್ಳಿ ತಾಂಡ, ವಯಸ್ಸು ೬೦, ಕೂಡ್ಲಿಗಿ ತಾಲೂಕು, ಬಳ್ಳಾರಿ ಜಿಲ್ಲೆ ಇವರ ಹೇಳಿಕೆ.

೯೩. ಕನ್ನಡ ಜನಪದ ವಿಶ್ವಕೋಶ, ಸಂಪುಟ ೧, ಕ.ಸಾ.ಪ., ಬೆಂಗಳೂರು - ೧೯೮೫, ಪುಟ - ೪೭೯

೯೪. ಲಂಬಾಣಿ ಸಂಸ್ಕೃತಿ, ಸಣ್ಣರಾಮ, ಮಲ್ನಾಡ್ ಆಫ್‌ಸೆಟ್ ಪ್ರಿಂಟರ್ಸ್ ಅಂಡ್ ಪಬ್ಲಿಷರ್, ಶಿವಮೊಗ್ಗ - ೧೯೯೯, ಪುಟ - ೨೦೪

೯೫. ನಿಜಗುಣನಾಯ್ಕ ಜೆ.ಎಂ., ೬೫ ಚಿಕ್ಕಜೋಗಿಹಳ್ಳಿ ತಾಂಡ ರವರ ಹೇಳಿಕೆಯನ್ನು ದಾಖಲಿಸಲಾಗಿದೆ.

೯೬. ಅದೇ

೯೭. ಭೋಜ್ಯನಾಯ್ಕ ಕೋಗಳತಾಂಡ, ವಯಸ್ಸು ೬೫, ಹಗರಿಬೊಮ್ಮನಹಳ್ಳಿ ತಾಲೂಕು ಇವರ ಹೇಳಿಕೆ.

೯೮. ಕಾಡುಗೊಲ್ಲ ಸಂಪ್ರದಾಯ ಮತ್ತು ನಂಬಿಕೆಗಳು, ಶಂಕರನಾರಾಯಣ ತೀ.ನಂ., ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು - ೧೯೮೨ ಪುಟ - ೧೭೪

೯೯. ಎನ್. ಸೈಕ್ಲೋಪೀಡಿಯಾ ಆಫ್ ರಿಲಿಜಿಯನ್ ಅಂಡ್ ಎತಿಕ್ಸ್ ವ್ಯಾಲ್ಯೂಂ ೪ ನ್ಯೂಯಾರ್ಕ್ - ೧೯೮೧, ಪುಟ-೩೪೭

೧೦೦. ಜನಪದ ಕೈಪಿಡಿ, ಲಕ್ಕಪ್ಪಗೌಡ ಹೆಚ್.ಕೆ., ಪ್ರ.ಸಂ. ಕರ್ನಾಟಕ ಪುಸ್ತಕ ಪ್ರಾಧಿಕಾರ, ಬೆಂಗಳೂರು - ೧೯೯೭, ಪುಟ - ೮೪.

೧೦೧. ದೇಸಿ ಸಂಸ್ಕೃತಿ, ನಾಯಕ್ ಡಿ.ಬಿ., ಬಂಜಾರ ಪ್ರಕಾಶನ, ಗುಲ್ಬರ್ಗ - ೨೦೦೨ ಪುಟ - ೫೫

೧೦೨. ಅದೇ, ಪುಟ - ೫೫

೧೦೩. ನಾಯಕ್ ಕೆ.ಡಿ., ಕೋಮಾರನಹಳ್ಳಿ ತಾಂಡ ವಯಸ್ಸು ೫೯ ರವರ ಹೇಳಿಕೆಯನ್ನು ದಾಖಲಿಸಿಕೊಳ್ಳಲಾಗಿದೆ.

೧೦೪. ಎನ್‌ಕ್ಲೋಪೀಡಿಯಾ ಆಫ್ ರಿಲಿಜಿಯನ್ ಅಂಡ್ ಎತಿಕ್ಸ್ ವ್ಯಾಲ್ಯೂಂ ೪ ನ್ಯೂಯಾರ್ಕ್ - ೧೯೮೧, ಪುಟ - ೩೪೭

***

## ಸಮಾರೋಪ

ನಮ್ಮ ಶ್ರೇಣೀಕೃತ ವ್ಯವಸ್ಥೆಯ ದೇಶದಲ್ಲಿ ಹಲವಾರು ಬುಡಕಟ್ಟು ಕೆಳಸಮುದಾಯಗಳಲ್ಲಿ ಲಂಬಾಣಿಗರು ಅತ್ಯಂತ ವಿಶಿಷ್ಟ ಪೂರ್ಣವಾದ ಸಂಸ್ಕೃತಿಯುಳ್ಳ ಸಮುದಾಯವಾಗಿದೆ. ಅಲೆಮಾರಿತನ ತೊರೆದು ಊರುಗಳಿಂದ ಸ್ವಲ್ಪ ದೂರ ತಮ್ಮ ತಾಂಡಾಗಳನ್ನು ಕಟ್ಟಿಕೊಂಡು ನಿರ್ದಿಷ್ಟ ಆರ್ಥಿಕ ಮೂಲಗಳನ್ನು ಕಂಡುಕೊಳ್ಳಲು ಪ್ರಯತ್ನಿಸಿದ್ದಾರೆ. ರಾಜಸ್ಥಾನದಿಂದ ವಲಸೆ ಬಂದು ಕರ್ನಾಟಕದ ಬಹುತೇಕ ಎಲ್ಲಾ ಕಡೆ ಲಂಬಾಣಿ ಸಮುದಾಯ ನೆಲೆನಿಂತು ಕನ್ನಡದ ಸಮುದಾಯದಲ್ಲಿ ಬೆರೆತುಹೋಗಿದೆ. ಗೋರಿಬೋಲಿ ಭಾಷೆಯನ್ನಾಡುವ ಇವರು ಸಾಮಾನ್ಯವಾಗಿ ಆಯಾ ಪ್ರಾದೇಶಿಕತೆಗಳಿಗನುಗುಣವಾಗಿ, ವ್ಯಾವಹಾರಿಕವಾಗಿ ಕನ್ನಡವನ್ನು ಇತರೆ ಭಾಷೆಗಳನ್ನು ಮಾತನಾಡುತ್ತಾರೆ. ಎಲ್ಲಾ ಬುಡಕಟ್ಟು ಭಾಷೆಗಳಂತೆಯೇ ಈ ಗೋರಿಬೋಲಿ ಭಾಷೆಗೂ ಸ್ವಂತ ಲಿಪಿಯಿಲ್ಲ. ಲಂಬಾಣಿಗರು ಪ್ರಾಚೀನ ಕಾಲದಿಂದಲೂ ತಮ್ಮ ಸಂಸ್ಕೃತಿಯನ್ನು ಬೆಳೆಸಿಕೊಂಡು ಬಂದಿದ್ದಾರೆಂಬುದು ಪ್ರಸ್ತುತ ಅಧ್ಯಯನದಿಂದ ತಿಳಿದುಬಂದಿದೆ. ಭಾರತದ ಶ್ರೇಣಿಕರಣದ ಫಲವಾಗಿ ಇವರು ಅತ್ಯಂತ ಕೆಳಜಾತಿಯ ಸ್ಥಾನಮಾನಗಳನ್ನು ಪಡೆದಿದ್ದು, ಇಂದಿಗೂ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದ ಸಮುದಾಯವಾಗಿದೆ. ಬಯಲುಸೀಮೆಯಲ್ಲಿ ಕುರುಚಲು ಕಾಡುಗಳನ್ನು ಕಡಿದು ಕೃಷಿ ಭೂಮಿಯನ್ನು ಹೊಂದಲೆತ್ನಿಸಿರುವುದು ಪ್ರಸ್ತುತ ಸಂಶೋಧನೆಯಿಂದ ತಿಳಿದುಬಂದಿದೆ. ತಮ್ಮ ವೃತ್ತಿಗಳನ್ನು ಬಿಟ್ಟು ಕೃಷಿಕರಾಗಿ ನೆಲೆನಿಂತಿದ್ದಾರೆ. ಇಲ್ಲಿ ಇವರ ಜೀವನ ವಿಧಾನಗಳನ್ನು ಮತ್ತು ಇವರ ಆರ್ಥಿಕ ಜೀವನ ಹಾಗೂ ಸಾಮಾಜಿಕ ಜೀವನವನ್ನು ಅಧ್ಯಯನಕ್ಕೊಳಪಡಿಸಲಾಗಿದೆ. ನಂತರದ ದಿನಗಳಲ್ಲಿ ಲಂಬಾಣಿ ಸಮುದಾಯ ಭಾರತದ ಸ್ವಾತಂತ್ರ್ಯ ಚಳುವಳಿ ಹಾಗೂ ಕರ್ನಾಟಕ ಏಕೀಕರಣ ಹೋರಾಟದಲ್ಲಿ ಪಾಲ್ಗೊಂಡಿರುವುದು ಕಂಡುಬರುತ್ತದೆ.

ಲಂಬಾಣಿಗರ ಸಾಮಾಜಿಕ ಜೀವನವು ಪ್ರಾಚೀನ ಕಾಲದಿಂದಲೂ ಅನೇಕ ಲೋಕರೂಢಿಗಳ, ಸಂಪ್ರದಾಯಗಳ ಸುಭದ್ರವಾದ ವ್ಯವಸ್ಥೆಯನ್ನು ಹೊಂದಿರುವುದು ಕಂಡುಬರುತ್ತದೆ. ಅವುಗಳಲ್ಲಿ ಕುಟುಂಬ ಪದ್ಧತಿ, ಆಹಾರ ಪಾನೀಯಗಳು, ಉಡುಗೆ-ತೊಡುಗೆಗಳು, ವಸತಿ ವ್ಯವಸ್ಥೆ ನ್ಯಾಯಪದ್ಧತಿ, ಮೊದಲಾದವುಗಳು ಪ್ರಮುಖವಾಗಿದೆ. ಇವುಗಳಲ್ಲಿಯ ಆಚರಣೆಗಳು ಅಂದಿನಿಂದಲೂ ಬದಲಾಗದೆ ನಡೆದುಕೊಂಡು ಬಂದಿದೆ. ಲಂಬಾಣಿಗರಲ್ಲಿಯ ಜೀವನ ಕ್ರಮವು ಸ್ವಲ್ಪಮಟ್ಟಿಗೆ ಪರಿವರ್ತಗೊಂಡರೂ ತಮ್ಮ ಮೂಲಸ್ವರೂಪವನ್ನು ಉಳಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಜನನ, ವಿವಾಹ, ಮರಣದ ಸಂದರ್ಭಗಳಲ್ಲಿಯ ಆಚರಣೆಗಳು ಕಠಿಣತೆಯನ್ನು ಕಳೆದುಕೊಂಡಿವೆ.

ಲಂಬಾಣಿಗರ ಸಾಮಾಜಿಕ ಜೀವನದಂತೆ, ಧಾರ್ಮಿಕ ಜೀವನವೂ ವಿಶಿಷ್ಟತೆಯನ್ನು ಹೊಂದಿದೆ. ಲಂಬಾಣಿಗರಲ್ಲಿರುವ ಅನೇಕ ದೇವಾನು ದೇವತೆಗಳು ಒಂದು ಕಾಲದ ವೀರರಾಗಿದ್ದು, ಅನೇಕ ಅದ್ಭುತ ಲೀಲೆಗಳನ್ನು ತೋರಿದವರಾಗಿರುತ್ತಾರೆ. ಇಂಥ ನಾಯಕರನ್ನು ಮುಂದಿನ ಪೀಳಿಗೆಯವರು ಕೊಂಡಾಡಿದರಲ್ಲದೆ, ಅವರ ವೀರಗಲ್ಲುಗಳನ್ನು ನಿರ್ಮಿಸಿ ಅದಕ್ಕೆ ಗುಡಿ ಕಟ್ಟಿಸಿ ದೇವರನ್ನಾಗಿಸಿರುವುದು ಕಂಡುಬರುತ್ತದೆ. ಅವರಲ್ಲಿ ಪ್ರಮುಖವಾಗಿ ಸೇವಾಭಾಯಿ, ಭೀಮನಾಯ್ಕ, ಮೀಟುಭುಕ್ಯ, ಹಾತಿರಾಂಬಾವಾ, ಸಾತಿಯಾಡಿ, ಸಾತೀಭವಾನಿ ಮೊದಲಾದವರು ಪ್ರಮುಖರಾಗಿದ್ದಾರೆ. ದೇವರನ್ನು ಲಂಬಾಣಿಗರು ಮನೆ ದೇವರು, ಕುಲದೇವರು, ಗ್ರಾಮದೇವರು, ನಾಡದೇವರು ಎಂದು ವಿಭಾಗಿಸಿ ಆರಾಧಿಸುವುದನ್ನು ಕಾಣಬಹುದಾಗಿದೆ. ಹಾಗೆಯೇ ಇತರೆ ಸಮುದಾಯದ ದೇವರನ್ನು ಆರಾಧಿಸುವುದು ಕಂಡುಬರುತ್ತದೆ. ಇತರೆ ಸಮುದಾಯದವರ ಹಬ್ಬ, ಜಾತ್ರೆ, ಉತ್ಸವಗಳಲ್ಲಿ ಭಾಗವಹಿಸುವುದನ್ನು ಕಾಣಬಹುದಾಗಿದೆ. ಇಂದು ಧಾರ್ಮಿಕ ಆಚರಣೆಗಳು, ನಂಬಿಕೆಗಳು ತಮ್ಮ ಕಠಿಣತೆಯನ್ನು ಕಳೆದುಕೊಂಡಿವೆ. ಉಗ್ರವಾದ ಅಥವಾ ಕಠಿಣವಾದ ಆಚರಣೆಗಳು ಹೆಚ್ಚಾಗಿ ಕಂಡುಬರುವುದಿಲ್ಲ.

ಲಂಬಾಣಿಗರಲ್ಲಿ ಅನೇಕ ಗುರುಮಠಗಳಿವೆ. ಸೇವಾಲಾಲ್‌ರಿಂದ ಆರಂಭಗೊಂಡ ಮಠಗಳು ಇಂದಿಗೂ ಅವರ ಹೆಸರಿನಲ್ಲಿ ಅಸ್ತಿತ್ವದಲ್ಲಿವೆ. ಕೆಲವು ಮಠಗಳನ್ನು ಭೀಮನಾಯ್ಕನಮಠ, ಗೋಪಾಲ್‌ಸ್ವಾಮಿ ಮಠಗಳೆಂದು ಕರೆಯಲಾಗಿದೆ. ಮಠಗಳ ಮೂಲಕ ಸಮಾಜದವರ ಏಳಿಗೆಗೆ ಸಹಾಯಕವಾಗುತ್ತಿರುವುದು ಕಂಡುಬರುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿ ಕೋಗಳಿ ತಾಂಡ, ಕಾಲ್ವಿ ತಾಂಡ, ಚಿಕ್ಕಜೋಗಿಹಳ್ಳಿ ತಾಂಡ, ರಾರಳ್ ತಾಂಡ, ಮೊದಲಾದೆಡೆ ಗುರುಮಠಗಳಿವೆ. ಇತ್ತೀಚಿಗೆ ಪ್ರಾರಂಭಗೊಂಡ ಶ್ರೀ ಸರ್ದಾರ್ ಸೇವಾಲಾಲ್ ಪೀಠ ಹಾಗೂ ಅದರ ಶಾಖಾಮಠಗಳು ಜನರಲ್ಲಿ ಒಂದು ರೀತಿಯ ಐಕ್ಯತೆಯನ್ನು ತರಲು ಪ್ರಯತ್ನಿಸುತ್ತಿರುವುದು ಕಂಡುಬರುತ್ತದೆ.

ಲಂಬಾಣಿಗರ ಆರ್ಥಿಕ ಜೀವನ ಪ್ರಾಚೀನ ಪಶುಪಾಲನೆ, ಲವಣ ವ್ಯಾಪಾರ, ವ್ಯವಸಾಯ, ಕೃಷಿ ಕಾರ್ಮಿಕರು, ಬೇಟೆ, ಭಟ್ಟಿ ಸಾರಾಯಿ ತಯಾರಿಕೆ, ಕಸೂತಿ ಇತ್ಯಾದಿಗಳನ್ನು ಅವಲಂಬಿಸಿದೆ. ಲಂಬಾಣಿಗರು ಕೆಲವು ವಸ್ತುಗಳನ್ನು ತಾವೇ ಮಾರಾಟ ಮಾಡುವ ವ್ಯವಸ್ಥೆಯನ್ನು ಹೊಂದಿದ್ದರಿಂದ ಉತ್ಪಾದಕ ವಿನಿಮಯ ವರ್ತಕರೆಂದು ಗುರುತಿಸಲ್ಪಟ್ಟಿದ್ದಾರೆ. ಅನೇಕ ಸಂಘ ಸಂಸ್ಥೆಗಳನ್ನು ನಿರ್ಮಿಸಿಕೊಂಡಿದ್ದಾರೆ. ಕೃಷಿ ವ್ಯವಸ್ಥೆಯಲ್ಲಿ ಮಳೆಯಾಧಾರಿತ ಹಾಗೂ ನೀರಾವರಿ ವ್ಯವಸ್ಥೆಯುಳ್ಳ ಜಮೀನುಗಳನ್ನು ಹೊಂದಿದ್ದಾರೆ. ಆದರೆ ಕೆಲವು ಲಂಬಾಣಿಗರು ಕೃಷಿಯೊಂದಿಗೆ ಪಶುಪಾಲನೆ, ಕಸೂತಿ ಮುಂದುವರೆಸಿಕೊಂಡು ಬಂದಿರುವುದು ಕಾಣುತ್ತದೆ. ಆಧುನಿಕ ಕಾಲದಲ್ಲಿ ಅನೇಕ ಹೊಸ ರೀತಿಯ ಕೆಲಸಗಳನ್ನು ನಿರ್ವಹಿಸುತ್ತಿರುವುದು ಕಂಡುಬರುತ್ತದೆ. ಸರ್ಕಾರಿ ಉದ್ಯೋಗಗಳಲ್ಲಿ, ಸರ್ಕಾರೇತರ ಸಂಸ್ಥೆಗಳಲ್ಲಿ, ಕಾರ್ಖಾನೆಗಳಲ್ಲಿ ದುಡಿಮೆ ಮಾಡುತ್ತಿದ್ದಾರೆ. ಕೃಷಿ ಕೂಲಿಕಾರ್ಮಿಕರಾಗಿ, ಕಟ್ಟಡ ಕಾರ್ಮಿಕರಾಗಿ ಹಮಾಲಿಗಳಾಗಿ, ಸಣ್ಣ-ಪುಟ್ಟ ವ್ಯಾಪಾರಿಗಳಾಗಿ ತೊಡಗಿಸಿಕೊಂಡಿರುವದನ್ನು ಕಾಣಬಹುದು. ಬಳ್ಳಾರಿ ಜಿಲ್ಲೆಯಲ್ಲಿ ಒಣ ಭೂಮಿ ಬೇಸಾಯ ಅಧಿಕವಾಗಿರುವುದರಿಂದ ಆರ್ಥಿಕ ಸಬಲರಾಗಿಲ್ಲದಿರುವವರ ಸಂಖ್ಯೆ ಅಧಿಕವಾಗಿದೆ. ಇದರಿಂದಾಗಿ ದುಡಿಯಲು ಬೇರೆ ಪ್ರದೇಶಗಳಿಗೆ ವಲಸೆ ಹೋಗುವುದು ಕಂಡುಬರುತ್ತದೆ.

ಲಂಬಾಣಿಗರು ಪ್ರಾಚೀನ ಕಾಲದಿಂದಲೂ ತಮ್ಮದೇ ಆದ ಸಂಸ್ಕೃತಿಯನ್ನು ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ. ಲಂಬಾಣಿಗರ ಹಾಡು, ಕುಣಿತ, ಕೋಲಾಟದ ಕುಣಿತ, ಸಾಹಿತ್ಯ ಮೂಲಕ ಕರ್ನಾಟಕ ಸಂಸ್ಕೃತಿಗೆ

ತಮ್ಮದೇ ಆದ ಕೊಡುಗೆ ನೀಡಿದ್ದಾರೆ. ಲಂಬಾಣಿ ಕುಣಿತ ಪ್ರಮುಖ ಕಲೆಯಾಗಿದೆ. ಆದರೆ ಆಧುನಿಕ ಕಾಲದ ನಾಟಕ, ಚಲನಚಿತ್ರ ಮೊದಲಾದ ದೃಶ್ಯಮಾಧ್ಯಮಗಳಿಂದಾಗಿ ಲಂಬಾಣಿ ಹಾಡು, ಕುಣಿತ, ತನ್ನ ಆಕರ್ಷಣೆಯನ್ನು ಕಳೆದುಕೊಳ್ಳುತ್ತಿದೆ. ಹೀಗಾಗಿ ತನ್ನ ಮೂಲ ಸ್ವರೂಪವನ್ನು ಸ್ವಲ್ಪಮಟ್ಟಿಗಾದರೂ ಇಂದು ಉಳಿಸಿಕೊಂಡಿದೆ.

ಲಂಬಾಣಿಗರು ಇಂದಿನ ಆಧುನಿಕ ಯುಗದಲ್ಲಿ ಸಾಕಷ್ಟು ಪರಿವರ್ತನೆಗೊಳಗಾಗಿದ್ದಾರೆ. ಲಂಬಾಣಿಗರಲ್ಲಿ ಸಂಪ್ರದಾಯ, ಲೋಕರೂಢಿಗಳಲ್ಲಿ ಇಂದು ಸಡಿಲತೆಯನ್ನು ಕಾಣಬಹುದು. ರಾಜಕೀಯವಾಗಿ ಇಂದು ಬೆಳವಣಿಗೆ ಹೊಂದಿದ್ದರೂ ಜನಸಂಖ್ಯೆಯ ಆಧಾರದ ಮೇಲೆ ನೋಡಿದಾಗ ಕಡಿಮೆ ಎನಿಸುತ್ತದೆ. ಶಿಕ್ಷಣದ ಗುಣಮಟ್ಟ ಸುಧಾರಿಸಬೇಕಿದೆ. ಶಿಕ್ಷಣದೆಡೆಗೆ ಒಲವು ಕಡಿಮೆ. ಕೃಷಿ ಹಾಗೂ ಸಣ್ಣ ವ್ಯಾಪಾರಕ್ಕೆ ಪ್ರಮುಖ ಸ್ಥಾನ ನೀಡಿದ್ದಾರೆ. ಅಲೆಮಾರಿಗಳಾಗಿ ಇಂದಿಗೂ ಅನೇಕ ಪ್ರದೇಶಗಳಿಗೆ ಕೂಲಿಕಾರ್ಮಿಕರಾಗಿ ವಲಸೆ ಹೋಗುವುದರಿಂದ ಶಿಕ್ಷಣ ಹಾಗೂ ಸರ್ಕಾರದ ಕೆಲವು ಸವಲತ್ತುಗಳಿಂದ ವಂಚಿತರಾಗಿರುವುದು ಕಂಡುಬರುತ್ತವೆ.

**ಅಧ್ಯಯನದ ಫಲಿತಗಳು**

ಒಟ್ಟಾರೆ ಬಳ್ಳಾರಿ ಜಿಲ್ಲೆಯ ಲಂಬಾಣಿಗರಿಗೆ ತಮ್ಮದ ಆದ ಮಹತ್ವದ ಸಾಂಸ್ಕೃತಿಕ ಚರಿತ್ರೆಯಿದೆ. ಆ ಸಾಂಸ್ಕೃತಿಕ ಚರಿತ್ರೆಯ ಅಂಶಗಳನ್ನು ಈ ಅಧ್ಯಯನದಲ್ಲಿ ಬಿಚ್ಚಿಡಲು ಪ್ರಯತ್ನಿಸಿದ್ದೇನೆ. ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳು ಈ ಕೆಳಗಿನಂತಿವೆ.

* ಬಳ್ಳಾರಿ ಭಾಗದ ಲಂಬಾಣಿಗರ ಮೂಲ ಚಾರಿತ್ರಿಕ ಅಂಶಗಳನ್ನು ವಿವಿಧ ಆಕರಗಳ ಮೂಲಕ ಪರಿಶೋಧಿಸಿ. ಜಿಲ್ಲೆಗೆ ನಾಡಿಗೆ ಸಮುದಾಯದ ಕೊಡುಗೆಗಳ ಬಗೆಗೆ ಮಹತ್ವದ ವಿಚಾರವನ್ನು ಅಧ್ಯಯನದಲ್ಲಿ ಕಂಡುಕೊಂಡಿದ್ದೇನೆ.
* ಕಾಲದ ಘಟನೆಯ ನಿಮಿತ್ತ ಅಲೆಮಾರಿಗಳಾಗಿ ಕೊನೆಗೆ ಒಂದು ಕಡೆಗೆ ಸ್ಥಿರವಾದ ಬದುಕನ್ನು ಕಟ್ಟಿಕೊಂಡ ಲಂಬಾಣಿಗರ ಬದುಕಿನ ಸ್ಥಿತ್ಯಂತರದ ಚರಿತ್ರೆಯ ಅಂಶಗಳನ್ನು ಅಧ್ಯಯನದಲ್ಲಿ ಕಂಡುಕೊಂಡ ಮಹತ್ವದ ಫಲಿತವಾಗಿದೆ.
* ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದ ಅಸಂಖ್ಯಾತ ಹೋರಾಟಗಾರರಲ್ಲಿ ಲಂಬಾಣಿಗರ ಸಂಖ್ಯೆ ಕಡಿಮೆಯಿಲ್ಲ. ಆದರೆ ಅವರ ಬಗ್ಗೆ ಮಾಹಿತಿ ದೊರಕದಿರುವುದರಿಂದ ಕೆಲವೇ ಕೆಲವು ಹೋರಾಟಗಾರರನ್ನು ಹೆಸರಿಸಲಾಗಿದೆ. ಇವರ ಸೇವೆಯ ಕುರಿತು ಅಧ್ಯಯನದಲ್ಲಿ ಚರ್ಚಿಸಿದ್ದೇನೆ.
* ಬಳ್ಳಾರಿ ಭಾಗದಲ್ಲೂ ಅನೇಕ ಸ್ವಾತಂತ್ರ್ಯ ಹೋರಾಟಗಾರರಿದ್ದಾರೆ. ಅವರಲ್ಲಿ ಕೆಲವು ಹೋರಾಟಗಾರರು ಮಾತ್ರ ತಮ್ಮನ್ನು ಗುರುತಿಸಿಕೊಂಡಿರುವುದು ಕಂಡುಬರುತ್ತದೆ.
* ಲಂಬಾಣಿ ಸಮುದಾಯದವರು ತಮ್ಮ ಆರಂಭದ ವೃತ್ತಿ ಜೀವನ ಹಾಳಾಗಲು ಕಾರಣವಾದ ಬ್ರಿಟೀಷ್ ಸರ್ಕಾರದ ವಿರುದ್ಧ ಸಹಜವಾಗಿಯೇ ದ್ವೇಷ ತಾಳಿದ ಲಂಬಾಣಿಗರು, ಸೇಡಿನ ಕ್ರಮಕ್ಕೂ ಮುಂದಾದರು. ಆ ಕಾರಣದಿಂದಾಗಿ ಬ್ರಿಟಿಷ್ ಸರ್ಕಾರವೂ ಇವರನ್ನು ಅಪರಾಧಿ ಜನಾಂಗವೆಂದು ಘೋಷಿಸಿತು.

